# ಬಂಕಾಪುರ : ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು
ಜಗದೀಶಗೌಡ ಚ ಶಿದ್ದನಗೌಡ್ರ

ಮಾರ್ಗದರ್ಶಕರು
ಡಾ. ಸಿ.ಟಿ. ಗುರುಪ್ರಸಾದ್
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ




ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೨೦

# ಬಂಕಾಪುರ : ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧನಾ ವಿದ್ಯಾರ್ಥಿ
**ಜಗದೀಶಗೌಡ ಚ ಸಿದ್ದನಗೌಡ್ರ**

ಮಾರ್ಗದರ್ಶಕರು
**ಡಾ. ಸಿ.ಟಿ. ಗುರುಪ್ರಸಾದ್**
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ



**ಜಾನಪದ ಅಧ್ಯಯನ ವಿಭಾಗ**
ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ ೫೮೩ ೨೭೬
೨೦೨೦

## ಮಾರ್ಗದರ್ಶಕರ ದೃಢೀಕರಣ ಪತ್ರ

**ಜಗದೀಶಗೌಡ ಚ ಶಿದ್ದನಗೌಡ್ರ** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ **"ಬಂಕಾಪುರ : ಸಾಂಸ್ಕೃತಿಕ ಅಧ್ಯಯನ"** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಜಾನಪದ ಅಧ್ಯಯನ** ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ : ೦೫-೦೩-೨೦೨೦
ಸ್ಥಳ : ವಿದ್ಯಾರಣ್ಯ

**ಡಾ. ಸಿ.ಟಿ. ಗುರುಪ್ರಸಾದ್**
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

## ಸಂಶೋಧಕರ ದೃಢೀಕರಣ ಪತ್ರ

**"ಬಂಕಾಪುರ : ಸಾಂಸ್ಕೃತಿಕ ಅಧ್ಯಯನ"** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ **ಜಾನಪದ ಅಧ್ಯಯನ ವಿಭಾಗದ** ಪ್ರಾಧ್ಯಾಪಕರಾದ **ಡಾ. ಸಿ.ಟಿ. ಗುರುಪ್ರಸಾದ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ :
ಸ್ಥಳ : ವಿದ್ಯಾರಣ್ಯ

**ಜಗದೀಶಗೌಡ ಚ ಶಿದ್ದನಗೌಡ್ರ**
ಸಂಶೋಧನಾ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ, ಮಹತ್ವ ಮತ್ತು ಇದುವರೆಗೆ ನಡೆದ ಅಧ್ಯಯನ ಸಮೀಕ್ಷೆ

೧.೧. ಪ್ರಸ್ತಾವನೆ

೧.೨. ಅಧ್ಯಯನದ ಉದ್ದೇಶ

೧.೩. ಅಧ್ಯಯನದ ವ್ಯಾಪ್ತಿ ಮತ್ತು ಮಹತ್ವ

೧.೪. ಅಧ್ಯಯನದ ವಿಧಿ-ವಿಧಾನ

೧.೫. ಅಧ್ಯಯನದ ಸ್ವರೂಪ

೧.೬. ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ, ಮಹತ್ವ ಮತ್ತು ಇದುವರೆಗೆ ನಡೆದ ಅಧ್ಯಯನ ಸಮೀಕ್ಷೆ

### ೧.೧. ಪ್ರಸ್ತಾವನೆ

ಭಾರತದ ಇತಿಹಾಸವು ಪ್ರಾಚೀನಕಾಲದಿಂದ ಪ್ರಾರಂಭವಾಗಿ ಇಂದಿನವರೆಗೂ ಹಲವಾರು ಸಂಘರ್ಷದಿಂದಲೇ ಕೂಡಿದೆ. ಅದು ಧರ್ಮ-ಧರ್ಮಗಳ ನಡುವೆ, ಸಂಸ್ಕೃತಿ ಸಂಸ್ಕೃತಿಗಳ ನಡುವೆ, ಸಮುದಾಯ-ಸಮುದಾಯಗಳ ನಡುವೆ ಹೀಗೆ ವರ್ಣ-ವರ್ಗಗಳ ನಡುವೆ ಸಂಘರ್ಷ ದಿಂದಲೇ ಕೂಡಿರುವುದಕ್ಕೆ ಇತಿಹಾಸದುದ್ದಕ್ಕೂ ಹಲವಾರು ದಾಖಲೆಗಳು ಸಿಗುತ್ತವೆ. ಮೊದಲಿಗೆ ಮಾತೃಪ್ರಧಾನ ಸಂಸ್ಕೃತಿ ಮತ್ತು ಪಿತೃಪ್ರಧಾನ ಸಂಸ್ಕೃತಿಯಿಂದ ಪ್ರಾರಂಭವಾಗಿ ಆರ್ಯ-ದ್ರಾವಿಡರ ನಡುವೆ ಸಾಗಿದ ಸಂಘರ್ಷ ಇಂದು ಹಲವು ಧರ್ಮಗಳ ಸಮುದಾಯ-ಸಮುದಾಯಗಳ ನಡುವೆ ಉಳಿದು ಬಂದಿದೆ. ಪ್ರಾಚೀನ ಭಾರತದಲ್ಲಿ ಮೂಲ ಕೃಷಿಕ ದ್ರಾವಿಡರು ಮತ್ತು ವಲಸೆಗಾರ ಪಶುಪಾಲಕ ದ್ರಾವಿಡರ ನಡುವೆ ಇದ್ದ ಕಲಹಗಳು ಒಂದು ಹಂತದಲ್ಲಿ ಈ ಎರಡು ಸಂಸ್ಕೃತಿಗಳ ಸಮ್ಮಿಲನವಾಗಿ ಹೊಸ ದ್ರಾವಿಡ ಸಂಸ್ಕೃತಿ ಉದಯವಾಗಿ ಪಶುಪಾಲಕರು ಮೂಲ ಕೃಷಿಕರ ಸಂಸ್ಕೃತಿಯನ್ನು ಅನುಸರಿಸಿದರು. ಇದಕ್ಕೆ ಸಿಂಧೂನಾಗರೀಕತೆಯಲ್ಲಿ ದೊರೆತಿರುವ ಕುರುಹುಗಳೇ ಸಾಕ್ಷಿ. ಆರ್ಯರ ಆಗಮನದ ನಂತರ ಶಾಂತವಾಗಿದ್ದ, ಹೊಂದಾಣಿಕೆಯಿಂದ ಇದ್ದ ಮೂಲ ಕೃಷಿಕ ಮತ್ತು ಪಶುಪಾಲಕರಲ್ಲಿ ವಿಷಬೀಜ ಬಿತ್ತಿ ತಮ್ಮ ಅಸ್ತಿತ್ವವನ್ನು ಸ್ಥಾಪಿಸಲು ಒಡೆದು ಆಳುವ ನೀತಿ ಅನುಸರಿಸಿ ಇವರಿಬ್ಬರಲ್ಲೂ ಕಲಹ ತಂದಿಟ್ಟರು. ಇದುವರೆಗೂ ಇರದಿದ್ದ ಜಾತಿವ್ಯವಸ್ಥೆಯನ್ನು ತಂದು ಒಂದಾಗಿದ್ದ ದ್ರಾವಿಡರನ್ನು ಎರಡಾಗಿ ಒಡೆದು ನೂರಾರು ಜಾತಿಗಳಾಗಿ ಮಾಡಿದರು. ಇದರಿಂದ ಆರ್ಯರು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿ ಯಾಗಿದ್ದಾರೆ. ಅದು ಇಂದಿಗೂ ಪ್ರತಿ ಹಳ್ಳಿ ಹಳ್ಳಿಯಲ್ಲೂ ಉಳಿದುಕೊಂಡು ಬಂದಿದೆ. ಈ ರೀತಿಯಲ್ಲಿ ಆರ್ಯ ಸಂಸ್ಕೃತಿಯನ್ನು ಬಲವಂತವಾಗಿ ದ್ರಾವಿಡರ ಮೇಲೆ ಹೇರಿದೆ.

ಅಮಾನವೀಯ ಮತ್ತು ಅನಾಗರೀಕತೆಯ ತತ್ವಗಳಿಂದ ಕೂಡಿದ್ದ ಸಮಾಜ ವಿರೋಧಿ ಆರ್ಯ ಸಂಸ್ಕೃತಿಯನ್ನು ವಿರೋಧಿಸಿ, ಮಾನವೀಯ ಮೌಲ್ಯವನ್ನು ಬಿತ್ತರಿಸಿದ ಬೌದ್ಧಧರ್ಮದ

ಪ್ರಭಾವದ ವಿರುದ್ಧ ಸೋತು ಬಲಹೀನವಾದ ಆರ್ಯ ಸಂಸ್ಕೃತಿ ಬೌದ್ಧ ಧರ್ಮದಲ್ಲಿದ್ದ ಮಾನವೀಯ ಮೌಲ್ಯಗಳನ್ನು ತನ್ನದಾಗಿಸಿಕೊಂಡು ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡಿತು. ಹಂತಹಂತವಾಗಿ ಮತ್ತೆ ಪ್ರಾಬಲ್ಯ ಸಾಧಿಸಿದ ಹಿಂದೂ ಧರ್ಮ ಬುದ್ಧನ ಕಾಲಾನಂತರ ಮತ್ತೆ ತನ್ನ ಪ್ರಾಬಲ್ಯ ಮೆರೆದು ತನ್ನ ಉಳಿವಿಗಾಗಿ ಬೌದ್ಧ ಧರ್ಮವನ್ನು ನಾಮಾವಶೇಷಗೊಳಿಸಲು ಪ್ರಯತ್ನಿಸಿ ವಿಫಲವಾಯಿತು. ಬೌದ್ಧ ಧರ್ಮದ ಮಾನವೀಯ ಮೌಲ್ಯಗಳು ಜನಪದರಲ್ಲಿ ಗ್ರಾಮದೇವತೆಗಳ ಆಚರಣೆಗಳಲ್ಲಿ ಶಾಕ್ತ, ತಾಂತ್ರಿಕ ಪಂಥವಾಗಿ ದೇಶದ ಪ್ರತಿಹಳ್ಳಿಗಳಲ್ಲೂ ಉಳಿದುಕೊಂಡು ಬಂದಿದೆ.

'ಇತಿಹಾಸ ಮರೆತವನು ಇತಿಹಾಸ ಸೃಷ್ಟಿಸಲಾರ' ಎಂಬ ಡಾ. ಬಾಬಾಸಾಹೇಬ್ ಅಂಬೇಡ್ಕರ್ ಅವರ ಮಾತು ಸರ್ವಕಾಲಿಕ ಸತ್ಯವಾದುದು. ವರ್ತಮಾನ ಮತ್ತು ಭವಿಷ್ಯದಲ್ಲಿ ಎಂದೆಂದಿಗೂ ಜೀವಂತವಾಗಿರುವ ಈ ಮಾತು ಇತಿಹಾಸದ ಮಹತ್ವವನ್ನು ತಿಳಿಸುತ್ತದೆ. ರಾಜ್ಯದ ಅಥವಾ ರಾಷ್ಟ್ರೀಯ ಜೀವನದ ದಾಖಲೆ ಇತಿಹಾಸವಾದರೆ ಜಾನಪದ ಪ್ರಾಗೈತಿಹಾಸಿಕ ಜೀವನದ ಪರಂಪರಾಗತ ಸಂಗತಿ. ಇತಿಹಾಸಕ್ಕೆ ಜನಪದ ಕತೆ, ಗೀತೆ, ಲಾವಣಿ, ಗಾದೆ, ನಂಬಿಕೆ, ಆಚರಣೆ ಮುಂತಾದ ವಿವಿಧ ಪ್ರಕಾರಗಳ ನಿಕಟವಾದ ಸಂಬಂಧವನ್ನು ಗುರುತಿಸಬಹುದು. ಇವುಗಳಲ್ಲಿ ಅಡಕವಾಗಿರುವ ಜನರ ತಿಳಿವು ಮೌಖಿಕ ಇತಿಹಾಸ (oral history) ಎನಿಸುತ್ತದೆ. ಜನರ ಜೀವನ ಸಂಸ್ಕೃತಿಯೇ ಇತಿಹಾಸ. ಇತಿಹಾಸವೇ ನಮ್ಮ ಸಂಸ್ಕೃತಿಯಾಗಿರುವಾಗ ಒಂದು ರಾಷ್ಟ್ರ, ರಾಜ್ಯ ಅಥವಾ ಒಂದು ಗ್ರಾಮವೇ ಆಗಿರಲಿ ಅಲ್ಲಿನ ಜನರ ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ ಜೀವನದ ಸಂದರ್ಭಗಳನ್ನು ಅಧ್ಯಯನ ಮಾಡುವಾಗ ಆದಿಕಾಲದಿಂದ ಆಧುನಿಕ ಕಾಲದವರೆಗೆ ಹಂತ ಹಂತವಾಗಿ ನಡೆದು ಬದಲಾವಣೆ ಹೊಂದಿರುವ ಅಲ್ಲಿನ ಇತಿಹಾಸ ಮತ್ತು ಸಂಸ್ಕೃತಿ ತಿಳಿಯುವುದು ಸೂಕ್ತವೆನಿಸುತ್ತದೆ. ನಮ್ಮ ಜನತೆಯಲ್ಲಿ ನಿಜವಾದ ಬದಲಾವಣೆ ತರುವುದು ಹಿಂದಿನ ಬೇರುಗಳ ಅರಿವಿನ ಮೂಲಕ. ತಾವು ಬದುಕಿದ ಯಾವ ಯಾವ ಕಾಲಘಟ್ಟ, ಹಂತ, ಪರಿಸರ, ಪ್ರಸಂಗ ಎದುರಿಸಿದ್ದು, ಆದಿಕಾಲದಿಂದ ಅನಾದಿಕಾಲದವರೆಗೆ ಬೆಳೆದು ಬಂದ ಬಗೆ ತಿಳಿದಾಗ ಮಾತ್ರ ಮುಂದೆ ಹೇಗೆ ನಡೆಯಬೇಕೆಂಬುದು ಗೊತ್ತಾಗುವುದು. ಈ ಕಾರಣದಿಂದ ಈ ದೇಶದ ಬೆನ್ನೆಲುಬಾದ ಗ್ರಾಮಗಳನ್ನು ಮತ್ತು ಅವುಗಳ ಆಚರಣೆ, ಧಾರ್ಮಿಕ ಸ್ಥಿತಿಗತಿ, ಜನಪದ ಸಾಹಿತ್ಯ, ಗ್ರಾಮದ ಐತಿಹಾಸಿಕತೆ, ಭೌಗೋಳಿಕ ಪರಿಸರ, ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ಏಕಕಾಲದಲ್ಲಿ ಅಧ್ಯಯನಕ್ಕೊಳಪಡಿಸುವ ತುರ್ತು ಇಂದು ಇದೆ. ಪ್ರಸ್ತುತ ಅಧ್ಯಯನ ಈ ನಿಟ್ಟಿನಲ್ಲಿ ಸಾಗಿದೆ.

ಜಾನಪದ ರೂಪ ಸ್ವರೂಪಗಳನ್ನು ಕುರಿತು ಪ್ರಪಂಚದಾದ್ಯಂತ ಇಂದು ಗಂಭೀರ ಚಿಂತನೆ ನಡೆಯುತ್ತಿದೆ. ಕಳೆದ ಸುಮಾರು ೧೫೦ ವರ್ಷಗಳಲ್ಲಿ ಜಾನಪದದ ಶಾಬ್ದಿಕ ಮತ್ತು

ಅಶಾಬ್ದಿಕ ರೂಪಗಳನ್ನು ಸಂಗ್ರಹಿಸಿ, ವರ್ಗೀಕರಿಸಿ ವಿಶ್ಲೇಷಿಸುವ ಕಾರ್ಯ ತುಂಬ ವ್ಯಾಪಕವಾಗಿ ಜರುಗುತ್ತಿದೆ. ಮಾನವ ಕೇಂದ್ರಿತ ಜಾನಪದ, ಜನಾಂಗ, ಗ್ರಾಮ, ಗ್ರಾಮದೇವತೆ, ಸಂಸ್ಕೃತಿ ಅಧ್ಯಯನಕ್ಕೆ ಮೂಲ ಮತ್ತು ಪ್ರಬಲ ಆಕರ ಎನ್ನುವ ಆಧಾರವೇ ಇದಕ್ಕೆ ಪ್ರೇರಣೆ. ಜಾನಪದ ಜೀವನವನ್ನು ತಲತಲಾಂತರದಿಂದ ರೂಪಿಸಿ ಅದರ ಸರ್ವಮುಖ ಕ್ರಿಯೆಗಳನ್ನು ನಿಯಂತ್ರಿಸುವ ಶಕ್ತಿ ಅವರ ಆಚರಣೆ ಮತ್ತು ನಂಬಿಕೆಗಳಿಗಿವೆ. ಇಂತಹ ಸಂಗತಿಗಳ ಕುರಿತ ಅಧ್ಯಯನ ಸಮಕಾಲೀನ ಸಂದರ್ಭದಲ್ಲಿ ಆಳವಾದ ಸಂಶೋಧನೆಗಳ ಮೂಲಕ ಪರಿಶೀಲಿಸುವ ಅಗತ್ಯ ನಮ್ಮ ಮುಂದಿದೆ.

ಹಳ್ಳಿಗಳು ಮಾನವಿಕ ವಿಜ್ಞಾನಗಳನ್ನು ವಿಶೇಷವಾಗಿ ಆಕರ್ಷಿಸುವ ಅಧ್ಯಯನದ ವಸ್ತುವಾಗಿವೆ. ಭಾರತೀಯ ಹಳ್ಳಿಗಳಿಗಂತೂ ಸಂಸ್ಕೃತಿ ಅಧ್ಯಯನದಲ್ಲಿ ಒಂದು ವಿಶಿಷ್ಟ ಮೌಲ್ಯವಿದೆ. ಇವು ಪ್ರಾಚೀನ ಮತ್ತು ಆಧುನಿಕ ವಿಜ್ಞಾನದ ತಾಕಲಾಟ. ಈ ಎರಡರ ಪ್ರಭಾವವನ್ನು ಮೈಗೂಡಿಸಿಕೊಂಡಂತಹವು. ಇಂತಹ ವಿಶಿಷ್ಟ ಸ್ಥಿತಿ ಅಮೆರಿಕಾದಂತಹ ಮುಂದುವರೆದ ರಾಷ್ಟ್ರಗಳ ಹಳ್ಳಿಗಳಿಗೆ ಇರಲಾರದು. ಹೀಗಾಗಿ ಅಲ್ಲಿನ ಅಧ್ಯಯನಕಾರರು ಭಾರತದಂತಹ ದೇಶಗಳ ಹಳ್ಳಿಗಳತ್ತ ವಿಶೇಷವಾಗಿ ಆಕರ್ಷಿತರಾಗಿದ್ದಾರೆ. ಡಾ. ಈಶ್ವರನ್ ಅವರು "ಭಾರತದ ಹಳ್ಳಿಗಳು ಈ ನಾಡಿನ ಪ್ರಾಚೀನ ಸಂಸ್ಕೃತಿಯನ್ನು ಈ ಸಂಸ್ಕೃತಿಯಲ್ಲಿ ಅಡಕವಾಗಿರುವ ಅಪೂರ್ವ ಮೌಲ್ಯವನ್ನು ಕಾಲಪುರುಷನ ಕ್ರೂರ ದಬ್ಬಾಳಿಕೆಯಿಂದ ರಕ್ಷಿಸಿಕೊಂಡು ಬಂದಿವೆ. ಈ ಸಾಂಸ್ಕೃತಿಕ ಸಂಪತ್ತನ್ನು ಕಂಡು ಇಂದು ಔದ್ಯೋಗಿಕ ದೃಷ್ಟಿಯಿಂದ ಮುಂದುವರೆದಿರುವ ಪಶ್ಚಿಮ ಜಗತ್ತಿನ ಜನತೆಯು ಆಶ್ಚರ್ಯಪಟ್ಟಿದೆ" ಎನ್ನುತ್ತಾರೆ. ಹೀಗಿರುವಾಗ ನಾವು ಈ ವಿಶೇಷ ಅವಕಾಶಗಳನ್ನು ಬಳಸಿಕೊಂಡು ನಮ್ಮ ಜಾನಪದ ಅಧ್ಯಯನವನ್ನು ಮತ್ತಷ್ಟು ಸೋಪಜ್ಞಗೊಳಿಸಿಕೊಳ್ಳುವ ಸಾಧ್ಯತೆಯಿದೆ. ಮತ್ತು ಗಟ್ಟಿಗೊಳಿಸಿಕೊಳ್ಳುವ ಪ್ರಯತ್ನ ಮಾಡಬೇಕಾಗಿದೆ. ಒಂದು ಗ್ರಾಮದ ಅಧ್ಯಯನ ಸ್ಥಳೀಯ ನೆಲೆ ಹಾಗೂ ಸಾರ್ವತ್ರಿಕ ನೆಲೆ ಎರಡರಲ್ಲೂ ಮುಖ್ಯವಾಗುತ್ತದೆ. ಅದರ ಇತಿಹಾಸ, ಐತಿಹ್ಯಗಳು ಸ್ಥಳಿಯ ಮಹತ್ವ ಪಡೆದರೆ, ಅದರ ಆಚರಣೆ, ನಂಬಿಕೆ, ಸಂಪ್ರದಾಯಗಳಲ್ಲಿನ ಆಶಯಗಳು ಸಾರ್ವತ್ರಿಕ ಪ್ರಾಮುಖ್ಯತೆ ಪಡೆದು ತೌಲನಿಕ ಅಧ್ಯಯನಕ್ಕೆ ನೆರವಾಗುತ್ತವೆ.

ಪರಂಪರೆಯ ಗರ್ಭದಲ್ಲಿ ಒಟ್ಟು ಜಗತ್ತಿನ ಅಥವಾ ಪ್ರಾದೇಶಿಕವಾಗಿ ಎಲ್ಲೆಯನ್ನು ಗುರುತಿಸಿಕೊಂಡು ಅಧ್ಯಯನವನ್ನು ಮಾಡುವಾಗ ಸಂಸ್ಕೃತಿಯ ಬೇರುಗಳು ಅನಾವರಣಗೊಳ್ಳುತ್ತವೆ. ನನಗೆ ಸಂಸ್ಕೃತಿ ಎಂದು ಕರೆಸಿಕೊಳ್ಳುವಲ್ಲಿಯೂ ಕೂಡ ಇದರ ಹಿಂದೆ ಗ್ರಾಮ ಸಮಾಜ ಎಂಬ ಪರಿಕಲ್ಪನೆ ಮೂಡುವುದು ಸಹಜ. ಗ್ರಾಮ ಸಮುದಾಯ ಸಮಾಜದ ಮುಂದುವರೆದ ಜೀವನ ಸಂಸ್ಕೃತಿಯ ಅನೇಕ ಕಾಲಘಟ್ಟಗಳಲ್ಲಿ ಉಂಟಾದ ಮಾನವನ ಬದುಕಿನ, ಸ್ಥಿತ್ಯಂತರಗಳ ನಡುವೆಯೂ ಆಚರಣೆ, ನಂಬಿಕೆ, ಸಂಪ್ರದಾಯ, ಸಾಹಿತ್ಯಗಳನ್ನು ತುಂಬಿಕೊಂಡಿದ್ದು ಇದರ

ಜೊತೆಗೆ ಗ್ರಾಮದೇವತೆಯ ಹಿನ್ನೆಲೆ, ಮಹಿಮೆ, ಶಕ್ತಿ ಅಷ್ಟೇ ಕುತೂಹಲದಿಂದ ಅಧ್ಯಯನ ಮಾಡುವಂತೆ ಸಂಶೋಧಕರನ್ನು ಪ್ರೇರೇಪಿಸಿದೆ.

ಸಂಸ್ಕೃತಿ ಎಂದರೆ ಸಮಾಜದ ವ್ಯವಹಾರದಲ್ಲಿ ಕಂಡುಬರುವ ಸಂಪ್ರದಾಯ, ಆಚಾರ ವಿಚಾರಗಳನ್ನು ಆಹಾರ, ವಿಹಾರ, ಉಡುಗೆ ತೊಡುಗೆಗಳನ್ನು ವೈವಿಧ್ಯಪೂರ್ಣ ಚಟುವಟಿಕೆಗಳನ್ನು ಮನದಟ್ಟು ಮಾಡುತ್ತದೆ. ಏಕೆಂದರೆ ಸಂಸ್ಕೃತಿ ಸಾಮಾಜಿಕ ಪ್ರಕ್ರಿಯೆಯಾಗಿದ್ದು, ಸಮಾಜವು ಭೌಗೋಳಿಕ ಸನ್ನಿವೇಶ, ಸಮಯ ಸಂದರ್ಭಗಳನ್ನು ಅವಲಂಬಿಸಿರುತ್ತದೆ. ಪ್ರಾದೇಶಿಕವಾಗಿ ಪ್ರತಿಯೊಂದು ಪ್ರದೇಶದ ಸಂಸ್ಕೃತಿಯ ವೈವಿಧ್ಯಗಳನ್ನು ತಿಳಿಯಬೇಕಾದರೆ ಅಲ್ಲಿಯ ಸಮುದಾಯ, ಭಾಷೆ, ಧರ್ಮ, ಸಾಮಾಜಿಕ ಪದ್ಧತಿ, ನೀತಿ, ಅನುಕಂಪ, ಕಟ್ಟುಪಾಡುಗಳು, ಸಹನೆ, ಸಹಬಾಳ್ವೆ, ಸಾಂಸ್ಕೃತಿಕ ವಿಶಿಷ್ಟತೆಗಳು, ನ್ಯಾಯತತ್ಪರತೆ, ಸಾಂಸ್ಕೃತಿಕ ಪಲ್ಲಟಗಳ ವಿಶಾಲ ಚಿತ್ರಪಟ ಮುಂತಾದ ಅಂಶಗಳನ್ನು ತಿಳಿಯಬೇಕಾದುದು ಅತ್ಯವಶ್ಯಕ. ಈ ದೃಷ್ಟಿಯಿಂದ ಬಂಕಾಪುರ ಗ್ರಾಮವನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡು ಅದರ ವ್ಯಾಪ್ತಿಯಲ್ಲಿ ಕಂಡುಬರುವ ಸಾಂಸ್ಕೃತಿಕ ವೈಶಿಷ್ಟ್ಯತೆಗಳನ್ನು ಗುರುತಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಗ್ರಾಮ ಜೀವನ ಕುಟುಂಬದ ಆಧಾರದ ಮೇಲೆ ನಿರ್ಧರಿಸಲ್ಪಡುತ್ತದೆ. ಗ್ರಾಮದ ಜನರ ನೋವು ನಲಿವು, ಕೆಲಸ-ಕಾರ್ಯ, ವ್ಯವಹಾರ, ವಿಹಾರ, ಎಲ್ಲವುಗಳಲ್ಲಿ ಕುಟುಂಬದ ಪಾತ್ರ ಹಿರಿದಾದುದು. ವ್ಯಕ್ತಿಗಿಂತ ಕುಟುಂಬವೇ ಮುಖ್ಯ. ಏಕೆಂದರೆ ವ್ಯಕ್ತಿಯ ಹಿತಾಸಕ್ತಿಗಳು ಕುಟುಂಬಕ್ಕೆ ಅಧೀನವಾಗಿರುತ್ತವೆ. ಸಾಮಾನ್ಯವಾಗಿ ಇಲ್ಲಿನ ಕುಟುಂಬಗಳು ಪಿತೃಪ್ರಧಾನವಾಗಿವೆ. ತಂದೆಯೇ ಕುಟುಂಬದ ಹಿರಿಯ ಯಜಮಾನ. ಎಲ್ಲರೂ ಆತನಿಗೆ ತಲೆಬಾಗಿ ನಡೆಯುವುದನ್ನು ಕಾಣಬಹುದು. ಕೆಲವು ಸಂದರ್ಭಗಳಲ್ಲಿ ಕುಟುಂಬದಲ್ಲಿ ಸ್ತ್ರೀಯ ಮಾತುಗಳು ಮುಖ್ಯವಾಗುತ್ತವೆ. ಅವರ ಅಭಿಪ್ರಾಯಗಳಿಗೂ ಮನ್ನಣೆ ಸಿಗುತ್ತದೆ.

ಕುಟುಂಬದ ಕೆಲಸ ಕಾರ್ಯಗಳನ್ನು ಸ್ತ್ರೀಯರು, ಪುರುಷರು, ಮಕ್ಕಳು, ಹಿರಿಯರು ಹೀಗೆ ಸದಸ್ಯರು ಹಂಚಿಕೊಂಡು ಮಾಡುತ್ತಾರೆ. ಮನೆಯ ಹೊರಗಿನ ಹೊಲಗಳ ಕೃಷಿಕಾರ್ಯಗಳನ್ನು ವ್ಯವಹಾರಗಳನ್ನು ಪುರುಷರು ನೋಡಿಕೊಂಡರೆ, ಮನೆಯೊಳಗಿನ ಕೆಲಸಗಳನ್ನು ಮತ್ತು ಮಕ್ಕಳ ಲಾಲನೆ-ಪೋಷಣೆಯನ್ನು ಮಾಡುವುದು ಸ್ತ್ರೀಯರ ಹೊಣೆ. ಇದರ ಜೊತೆಗೆ ಹೊಲ ಮನೆಕೆಲಸಗಳಲ್ಲೂ ಸ್ತ್ರೀಯರು ಭಾಗವಹಿಸುತ್ತಾರೆ. ಬಿತ್ತನೆ ಕೆಲಸ, ನಾಟಿ ಮಾಡುವುದು, ಕಳೆಕೀಳುವ, ಒಕ್ಕುವ ಸಂದರ್ಭದಲ್ಲಿ ಸ್ತ್ರೀಯರಿಲ್ಲದೆ ಕೆಲಸ ಸಾಗುವುದೇ ಇಲ್ಲ. ಹೆಣ್ಣುಮಕ್ಕಳು ತಾಯಂದಿರ ಕೆಲಸಗಳಲ್ಲಿ ಭಾಗಿಯಾದರೆ ಗಂಡುಮಕ್ಕಳು ತಂದೆಯ ಕೆಲಸಗಳಲ್ಲಿ ನೆರವಾಗುತ್ತಾರೆ. ಹೀಗಿದ್ದರೂ ಇಲ್ಲಿ ಮಕ್ಕಳು ಶಾಲೆಗೆ ಹೋಗುವುದರಿಂದ ವಂಚಿತರಾಗಿಲ್ಲ.

## ೧.೨. ಅಧ್ಯಯನದ ಉದ್ದೇಶ

- ಬಂಕಾಪುರ ಪ್ರಾಚೀನ ನಗರಗಳಲ್ಲಿ ಒಂದಾಗಿದೆ, ಈ ಗ್ರಾಮದ ಬಗೆಗೆ ಈವರೆಗೆ ಐತಿಹಾಸಿಕ ಅಧ್ಯಯನದ ಹೊರತುಪಡಿಸಿದರೆ ಭಿನ್ನನೆಲೆಗಳಲ್ಲಿ ಅಧ್ಯಯನಗಳಾಗಿಲ್ಲ. ಹಾಗಾಗಿ ಜಾನಪದೀಯ ನೆಲೆಯಲ್ಲಿ ಅಧ್ಯಯನ ಮಾಡುವ ಉದ್ದೇಶದಿಂದ ಈ ಗ್ರಾಮವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

- ಈ ಗ್ರಾಮದಲ್ಲಿ ಮಾತೃಪ್ರಧಾನ ಸಂಸ್ಕೃತಿಯನ್ನು ಅನಾವರಣಗೊಳಿಸುವ ದೇವಸ್ಥಾನಗಳು ಹೆಚ್ಚಾಗಿವೆ, ಅವುಗಳ ಬಗ್ಗೆ ಅಧ್ಯಯನ ಮಾಡಿರುವುದು ಕಡಿಮೆ ಇವುಗಳು ಅಧಿಮ ಸಂಸ್ಕೃತಿಯನ್ನು ಪ್ರತಿಪಾದನೆ ಮಾಡುತ್ತಿವೆ. ಇವುಗಳ ಅಧ್ಯಯನ ಮಾಡಿದರೆ ಭಿನ್ನ ಸಾಂಸ್ಕೃತಿಕ ಚರಿತ್ರೆ ತಿಳಿಯುತ್ತದೆ. ಆದುದರಿಂದ ಮಾತೃಪ್ರಧಾನ ದೈವಗಳನ್ನು ಸ್ಥಳೀಯ ನೆಲೆಯಲ್ಲಿ ಅಧ್ಯಯನ ಮಾಡುವ ಉದ್ದೇಶವನ್ನು ಇಟ್ಟುಕೊಂಡಿದೆ.

- ಪಶುಪಾಲನಾ ಸಂಸ್ಕೃತಿಯ ಬಂಕಾಪುರ ನಾಡಿನ ಸ್ಥಿತ್ಯಂತರಗಳ ಬಗ್ಗೆ ಅಧ್ಯಯನ ಮಾಡುವ ಉದ್ದೇಶದೊಂದಿಗೆ ಬಂಕಾಪುರ ಜಾನಪದೀಯ ಅಧ್ಯಯನ ಕೈಗೊಳ್ಳಲಾಗುತ್ತದೆ.

- ಅನಾದಿಕಾಲದಿಂದಲೂ ಹಲವಾರು ಧರ್ಮಗಳ ಅನುಯಾಯಿಗಳು ಮತ್ತು ಈ ಪಂಥಗಳ ಪ್ರತಿಪಾದಕರು ಇಲ್ಲಿದ್ದರು ಎನ್ನುವ ಚಾರಿತ್ರಿಕ ಕಥನಗಳು ಸಿಗುತ್ತವೆ. ಈ ಧಾರ್ಮಿಕ ಪಾರಂಪರಿಕ ಕಥನಗಳಲ್ಲಿ ಹಲವು ಬಗೆಯ ಸುಸ್ಥಿರ ಜ್ಞಾನ ಬಿಂದುಗಳಿವೆ. ಅಂದರೆ ಸಮನ್ವಯ ಸಂಸ್ಕೃತಿಯನ್ನು ಅನಾವರಣಗೊಳಿಸುವ ಸಂಗತಿಗಳಿವೆ. ಇವುಗಳನ್ನು ಕುರಿತು ಈವರೆಗೆ ಸೈದ್ಧಾಂತಿಕವಾಗಿ ಅಧ್ಯಯನ ಮಾಡಿರುವುದು ವಿರಳ. ಇದರಿಂದ ಈ ಕ್ಷೇತ್ರದ ಜ್ಞಾನದ ಕೊರತೆ ಸಾಂಸ್ಕೃತಿಕ ವಾತಾವರಣದಲ್ಲಿದೆ. ಇದನ್ನು ಸರಿಪಡಿಸಬೇಕು ಹಾಗಾಗಿ ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದೆ. ಇದಕ್ಕಾಗಿ ವಿಭಿನ್ನ ಬಗೆಯ ಜ್ಞಾನ ಪರಂಪರೆಗಳನ್ನು ಬಳಸಿಕೊಳ್ಳಲಾಗಿದೆ.

- ಇಲ್ಲಿ ಸಂಪದ್ಭರಿತವಾದ ಮೌಖಿಕ ಸಾಹಿತ್ಯ, ಕಲೆ, ಜೀವಂತವಾಗಿದೆ. ಇವುಗಳ ಸಂಗ್ರಹ ಮತ್ತು ವಿಶ್ಲೇಷಣೆ ಅಧ್ಯಯನ ನಡೆದಿರುವುದಿಲ್ಲ. ಈ ಸಾಹಿತ್ಯ ಮತ್ತು ಕಲೆಯಲ್ಲಿ ಅನೇಕ ಜ್ಞಾನ ಬಿಂದುಗಳಿವೆ. ಇವುಗಳನ್ನು ಸೈದ್ಧಾಂತಿಕ ಅಧ್ಯಯನ ಮಾಡುವುದು ಪ್ರಮುಖ ಆಶಯವಾಗಿದೆ.

- ವ್ಯವಸಾಯ ಇಲ್ಲಿನ ಮುಖ್ಯ ಕಸುಬು. ಹಾಗಾಗಿ ಇಲ್ಲಿ ಅನೇಕ ಕೃಷಿಜ್ಞಾನ ಅಂದರೆ ಪಾರಂಪರಿಕ ಕೃಷಿಜ್ಞಾನಗಳಿವೆ. ಈ ಜ್ಞಾನಗಳು ಸಾಹಿತ್ಯ, ಆಚರಣೆ, ನಂಬಿಕೆ, ನಿಷೇಧ, ಕೃಷಿ ವಿಧಾನಗಳು ಮುಂತಾದ ಅಭಿವ್ಯಕ್ತಿ ಪ್ರಕಾರಗಳಲ್ಲಿ ಅಡಕವಾಗಿವೆ. ಇಲ್ಲಿಯವರೆಗೆ

ಇವುಗಳ ಸಂಗ್ರಹ ಮತ್ತು ವಿಶ್ಲೇಷಣೆಯಾಗಿರುವುದು ಕಡಿಮೆ ಅಲ್ಲದೆ ಇವುಗಳಲ್ಲಿ ಆಧುನಿಕ ಅಥವಾ ಬಂಡವಾಳಶಾಹಿ ಕೇಂದ್ರಿತ ಕೃಷಿಯ ಪರಿಣಾಮಗಳನ್ನು ಹೊಡೆದು ಹಾಕುವ ಶಕ್ತಿ ಇದೆ. ಹಾಗಾಗಿ ಈ ಜ್ಞಾನ ಪರಂಪರೆಗಳನ್ನು ಅಧ್ಯಯನಕ್ಕೆ ಒಳಪಡಿಸುವ ಉದ್ದೇಶ ಹೊಂದಿದೆ.

- ಬಂಕಾಪುರ ಪ್ರದೇಶದಲ್ಲಿ ವಿಶಿಷ್ಠ ಹಬ್ಬ ಜಾತ್ರೆಗಳು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದ್ದು ಅವುಗಳ ಅರ್ಥಪೂರ್ಣ ಅಧ್ಯಯನ ನಡೆಯಬೇಕಿದೆ. ಏಕೆಂದರೆ ಈ ಪ್ರದೇಶ ವಿಭಿನ್ನ ಪಶುಪಾಲನಾ ಸಮುದಾಯಗಳ ಗಡಿನಾಡು ಭಾಗವಾಗಿತ್ತು. ಅಲ್ಲದೇ ಈ ಪ್ರದೇಶದ ಸುತ್ತ ಮುತ್ತಲಿನ ಗ್ರಾಮಗಳಿಗೆ ಇದೇ ಪ್ರಮುಖ ನಗರವಾಗಿತ್ತು. ನಗರವೆಂದರೆ ಇವತ್ತಿನ ನಗರವಲ್ಲ ಅದು ಸಾಂಸ್ಕೃತಿಕ ನಗರ ಎಂದರೆ ಅತಿಶಯೋಕ್ತಿಯಾಗಲಾರದು ಹಾಗಾಗಿ ಅನೇಕ ಬಗೆಯ ಸಾಂಸ್ಕೃತಿಕ ವೈಶಿಷ್ಟ್ಯತೆಗಳು ಇಲ್ಲಿವೆ. ಈ ಗ್ರಾಮವನ್ನು ಅಧ್ಯಯನ ಮಾಡುವುದರಿಂದ ಅಥವಾ ಈ ಗ್ರಾಮದಲ್ಲಿ ನಡೆಯುವ ಜಾತ್ರೆಗಳನ್ನು ಅಧ್ಯಯನ ಮಾಡಿದರೆ ಸುತ್ತ ಮುತ್ತಲಿನ ಗ್ರಾಮಗಳ ಜಾತ್ರೆಯನ್ನು ಅರಿತುಕೊಳ್ಳುವುದಕ್ಕೆ ಪೂರಕವಾದ ಮಾಹಿತಿಯನ್ನು ಕೊಡಬಹುದು ಎನ್ನುವುದು ಈ ಅಧ್ಯಯನದ ಆಶಯ.
- ಈ ಗ್ರಾಮದಲ್ಲಿ ಅನೇಕ ಶಾಸನಗಳಿವೆ. ಇವುಗಳು ಗ್ರಾಮದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುತ್ತಿವೆ. ಈ ಶಾಸನಗಳ ಚರಿತ್ರೆ ಮತ್ತು ಮೌಖಿಕ ಆಕರಗಳ ಇತಿಹಾಸವನ್ನು ಹೋಲಿಕೆ ಮಾಡಿ ವಿಶ್ಲೇಷಣೆಗೆ ಒಳಪಡಿಸುವುದು ಪ್ರಮುಖ ಆಶಯಗಳಲ್ಲಿ ಒಂದಾಗಿದೆ.
- ಗ್ರಾಮದ ಸಾಂಸ್ಕೃತಿಕ ವ್ಯವಸ್ಥೆ ವಿಭಿನ್ನ. ಇದರ ಸಂರಚನೆಯಲ್ಲಿ ಇದರ ಸಾಂಸ್ಕೃತಿಕ ಅಸ್ಮಿತೆಗಳು ಮತ್ತು ತಾರತಮ್ಯಗಳಿವೆ. ಇವುಗಳನ್ನು ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ ಅಸ್ಮಿತೆಗಳು ಮತ್ತು ತಾರತಮ್ಯಗಳೆಂದು ಕರೆಯಬಹುದು. ಇವುಗಳನ್ನು ವಿವಿಧ ಆಕರಗಳು ಸಂದರ್ಭಕ್ಕೆ ಅನುಸಾರವಾಗಿ ಜೀವಂತಗೊಳಿಸುತ್ತಿವೆ. ಪ್ರಾಚೀನ ಮತ್ತು ದೊಡ್ಡದಾದ ಗ್ರಾಮಗಳಲ್ಲಿ ಇಂತಹ ಆಕರಗಳು ಜೀವಂತಗೊಳ್ಳುವುದು ಮತ್ತಷ್ಟು ಹೆಚ್ಚು. ಬಂಕಾಪುರ ಇದಕ್ಕೆ ಹೊರತಾಗಿಲ್ಲ. ಸುತ್ತಮುತ್ತಲಿನ ಹಳ್ಳಿಗಳಲ್ಲಿ ಇದಕ್ಕೆ ವಿಶಿಷ್ಟವಾದ ಮಾನ್ಯತೆ ಇದೆ. ಇದನ್ನು ಚಾರಿತ್ರಿಕವಾದ ಮತ್ತು ಪ್ರಸ್ತುತ ಸಂದರ್ಭದ ಘಟನೆಗಳಲ್ಲೂ ಕಾಣಬಹುದು ಇಂತಹ ಗ್ರಾಮದ ಒಳಗಡೆ ಚಲನಶೀಲವಾಗುತ್ತಿರುವ ಸಾಂಸ್ಕೃತಿಕ ನೆಲೆಗಳನ್ನು, ಇದರ ಪಯಣದ ವಿಧಾನಗಳನ್ನು ಹಾಗೂ ಈ ಪಯಣದಲ್ಲಿ ಸಾಧಕ ಬಾಧಕಗಳನ್ನು ಗುರುತಿಸಿ ಸೈದ್ಧಾಂತಿಕವಾಗಿ ಅಧ್ಯಯನ ಮಾಡಲಾಗಿದೆ. ಇದು ಗ್ರಾಮ ನಿರ್ಮಾಣದ ಆಶಯದಿಂದ ರೂಪಗೊಂಡಿದೆ. ಏಕೆಂದರೆ ಸಾಧಕ ಅಂಶಗಳಿಗಿಂತ ಬಾಧಕ ಅಂಶಗಳು ಅಪಾಯಕಾರಿ ಅನ್ನುವುದು ನಮಗೆಲ್ಲ ಗೊತ್ತಿರುವ ಸಂಗತಿ. ಈ ಬಾಧಕಗಳು ಸ್ಥಳೀಯ

ಅಭಿವೃದ್ಧಿಗೆ ಹಿನ್ನಡೆಯನ್ನು ತರುತ್ತಿವೆ ಏಕೆಂದರೆ ಇವು ರಾಜಕಾರಣದ ಆಕರಗಳು. ಹಾಗಾಗಿ ಇಂತಹ ಅಂಶಗಳನ್ನು ಗುರುತಿಸಿ ಅವುಗಳನ್ನು ಇಲ್ಲವಾಗಿಸುವುದಕ್ಕೆ ಬೇಕಾದ ನೆಲೆಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ. ಇದನ್ನು ಗ್ರಾಮದ ಸುಸ್ಥಿರ ಅಭಿವೃದ್ಧಿಯ ಪಯಣವನ್ನು ರೂಪಿಸುವ ನೆಲೆಯೆಂದು ಭಾವಿಸಿ ವಿಶ್ಲೇಷಣೆ ಮಾಡಲಾಗಿದೆ.

ಈ ಗ್ರಾಮಕ್ಕೆ ಅನೇಕ ಅಲೆಮಾರಿಗಳು ವಲಸೆಬಂದು ತಿಂಗಳುಗಟ್ಟಲೆ ನೆಲೆಸುತ್ತಾರೆ. ಆಯಾಕಾಲಕ್ಕೆ ಅನುಗುಣವಾಗಿ ಅಲೆಮಾರಿಗಳು ವಲಸೆ ಬರುವುದು ಇಲ್ಲಿನ ಪಾರಂಪರಿಕ ಸಂಪ್ರದಾಯ. ಇವರ ಸಾಂಸ್ಕೃತಿಕ ಸಂಬಂಧವು ಸಹ ಗ್ರಾಮದಲ್ಲಿ ಕೊಡುಗೆಯಾಗಿ ಕಾರ್ಯ ನಿರ್ವಹಿಸಿದೆ. ಈ ದೃಷ್ಠಿಕೋನವನ್ನು ಅಧ್ಯಯನ ಮಾಡುವುದು ಸಹ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

### ೧.೩. ಅಧ್ಯಯನದ ವ್ಯಾಪ್ತಿ ಮತ್ತು ಮಹತ್ವ

ಪ್ರಸ್ತುತ ಅಧ್ಯಯನವು ಒಂದು ಗ್ರಾಮವನ್ನು ಕೇಂದ್ರವಾಗಿರಿಸಿಕೊಂಡಿದೆ. ಅಧ್ಯಯನದ ಸ್ಪಷ್ಟತೆಗಾಗಿ ಅಧ್ಯಯನದ ವ್ಯಾಪ್ತಿಯನ್ನು ಕರ್ನಾಟಕ ರಾಜ್ಯದ ಹಾವೇರಿ ಜಿಲ್ಲೆಯ ಶಿಗ್ಗಾಂವ ತಾಲೂಕಿನ ಬಂಕಾಪುರ ಗ್ರಾಮಕ್ಕೆ ಸೀಮಿತಗೊಳಿಸಿಕೊಳ್ಳಲಾಗಿದೆ. ಹಾಗಿದ್ದಾಗಲೂ ಕೆಲವೊಮ್ಮೆ ಸಾರ್ವತ್ರಿಕ ನೆಲೆಯಲ್ಲಿ ವಿಚಾರಗಳನ್ನು ವಿಸ್ತರಿಸುವ ಉದ್ದೇಶವಿರುವುದರಿಂದ ಇತರ ಸ್ಥಳಕ್ಕೆ ಸಂಬಂಧಿಸಿದಂತೆ ನಡೆದ ಅಧ್ಯಯನಗಳ ಮಾಹಿತಿಗಳನ್ನು ಸಾಂದರ್ಭಿಕ ವಿಶ್ಲೇಷಣೆಗಳಿಗೆ ಅನುಗುಣವಾಗಿ ಬಳಸಿಕೊಳ್ಳಲಾಗಿದೆ. ಅಧ್ಯಯನವು ಕ್ಷೇತ್ರಾಧಾರಿತ ಮಾಹಿತಿಗಳನ್ನು ಆಧರಿಸಿದೆ. ಅಲ್ಲದೆ ಈಗಾಗಲೇ ಸಂಗ್ರಹಿತವಾದ ಗ್ರಾಮ ಅಧ್ಯಯನಕ್ಕೆ ಸಂಬಂಧಿಸಿದಂತೆ ಕೆಲವು ವಿಚಾರಗಳನ್ನು, ಜನಪದ ಸಾಹಿತ್ಯವನ್ನು, ಕೆಲವು ಆಚರಣೆಗೆ ಸಂಬಂಧಿಸಿದ ಮಾಹಿತಿಗಳನ್ನು ಅಧ್ಯಯನದಲ್ಲಿ ದ್ವಿತೀಯ ಆಕರಗಳಾಗಿ ಬಳಸಿಕೊಳ್ಳಲಾಗಿದೆ. ಜೊತೆಗೆ ಈ ವಿಷಯಕ್ಕೆ ಸಂಬಂಧಿಸಿದಂತೆ ನಡೆದ ಅಧ್ಯಯನಗಳನ್ನು, ಲೇಖನಗಳನ್ನು, ಪತ್ರಿಕೆಗಳನ್ನು, ಜಿಲ್ಲಾಸಂಖ್ಯಾ ಸಂಗ್ರಹಣಾಧಿಕಾರಿಗಳ ಕಾರ್ಯಾಲಯದಿಂದ ಪಡೆದ ಮತ್ತು ಸರ್ಕಾರದ ವರದಿಗಳಿಂದ ಪಡೆದ ಅಂಕಿ ಅಂಶಗಳನ್ನು ಸಹ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಹೀಗೆ ಒಟ್ಟು ಅಧ್ಯಯನದಲ್ಲಿ ಲಿಖಿತ–ಅಲಿಖಿತ, ಪ್ರಕಟಿತ–ಅಪ್ರಕಟಿತ, ಪ್ರಾಥಮಿಕ ಮತ್ತು ಆನುಷಂಗಿಕ ಮಾಹಿತಿಗಳನ್ನು ಬಳಸಿಕೊಂಡು ಬಹುಮುಖಿ ನೆಲೆಗಳಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಬಹುಮುಖಿ ನೆಲೆಯಲ್ಲಿ ಚಿತ್ರಣಗೊಂಡಿರುವ ಅಥವಾ ಜೀವಂತವಾಗಿರುವ ಗ್ರಾಮದ ಅಸ್ಮಿತೆಯನ್ನು ಗುರುತಿಸಲಾಗಿದೆ.

ಜಾಗತೀಕರಣ ಮತ್ತು ಆಧುನೀಕರಣದ ಪ್ರಭಾವದಿಂದಾಗಿ ಇತ್ತೀಚಿನ ದಿನಗಳಲ್ಲಿ ಗ್ರಾಮಗಳಲ್ಲಿ ಬದಲಾವಣೆ ಕಾಣುತ್ತಿದೆ. ಅದಕ್ಕೆ ಅನೇಕ ಕಾರಣಗಳನ್ನು ಕೊಡಬಹುದಾದರೂ ಪ್ರಸ್ತುತ ಹಳ್ಳಿಗಳ ಜೀವನ ಸ್ವಲ್ಪಮಟ್ಟಿಗೆ ಸುಧಾರಣೆ ಹೊಂದಿ ಜನರಲ್ಲಿ ಹೊಸ ಚೇತನ ಹುಟ್ಟಿ ಜನರ ನಿತ್ಯ

ಬದುಕನ್ನು ಬದಲಾಯಿಸುತ್ತಿದೆಯಾದರೂ, ಪ್ರಾಚೀನ ಕಾಲದಲ್ಲಿನ ಸಾಂಸ್ಕೃತಿಕ ಚಟುವಟಿಕೆ, ಜನಪದ ಸಾಹಿತ್ಯ, ಆಚರಣೆ, ಚಾರಿತ್ರಿಕ ಮಹತ್ವಪೂರ್ಣ ಅಂಶಗಳು, ಐತಿಹಾಸಿಕ ದಾಖಲೆಗಳು, ಶಾಸನಗಳು ಮುಂತಾದ ಚರಿತ್ರೆ ಕಟ್ಟುವಲ್ಲಿ ಸಂಸ್ಕೃತಿ ಪ್ರತೀಕವಾಗಿದ್ದಂತಹ ಅಂಶಗಳು, ಇಂದಿನ ಸಿಮೆಂಟ್ ಸಂಸ್ಕೃತಿಯಡಿಯಲ್ಲಿ ಮುಳುಗಿ ಹೋಗುತ್ತಿವೆ. ಆದ್ದರಿಂದ ಇಂತಹ ಸಂದಿಗ್ಧ ಸ್ಥಿತಿಯನ್ನು ಅರಿತು ಪ್ರಸ್ತುತ ಅಧ್ಯಯನವು ಜಾಗತೀಕರಣದ ದಾಳಿಯಿಂದಾಗಿ ಬಂಕಾಪುರ ಪ್ರದೇಶವು ಪರಿವರ್ತನೆ ಎಂಬ ನಗರ ಬೆಳವಣಿಗೆಯ ಕ್ರಮವನ್ನು ಅನುಸರಿಸುತ್ತಿರುವುದರಿಂದ ಮುಂದಿನ ದಿನಮಾನಗಳಲ್ಲಿ ಪ್ರಸ್ತುತ ಪ್ರದೇಶದ ಜನಪದ ಸಾಹಿತ್ಯ, ಕಲೆ, ಸಂಪ್ರದಾಯಗಳ ಹತ್ತಾರು ಅಂಶಗಳು ಮರೆಯಾಗುವ ಸಂದೇಹವಿರುವದರಿಂದ ಈ ಎಲ್ಲಾ ಅಂಶಗಳನ್ನು ಅತ್ಯಂತ ತುರ್ತಾಗಿ ಸಂಗ್ರಹಿಸುವುದು ಅನಿವಾರ್ಯವಾಗಿದೆ. ಅಷ್ಟೇ ಅಲ್ಲದೆ ಅಧ್ಯಯನಕ್ಕೆ ಪೂರಕವಾದ ಬಂಕಾಪುರ ಗ್ರಾಮದ ಗ್ರಾಮದೇವತೆ, ಬಂಕಾಪುರದ ಪ್ರಸಿದ್ಧ ಐತಿಹಾಸಿಕ ಕೋಟೆ, ಭೌಗೋಳಿಕ ನೈಸರ್ಗಿಕ ವಿವರಗಳು, ಶಾಸನಗಳು, ಸಾಮಾಜಿಕ, ಆರ್ಥಿಕ ವ್ಯವಸ್ಥೆಗಳು, ಕುಟುಂಬ ಪದ್ಧತಿ ಮೊದಲಾದ ಅಂಶಗಳ ಅಧ್ಯಯನ ಮಾಡುವುದು ತೀರಾ ಅಗತ್ಯವಾಗಿದೆ.

ಇತ್ತೀಚೆಗೆ ಜನಪ್ರಿಯವಾಗುತ್ತಿರುವ ಅಧ್ಯಯನ ಕ್ರಮವು ಸಾಮಾನ್ಯವಾಗಿ ಇಂದು ನಡೆಯುತ್ತಿರುವ ಜಾಗತೀಕರಣದ ಪ್ರಕ್ರಿಯೆಗೆ ಪ್ರಾದೇಶಿಕ ಅಧ್ಯಯನಗಳನ್ನು ಮುಖಾಮುಖಿಯಾಗಿಸುತ್ತಿದೆ. ಭೌತಿಕ ಸಾರಿಗೆ ಸಂಪರ್ಕಗಳು, ಮಾಧ್ಯಮಗಳು, ಬಹುರಾಷ್ಟ್ರೀಯ ಸಂಸ್ಥೆಗಳು ಜಗತ್ತಿನ ಬೇರೆ ಬೇರೆ ಖಂಡಗಳನ್ನು ಹತ್ತಿರ ಹತ್ತಿರ ತರುತ್ತಿವೆ. ಇಂಥ ಸಂದರ್ಭದಲ್ಲಿ ಪ್ರಾದೇಶಿಕ ಅಧ್ಯಯನಗಳು ಜಾಗತೀಕರಣಕ್ಕೆ ಪರ್ಯಾಯವಾಗಿ ನಿರ್ದಿಷ್ಟ ಪ್ರದೇಶವೊಂದರ ಸಾಂಸ್ಕೃತಿಕ ಅನನ್ಯತೆಯನ್ನು ಸ್ಥಾಪಿಸುತ್ತವೆ ಮತ್ತು ಸಂಸ್ಕೃತಿಯೊಂದರ ಸೂಕ್ಷ್ಮ ವಿಶ್ಲೇಷಣೆಗೆ ಬದ್ಧವಾಗುತ್ತ ಸ್ಥೂಲ ವಿಶ್ಲೇಷಣೆಯನ್ನು ನಿರಾಕರಿಸುತ್ತವೆ. ಆಧುನಿಕೋತ್ತರ ಅಧ್ಯಯನದ ವಿಧಾನಗಳು ಪ್ರಾದೇಶಿಕತೆಯನ್ನು ಬಲವಾಗಿ ಸಮರ್ಥಿಸುತ್ತವೆ. ನಿರ್ದಿಷ್ಟ ಪ್ರದೇಶವೊಂದರ ಅನನ್ಯತೆಯ ಹುಡುಕಾಟದ ಜೊತೆಗೆ ಜಾಗತೀಕರಣ ಮತ್ತು ಆಧುನೀಕರಣದ ದಾಳಿಯಿಂದ ಬಂಕಾಪುರ ಹೇಗೆ ತನ್ನ ತನವನ್ನು ಉಳಿಸಿಕೊಂಡಿದೆ ಎಂಬುದನ್ನು ಶೋಧಿಸುವ ಉದ್ಧೇಶವನ್ನಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

ಇತಿಹಾಸ ಪ್ರಜ್ಞೆಯ ಅಭಾವದ ಮೂಲಕ ನಾಗರೀಕ ಜೀವನದ ಇತಿಹಾಸ ಸಂಸ್ಕೃತಿಗಳ ವಿವರಗಳು ನಮಗೆ ವಾಸ್ತವವಾಗಿ ದೊರೆಯುವುದಿಲ್ಲವೆಂದ ಮೇಲೆ ಜಾನಪದ, ಸಾಂಸ್ಕೃತಿಕ, ಸಾಮಾಜಿಕ ಜೀವನದ ಇತಿಹಾಸ ನಮಗೆ ಎಲ್ಲಿ ದೊರೆಯಬೇಕು? ಹೇಗೆ ದೊರೆಯಬೇಕು? ಎಂಬ ಡಾ. ಬೆಟಗೇರಿ ಕೃಷ್ಣಶರ್ಮ ಅವರ ಈ ಪ್ರಶ್ನೆ ಜಾನಪದ ಅಧ್ಯಯನದ ಅನಿವಾರ್ಯತೆಯನ್ನು ಮತ್ತು ಅಧ್ಯಯನದ ತೀವ್ರತೆಯನ್ನು ತಿಳಿಸುತ್ತದೆ. ಆದ್ದರಿಂದ ಪ್ರತಿಯೊಂದು ಪ್ರದೇಶದ ಸಾಂಸ್ಕೃತಿಕ ಅಧ್ಯಯನದ ಅಗತ್ಯವಿರುವ ಇಂದಿನ ಸಂದರ್ಭದಲ್ಲಿ ಪ್ರಸ್ತುತ ಅಧ್ಯಯನ ಈ ದಿಶೆಯಲ್ಲಿ ಸಾಗಿದೆ.

ಪ್ರಸ್ತುತ ಪ್ರದೇಶವು ಐತಿಹಾಸಿಕ ಪರಂಪರೆಯನ್ನು ಹೊಂದಿರುವುದರ ಜೊತೆಗೆ ಧಾರ್ಮಿಕ ಕೇಂದ್ರವಾಗಿದೆ. ಇಲ್ಲಿನ ಶಾಸನಗಳು, ಐತಿಹ್ಯಗಳು, ಕೋಟೆ, ಕೆರೆ–ಕಟ್ಟೆ, ಬಾವಿಗಳು, ಪ್ರಾಣಿವೈವಿಧ್ಯ, ಜನಪದ ಸಾಹಿತ್ಯ, ಇಲ್ಲಿನ ಸಂಪತ್ತು ಮತ್ತು ಸಂಸ್ಕೃತಿಗೆ ಯಾವೊಬ್ಬ ಸಂಶೋಧಕರು ಮನಸೋಲದೆ ಇರಲಾರರು. ಇದು ಪ್ರಸ್ತುತ ಅಧ್ಯಯನದ ಆಸಕ್ತಿಯನ್ನು ಇಮ್ಮಡಿಗೊಳಿಸಿತು. **ಡಾ. ಚೆನ್ನಕ್ಕ ಎಲಿಗಾರ ಅವರು 'ಬಂಕಾಪುರ ಶೋಧನ'** ಎಂಬ ಶಾಸನಗಳ ಕುರಿತು ಮಾಡಿರುವ ಅಧ್ಯಯನ ಹೊರತುಪಡಿಸಿದರೆ ಸಮಗ್ರವಾದ ಅಧ್ಯಯನಗಳು ನಡೆದಿಲ್ಲ. ಆದ್ದರಿಂದ **'ಬಂಕಾಪುರ ಸಾಂಸ್ಕೃತಿಕ ಅಧ್ಯಯನ'** ಎಂಬ ಶೀರ್ಷಿಕೆಯಡಿಯಲ್ಲಿ ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದೆ. ಇದು ಬಂಕಾಪುರ ಗ್ರಾಮದ ಪರಿಸರದ ಮೇಲೆ ಸಾಧ್ಯವಾದಷ್ಟು ಬೆಳಕು ಚೆಲ್ಲುತ್ತದೆ ಎನ್ನುವ ಭರವಸೆ ಇದೆ.

### ೧.೪. ಅಧ್ಯಯನದ ವಿಧಿ–ವಿಧಾನಗಳು

ಒಂದು ಪ್ರದೇಶದ ಸಾಂಸ್ಕೃತಿಕ ಚರಿತ್ರೆಯನ್ನು ತಿಳಿಯಲು ಅನೇಕ ಬಗೆಯ ಆಕರ ಸಾಮಗ್ರಿಗಳ ಮೊರೆ ಹೋಗುವುದು ಅನಿವಾರ್ಯ. ಒಂದು ನಾಡಿನ ಇತಿಹಾಸ ರಚನೆಗೆ ಸಂಬಂಧಿಸಿದ ಮಾಹಿತಿಯನ್ನು ಮುಖ್ಯವಾಗಿ ಪ್ರಾಚ್ಯವಸ್ತು ಮತ್ತು ಸಾಹಿತ್ಯಿಕ ಆಕರಗಳು ಒದಗಿಸುತ್ತವೆ. ಪ್ರಾಚ್ಯವಸ್ತುಗಳಲ್ಲಿ ಶಾಸನ ಹಾಗೂ ಸ್ಮಾರಕಗಳು ಸೇರ್ಪಡೆಯಾದರೆ, ಸಾಹಿತ್ಯಿಕ ಆಕರಗಳಲ್ಲಿ ದೇಶಿಯ ಮತ್ತು ವಿದೇಶಿಯ ಬರವಣಿಗೆಗಳು ಮುಖ್ಯವಾಗುತ್ತವೆ. ಪ್ರಸ್ತುತ **'ಬಂಕಾಪುರ ಸಾಂಸ್ಕೃತಿಕ ಅಧ್ಯಯನ'**ದಲ್ಲಿ ಶಾಸನಗಳು, ಸ್ಮಾರಕಗಳು, ಸಾಹಿತ್ಯಿಕ, ದೇಶಿ ಮತ್ತು ವಿದೇಶಿ ಬರವಣಿಗೆಗಳು, ಅಲ್ಲಿನ ವಕ್ತೃಗಳ ಮಾಹಿತಿಗಳು, ಛಾಯಾಚಿತ್ರಗಳನ್ನು ಆಕರವಾಗಿ ಬಳಸಿಕೊಳ್ಳಲಾಗಿದೆ.

ಒಂದು ಪ್ರದೇಶದ ಸಾಂಸ್ಕೃತಿಕ ಅಧ್ಯಯನಕ್ಕೆ ಅಲ್ಲಿ ಲಭ್ಯವಿರುವ ಸಾಹಿತ್ಯಿಕ ಮತ್ತು ಮೌಖಿಕ ಆಕರಗಳು ಮುಖ್ಯವಾಗುತ್ತವೆ. ಸಾಂಸ್ಕೃತಿಕ ಅಧ್ಯಯನದಲ್ಲಿ ಬಹುಮುಖ್ಯವಾದುದು ಕ್ಷೇತ್ರಕಾರ್ಯ. ಕ್ಷೇತ್ರಕಾರ್ಯದ ಮೂಲಕ ಕಂಡುಬಂದ ದೇವಾಲಯಗಳ ಅಧ್ಯಯನದೊಂದಿಗೆ ಅವುಗಳ ಭಾವಚಿತ್ರಗಳನ್ನು ಸಂಗ್ರಹಿಸಲಾಯಿತು. ಸಂಗ್ರಹಿಸಿದ ವಿಷಯಗಳನ್ನು ಪಟ್ಟಿಕೆಗಳಲ್ಲಿ ದಾಖಲಿಸಲಾಯಿತು. ಕ್ಷೇತ್ರಕಾರ್ಯದ ಮೂಲಕ ಕಂಡುಬಂದ ದೇವಾಲಯಗಳು, ಜಾತ್ರೆ, ಉರುಸು, ಜೀವನಾವರ್ತನ ಆಚರಣೆ, ವಾರ್ಷಿಕಾವರ್ತನ ಅಚರಣೆಗಳ ಅವಲೋಕನ ಹಾಗೂ ಭಾವಚಿತ್ರಗಳನ್ನು ಸಂಗ್ರಹಿಸಿ ವಿಷಯಾನುಕ್ರಮದಲ್ಲಿ ಹೊಂದಿಸಿಕೊಳ್ಳಲಾಯಿತು. ಇವುಗಳಿಗೆ ಸಂಬಂಧಿಸಿದಂತೆ ವಕ್ತೃಗಳನ್ನು ಮತ್ತು ಹಲವು ವಿದ್ವಾಂಸರುಗಳನ್ನು ಸಂದರ್ಶನ ಮಾಡಿ ಅವರಿಂದ ಬಂದ ಮಾಹಿತಿಯನ್ನು ಸಾಂದರ್ಭಿಕ ವಿಶ್ಲೇಷಣೆಗೆ ಅನುಸಾರವಾಗಿ ಬಳಸಿಕೊಳ್ಳಲಾಯಿತು ಅಂದರೆ ದಾಖಲಿಸಿಕೊಂಡು ಇವೆಲ್ಲವುಗಳ ಆಧಾರದಿಂದ ಅಲ್ಲಿನ ಚಾರಿತ್ರಿಕ, ಸಾಂಸ್ಕೃತಿಕ ನೆಲೆಬೆಲೆಯನ್ನು ಅರಿಯಲು ಸಾಧ್ಯವಾಯಿತು ಈ ಸಾಧ್ಯತೆಯ ರೂಪವೆ ಪ್ರಸ್ತುತ ಅಧ್ಯಯನ.

## ೧.೫. ಅಧ್ಯಯನದ ಸ್ವರೂಪ

ಪ್ರಸ್ತುತ ಮಹಾಪ್ರಬಂಧವು ಒಟ್ಟಾರೆ ಒಂಭತ್ತು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಮತ್ತು ಅಧ್ಯಯನ ವಿಷಯಕ್ಕೆ ಪೂರಕವಾಗಿ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ ಮಾಡಲಾಗಿದೆ. ಈ ಸಮೀಕ್ಷೆಯಲ್ಲಿ ಆ ಅಧ್ಯಯನಗಳ ಸ್ವರೂಪ, ಉದ್ದೇಶ ಮತ್ತು ಮಹತ್ವವನ್ನು ಕುರಿತು ಚರ್ಚಿಸಲಾಗಿದೆ. ಜೊತೆಗೆ ಈ ಉದ್ದೇಶಗಳಿಗೆ ಅನುಗುಣವಾಗಿ ಅಧ್ಯಯನಕ್ಕಾಗಿ ಹಾಕಿಕೊಂಡ ವ್ಯಾಪ್ತಿ ಮತ್ತು ಕೈಗೊಂಡ ಅಥವಾ ಅನುಸರಿಸಿದ ವಿಧಾನಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಒದಗಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ **'ಬಂಕಾಪುರ ಗ್ರಾಮ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ'** ಎಂದಿದ್ದು ಇದರಲ್ಲಿ ಸ್ಥಳನಾಮ ಮತ್ತು ಪದನಿಷ್ಪತ್ತಿ, ಭೌಗೋಳಿಕ ಲಕ್ಷಣಗಳು, ವಾಯುಗುಣ, ಅರಣ್ಯ ಸಂಪತ್ತು, ಸಾರಿಗೆ ಸಂಪರ್ಕ, ಚಾರಿತ್ರಿಕ ಹಿನ್ನೆಲೆ, ಗ್ರಾಮದ ಪ್ರಾಚೀನತೆ ಬಗ್ಗೆ ಚರ್ಚಿಸಿದ್ದು, ಶಾಸನಶಾಸ್ತ್ರೀಯ ಮತ್ತು ಐತಿಹ್ಯಗಳ ಹಿನ್ನೆಲೆಯಲ್ಲಿ ವಿವರಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ **ಬಂಕಾಪುರ ಗ್ರಾಮದ ಸಾಮಾಜಿಕ ಜೀವನ**, ವಸತಿ ನಿರ್ಮಾಣ, ಆಹಾರ ಪದ್ಧತಿ, ಸಮುದಾಯಗಳು, ಕುಟುಂಬ ಪದ್ಧತಿ, ಬಂಧುತ್ವ, ಜನಪದ ಕಲೆಗಳು, ವ್ಯಾಪಾರ, ಸಾರಿಗೆ ವ್ಯವಸ್ಥೆ, ಸಂಘ ಸಂಸ್ಥೆಗಳು, ಜನಪದ ಕಲೆ ಹಾಗೂ ಕಲಾವಿದರ ಬಗ್ಗೆ ಮುಂತಾದ ವಿಷಯಗಳನ್ನು ಹಾಗೂ ಇವುಗಳಲ್ಲಿ ಅಡಕವಾಗಿರುವ ಪಾರಂಪರಿಕ ಜ್ಞಾನಗಳನ್ನು ಮತ್ತು ಇವುಗಳ ಕಾರ್ಯಗಳನ್ನು ಬಹುಮುಖಿ ನೆಲೆಗಳಲ್ಲಿ ಅರಿಯಲು ಪ್ರಯತ್ನಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ **'ಬಂಕಾಪುರ ಗ್ರಾಮದ ಆಚರಣೆಗಳು'** ಎನ್ನುವ ಶೀರ್ಷಿಕೆಯಲ್ಲಿ ಗ್ರಾಮದಲ್ಲಿ ಜೀವಂತವಾಗಿರುವ ಆಚರಣೆಗಳನ್ನು ಸೈದ್ಧಾಂತಿಕವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅಧ್ಯಯನದ ಸ್ಪಷ್ಟತೆಗಾಗಿ ಎಂದು ವಿಂಗಡಿಸಿಕೊಳ್ಳಲಾಗಿದೆ ವಾರ್ಷಿಕಾವರ್ತನ ಆಚರಣೆಗಳು ಮತ್ತು ಜೀವನಾವರ್ತನ ಆಚರಣೆಗಳೆಂದು ವಿಂಗಡಿಸಿ ನಂಬಿಕೆ, ವಿಧಿ, ನಿಷೇದ, ಸಂಪ್ರದಾಯ, ಹಬ್ಬಗಳು, ಹರಕೆಗಳು, ಅಲ್ಲಿನ ಜನರ ಜೀವನ ಸಂಸ್ಕೃತಿಯನ್ನು ತಿಳಿಸುವ ಪ್ರತಿಬಿಂಬದಂತಿವೆ. ಆಚರಣೆಗಳ ಹಿನ್ನೆಲೆಯಲ್ಲಿ ಜನರ ಸಂಬಂಧಗಳನ್ನು ಚರ್ಚಿಸಲಾಗಿದೆ.

ಐದನೇ ಅಧ್ಯಾಯದಲ್ಲಿ **'ಬಂಕಾಪುರ ಗ್ರಾಮದ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಸ್ಥಿತಿಗತಿ'** ಎಂದಿದ್ದು ಗ್ರಾಮದಲ್ಲಿನ ಆರ್ಥಿಕ ಸ್ಥಿತಿಗತಿ, ಶೈಕ್ಷಣಿಕ ಸ್ಥಿತಿ, ರಾಜಕೀಯ, ಧಾರ್ಮಿಕ ಸ್ಥಿತಿಗತಿಯನ್ನು ಬಹುಮುಖಿ ಆಕರಗಳ ಹಿನ್ನೆಲೆಯನ್ನು ಗಮನಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ **'ಬಂಕಾಪುರ ಗ್ರಾಮದ ದೈವಗಳು'** ಎಂದು ವಿಭಾಗಿಸಿಕೊಂಡಿದ್ದು. ಗ್ರಾಮದೇವತೆ ದುರ್ಗಾದೇವಿಯ ಇತಿಹಾಸ, ಬೀರಲಿಂಗೇಶ್ವರ, ಯಲ್ಲಮ್ಮ, ಹನುಮಂತ, ನಗರೇಶ್ವರ,

ಸಿದ್ದೇಶ್ವರ, ಗಣಪತಿ, ವೀರಭದ್ರ, ಅಲ್ಲಾವುದ್ದೀನ ಶಾ ಖಾದ್ರಿ ದರ್ಗಾ, ಮತ್ತು ಮಠಗಳು ಮುಂತಾದ ದೇವತೆಗಳ ಆಚರಣೆಗಳ ಹಿನ್ನೆಲೆಯನ್ನು ವಿವರಿಸಲಾಗಿದೆ.

ಅಧ್ಯಾಯ ಏಳು **'ಬಂಕಾಪುರ ಗ್ರಾಮದ ಸಾಹಿತ್ಯ'** ಎಂದಿದ್ದು ಇಲ್ಲಿನ ಸಾಹಿತ್ಯವನ್ನು ಕಥೆ, ಗಾದೆ, ಗೀತೆ, ಒಗಟುಗಳು, ಎಂದು ವಿಂಗಡಿಸಿ ಅಧ್ಯಯನ ಮಾಡುವ ಮತ್ತು ಜನಪದ ಗೀತೆಗಳು, ಕಥೆಗಳ ಹಿನ್ನೆಲೆಯಲ್ಲಿ ಅಲ್ಲಿನ ಸಂಸ್ಕೃತಿಯನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ಅಧ್ಯಾಯ ಎಂಟು **'ಬಂಕಾಪುರ ಗ್ರಾಮ ಮತ್ತು ಸಮಕಾಲೀನತೆ'** ಎನ್ನುವ ಶೀರ್ಷಿಕೆ ಬಂಕಾಪುರ ಗ್ರಾಮ ಹಿಂದೆ ಹೇಗಿತ್ತು, ಪ್ರಸ್ತುತ ಸಂದರ್ಭದಲ್ಲಿ ಅಂದರೆ ಜಾಗತೀಕರಣ, ಆಧುನೀಕರಣದೊಂದಿಗೆ ಹೇಗೆ ಹೊಂದಾಣಿಕೆ ಮಾಡಿಕೊಂಡಿದೆ ಮತ್ತು ಸಂಘರ್ಷ ಹಾಗೂ ಪ್ರತಿರೋದಗಳನ್ನು ಒಡ್ಡುತ್ತದೆ ಎಂಬುದನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಅಧ್ಯಾಯ ಒಂಭತ್ತರಲ್ಲಿ **'ಸಮಾರೋಪ'**ವಿದೆ ಇಲ್ಲಿನ ಅಧ್ಯಯನ ಕುರಿತು ಒಟ್ಟು ಅಧ್ಯಯನದ ನೋಟ, ಅಧ್ಯಯನದ ಫಲಿತಗಳನ್ನು ಒಳಗೊಂಡಿದೆ. ನಂತರ ಅನುಬಂಧ ಚಿತ್ರಸಂಪುಟ ಇತ್ಯಾದಿಗಳನ್ನು ಒಳಗೊಂಡಿದೆ.

ಹೀಗೆ ಈ ಮಹಾಪ್ರಬಂಧದ ರಚನೆಗೆ ಬೇಕಾಗಿರುವ ಪೂರಕ ಸಾಮಗ್ರಿಗಳನ್ನು ಇತರ ಗ್ರಾಮಾಧ್ಯಯನ ಕೃತಿಗಳಿಂದ, ಸ್ಥಳೀಯರಿಂದ, ವಿದ್ವಾಂಸರಿಂದ ಬಂಕಾಪುರ ಬಗೆಗೆ ಈಗಾಗಲೇ ಪ್ರಕಟವಾಗಿರುವ ಲೇಖನಗಳಿಂದ ಕೆಲವು ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಆ ವಿಷಯವನ್ನು ಅಧ್ಯಯನಕ್ಕೆ ಪೂರಕವಾಗಿ, ಪ್ರಾಸಂಗಿಕವಾಗಿ ವಿಷಯದ ಸಮಗ್ರವಾದ ಚರ್ಚೆಯ ಖಚಿತತೆಗಾಗಿ ಬಳಸಿಕೊಳ್ಳಲಾಗಿದೆ. ಈ ಸಂಶೋಧನೆ ಸಮಗ್ರ ಅಧ್ಯಯನದ ಪ್ರಯತ್ನವೇ ಹೊರತು ಸಂಪೂರ್ಣ ಅಧ್ಯಯನವಲ್ಲ ಎಂಬುದನ್ನು ಪ್ರಾಮಾಣಿಕವಾಗಿ ವಿನಯಪೂರ್ವಕವಾಗಿ ತಿಳಿಯಬಯಸುತ್ತೇನೆ.

### ೧.೬. ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಕರ್ನಾಟಕದಲ್ಲಿ ಇಂದು ಜಾನಪದ ಅಧ್ಯಯನ ತುಂಬಾ ಗಂಭೀರವಾಗಿಯೇ ನಡೆಯುತ್ತಲಿದೆ. ಆದರೆ ಸೈದ್ಧಾಂತಿಕ ವಿಶ್ಲೇಷಣೆಯ ವಿಷಯದಲ್ಲಿ ಪಾಶ್ಚಾತ್ಯ ದೇಶಗಳಿಗೆ ಹೋಲಿಸಿದರೆ ಇಲ್ಲಿಯ ಕೆಲಸ ಕಡಿಮೆ ಎಂದೇ ಹೇಳಬಹುದು. ಹಿಂದೆ ಪ್ರಭುಗಳ ರಾಜರುಗಳ ಮೂಲಕ ದೇಶವನ್ನು ಅಳೆಯುತ್ತಿದ್ದರು. ಆದರೆ ಇಂದು ಸಾಮಾನ್ಯ ಜನಗಳ ಹಿನ್ನೆಲೆಯಲ್ಲಿ ಭಾರತವನ್ನು ನೋಡುವ ಪ್ರಯತ್ನಗಳು ಸಾಧ್ಯವಾಗುತ್ತಿವೆ. ನೈಜ ಭಾರತದ ಸ್ಥಿತಿಗತಿಗಳನ್ನು ಕಂಡುಕೊಳ್ಳುವ ಆಯಾಮವಾಗಿ ಜ್ಞಾನಪದ ಅಧ್ಯಯನ ಹುಟ್ಟಿಕೊಂಡಿದೆ. ಸಂಬಂಧಕ್ಕಾಗಿ ಜಾನಪದ ಒಡನಾಟಕ್ಕಾಗಿ ಜಾನಪದ ಎಂಬ ಮನೋಧರ್ಮ ಬೆಳೆಯತೊಡಗಿತು. ಸ್ವಾತಂತ್ರ್ಯದ ಸಂದರ್ಭದಲ್ಲಿ ಹಳ್ಳಿಗಳು ನಾಶವಾಗುತ್ತವೆ ಎಂಬ ಕೂಗಾಟವೆದ್ದಾಗ ' ಜಾನಪದ ನಾಶವಾಗುತ್ತದೆ ಅದು ನಾಶವಾಗುವ ಮುನ್ನ ಉಳಿಸಬೇಕು'

ಎಂದು ಜಾನಪದ ವಿದ್ವಾಂಸರ ಅಭಿರುಚಿ. ಇಂತಹ ಆಸಕ್ತಿಯಿಂದ ಗ್ರಾಮಾಧ್ಯಯನಗಳಿಗೆ ಹೆಚ್ಚು ಒತ್ತು ನೀಡಲಾಯಿತು.

ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ **ಅರ್ಚಕ ಬಿ. ರಂಗಸ್ವಾಮಿಯವರ 'ಹುಟ್ಟಿದ ಹಳ್ಳಿ'** ಕನ್ನಡದಲ್ಲಿ ಬಂದ ಗ್ರಾಮಾಧ್ಯಯನದ ಮೊದಲ ಗ್ರಂಥ. ದಕ್ಷಿಣ ಕರ್ನಾಟಕದ ಒಂದು ಹಳ್ಳಿಯ ಸಾಮಾಜಿಕ, ಆರ್ಥಿಕ, ಧಾರ್ಮಿಕ ಜೀವನವನ್ನು ತಮ್ಮ ಉತ್ಸಾಹ ಅಭಿಮಾನ ಆಸಕ್ತಿಯಿಂದ ಚಿತ್ರಿಸಿದ್ದಾರೆ. ಆ ಸಂದರ್ಭದಲ್ಲಿ ಇಂದಿನ ವಿದ್ವಾಂಸರಿಗಿರುವ ವೈಜ್ಞಾನಿಕ ಸಲಕರಣೆಗಳಿರಲಿಲ್ಲ, ಆದರೂ ಅಲ್ಲಿನ ಗ್ರಾಮೀಣ ಸೊಗಡನ್ನು ಸಂದರ್ಶನ, ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿ ವೈಜ್ಞಾನಿಕವಾಗಿ ಚಿತ್ರಿಸಿದ್ದಾರೆ. ಅಂದಿನ ಗ್ರಾಮೀಣ ಬದುಕಿನ ಆರ್ಥಿಕ ದುಸ್ಥಿತಿಗೆ ಕಾರಣವನ್ನು ಸರಿಯಾಗಿ ಗುರುತಿಸಲಿಲ್ಲವಾದರೂ ಅವರ ಸಂಪ್ರದಾಯ ಬದ್ಧವಾದ ಗ್ರಹಿಕೆಗಳ ಪರಿಮಿತಿ ಇದೆ. ಅದನ್ನು ಹೊರತುಪಡಿಸಿದರೆ 'ಹುಟ್ಟಿದ ಹಳ್ಳಿ' ಇಂದಿಗೂ ಈ ದಿಶೆಯಲ್ಲಿ ಕೆಲಸಮಾಡುವ ವಿದ್ವಾಂಸರಿಗೆ ಮಾರ್ಗದರ್ಶಕ ಗ್ರಂಥವಾಗಿಯೇ ಉಳಿದಿದೆ.

**ಶ್ರೀರಾಮ ಇಟ್ಟಣ್ಣನವರ ಅವರು 'ಹಲಗಲಿ: ಗ್ರಾಮ ಜಾನಪದ'** ಎಂಬ ಶೀರ್ಷಿಕೆಯಡಿಯಲ್ಲಿ ದೇಶದಲ್ಲಿ ಜನಸಾಮಾನ್ಯರ ಬದುಕನ್ನು ಪ್ರಧಾನಹಂತಕ್ಕೆ ತರುವ ಪ್ರಯತ್ನ ಮಾಡಿದ್ದಾರೆ. ಹಿಂದೆ ಭಾರತದಲ್ಲಿ ರಾಜಮಹಾರಾಜರ ಕಾಲದಿಂದಲೂ ಜನಸಾಮಾನ್ಯರನ್ನು ಕಡೆಗಣಿಸುತ್ತಾ ಬಂದಿದ್ದಾರೆ. ಜನಸಾಮಾನ್ಯರ ಸಾಂಸ್ಕೃತಿಕ ಬದುಕು ಇತಿಹಾಸದ ಒಂದು ಪ್ರಮುಖ ಭಾಗವೇ ಆಗುತ್ತದೆ ಎಂಬ ಅರಿವು ಹಿಂದಿನವರಿಗೆ ಇಲ್ಲವಾಗಿತ್ತು. ಆದ್ದರಿಂದ ಜನಸಾಮಾನ್ಯರು ಇತಿಹಾಸದಿಂದ ದೂರ ಉಳಿದಿದ್ದಾರೆ. ಆದ್ದರಿಂದ ಜನಸಾಮಾನ್ಯರ ಬದುಕನ್ನೂ, ಗ್ರಾಮೀಣ ಸಮುದಾಯವನ್ನೂ ಇಡಿಯಾಗಿ ಇತಿಹಾಸ ದೃಷ್ಟಿಯಿಂದ ಉಳಿಸುವ, ದಾಖಲಿಸುವ ಪ್ರಯತ್ನವನ್ನು ಇಟ್ಟಣ್ಣನವರು ಮಾಡಿದ್ದಾರೆ. ಹೀಗಾಗಿ ಆಯಾ ಕಾಲದ ಜನಪದ ಸಂಸ್ಕೃತಿ ಹೇಗಿತ್ತು ಎಂದು ತಿಳಿಯಲಾರದೇ ಹೋದದ್ದು ಬಹುದೊಡ್ಡ ಕೊರತೆಯಾಗಿದೆ. ಇಂದು ಆ ಕೊರತೆಯನ್ನು ನೀಗಿಸಲು ಒಂದೊಂದು ಗ್ರಾಮವನ್ನು ಆರಿಸಿಕೊಂಡು ಸೂಕ್ಷ್ಮವಾಗಿ ಅಧ್ಯಯನ ನಡೆಸಬೇಕೆಂಬುದು ಇಟ್ಟಣ್ಣನವರ ಉದ್ದೇಶ ಮತ್ತು ಆಶಯವಾಗಿದೆ. ಈ ದೃಷ್ಟಿಯಿಂದ ಹಲಗಲಿ ಗ್ರಾಮದ ಜಾನಪದವನ್ನು ಸಾಂಸ್ಕೃತಿವಾಗಿ ಕಟ್ಟಿಕೊಟ್ಟಿದ್ದಾರೆ.

**ಪ್ರೊ. ಎಚ್.ವಿ. ನಾಗೇಶ ಅವರ 'ಗ್ರಾಮಾಂತರ' ಕೃತಿಯು** ಹಲವು ಹತ್ತು ದೃಷ್ಟಿಕೊನಗಳಿಂದ ಪ್ರಸ್ತುತ ಪರಿಸ್ಥಿತಿಯಲ್ಲಿ ಅತ್ಯಂತ ಮುಖ್ಯವಾಗಿದೆ. ಪ್ರಸ್ತುತ ಗ್ರಂಥದಲ್ಲಿ ಭಾರತವನ್ನು ಒಳಗೊಂಡಂತೆ ಪ್ರಪಂಚದ ೧೨ ದೇಶಗಳಿಗೆ ಸೇರಿದ ಸುಮಾರು ೩೦ ಗ್ರಾಮಗಳನ್ನು ಆಯ್ದುಕೊಂಡು ಅಧ್ಯಯನ ಕ್ಕೊಳಪಡಿಸಿ ಸಂಗ್ರಹಿಸಿಕೊಟ್ಟಿದ್ದಾರೆ. ಅವುಗಳಲ್ಲಿ ಹಿಂದುಳಿದ ಗ್ರಾಮಗಳು, ಮುಂದುವರೆಯುತ್ತಿರುವ ಗ್ರಾಮಗಳು, ವ್ಯಾಪಾರದ ದೃಷ್ಟಿಯಿಂದ ಬೆಳೆಯುವ ಗ್ರಾಮಗಳು, ನಗರದಂಚಿನಲ್ಲಿರುವ ಗ್ರಾಮಗಳು

ನಗರವಾಗಿ ಪರಿವರ್ತನೆಗೊಳ್ಳುತ್ತಿರುವ ಗ್ರಾಮಗಳು, ಸಮಾಜವಾದಿ ಜಗತ್ತನ್ನು ಪ್ರತಿನಿಧಿಸುವ ಗ್ರಾಮಗಳು, ಆದಿವಾಸಿ ಬೀಡುಗಳು ಹೀಗೆ ವಿವಿಧ ಬಗೆಯ ಗ್ರಾಮ ಸಮುದಾಯಗಳಿವೆ. ಏಷ್ಯಾ, ಆಫ್ರಿಕಾ, ಲ್ಯಾಟಿನ ಅಮೆರಿಕಾ, ಚೀನಾ, ರಷ್ಯಾ, ಯುರೋಪ್ ಖಂಡಗಳನ್ನು ಒಳಗೊಂಡಂತೆ ವಿಶ್ವದ ವಿವಿಧ ಭಾಗಗಳಿಗೆ ಪ್ರಾತಿನಿಧ್ಯ ಕೊಟ್ಟಿದ್ದಾರೆ.

ಪ್ರಸ್ತುತ ಈ ಅಧ್ಯಯನದಲ್ಲಿ ಗ್ರಾಮವನ್ನು ಮೂರು ಭಾಗಗಳಾಗಿ ವಿಂಗಡಿಸಿಕೊಂಡು ಭಾಗ ಒಂದರಲ್ಲಿ ಗ್ರಾಮೀಣ ವಿಶ್ವ ಎಂದು ವಿಂಗಡಿಸಿ ವಿಶ್ವದ ಸ್ಥೂಲ ಪರಿಚಯ ಮಾಡಿಕೊಟ್ಟಿದ್ದಾರೆ. ಭಾಗ ಎರಡರಲ್ಲಿ ವಿಶ್ವದ ಗ್ರಾಮಗಳು ಎಂದು ವಿಭಾಗಿಸಿ ವಿಶ್ವದ ಆಯ್ದ ಗ್ರಾಮಗಳಲ್ಲಿ ಏರುತ್ತಿರುವ ಜನಸಂಖ್ಯೆಯಿಂದ ಭೂಮಿ ವಂಚಿತವಾಗುತ್ತಿರುವ ರೈತರು, ಆಧುನಿಕತೆಯ ಪ್ರಭಾವಕ್ಕೆ ಒಳಗಾದ ಹಳ್ಳಿಗಳು, ಹಿಂದುಳಿದ ಹಳ್ಳಿಗಳು, ಜನಸಂಖ್ಯೆಯಿಂದ ಬದಲಾದ ಜನಜೀವನ, ಮೀನುಗಾರಹಳ್ಳಿ, ಹೊಟ್ಟೆಪಾಡಿನ ಕೃಷಿಯ ಅವಸಾನ, ಅಗ್ರಹಾರ ಗ್ರಾಮ ಹೀಗೆ ವಿವಿಧ ರೀತಿಯ ಹಳ್ಳಿಗಳ ಅಧ್ಯಯನ ಮಾಡಿದ್ದಾರೆ. ಭಾಗ ಮೂರರಲ್ಲಿ ಗ್ರಾಮಾಂತರ ನೋಟಗಳು ಎಂಬ ಭಾಗದಲ್ಲಿ ಭಾರತದ ಹಳ್ಳಿಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಿದ್ದು ರೈತರ ಹೋರಾಟ, ಅಸಹಕಾರ ಚಳುವಳಿ, ಜಾತಿಯ ಬಿಲಗಳು, ಅಂಬೇಡ್ಕರ್ ದೃಷ್ಟಿ, ಜಾತ್ರೆಗಳು, ಸಮಾಜ ವಿಜ್ಞಾನ ಹಿನ್ನೆಲೆಯಲ್ಲಿ ಹೀಗೆ ವೈವಿಧ್ಯಪೂರ್ಣವಾದ ಉಪಯುಕ್ತ ಮಾಹಿತಿಯನ್ನು ಸಂಗ್ರಹಿಸಲು ಅರ್ಥಶಾಸ್ತ್ರ, ಮಾನವಶಾಸ್ತ್ರ, ಸಮಾಜಶಾಸ್ತ್ರಜ್ಞರಾಗಿ ಆ ದೃಷ್ಟಿಯಲ್ಲಿ ಕೆಲಸಮಾಡಿದ್ದಾರೆ. ಗ್ರಾಮಾಂತರ ವಿಶ್ವ, ಅದರ ಪರಿವರ್ತನೆ ಮತ್ತು ಸಮಸ್ಯೆಗಳನ್ನು ಕೇಂದ್ರಬಿಂದುವನ್ನಾಗಿ ಇಟ್ಟುಕೊಂಡು ನೋಡುವ ಇವರು ಅದಕ್ಕೆ ಪರಿಹಾರೋಪಾಯಗಳು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿಯೇ ಇರುತ್ತವೆ ಎಂದು ನಂಬಿದ್ದಾರೆ.

ಜಗತ್ತಿನ ಬೇರೆ ಬೇರೆ ದೇಶಗಳ ಹಳ್ಳಿಗಳ ಜೀವನಕ್ರಮದಲ್ಲಿ ಆಗುತ್ತಿರುವ ತೀವ್ರವಾದ ಕ್ರಾಂತಿಕಾರಕ ಮಾರ್ಪಾಟುಗಳು ನಮ್ಮಲ್ಲಿ ಇನ್ನೂ ಮಂಡಲದ ಹಾವಿನಂತೆ ಮಂದಗತಿಯಲ್ಲಿ ಸಾಗುತ್ತಿವೆ. ಈ ಹಿನ್ನೆಲೆಯಲ್ಲಿ ಜಗತ್ತಿನ ಇತರ ದೇಶಗಳಲ್ಲಿರುವ ಜೀವನಕ್ರಮ, ಆಧುನಿಕ ವಿಜ್ಞಾನ, ತಂತ್ರಜ್ಞಾನ ಮತ್ತು ಸಾಮಾಜಿಕ ಜ್ಞಾನಗಳ ಚೌಕಟ್ಟಿನಲ್ಲಿ ಬದಲಾಗುತ್ತಿರುವ ಪರಿಯನ್ನು ಪ್ರೊ.ಎಚ್.ವಿ.ನಾಗೇಶ್ ಅವರ ಗ್ರಾಮಾಂತರ ಕೃತಿ ಸ್ಪಷ್ಟವಾಗಿ ನಮ್ಮ ಮುಂದೆ ಚಿತ್ರಿಸಿದೆ. ಕ್ಷೇತ್ರಕಾರ್ಯ ಮತ್ತು ಸೂಕ್ಷ್ಮ ಅಧ್ಯಯನಗಳ ಫಲವಾಗಿ ಮೂಡಿಬಂದಿರುವ ಈ ಕೃತಿಯು ಗ್ರಾಮಾಂತರ ಭಾರತವನ್ನು ಅದರ ಸಮಸ್ಯೆಗಳನ್ನು ಮತ್ತು ಪರಿಹಾರೋಪಾಯಗಳನ್ನು ಅರ್ಥಮಾಡಿಕೊಳ್ಳಬೇಕೆನ್ನುವವರಿಗೆ ಪ್ರಮುಖ ಆಕರ ಗ್ರಂಥವಾಗಿದೆ.

ಚೆನ್ನಣ್ಣ ವಾಲೀಕಾರ ಅವರ 'ಒಂದು ಗ್ರಾಮದ ಜಾನಪದೀಯ ಅಧ್ಯಯನ' ಎಂಬ ಕೃತಿಯು ಹೈದರಾಬಾದ್ ಕರ್ನಾಟಕದಲ್ಲಿರುವ ತಮ್ಮ ಹಳ್ಳಿಯ ಚರಿತ್ರೆಯ ಏಳು ಬೀಳುಗಳನ್ನು,

ಸಮಕಾಲೀನ ಸಂದರ್ಭವನ್ನು ಕ್ಷೇತ್ರಕಾರ್ಯದ ಮೂಲಕ ಅಲ್ಲಿ ದೊರೆತ ಜಾನಪದೀಯ ವಿವರಗಳೊಂದಿಗೆ ಚಿತ್ರಿಸಿದೆ. ಸೃಜನಶೀಲ ಬರಹಗಾರರಾದ ವಾಲೀಕಾರರ ವಿಶ್ಲೇಷಣಾ ಶೈಲಿ ಕಥನಾತ್ಮಕವಾದುದು. ಅವರ ನಿರೂಪಣಾ ಶೈಲಿಯು ಕುತೂಹಲಕಾರಿಯಾದರೂ ಕಥೆಯೆ ಪ್ರಧಾನವಾಗಿದೆ. ಗ್ರಾಮೀಣ ಸಮಾಜದ ಮೌಲ್ಯ ಮತ್ತು ವಿವರ ವಿಮರ್ಶೆ ಚೆನ್ನಾಗಿದ್ದು ವಸ್ತುಸ್ಥಿತಿಗೆ ಸಮೀಪವಿದೆ.

'ಚನ್ನಾದೇವಿಯ ಅಗ್ರಹಾರ' ಎಂಬ ಕೃತಿಯಲ್ಲಿ ಡಾ. ಟಿ. ಗೋವಿಂದರಾಜು ಅವರು ಆ ಹಳ್ಳಿಯ ಚರಿತ್ರೆಯನ್ನು ಜಾನಪದ ವಿವರಗಳೊಂದಿಗೆ ಕಟ್ಟಿಕೊಟ್ಟಿದ್ದಾರೆ. ಚನ್ನಾದೇವಿ ಅಗ್ರಹಾರ ದಕ್ಷಿಣ ಕರ್ನಾಟಕದ ಬಯಲುಸೀಮೆಯ ಒಂದು ಹಳ್ಳಿ. ತಮಗೆ ದೊರೆತ ಮಾಹಿತಿಗಳನ್ನು ಸಾಮಾಜಿಕ ಸಂಗತಿಗಳನ್ನು ಅನುಸರಿಸಿ ಹಳ್ಳಿಯ ಸಮಸ್ತ ಜಾನಪದವನ್ನು ಅಗೆದು ಶೋಧಿಸಿದ್ದಾರೆ. ಅದನ್ನು ವಿಶ್ಲೇಷಿಸಿ ಜಾಗರೂಕತೆಯಿಂದ ವಿಮರ್ಶಿಸಿದ್ದಾರೆ. ತಾವು ಸಂಗ್ರಹಿಸಿದ ಅಗಾಧ ಪ್ರಮಾಣದ ಮಾಹಿತಿಗಳೇ ಓದುಗರಿಗೆ ಹಲವು ಸಾಮಾಜಿಕ ಸಂಗತಿಗಳನ್ನು, ಆರ್ಥಿಕ ವಿಚಾರಗಳನ್ನು ಸ್ಪಷ್ಟವಾಗಿ ತಿಳಿಸುತ್ತಿವೆ. ವಕ್ತೃಗಳಿಂದ ಸಂಗ್ರಹಿಸಿದ ವಿಷಯವನ್ನು ನಿರೂಪಿಸುವಲ್ಲಿ ಅವರ ವಸ್ತುನಿಷ್ಠ ಶೈಲಿ ಗಮನಾರ್ಹವಾಗಿದ್ದು, ಇವರ ಭಾಷಾಶೈಲಿ ಮತ್ತು ನಿರೂಪಣಾ ವಿಧಾನ ವಿಶಿಷ್ಟತೆಯಿಂದ ಕೂಡಿದೆ. ಯಾವುದೇ ಅತಿಯಾದ ವಿವರಣೆಗೆ ಅಥವಾ ರಂಜನೆಗೆ ತೊಡಗದೆ ತಮಗೆ ದೊರೆತ ಮಾಹಿತಿಯನ್ನು ಸರಳವಾಗಿ ನಿರೂಪಿಸುವ ಕ್ರಮ ಚೆನ್ನಾಗಿದೆ. ಅಧಿಕೃತವಾಗಿ ಕ್ಷೇತ್ರಕಾರ್ಯದ ಮೂಲಕ ವಿವಿಧ ಮಗ್ಗಲುಗಳಿಂದ ಸೂಕ್ಷ್ಮವಾಗಿ ಅಧ್ಯಯನ ಮಾಡಿ ಪರೀಕ್ಷಿಸಿದ್ದಾರೆ. ಬದಲಾಗುತ್ತಿರುವ ಭಾರತೀಯ ಸಂದರ್ಭದಲ್ಲಿ ಒಂದು ಸ್ಥಿತ್ಯಂತರದ ಗ್ರಾಮೀಣ ಬದುಕಿನ ಸಂಕೀರ್ಣತೆಯನ್ನು ಅದರ ಜಾನಪದ ವಿವರಗಳ ಮೂಲಕ ದಾಖಲಿಸುವ ಪ್ರಯತ್ನ ಮಾಡಿದ್ದಾರೆ. ಇವರ ಶ್ರದ್ಧೆ, ಶ್ರಮ, ಆಸಕ್ತಿ ಎಲ್ಲವೂ ಬರವಣಿಗೆಯ ಉದ್ದಕ್ಕೂ ಕಂಡುಬರುತ್ತದೆ. ಸಂಕ್ರಮಣಾ ವಸ್ಥೆಯಲ್ಲಿರುವ ಒಂದು ಅಗ್ರಹಾರದ ಸ್ಪಷ್ಟ ಚಿತ್ರಣ ಇಲ್ಲಿ ವಿಶೇಷವಾಗಿ ಗಮನ ಸೆಳೆಯುತ್ತದೆ.

'ಪಟ್ಟೋಲೆ ಪಳಮೆ' ನಡಿಕೇರಿಯಂಡ ಚಿಣ್ಣಪ್ಪ ಈ ಕೃತಿಯಲ್ಲಿ ಕೊಡವರ ಜೀವನ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ನೀಡಿದ್ದಾರೆ. ಭೌಗೋಳಿಕ ಹಾಗೂ ಐತಿಹಾಸಿಕ ವಿಷಯದ ಬಗ್ಗೆ ಮತ್ತು ಕೊಡವರು ಆಚರಿಸುವ ಹಬ್ಬಗಳ ಬಗ್ಗೆ ಕೊಡವರ ದೈವಕ್ಕೆ ಸಂಬಂಧಿಸಿದ ಕಾವೇರಿ ಸಂಕ್ರಮಣ, ಕೈಲ್ ಮೂಹೂರ್ತ, ಹಬ್ಬಗಳ ಬಗ್ಗೆ ಕೊಡವರ ದೈವಕ್ಕೆ ಸಂಬಂಧಿಸಿದ ಹಾಡುಗಳಿವೆ. ಇಲ್ಲಿಯ ಜನರು ಬಳಕೆ ಮಾಡುವಂತಹ ಗಾದೆ, ಒಗಟು ಇಲ್ಲಿ ಅನುಸರಿಸುವ ಕಟ್ಟುಕಟ್ಟಳೆ, ಜಾತಿಪದ್ಧತಿ ಹೀಗೆ ಹಲವಾರು ವಿಷಯಗಳನ್ನು ಒಳಗೊಂಡಿದೆ. ಕೊಡವರ ಜೀವನದ ಬಹುಪಾಲು ವಿಷಯಗಳನ್ನು ಒಳಗೊಂಡಿರುವ ಈ ಕೃತಿ ಕೊಡವ ಸಂಸ್ಕೃತಿಯ ಚಿಕ್ಕ ವಿಶ್ವಕೋಶದಂತಿದೆ. ಜಾನಪದ ಅಧ್ಯಯನದ ದೃಷ್ಟಿಯಿಂದ ಇದು ಮಹತ್ವದ ಗ್ರಂಥವಾಗಿದೆ

ಈ ಮೇಲಿನ ಎಲ್ಲಾ ಗ್ರಾಮಾಧ್ಯಯನಗಳನ್ನು ಗಮನಿಸಿದಾಗ ಇದುವರೆಗೂ ನಡೆದಿರುವ ಅಧ್ಯಯನಗಳು ಹೆಚ್ಚಾಗಿ ಧಾರ್ಮಿಕ ಹಿನ್ನೆಲೆಯಲ್ಲೇ ಜಾನಪದ ಜ್ಞಾನವನ್ನು ನೋಡಿರುವುದನ್ನು ಕಾಣುತ್ತೇವೆ. ಇದರ ಜೊತೆಗೆ ಅದನ್ನು ಅರ್ಥೈಸಲು ಸಾಮಾಜಿಕ ಮತ್ತು ಆರ್ಥಿಕ ನೆಲೆಗಟ್ಟುಗಳನ್ನು ಬಳಸಬೇಕು. ಈ ಹಿನ್ನೆಲೆಯಲ್ಲಿ ಧಾರ್ಮಿಕ ಸಂಬಂಧಗಳ ಜೊತೆಗೆ ಸಾಮಾಜಿಕ ಮತ್ತು ಆರ್ಥಿಕ ಸಂಬಂಧಗಳನ್ನು ಪರಿಗಣಿಸಬೇಕಾಗುತ್ತದೆ. ಭಾರತದಂತಹ ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ ಇದುವರೆಗೂ ಮೇಲ್ವರ್ಗದವರ ಸಂಸ್ಕೃತಿಗೆ ಗೌರವ ಸಿಕ್ಕಿದೆ. ಸಿಗದಿದ್ದರೆ ಬಲವಂತ(ಬುದ್ಧಿವಂತಿಕೆ) ವಾಗಿಯೂ ದಕ್ಕಿಸಿಕೊಳ್ಳುವ ಶಕ್ತಿಯೂ ಅವರಿಗಿದೆ. ಅದು ಚರಿತೆಯಲ್ಲೂ ದಾಖಲಾಗಿದೆ. ಆದರೆ ಕೆಳವರ್ಗದ ಸಂಸ್ಕೃತಿಗೆ ಬೆಲೆಯೂ ಸಿಕ್ಕಲಿಲ್ಲ. ಗೌರವವೂ ದೊರಕಲಿಲ್ಲ. ಚರಿತ್ರೆಯಲ್ಲಿ ಸ್ಥಾನವೂ ದೊರೆತಿಲ್ಲ. ಅಂದರೆ ಇದುವರೆಗೆ ಯಾವ ಸಂಸ್ಕೃತಿಗೆ ಜನಜೀವನಕ್ಕೆ ಮೌಲ್ಯ ಮತ್ತು ಮಾನವೀಯತೆ ದೊರಕಲಿಲ್ಲವೋ ಅಂತಹವರ ಬದುಕನ್ನು ಸಂಗ್ರಹಿಸುವ, ಬೆಲೆ ಕಟ್ಟುವ ಕೆಲಸ ಇಂದು ನಡೆಯಬೇಕಾಗಿದೆ ಎನ್ನುವ ಆಶಯಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ.

# ಅಧ್ಯಾಯ : ಎರಡು

# ಬಂಕಾಪುರ ಗ್ರಾಮ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

೨.೧. ಬಂಕಾಪುರದ ಭೌಗೋಳಿಕ ಹಿನ್ನೆಲೆ

೨.೨. ಸ್ಥಳನಾಮ, ಪದನಿಷ್ಪತ್ತಿ ಮತ್ತು ಐತಿಹ್ಯ

೨.೩. ಬಂಕಾಪುರದ ಚಾರಿತ್ರಿಕ ಹಿನ್ನೆಲೆ

## ಅಧ್ಯಾಯ : ಎರಡು

# ಬಂಕಾಪುರ ಗ್ರಾಮ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಪ್ರಸ್ತುತ ಗ್ರಾಮದ ಸಾಂಸ್ಕೃತಿಕ ಚರಿತ್ರೆ ವಿಭಿನ್ನ. ಇದು ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದೆ. ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಗೋವೆಯ ಕದಂಬರು, ಬನವಾಸಿಯ ಕದಂಬರು, ಮಂಡಲೇಶ್ವರ ಕಲಿಯಮರಸ, ಹೊಯ್ಸಳರು, ವಿಜಯನಗರ ಬಹಮನಿ ಅರಸರು, ಕೆಳದಿ ಅರಸರು, ಬಿಜಾಪುರ ಆದಿಲಷಾಹಿಗಳು, ಹೈದರಾಲಿ ಮತ್ತು ಟಿಪ್ಪುಸುಲ್ತಾನ, ಹಂಡೆ ಪಾಳೆಯಗಾರರು, ನರಗುಂದ ಸಂಸ್ಥಾನ ಮುಂತಾದ ಈ ಅರಸು ಮನೆತನಗಳು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ್ದಾರೆ. ಎಂಬುದಕ್ಕೆ ಪ್ರಾಗ್ಯೈತಿಹಾಸಿಕ ಕುರುಹುಗಳು ಈ ಪ್ರದೇಶದಲ್ಲಿ ದೊರೆತ ಅನೇಕ ಶಾಸನಗಳು ಮತ್ತು ದೇವಾಲಯಗಳು ಸಾಕ್ಷಿಯಾಗಿವೆ. ಈ ಪ್ರದೇಶದಲ್ಲಿ ರಾಷ್ಟ್ರಕೂಟರ, ಕಲ್ಯಾಣ ಚಾಲುಕ್ಯರ, ಹೊಯ್ಸಳರ, ವಿಜಯನಗರ ಕಾಲದ ದೇವಾಲಯಗಳು ಹೆಚ್ಚಾಗಿವೆ. ಕೆಲವು ಬಸದಿಗಳು, ಮಠಗಳು, ಮಸೀದಿಗಳು ಸಹ ಈ ಊರಿನಲ್ಲಿವೆ.

ಚೆನ್ನಕ್ಕ ಯಲಿಗಾರ ಅವರು ಬರೆದಿರುವ **"ಬಂಕಾಪುರ ಶೋಧನ"** ಎಂಬ ಕೃತಿಯಲ್ಲಿ ಬಂಕಾಪುರದ ಇತಿಹಾಸವನ್ನು ತೆರೆದಿಡುವ ಮೂಲಕ-ಬಂಕಾಪುರದಲ್ಲಿ ಸಿಗುವ ಪ್ರಾಚೀನ ದೇವಾಲಯಗಳು, ಶಾಸನಗಳು, ಬಗೆಬಗೆಯ ವಾಸ್ತು ರಚನೆಗಳು, ಮಠಗಳು, ಮಸೀದಿಗಳೂ ಸೇರಿದಂತೆ ಹಲವಾರು ವಿಚಾರಗಳನ್ನು ತಮ್ಮ ಕೃತಿಯಲ್ಲಿ ದಾಖಲಿಸಿದ್ದಾರೆ. ಈ ಕೃತಿಯು ಮುಂದಿನ ಅಧ್ಯಯನಕಾರರಿಗೆ ದಾರಿದೀಪವಾಗಿದೆ.

### ೨.೧. ಬಂಕಾಪುರದ ಭೌಗೋಳಿಕ ಹಿನ್ನೆಲೆ

ಬಂಕಾಪುರ ಗ್ರಾಮವು ಶಿಗ್ಗಾಂವಿ ತಾಲೂಕಿನಲ್ಲಿ ಪ್ರಸಿದ್ದಿಯಾಗಿದ್ದು, ಚಾರಿತ್ರಿಕವಾಗಿ, ಭೌಗೋಳಿಕವಾಗಿ, ರಾಜಕೀಯವಾಗಿ ತನ್ನ ಛಾಪನ್ನು ಮೂಡಿಸಿಕೊಂಡಿದೆ. ಅನೇಕ ಧಾರ್ಮಿಕ ಕ್ಷೇತ್ರಗಳಲ್ಲಿ ಇದು ಒಂದಾಗಿದೆ. ಬಂಕಾಪುರವು ಹುಬ್ಬಳ್ಳಿಯಿಂದ ೩೨ ಕಿ.ಮೀ ದೂರವಿದೆ. ಬಂಕಾಪುರವು ೧೯೫೧ ರವರೆಗೂ ತಾಲೂಕು ಕೇಂದ್ರವಾಗಿದ್ದು ನಂತರ ಕೇಂದ್ರವನ್ನು ಶಿಗ್ಗಾಂವಿಗೆ ವರ್ಗಾಯಿಸಲಾಯಿತು. ಬೆಂಗಳೂರು-ಮೀರಜ ರೈಲು ಮಾರ್ಗದಲ್ಲಿರುವ ಯಲುವಿಗಿ ನಿಲ್ದಾಣದಿಂದ ಬಂಕಾಪುರವನ್ನು ತಲುಪಬಹುದಾಗಿದೆ. ಇದರ ದೂರ ೧೬ ಕಿ.ಮೀ. ಎತ್ತರವಾದ ಪ್ರದೇಶದಲ್ಲಿ

ಬಂಕಾಪುರ ಊರು ಚಾಚಿಕೊಂಡಿದೆ. ರಾಷ್ಟ್ರೀಯ ಹೆದ್ದಾರಿ ೪ರ ಪಕ್ಕದಲ್ಲಿ ಹಾದು ಹೋಗಿರುವುದ ರಿಂದ ಬೇರೆ ಬೇರೆ ಊರುಗಳೊಂದಿಗೆ ಸಂಪರ್ಕ ಸುಲಭ ಸಾಧ್ಯವಾಗಿದೆ. ೩.೧೦ ಚ.ಕಿ,ಮೀಟರ ವಿಸ್ತೀರ್ಣ ಹೊಂದಿರುವ ೩೨ ಹಳ್ಳಿಗಳನ್ನು ಹೊಂದಿರುವ ಹೋಬಳಿ ಘಟಕವಾಗಿದೆ. ೪೧೩೦ ವಸತಿ, ೫೫೬ ವಾಣಿಜ್ಯ ೭೫೯ ಖಾಲಿನಿವೇಶನ, ೨೧೦ ಶಾಲಾ, ಕಾಲೇಜು, ದೇವಸ್ಥಾನ ಮಸೀದಿ, ಸರಕಾರಿ ಕಟ್ಟಡ ಒಟ್ಟು ೫೬೫೫ ಕಟ್ಟಡಗಳನ್ನು ಹೊಂದಿರುವ ಪಟ್ಟಣ ಪ್ರದೇಶವಾಗಿದೆ.

ಬಂಕಾಪುರ ಪಟ್ಟಣದಲ್ಲಿರುವ ಜನಸಖ್ಯೆ ೨೦೧೧ರ ಜನಗಣತಿಯ ಪ್ರಕಾರ ೨೨.೫೨೯ ಇದರಲ್ಲಿ ಪುರುಷರು–೧೧,೬೫೧, ಮಹಿಳೆಯರು–೧೦,೮೭೮, ಲಿಂಗಾನುಪಾತ–೯೩೪, ೦ರಿಂದ೬ ವರ್ಷಗಳವರೆಗಿನ ಲಿಂಗಾನುಪಾತ–೯೦೫ ಇದೆ. ಒಟ್ಟು ಅಕ್ಷರಸ್ಥರ ಶೇಕಡಾವಾರು ೭೯,೩೬ ಇದರಲ್ಲಿ ಪುರುಷರು ಶೇಕಡಾ ೮೩.೨೬, ಮಹಿಳೆಯರು ೭೫.೨೧, ಕೆಲಸದಲ್ಲಿ ನಿರತರಾಗಿರುವ ಪುರುಷರು ಶೇಕಡವಾರು ೫೭.೨೩, ಮಹಿಳೆಯರು ೧೪.೩೨. ಪರಿಶಿಷ್ಟ ಜಾತಿಯ ಜನಸಂಖ್ಯೆ – ಮಹಿಳೆಯರು ೬೯೭ ಪುರುಷರು ೭೦೨. ಪರಿಶಿಷ್ಟ ಪಂಗಡದ ಪುರುಷರು ೮೯, ಮಹಿಳೆಯರು ೮೭ ಇದು ಬಂಕಾಪುರದ ಜನಸಂಖ್ಯೆಯ ಚಿತ್ರಣವಿದು.

ಹಾಗೂ ಸಮುದಾಯ ಆರೋಗ್ಯಕೇಂದ್ರ, ಉಪತಹಸಿಲ್ದಾರ ಕಛೇರಿ, ಪುರಸಭೆ ಹಾಗೂ ೨೨ ಅಂಗನವಾಡಿ ಕೇಂದ್ರಗಳು, ೧೦ಕ್ಕೂ ಹೆಚ್ಚು ಪ್ರಾಥಮಿಕ ಶಾಲೆಗಳು, ೫ ಪ್ರೌಢ ಶಾಲೆಗಳು, ೨ ಪದವಿಪೂರ್ವ ಕಾಲೇಜುಗಳು, ೧ ಪದವಿ ಕಾಲೇಜು, ೧ ವೃತ್ತಿಪರ ಕಾಲೇಜನ್ನು ಹೊಂದಿದೆ.

ಈ ಗ್ರಾಮದಲ್ಲಿ ಹಲವು ಧರ್ಮೀಯರು ವಾಸವಾಗಿದ್ದಾರೆ. ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್, ಧರ್ಮಿಯರು ಇಲ್ಲಿ ವಾಸವಾಗಿದ್ದಾರೆ ಹಾಗೂ ಇಲ್ಲಿ ಹಲವು ವೃತ್ತಿಪರ ಸಮುದಾಯಗಳು ಅಂದರೆ ಕಮ್ಮಾರ, ಅಂಬಿಗ, ಬಡಿಗೇರ, ಚಮ್ಮಾರ, ಗಾಣಿಗ, ನೇಕಾರ, ಬಣಜಿಗ, ಕುಂಬಾರ, ಅಗಸಿಗ, ಭಜಂತ್ರಿ, ಬ್ರಾಹ್ಮಣ, ಕುರುಬ ಸಮುದಾಯಗಳಿವೆ. ಕೆಲವು ಸಮುದಾಯಗಳು ಸ್ಥಿತ್ಯಂತರ ಗೊಂಡಿರುವುದನ್ನು ಕಾಣಬಹುದು.

ಯಾವುದೇ ಒಂದು ಪ್ರದೇಶವು ಪ್ರವಾಸಿತಾಣವೆನಿಸಿಕೊಳ್ಳಬೇಕಾದರೆ ಇದಕ್ಕೆ ಪ್ರವಾಸಿಗರನ್ನು ತನ್ನ ಕಡೆಗೆ ಸೆಳೆಯುವ ಆಕರ್ಷಣೆ ಇರಬೇಕು. ಅದು ಐತಿಹಾಸಿಕ ಪ್ರದೇಶವಾಗಿರಬಹುದು. ಪ್ರಕೃತಿ ಸೌಂದರ್ಯದ ಬೀಡಾಗಿರಬಹುದು, ಮಾನವನ ಸಾಹಸದ ಪ್ರತೀಕವಾಗಿರಬಹುದು, ಪ್ರಶಾಂತ ತಾಣವಾಗಿರಬಹುದು, ಧಾರ್ಮಿಕ ಪ್ರಜ್ಞೆಗೆ ತೃಪ್ತಿಕೊಡಬಲ್ಲ ಪುಣ್ಯಕ್ಷೇತ್ರವಾಗಿರಬಹುದು, ಜ್ಞಾನದಾಹವನ್ನು ತಣಿಸಬಲ್ಲ ಶಾರದಾಮಂದಿರವಾಗಿರಬಹುದು, ಒಟ್ಟಿನಲ್ಲಿ ಪ್ರವಾಸಿಗರಿಗೆ ವಿಶೇಷವಾದ ಸಂತೃಪ್ತಿ ದೊರೆಯಬಹುದು. ಇಂತಹ ಸ್ಥಳವು ಮುಖ್ಯವಾಗಿ ಸಂಚಾರ ಸಂಪರ್ಕ ಸಾಧನ,

ಊಟ, ವಸತಿ ಸೌಲಭ್ಯ ಮಾರ್ಗದರ್ಶನ ಕೇಂದ್ರ ಮೊದಲಾದ ಅನುಕೂಲಗಳನ್ನು ಪಡೆದುಕೊಂಡರೆ ಅದು ಪ್ರವಾಸಿ ತಾಣವಾಗಿರಬಲ್ಲದು. ಈ ದೃಷ್ಟಿಯಿಂದ ನೋಡಿದರೆ ಬಂಕಾಪುರಕ್ಕೆ ಪ್ರವಾಸಿ ತಾಣವೆನಿಸಿಕೊಳ್ಳಲು ಸಾಕಷ್ಟು ಅರ್ಹತೆಗಳಿವೆ ಎನ್ನುವುದು ಸುಸ್ಪಷ್ಟ ಐತಿಹಾಸಿಕವಾಗಿ ಬಂಕಾಪುರವು ಪ್ರಾಚೀನಕಾಲದಿಂದಲೂ ಮಹತ್ವದ ಪಟ್ಟಣವಾಗಿದೆ. ಇಲ್ಲಿನ ಕೋಟೆ, ಕೊತ್ತಲುಗಳು ಗುಡಿ ಗೋಪುರಗಳು ಶಾಸನಗಳು ಪ್ರಾಚ್ಯವಸ್ತು ಅವಶೇಷಗಳು ಜಲಾಶಯಗಳು ಈ ಮಾತಿಗೆ ಸಾಕ್ಷಿಯೆನಿಸಿದೆ. ಇತಿಹಾಸ ಪ್ರಿಯರಿಗೆ ಇಲ್ಲಿನ ಕೋಟೆಕೊತ್ತಲ ಸಾಕಷ್ಟು ಸಾಮಗ್ರಿ ನೀಡಬಲ್ಲದು.

ಪ್ರಕೃತಿ ಸೌಂದರ್ಯ ಬಯಸುವವರಿಗೆ ಪ್ರವಾಸಿಗರಿಗೂ ಸಾಕಷ್ಟು ಸರಕು ಇದೆ. ಹೊರನೋಟಕ್ಕೆ ಬರಡು ಬರಡಾಗಿ ಕಾಣುವ ಇಲ್ಲಿನ ಎತ್ತರದ ಪ್ರದೇಶಗಳು ಪ್ರಕೃತಿಪ್ರಿಯರಿಗೆ ಚೇತೋಹಾರಿ. ಊರ ಮಧ್ಯದ ದಿಬ್ಬದ ಮೇಲಿರುವ ಮಸೀದಿಯ ಮುಂದೆ ನಿಂತು ನಾಲ್ಕುದಿಕ್ಕಿನ ಪ್ರಕೃತಿ ಸೌಂದರ್ಯ ಆಸ್ವಾದಿಸಿದರೆ ಸುತ್ತಮುತ್ತಲಿನ ದೃಶ್ಯಗಳು ಎಂತಹವರನ್ನು ಮುಗ್ದಗೊಳಿಸುತ್ತದೆ. ಮಾನವನ ಸಾಹಸದ ಪ್ರತೀಕವನ್ನು ಕಾಣುವ ಬಯಕೆ ಇದ್ದವರಿಗೆ ಇಲ್ಲಿನ ಕೋಟೆ ಬುರುಜು ಕಳ್ಳಗಿಂಡಿ ಉತ್ತಮ ನೋಟವನ್ನು ಒದಗಿಸಬಲ್ಲವು. ಬೆಲ್ಲದ ಅಚ್ಚುಗಳಂತೆ ಒಂದರ ಮೇಲೊಂದು ಬೃಹತ್ ಗಾತ್ರದ ಕಲ್ಲುಗಳನ್ನು ಏರಿಸಿ ಕೋಟೆ ನಿರ್ಮಿಸಿರುವ ಪರಿ ನೋಡುಗರನ್ನು ಚಕಿತರನ್ನಾಗಿಸುತ್ತದೆ. ಕೋಟೆಯಿಂದ ಹಾನಗಲ್ಲು ದೇವಸ್ಥಾನದವರೆಗೂ ಕೆಳಗೆ ನಿರ್ಮಿಸಿರುವ ಸುರಂಗ ಮಾರ್ಗ ಪ್ರಾಚೀನ ಬಂಕಾಪುರದ ಜನರ ಸಾಹಸ ಜೀವನವನ್ನು ಸ್ಪಷ್ಟಪಡಿಸುತ್ತದೆ.

ಪ್ರಶಾಂತ ವಾತಾವರಣ ಅಪೇಕ್ಷಿಸುವವರಿಗೆ ಬಂಕಾಪುರದಿಂದ ತುಸು ದೂರದಲ್ಲಿರುವ ಬಂಕನಾಥನಕಟ್ಟೆ ಹಾಗೂ ಇತ್ತೀಚಿಗೆ ನಿರ್ಮಾಣವಾಗಿರುವ ಕನಕನ ಬಾಡದ ಕೋಟೆ ಸೂಕ್ತತಾಣ. ಸುತ್ತಲಿನ ಜೋಳದ ನಿಲುವಿನಿಂದ ಕೂಡಿದ ಹೊಲಗಳು ಅಲ್ಲಲ್ಲಿ ಕಂಗೊಳಿಸುವ ತೋಟಪಟ್ಟಿಗಳು ಹಸಿರು ಹಸಿರಾಗಿ ತೋರುವ ವನರಾಜಿ, ಇದರಲ್ಲಿ ಸಾರಂಗ, ನವಿಲು ಮೊದಲಾದ ವನ್ಯಜೀವಿಗಳು ನಿರ್ಭಯವಾಗಿ ಸಂಚರಿಸುತ್ತವೆ. ಅಲ್ಲಿರುವ ಹೊಕ್ಕುತುಂಬುವ ಬಾವಿ ಜೋಡುಲಿಂಗಗಳು ಪ್ರವಾಸಿಗರ ಮನಸ್ಸನ್ನು ಪ್ರಮುಲ್ಲಗೊಳಿಸುತ್ತವೆ. ಬೀಸುವ ತಂಪಾದ ಹವೆ ಅಲ್ಲಿ ನಿಂತರೆ ಕಾಣುವ ಸುತ್ತಮುತ್ತಲಿನ ದೃಶ್ಯಗಳ ಸೌಂದರ್ಯ ಅವರ್ಣನೀಯ.

ಸಹಸ್ರಾರು ವರ್ಷಗಳಿಂದ ಇಲ್ಲಿ ಆಳಿದ ವಿವಿಧ ರಾಜವಂಶಗಳ ಧಾರ್ಮಿಕನಿಷ್ಠೆಯ ಪ್ರತೀಕವಾಗಿರುವ ದೇವಸ್ಥಾನಗಳು ಮಸೀದಿ, ದರ್ಗಾಗಳು ಇಲ್ಲಿವೆ. ನಗರೇಶ್ವರ, ಸಿದ್ದೇಶ್ವರ, ಚಾಮುಂಡೇಶ್ವರಿ, ವೀರಭದ್ರೇಶ್ವರ ದೇವಸ್ಥಾನಗಳು ಬಲು ಸುಂದರವಾಗಿವೆ. ಇಲ್ಲಿನ ನರಗುಂದ ಬಾಬಾಸಾಹೇಬನ ಸಮಾಧಿ ಇತಿಹಾಸದ ಆಳಕ್ಕೆ ಕರೆದೊಯ್ಯುತ್ತದೆ. ಒಟ್ಟಾರೆಯಾಗಿ ಹೇಳಬೇಕೆಂದರೆ ಬಂಕಾಪುರ ಎಲ್ಲ ರೀತಿಯಿಂದಲೂ ಶ್ರೀಮಂತ ಸಂಪದ್ಭರಿತ ಪ್ರದೇಶವಾಗಿದೆ.

**ಬಂಕಾಪುರದ ಹವಾಮಾನ ಹಾಗೂ ಮಳೆಗೆ ಸಂಬಂಧಿಸಿದ ವಿವರ:** ಬಂಕಾಪುರ ಗ್ರಾಮವು ಅರೆಮಲೆನಾಡು ಪ್ರದೇಶದಲ್ಲಿದೆ. ಇಲ್ಲಿಯ ಹವಾಮಾನವು ಸಾಮಾನ್ಯವಾಗಿ ಹಿತಕರ ಮತ್ತು ಆರೋಗ್ಯಪೂರ್ಣವಾಗಿದೆ. ಫೆಬ್ರವರಿ ಅಂತ್ಯದಿಂದ ಮೇ ಅಂತ್ಯದವರೆಗೆ ಬೇಸಿಗೆ ಕಾಲ, ಜೂನ್‌ದಿಂದ ಸೆಪ್ಟಂಬರವರೆಗೆ ಮಳೆಗಾಲ ಇರುತ್ತದೆ. ಆಗ ವಾತಾವರಣ ತಂಪಾಗಿರುತ್ತದೆ. ಅಕ್ಟೋಬರ್, ನವಂಬರ್‌ಗಳಲ್ಲಿ ಈಶಾನ್ಯ ಮಾರುತದಿಂದ ಮಳೆ ಆಗುತ್ತದೆ. ಡಿಸೆಂಬರದಿಂದ ಫೆಬ್ರವರಿ

**ಹಾವೇರಿ ಜಿಲ್ಲೆಯ ಮಳೆಯ ಮಾಹಿತಿ**

| ಅ.ಸಂ | ಜಿಲ್ಲೆ | ತಾಲೂಕು | ಜುಲೈ ೨೦೧೮ರ ಸಾಮಾನ್ಯ ಮಳೆ (ಮಿ.ಮೀ ಗಳಲ್ಲಿ) | ದಿ.೧.೧.೨೦೧೮ ರಿಂದ ೩೦.೬.೨೦೧೮ ರವರೆಗೆ ಬಿದ್ದ ಮಳೆ | ೧-೭-೨೦೧೮ ರಿಂದ ೧೩-೭-೨೦೧೮ ಬಿದ್ದ ಮಳೆ | ದಿ.೧೪.೭.೨೦೧೮ ರಂದು ಬಿದ್ದ ಮಳೆ |
|---|---|---|---|---|---|---|
| ೦೧. | ಹಾವೇರಿ | ಹಾವೇರಿ | ೧೫೬ | ೪೭೫.೭೮ | ೪೫ | ೧೦.೦೨ |
| ೦೨. | | ರಾಣೇಬೆನ್ನೂರ | ೯೪ | ೨೫೯.೫ | ೩೨.೪ | ೨.೮ |
| ೦೩. | | ಬ್ಯಾಡಗಿ | ೧೨೯ | ೧೮೮.೯ | ೪೨.೫ | ೨.೬ |
| ೦೪. | | ಹಿರೇಕೆರೂರ | ೨೦೭ | ೨೯೬.೪ | ೮೯.೮ | ೧೧.೪ |
| ೦೫. | | ಸವಣೂರ | ೧೨೬ | ೨೭೪.೫ | ೩೩.೪ | ೭.೯ |
| ೦೬. | | ಶಿಗ್ಗಾಂವ | ೧೭೯ | ೪೮೫.೬ | ೪೪.೮ | ೧೪.೮ |
| ೦೭. | | ಹಾನಗಲ್ | ೨೯೯ | ೫೧೯.೩ | ೩೯೭.೯ | ೬೪..೩ |
| | | ಒಟ್ಟು | ೧೧೯೦ | ೨೫೦೦ | ೩೯೭.೯ | ೬೪.೩ |
| | | ಸರಾಸರಿ ಮಳೆ | ೧೭೦ | ೩೫೭.೧ | ೫೬.೮ | ೯.೨ |

ಮಧ್ಯದವರೆಗೆ ಚಳಿಗಾಲವಿರುತ್ತದೆ. ಎಪ್ರಿಲ್, ಮೇ ತಿಂಗಳಲ್ಲಿ ಗರಿಷ್ಠ ಉಷ್ಣತೆ ೪೨ ಸೆ.ವರೆಗೆ ಮತ್ತು ನವಂಬರ್ ತಿಂಗಳಲ್ಲಿ ಕನಿಷ್ಠ ೧೪ ಸೆ.ವರೆಗೆ ಇರುತ್ತದೆ.

ಬಂಕಾಪುರದಲ್ಲಿ ಒಂದು ಮಳೆಮಾಪನ ಕೇಂದ್ರವಿದ್ದು, ಅದು ಮಳೆ ಮಾಪನದ ಕಾರ್ಯವನ್ನು ನಿರ್ವಹಿಸುತ್ತದೆ.

**ಬಂಕಾಪುರದ ಪ್ರಮುಖ ಉದ್ಯೋಗ:** ಗ್ರಾಮದ ಪ್ರಮುಖ ಉದ್ಯೋಗ ವ್ಯವಸಾಯ. ಫಲವತ್ತಾದ ಕಪ್ಪು ಮತ್ತು ಮಸಾರಿ ಭೂಮಿ ಹೊಂದಿದ್ದರಿಂದ ಇದು ವ್ಯವಸಾಯಕ್ಕೆ ಯೋಗ್ಯವಾದ ಪ್ರದೇಶವಾಗಿದೆ. ಕೇವಲ ವ್ಯವಸಾಯವಲ್ಲದೇ ಇತರೆ ಉದ್ಯೋಗವನ್ನು ಅವಲಂಬಿಸಿದ ಜನರೂ ಇದ್ದಾರೆ. ವ್ಯಾಪಾರಸ್ಥರು, ಉದ್ಯಮದಾರರು, ಖಾಸಗಿ ಮತ್ತು ಸರಕಾರಿ ನೌಕರರು ಬಂಕಾಪುರ ದಲ್ಲಿದ್ದಾರೆ. ಅಲ್ಲದೆ ಬಂಕಾಪುರದಲ್ಲಿ ಸುಮಾರು ೮ ಹತ್ತಿ ಮಿಲ್ಲಿನ ಕಾರ್ಖಾನೆಗಳಿದ್ದು, ೨ ಗಾರ್ಮೆಂಟ್ಸ ಕೂಡ ಸ್ಥಾಪನೆಯಾಗಿವೆ. ಆದರೂ ಕೂಡ ಬಂಕಾಪುರದಲ್ಲಿ ಬಹುಪಾಲು ಜನರು

ಕೃಷಿಯನ್ನೆ ಅವಲಂಬಿಸಿ ಜೀವನ ಸಾಗಿಸುವುದರ ಜೊತೆಗೆ ಪಶುಪಾಲನೆಯನ್ನು ಕೂಡ ಮಾಡುತ್ತಿದ್ದಾರೆ.

## ಭೂಹಿಡುವಳಿದಾರರ ಸಂಖ್ಯೆ ಮತ್ತು ಭೂ ಹಿಡುವಳಿಗಳ ವಿಸ್ತೀರ್ಣ

**(ಮಾಹಿತಿ ಮೂಲ; ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶಾನಾಲಯ ಕೃಷಿ ಗಣತಿ ೨೦೧೫-೧೬)**

| ಅ.ಸಂ. | ಗ್ರಾಮಗಳು | ಭೂಹಿಡುವಳಿದಾರರ ಸಂಖ್ಯೆ | | | ಭೂಹಿಡುವಳಿಯ ವಿಸ್ತೀರ್ಣ (ಎಕರೆ-ಗುಂಟೆ) | | |
|---|---|---|---|---|---|---|---|
| | | ಗಂ | ಹೆಂ | ಒಟ್ಟು | ಗಂ | ಹೆಂ | ಒಟ್ಟು ಭೂ. ಹಿಡುವಳಿ ವಿಸ್ತೀರ್ಣ. |
| ೦೧ | ಶಿಗ್ಗಾಂವ ನಗರ | ೧೨೯೯ | ೨೬೯ | ೧೫೬೮ | ೫೭೦೬-೧೧ | ೧೨೯೪-೨೮ | ೭೦೦೦-೩೯ |
| ೦೨ | ಬಂಕಾಪುರ ನಗರ | ೧೦೪೩ | ೧೪೨ | ೧೧೮೫ | ೫೧೧೫-೨೨ | ೬೯೯-೨೭ | ೫೮೧೫-೦೯ |

೨೦೧೫-೧೬ರ ಕೃಷಿ ಜನಗಣತಿಯ ಪ್ರಕಾರ ಬಂಕಾಪುರದ ಭೂ ಹಿಡುವಳಿದಾರರು ಒಟ್ಟು ೧೧೮೫ ಇದರಲ್ಲಿ ಗಂಡಸರು ೧೦೪೩ ಹೆಣ್ಣುಮಕ್ಕಳ ಪ್ರಮಾಣ ಕೇವಲ ೧೪೨ ಭೂ ಹಿಡುವಳಿದಾರರ ಅಂಕಿಅಂಶಗಳನ್ನು ಅವಲೋಕಿಸಿದಾಗ ಭೂ ಹಿಡುವಳಿದಾರರಲ್ಲಿ ಗಂಡಸರೇ ಹೆಚ್ಚಾಗಿರುವುದು ಕಂಡುಬಂದರೆ, ಹೆಣ್ಣುಮಕ್ಕಳು ಭೂಹಿಡುವಳಿ ಪ್ರಮಾಣದಲ್ಲಿ ತುಂಬಾ ಕಡಿಮೆ ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ. ಅದೇ ರೀತಿಯಲ್ಲಿ ೨೦೧೫-೧೬ರ ಕೃಷಿ ಜನಗಣತಿಯ ಪ್ರಕಾರದಲ್ಲಿ ಭೂ ಹಿಡುವಳಿಯ ವಿಸ್ತೀರ್ಣದಲ್ಲಿ ಒಟ್ಟು ೫೮೧೫-೦೯ ಇದ್ದು, ಅದರಲ್ಲಿ ಗಂಡಸರ ಪ್ರಮಾಣ ೫೧೧೫-೨೨ ಇದ್ದರೆ, ಹೆಣ್ಣುಮಕ್ಕಳ ಪ್ರಮಾಣ ೬೯೯-೨೭ ಇರುವುದು ಆ ಮೂಲಕ ಭೂ ಹಿಡುವಳಿಯ ವಿಸ್ತೀರ್ಣದಲ್ಲೂ ಗಂಡಸರ ಮೇಲುಗೈ ಕಂಡುಬರುತ್ತದೆ.

## ಜಾತಿವಾರು ಭೂಹಿಡುವಳಿದಾರರ ಸಂಖ್ಯೆ

**(ಮಾಹಿತಿ ಮೂಲ; ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶಾನಾಲಯ ಕೃಷಿ ಗಣತಿ ೨೦೧೫-೧೬)**

| ಅ.ಸಂ | ಗ್ರಾಮಗಳು | ಪ.ಜಾತಿ | | | ಪ.ಪಂಗಡ | | | ಇತರೆ ಹಿಂದುಳಿದ ವರ್ಗ | | |
|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೦೧ | ಬಂಕಾಪೂರ ನಗರ | ೦೯ | ೦೦ | ೦೯ | ೦೮ | ೦೪ | ೧೨ | ೧೦೨೬ | ೧೩೮ | ೧೧೬೪ |

೨೦೧೫-೧೬ರ ಕೃಷಿ ಜನಗಣತಿಯ ಪ್ರಕಾರ ಬಂಕಾಪುರದ ಭೂ ಹಿಡುವಳಿದಾರರ ಸಂಖ್ಯೆಯನ್ನು ಗಮನಿಸಿದಾಗ ಪರಿಶಿಷ್ಟ ಜಾತಿಯಲ್ಲಿ ಗಂಡಸರ ಪ್ರಮಾಣ ೯ ಜನ ಭೂಹಿಡುವಳಿ

ದಾರರಿದ್ದರೆ, ಹೆಣ್ಣುಮಕ್ಕಳು ಯಾವುದೇ ಭೂಹಿಡುವಳಿಯನ್ನು ಹೊಂದಿರುವುದಿಲ್ಲ. ಅದೇ ರೀತಿಯಲ್ಲಿ ಪರಿಶಿಷ್ಟ ಪಂಗಡದಲ್ಲಿ ಗಂಡಸರ ಪ್ರಮಾಣ ೮ ಹೆಂಗಸರ ಪ್ರಮಾಣ ಕೇವಲ ೪ ಜನ ಭೂಹಿಡುವಳಿಯನ್ನು ಹೊಂದಿರುತ್ತಾರೆ. ಹಾಗೆಯೇ ಇತರೆ ಹಿಂದುಳಿದ ವರ್ಗಗಳಲ್ಲಿ ಗಂಡಸರು ೧೦೨೬ ಜನರಿದ್ದರೆ ಹೆಂಗಸರು ಕೇವಲ ೧೩೮ ಜನರು ಮಾತ್ರ ಭೂಹಿಡುವಳಿಯನ್ನು ಹೊಂದಿರುತ್ತಾರೆ. ಈ ಮೇಲ್ಕಾಣಿಸಿದ ವಿಷಯವನ್ನು ಅವಲೋಕಿಸಿದಾಗ ಈ ಮೂರು ಪಂಗಡಗಳಲ್ಲಿ ಪುರುಷರೇ ಹೆಚ್ಚು ಭೂ ಹಿಡುವಳಿ ಹೊಂದಿದ್ದಾರೆ.

**ಜಾತಿವಾರು ಭೂಹಿಡುವಳಿಯ ವಿಸ್ತೀರ್ಣ**

**(ಮಾಹಿತಿ ಮೂಲ; ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಕೃಷಿ ಗಣತಿ ೨೦೧೫–೧೬)**

| ಅ.ಸಂ | ಗ್ರಾಮಗಳು | ಪ.ಜಾತಿ | | | ಪ.ಪಂಗಡ | | | ಇತರೆ ಹಿಂದುಳಿದ ವರ್ಗ | | |
|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೦೧ | ಬಂಕಾಪುರ ನಗರ | ೩೬.೧೭ | ೦೦ | ೩೬.೧೭ | ೪೦.೨೪ | ೧೮.೨೯ | ೫೯.೧೩ | ೫೦೧೦.೧೩ | ೬೮೦.೩೮ | ೫೬೯೧.೧೧ |

೨೦೧೫–೧೬ರ ಕೃಷಿ ಜನಗಣತಿಯ ಪ್ರಕಾರ ಬಂಕಾಪುರದ ಪರಿಶಿಷ್ಟ ಜಾತಿಯವರು ಹೊಂದಿದ ಭೂಹಿಡುವಳಿಯ ವಿಸ್ತೀರ್ಣ ಒಟ್ಟು ೩೮.೧೭ ಇದ್ದು, ಪರಿಶಿಷ್ಟ ಜಾತಿಯ ಹೆಣ್ಣುಮಕ್ಕಳು ಯಾವುದೇ ಭೂ–ವಿಸ್ತೀರ್ಣ ಹೊಂದಿರುವುದಿಲ್ಲ. ಅದೇ ರೀತಿಯಲ್ಲಿ ಪರಿಶಿಷ್ಟ ಪಂಗಡದಲ್ಲಿ ಒಟ್ಟು ೫೯.೧೩ ಭೂ ಹಿಡುವಳಿಯನ್ನು ಹೊಂದಿದ್ದರೆ ಗಂಡಸರ ಪ್ರಮಾಣ ೪೦.೨೪ರಷ್ಟಿದ್ದರೆ, ಹೆಣ್ಣುಮಕ್ಕಳ ಪ್ರಮಾಣ ೧೮.೨೯ರಷ್ಟು ಇರುವುದು ಕಂಡುಬರುತ್ತದೆ. ಹಾಗೆಯೇ ಇತರೆ ಹಿಂದುಳಿದ ವರ್ಗಗಳ ಒಟ್ಟಾರೆ ಪ್ರಮಾಣವನ್ನು ಗಮನಿಸಿದಾಗ ೫೬೯೧.೧೧ರಷ್ಟಿದ್ದು, ಗಂಡುಮಕ್ಕಳು ೫೦೧೦.೧೩, ಹೆಣ್ಣುಮಕ್ಕಳು ೬೮೦.೩೮ ರಷ್ಟಿರುವುದು ಕಂಡುಬರುತ್ತದೆ.

**ಬಂಕಾಪುರದ ಪ್ರಮುಖ ಬೆಳೆಗಳು**

ಜೋಳ, ಮುಸುಕಿನ ಜೋಳ, ಹೆಸರು, ಹತ್ತಿ, ಶೇಂಗಾ, ಸೋಯಾಬಿನ, ಎಳ್ಳು, ಸೂರ್ಯ ಕಾಂತಿ ಔಡಲಾ, ಅವರೆ ಎಣ್ಣೆಕಾಳುಗಳು, ಹತ್ತಿ, ಕಬ್ಬು, ಮೆಣಸಿನ ಗಿಡದಂತಹ ವಾಣಿಜ್ಯ ಬೆಳೆಗಳನ್ನು ಬೆಳೆಯುವರು. ಅಲ್ಲದೆ ಇತ್ತೀಚಿನ ದಿನಗಳಲ್ಲಿ ಬೆಳೆಯ ಸಾಧ್ಯತೆಯನ್ನು ಹೆಚ್ಚಿಸುವುದ ಕ್ಕೋಸ್ಕರ ಮಿಶ್ರ ಬೆಳೆ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ.

ಸೋಯಾಬಿನ್+ ತೊಗರಿ, ಸೋಯಾಬಿನ್+ ಹತ್ತಿ, ಶೆಂಗಾ+ ಅಲಸಂಧಿ, ಎಳ್ಳು+ತೊಗರಿ ಈ ರೀತಿ ಮಿಶ್ರ ಬೆಳೆ ಪದ್ಧತಿಯನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ.

**ಬಂಕಾಪುರದ ಆದಾಯದ ಮೂಲಗಳು:** ಬಂಕಾಪುರದ ಪ್ರಮುಖ ಆದಾಯದ ಮೂಲ ವೆಂದರೆ ಕೃಷಿ. ಇದರ ಜೊತೆಗೆ ವಿವಿಧ ಬಗೆಯ ಉತ್ಪನ್ನ ಮೂಲಗಳನ್ನು ಹೊಂದಿದೆ. ಕೃಷಿ ಮತ್ತು ಪಶುಪಾಲನೆ, ಮರಗೆಲಸ, ಕಮ್ಮಾರಿಕೆ, ಚಮ್ಮಾರಿಕೆ, ವ್ಯಾಪಾರ, ವಸತಿ ಮತ್ತು ಉಪಹಾರ ಗೃಹ, ಬ್ಯಾಂಕ, ವಿಮೆ ಉದ್ದಿಮೆ, ಸ್ಥಿರಾಸ್ಥಿ, ವಾಸಗೃಹಗಳ ಒಡೆತನ ಮತ್ತು ಇತರೆ ಸೇವೆಗಳು

ಅನುಬಂಧ -೧

## ೨೦೧೮-೧೯ನೇ ಸಾಲಿನ ಶಿಗ್ಗಾಂವ ತಾಲೂಕಿನ ಹೋಬಳಿವಾರು ಮುಂಗಾರು ಹಂಗಾಮಿನ ಬಿತ್ತನೆ ಕ್ಷೇತ್ರದ ಗುರಿ ಹಾಗೂ ಪ್ರಗತಿ (ಹೆಕ್ಟೇರ್‌ಗಳಲ್ಲಿ)

| ಕ್ರ.ಸಂ | ಬೆಳೆ | ಬಂಕಾಪುರ | | | | | |
|---|---|---|---|---|---|---|---|
| | | ಗುರಿ | | | ಸಾಧನೆ | | |
| | | ಮಳೆ ಆಶ್ರಿತ | ನೀರಾವರಿ | ಒಟ್ಟು | ಮಳೆ ಆಶ್ರಿತ | ನೀರಾವರಿ | ಒಟ್ಟು |
| I | ಏಕದಳ | | | | | | |
| ೧ | ಭತ್ತ | ೨೪೦೦ | ೭೭೦ | ೩೧೭೦ | ೨೦೮೪ | ೦ | ೨೦೮೪ |
| ೨ | ಜೋಳ | ೯೫ | ೦ | ೯೫ | ೬೦ | ೦ | ೬೦ |
| ೩ | ರಾಗಿ | ೫೦ | ೦ | ೫೦ | ೧ | ೦ | ೧ |
| ೪ | ಗೋ.ಜೋಳ | ೪೦೦೦ | ೧೦೦ | ೪೧೦೦ | ೪೧೬೧ | ೨ | ೪೧೬೩ |
| ೫ | ಸಜ್ಜೆ | ೦ | ೦ | ೦ | ೦ | ೦ | ೦ |
| ೬ | ತೃಣ ಧಾನ್ಯಗಳು | ೦ | ೦ | ೦ | ೮ | ೦ | ೮ |
| | **ಒಟ್ಟು ಏಕದಳ** | **೬೫೪೫** | **೮೭೦** | **೭೪೧೫** | **೬೩೧೪** | **೨** | **೬೩೧೬** |
| II | **ದ್ವಿದಳ ಧಾನ್ಯಗಳು** | | | | | | |
| ೧ | ತೊಗರಿ | ೫೫ | ೦ | ೫೫ | ೮೨ | ೦ | ೮೨ |
| ೨ | ಹುರಳಿ | ೦ | ೦ | ೦ | ೦ | ೦ | ೦ |
| ೩ | ಉದ್ದು | ೦ | ೦ | ೦ | ೦ | ೦ | ೦ |
| ೪ | ಹೆಸರು | ೨೫ | ೦ | ೨೫ | ೫೫ | ೦ | ೫೫ |
| ೫ | ಅಲಸಂದಿ ಮತ್ತು ಇತರೆ | ೧೫ | ೦ | ೧೫ | ೯ | ೦ | ೯ |
| ೬ | ಅವರೆ | ೦ | ೦ | ೦ | ೦ | ೦ | ೦ |
| ೭ | ಮಡಕೆ | ೦ | ೦ | ೦ | ೦ | ೦ | ೦ |
| | **ಒಟ್ಟು ದ್ವಿದಳ ಧಾನ್ಯಗಳು** | **೯೫** | **೦** | **೯೫** | **೧೪೬** | **೦** | **೧೪೬** |
| I+II | **ಒಟ್ಟು ಆಹಾರ** | | | | | | |
| | **ಧಾನ್ಯಗಳು** | **೬೬೪೦** | **೮೭೦** | **೭೫೧೦** | **೬೪೬೦** | **೨** | **೬೪೬೨** |
| III | **ಎಣ್ಣೆಕಾಳುಗಳು** | | | | | | ೦ |
| ೧. | ಶೇಂಗಾ | ೧೪೦೦ | ೦ | ೧೪೦೦ | ೨೦೮೧ | ೦ | ೨೦೮೧ |
| ೨ | ಎಳ್ಳು | ೦ | ೦ | ೦ | ೧ | ೦ | ೧ |
| ೩ | ಸೂರ್ಯಕಾಂತಿ | ೫ | ೦ | ೫ | ೦ | ೦ | ೦ |
| ೪ | ಔಡಲ | ೦ | ೦ | ೦ | ೦ | ೦ | ೦ |
| ೫ | ಗುರೆಳ್ಳು | ೧೫ | ೦ | ೧೫ | ೦ | ೦ | ೦ |
| ೬ | ಸಾಸುವೆ | ೦ | ೦ | ೦ | ೨ | ೦ | ೨ |
| ೭ | ಸೊಯಾಬಿನ್ | ೧೮೨೫ | ೦ | ೧೮೨೫ | ೧೧೨೭ | ೦ | ೧೧೨೭ |
| | **ಒಟ್ಟು ಎಣ್ಣೆಕಾಳು** | **೩೨೪೫** | **೦** | **೩೨೪೫** | **೩೨೧೧** | **೦** | **೩೨೧೧** |
| IV | **ವಾಣಿಜ್ಯ ಬೆಳೆಗಳು** | | | | | | |
| ೧ | ಹತ್ತಿ | ೨೯೬೦ | ೪೦ | ೩೦೦೦ | ೩೩೭೦ | ೦ | ೩೩೭೦ |
| ೨ | ಕಬ್ಬು (ಕ) | ೦ | ೨೫ | ೨೫ | ೦ | ೦ | ೦ |
| ೩ | ಕಬ್ಬು (ಊ) | ೦ | ೧೫೦ | ೧೫೦ | ೦ | ೦ | ೦ |
| | **ಒಟ್ಟು ವಾಣಿಜ್ಯ ಬೆಳೆಗಳು** | **೨೯೬೦** | **೨೧೫** | **೩೧೭೫** | **೩೩೭೦** | **೦** | **೩೩೭೦** |
| V | **ಮೇವು** | | | | | | |
| | **ಅಂತೂ ಒಟ್ಟು** | **೧೨೮೪೫** | **೧೦೮೫** | **೧೩೯೩೦** | **೧೩೦೪೧** | **೨** | **೧೩೦೪೩** |
| | | | | | | | ೯೩.೬ |

ಈ ಎಲ್ಲ ಮೂಲಗಳಿಂದ ಆದಾಯ ಬರುತ್ತಿದೆ. ಇದು ಗ್ರಾಮದ ಪಾರಂಪರಿಕ ಜ್ಞಾನ ಮತ್ತು ಜಾನಪದದ ಅಸ್ಮಿತೆಗಳನ್ನು ವಿಭಿನ್ನವಾಗಿ ಜೀವಂತಗೊಳಿಸಿದೆ.

| ಕ್ರಸಂ | ತಾಲ್ಲೂಕ | ಹೋಬಳಿ | ಗ್ರಾಮ ಪಂಚಾಯತಿ | ಗ್ರಾಮ | ಸಾಗುವಳಿ ಕ್ಷೇತ್ರ | ಒಟ್ಟು ಬಿತ್ತನೆ ಕ್ಷೇತ್ರ |
|---|---|---|---|---|---|---|
| ೧ | ಶಿಗ್ಗಾಂವ | ಬಂಕಾಪುರ | ಬಂಕಾಪುರ | ಬಂಕಾಪುರ | ೩೭೮೯ | ೧೯೨೧ |
| ೨ | ಶಿಗ್ಗಾಂವ | | ಕುಂದೂರ | ಕುಂದೂರ | ೭೮೭ | ೭೨೦ |
| ೩ | ಶಿಗ್ಗಾಂವ | | | ಜಾಲಿಕಟ್ಟಿ | ೧೯೧ | ೧೯೧ |
| ೪ | ಶಿಗ್ಗಾಂವ | | ನಾರಾಯಣಪುರ | ನಾರಾಯಣಪುರ | ೨೬೧ | ೨೫೯ |
| ೫ | ಶಿಗ್ಗಾಂವ | | | ಮುನವಳ್ಳಿ | ೪೯೨ | ೪೨೦ |
| ೬ | ಶಿಗ್ಗಾಂವ | | | ಬಿಸನಹಳ್ಳಿ | ೨೩೪ | ೨೧೬ |
| ೭ | ಶಿಗ್ಗಾಂವ | | ಬಾಡ | ಬಾಡ | ೭೩೬ | ೬೮೦ |
| ೮ | ಶಿಗ್ಗಾಂವ | | | ಕಲ್ಯಾಣ | ೩೧೨ | ೨೬೧ |
| ೯ | ಶಿಗ್ಗಾಂವ | | | ಹುಣಸಿಕಟ್ಟಿ | ೧೬೩ | ೧೫೭ |
| ೧೦ | ಶಿಗ್ಗಾಂವ | | | ಖುರ್ಷಾಪುರ | ೩೪೪ | ೩೩೦ |
| ೧೧ | ಶಿಗ್ಗಾಂವ | | | ಹೊಟ್ಟೂರು | ೪೩೩ | ೩೩೪ |
| ೧೨ | ಶಿಗ್ಗಾಂವ | | ಗುಡ್ಡದಚನ್ನಾಪುರ | ಗುಡ್ಡದಚನ್ನಾಪುರ | ೪೦೬ | ೩೯೪ |
| ೧೩ | ಶಿಗ್ಗಾಂವ | | | ಹುಲಿಕಟ್ಟಿ | ೪೨೦ | ೩೬೭ |
| ೧೪ | ಶಿಗ್ಗಾಂವ | | ಹಳೇ ಬಂಕಾಪುರ | ಹಳೇಬಂಕಾಪುರ | ೪೬೩ | ೪೨೮ |
| ೧೫ | ಶಿಗ್ಗಾಂವ | | | ಮೂಕಬಸರಿಕಟ್ಟಿ | ೩೦೩ | ೨೮೪ |
| ೧೬ | ಶಿಗ್ಗಾಂವ | | | ಮಲ್ಲನಾಯಕನಕೊಪ್ಪ | ೧೭೭ | ೧೪೧ |
| ೧೭ | ಶಿಗ್ಗಾಂವ | | ಹೋತನಹಳ್ಳಿ | ಹೋತನಹಳ್ಳಿ | ೬೭೩ | ೬೫೮ |
| ೧೮ | ಶಿಗ್ಗಾಂವ | | | ಶಿಡ್ಲಾಪುರ | ೧೪೩ | ೧೩೭ |
| ೧೯ | ಶಿಗ್ಗಾಂವ | | | ಲಕ್ಕಿಕೊಪ್ಪ | ೨೮೭ | ೨೨೮ |
| ೨೦ | ಶಿಗ್ಗಾಂವ | | ಅಂದಲಗಿ | ಅಂದಲಗಿ | ೭೩೭ | ೬೬೭ |
| ೨೧ | ಶಿಗ್ಗಾಂವ | | | ಶಡಗರವಳ್ಳಿ | ೨೩೦ | ೧೭೩ |
| ೨೨ | ಶಿಗ್ಗಾಂವ | | | ಮುಂದೆನಕೊಪ್ಪ | ೫೦೭ | ೪೮೪ |
| ೨೩ | ಶಿಗ್ಗಾಂವ | | ಹುನಗುಂದ | ಹುನಗುಂದ | ೬೫೬ | ೬೧೭ |
| ೨೪ | ಶಿಗ್ಗಾಂವ | | | ಮುಗಳಿಕಟ್ಟಿ | ೨೪೧ | ೧೯೭ |
| ೨೫ | ಶಿಗ್ಗಾಂವ | | | ತೊರೂರು | ೨೬೬ | ೨೫೮ |
| ೨೬ | ಶಿಗ್ಗಾಂವ | | | ಹನಕನಹಳ್ಳಿ | ೩೮೪ | ೩೬೮ |
| ೨೭ | ಶಿಗ್ಗಾಂವ | | ಹನುಮರಹಳ್ಳಿ | ಹನುಮರಹಳ್ಳಿ | ೩೬೭ | ೩೬೭ |
| ೨೮ | ಶಿಗ್ಗಾಂವ | | | ಮೊಟಳ್ಳಿ | ೨೧೧ | ೨೧೧ |
| ೨೯ | ಶಿಗ್ಗಾಂವ | | | ಚಾಕಾಪುರ | ೪೪೧ | ೪೨೯ |
| ೩೦ | ಶಿಗ್ಗಾಂವ | | | ಚಿಕ್ಕನೆಲ್ಲೂರ | ೪೮೫ | ೪೨೪ |
| ೩೧ | ಶಿಗ್ಗಾಂವ | | | ಕಂಕಣವಾಡ | ೨೩೭ | ೨೪೮ |
| ೩೨ | ಶಿಗ್ಗಾಂವ | | ಚಂದಾಪುರ | ಚಂದಾಪುರ | ೫೩೨ | ೪೯೬ |
| ೩೩ | ಶಿಗ್ಗಾಂವ | | | ನೀರಲಕಟ್ಟಿ | ೩೬೧ | ೩೪೯ |
| ೩೪ | ಶಿಗ್ಗಾಂವ | | | ನಿಡಗುಂದಿ | ೨೭೭ | ೨೧೫ |
| ೩೫ | ಶಿಗ್ಗಾಂವ | | | ಶೀಂಗಾಪುರ | ೨೬೮ | ೨೨೦ |
| ೩೬ | ಶಿಗ್ಗಾಂವ | | | ಕಲಕಟ್ಟಿ | ೨೪೬ | ೨೪೨ |
| ೩೭ | ಶಿಗ್ಗಾಂವ | | | ಮಂಚಿನಕೊಪ್ಪ | ೧೨೧ | ೯೬ |

**ಬಂಕಾಪುರದ ಆಡಳಿತಾತ್ಮಕ ವಿವರ:** ಒಂದು ಸಮುದಾಯ ಆರೋಗ್ಯ ಕೇಂದ್ರ, ಒಂದು ಉಪತಹಸಿಲ್ದಾರ ಕಛೇರಿ, ಒಂದು ಪುರಸಭೆ ೨೨ ಅಂಗನವಾಡಿ ಕೇಂದ್ರಗಳು, ೧೦ಕ್ಕೂ ಹೆಚ್ಚು ಪ್ರಾಥಮಿಕ ಶಾಲೆಗಳು, ೫ ಪ್ರೌಢ ಶಾಲೆಗಳು, ೨ ಪದವಿಪೂರ್ವ ಕಾಲೇಜುಗಳು, ೧ ಪದವಿ ಕಾಲೇಜು, ೧ ವೃತ್ತಿಪರ ಕಾಲೇಜನ್ನು ಹೊಂದಿ. ಪುರಸಭೆಯ ವ್ಯಾಪ್ತಿಯಲ್ಲಿ ೨೪ ವಾರ್ಡಗಳಿದೆ.

**ಬಂಕಾಪುರದ ಶೈಕ್ಷಣಿಕ ವಿವರ:** ೨೦೧೧ರ ಜನಗಣತಿಯ ಪ್ರಕಾರ ಒಟ್ಟು ಅಕ್ಷರಸ್ಥರ ಶೇಕಡಾವಾರು ೭೯,೩೬ ಇದರಲ್ಲಿ ಪುರುಷರು ಶೇಕಡಾ ೮೩,೨೬ ಮಹಿಳೆಯರು ೭೫,೨೧.

**ಬಂಕಾಪುರದ ಇತರೆ ವಿವರಗಳು:** ಬಂಕಾಪುರದಲ್ಲಿ ೧ ಪಶು ಆಸ್ಪತ್ರೆ, ೦೧ ಪ್ರಾಥಮಿಕ ಚಿಕಿತ್ಸಾ ಕೇಂದ್ರ, ೬ ಸಹಕಾರಿ ಬ್ಯಾಂಕಗಳು, ೩ ರಾಷ್ಟ್ರೀಕೃತ ಬ್ಯಾಂಕಗಳು, ೧೬ ಖಾಸಗಿ ಆಸ್ಪತ್ರೆಗಳು, ಹಾಗೂ ೦೧ ಅಂಚೆಕಛೇರಿಯಿದೆ. ಇಂತಹ ಅನೇಕ ಮೂಲಭೂತ ಸೌಲಭ್ಯಗಳು ಗ್ರಾಮದ ಅಭಿವೃದ್ಧಿಗೆ ಸಹಕಾರಿಯಾಗಿದೆ. ರಾಷ್ಟ್ರೀಯ ಹೆದ್ದಾರಿ ನಂ ೪ ಊರಿನ ಪಕ್ಕದಲ್ಲಿ ಹಾದು ಹೋಗಿರುವದರಿಂದ ಸಾರಿಗೆ-ಸಂಪರ್ಕ ಉತ್ತಮವಾಗಿದೆ.

### ೨.೨. ಸ್ಥಳನಾಮ, ಪದನಿಷ್ಪತ್ತಿ ಮತ್ತು ಐತಿಹ್ಯ

**ಸ್ಥಳನಾಮ:** ಸ್ಥಳನಾಮವೆಂದರೆ ಊರ ಹೆಸರು ಎಂದರ್ಥ. ಗ್ರೀಕ್ ಭಾಷೆಯಲ್ಲಿ topos ಎಂದರೆ ಸ್ಥಳಗಳು nomos ಎಂದರೆ ಹೆಸರುಗಳು. ಆದ್ದರಿಂದ ಸ್ಥಳಗಳ ಹೆಸರುಗಳನ್ನು ಅಧ್ಯಯನ ಮಾಡುವ ವಿಜ್ಞಾನಕ್ಕೆ TOPONOMOY ಎಂದು ಕರೆಯಲಾಗುತ್ತದೆ. ಗ್ರಾಮನಾಮ ಅಥವಾ ಸ್ಥಳನಾಮಗಳು ವ್ಯಷ್ಠಿಯ ಆಸ್ತಿಯಾಗಿರದೆ ಸಮಷ್ಠಿಯ ಆಸ್ತಿಯಾಗಿದೆ. ಉಳಿದ ನಾಮಗಳಿಗಿಂತಲೂ ಹೆಚ್ಚಾಗಿ ಗ್ರಾಮನಾಮವನ್ನು ಜನರ ಬಾಯಲ್ಲಿ ಹೆಚ್ಚು ಹೆಚ್ಚು ಬಳಸುವುದರಿಂದ ಅಧಿಕ ವ್ಯತ್ಯಾಸಕ್ಕೆ ಕಾರಣವಾಗುತ್ತದೆ. ಸ್ಥಳನಾಮಗಳು ರೂಪದೃಷ್ಟಿಯಿಂದ ಅಧಿಕ ವ್ಯತ್ಯಾಸಪಡೆದು ಕೊಂಡಿರುತ್ತದೆ. ಇದರಿಂದ ತನ್ನ ನಿಜ ಅರ್ಥವನ್ನು ಕಳೆದುಕೊಂಡಿರುವುದರಿಂದ ಸಹಜವಾಗಿಯೇ ನಿಜ ಅರ್ಥವನ್ನು ಹುಡುಕುವ ಕುತೂಹಲ ಕೆರಳುವುದು ಸಹಜವಾಗಿ. "ವ್ಯಕ್ತಿಗೊಂದು ಹೆಸರು ಅನಿವಾರ್ಯ ಹೇಗೋ ಹಾಗೆಯೇ ಆತ ನೆಲೆಸಿದ ಸ್ಥಳಕ್ಕೂ ಒಂದು ಹೆಸರು ಅನಿವಾರ್ಯ. ತಾನು ನೆಲೆಸಿದ ನೆಲೆಗೊಂದು ಹೆಸರಿಡುವ ಪದ್ದತಿ ಅಥವಾ ಪ್ರಕ್ರಿಯೆ ಇಂದು ನಿನ್ನೆಯದಲ್ಲ. ಅದು ಪ್ರಾಚೀನವಾದುದು. ತನ್ನ ಸಮುದಾಯದಲ್ಲೇ ಮನುಷ್ಯ ತನ್ನನ್ನು ತಾನು ಗುರುತಿಸಿ ಕೊಳ್ಳಲೊಸುಗ ಹೆಸರಿಟ್ಟುಕೊಳ್ಳುವಂತೆ ತಾನು ವಾಸಿಸುವ ಜಾಗಕ್ಕೂ ಹೆಸರಿಡುತ್ತಾನೆ. ತನ್ನ ಸುತ್ತಮುತ್ತಲಿನ ನಿಸರ್ಗವೇ ಆತನಿಗೆ ಆಧಾರವಾಗಿ ಕಂಡಿರುವುದರಲ್ಲಿ ಆಶ್ಚರ್ಯವಿಲ್ಲ. ಆದ್ದರಿಂದ ಪ್ರಾಚೀನ ಸ್ಥಳನಾಮಗಳು ನಿಸರ್ಗವಾಚಿ ಹೆಸರುಗಳನ್ನೇ ಒಳಗೊಂಡಿರುವುದು ವಿಶೇಷವಾಗಿದೆ"[1]

ಸ್ಥಳನಾಮಗಳಿಗೆ ಸಾಮಾನ್ಯ ನಾಮಗಳಿಗೆ ಕೊಡಬೇಕಾದ ಪ್ರಾಧಾನ್ಯಕ್ಕಿಂತ ಹೆಚ್ಚು ಪ್ರಾಧಾನ್ಯ ಕೊಡಬೇಕಾಗಿದೆ. ನಮ್ಮ ಪೂರ್ವಿಕರ ವಿದ್ಯಾಸಂಪನ್ನತೆ, ಸೌಂದರ್ಯಪ್ರಜ್ಞೆ, ಧಾರ್ಮಿಕ ದೃಷ್ಟಿ,

ಅಂದಿನ ಜನರ ವೃತ್ತಿ, ನೈಸರ್ಗಿಕ ಸಂಪತ್ತು, ಭಾಷಾ ಚರಿತ್ರೆ, ಮಾನವಶಾಸ್ತ್ರ ಮೊದಲಾದ ಅನೇಕ ವಿಷಯಗಳನ್ನು ತನ್ನ ಗರ್ಭದಲ್ಲಿ ಅಡಗಿಸಿಟ್ಟುಕೊಂಡಿವೆ. ಸ್ಥಳನಾಮಗಳು ಕೇವಲ ಸ್ಥಳನಾಮಗಳಾಗಿ ಉಳಿಯದೆ ಮಾನವ ಸಂಸ್ಕೃತಿಯ ಕುರುಹುಗಳಾಗಿ ಉಳಿದಿವೆ. ಸ್ಥಳನಾಮಗಳು ಹಿಂದಿನಂತೆ ಹುಟ್ಟುತ್ತವೆ. ಈಗಲೂ ಹುಟ್ಟುತ್ತಲೆ ಬೆಳೆಯುತ್ತವೆ, ಬದಲಾಗುತ್ತಿವೆ. ಹುಟ್ಟಿದ ಸಂದರ್ಭವನ್ನು ಅದರ ಅರ್ಥವನ್ನು ಗ್ರಹಿಸುವುದೇ ಸ್ಥಳನಾಮ ಅಧ್ಯಯನದ ಪ್ರಮುಖವಾದ ಉದ್ದೇಶವಾಗಿದೆ. ಸ್ಥಳನಾಮಗಳ ಅಧ್ಯಯನದಿಂದ ಒಂದು ಜನಾಂಗದ ಅಭಿರುಚಿ, ಅನುಭವ, ಸೃಜನಶೀಲ ಶಕ್ತಿಯನ್ನು ಅರಿಯಬಹುದು. ಸ್ಥಳನಾಮಗಳಿಗೆ ಅವುಗಳದೇ ಆದ ಅರ್ಥವಿರುತ್ತದೆ. ಅರ್ಥರಹಿತವಾದ ಸ್ಥಳನಾಮಗಳು ಇರುವುದಿಲ್ಲ. ಉರುಗಳಿಗೆ ಆಯಾ ಹೆಸರುಗಳು ಪ್ರಾಪ್ತವಾಗಲು ಇಂಥವೇ ಕಾರಣಗಳಿವೆ ಎಂದು ಖಚಿತವಾಗಿ ಹೇಳಲಿಕ್ಕೆ ಬಾರದಿದ್ದರೂ ಕೆಲವಾದರೂ ಊರುಗಳ ಹೆಸರು ಬರಲು ಇರುವ ಕಾರಣಗಳನ್ನು ಗುರುತು ಮಾಡಬಹುದು. ಆಯಾ ಊರುಗಳಿಗೆ ಆಯಾ ಹೆಸರುಗಳು ಹೇಗೆ ಬಂದವು? ಎಂಬುದನ್ನು ಅಧ್ಯಯನ ಮಾಡಿದರೆ ಅದೊಂದು ರೀತಿಯಲ್ಲಿ ಆ ಊರಿನ ಹಿನ್ನೆಲೆಯನ್ನು, ಭೌಗೋಳಿಕ ಪರಿಸರವನ್ನು ಇತಿಹಾಸವನ್ನು ಸಂಸ್ಕೃತಿಯನ್ನು ಅಭ್ಯಾಸಿಸಿದಂತಾಗುತ್ತದೆ. ಸ್ಥಳನಾಮಗಳನ್ನು ಕೇವಲ ಭಾಷಾ ವೈಜ್ಞಾನಿಕ ವಿಧಾನದಿಂದ ಅಧ್ಯಯನ ಮಾಡದೆ ಶಾಸನಶಾಸ್ತ್ರೀಯ ಭೂವಿವರಣಾತ್ಮಕ ಮಾನವಶಾಸ್ತ್ರೀಯ ವಿಧಾನಗಳೊಂದಿಗೆ ಅಂತರ್ ಶಿಸ್ತೀಯ ಅಧ್ಯಯನ ಮಾಡುವುದರಿಂದ ನಮ್ಮ ಪರಿಶೀಲನೆಗಳು ಹೆಚ್ಚು ಕರಾರುವಕ್ಕಾಗಬಲ್ಲದೆಂಬ ವಿಷಯ ಬಂಕಾಪುರ ಸ್ಥಳನಾಮ ಕುರಿತು ವಿವೇಚಿಸಿದಾಗ ಎಷ್ಟು ಸತ್ಯ ಎಂಬುದು ಮನದಟ್ಟಾಗುತ್ತದೆ.

ಭಾರತ ದೇಶದ ಅನೇಕ ಗ್ರಾಮಗಳು ಮಹಾಭಾರತದ ಇತಿಹಾಸದೊಂದಿಗೆ ಹೆಣೆದುಕೊಂಡಿವೆ. ಬಂಕಾಪುರವು ಇದಕ್ಕೆ ಹೊರತಾಗಿಲ್ಲ. ಪಾಂಡವರು ವೇಶ ಮರೆಮಾಚಿಕೊಂಡು ಅಜ್ಞಾತವಾಸ ಪೂರೈಸಿದ ಅಂದಿನ ವಿರಾಟ ನಗರ ಇಂದಿನ ಹಾನಗಲ್ಲು ಎಂದು ಪ್ರತೀತಿ. ಬಕಾಸುರನೆಂಬ ರಾಕ್ಷಸ ವಾಸವಾಗಿದ್ದ ಅಂದಿನ ಏಕಚಕ್ರನಗರ ಇಂದಿನ ಬಂಕಾಪುರವೆಂಬ ಹೇಳಿಕೆ. ಈಗಲೂ ಈ ಸ್ಥಳದಲ್ಲಿರುವ ಬಕಾಸುರನ ಕೆರೆ ಅಥವಾ ರಕ್ಕಸನ್ ಕೆರೆ, ಆ ರಕ್ಕಸನನ್ನು ವಧಿಸಿದ ಊರೇ ಬಂಕಾಪುರ. ಸಮೀಪದ ಕುಂದೂರ ಎಂಬುದು ಇಲ್ಲಿಯ ಐತಿಹ್ಯ. ಮಹಾಭಾರತದ ಈ ಸ್ಥಳ ಪುರಾಣವೇನೆ ಇರಲಿ, ಕಾಲದಿಂದ ಕಾಲಕ್ಕೆ ತನ್ನನ್ನೂ ಬಿಚ್ಚಿಕೊಳ್ಳುತ್ತಾ ಹೊಸ ಇತಿಹಾಸದೊಂದಿಗೆ ಸಮ್ಮಿಳಿತಗೊಳ್ಳುತ್ತಾ ಮುನ್ನಡೆದಿದೆ.

**ಪದನಿಷ್ಪತ್ತಿ:** ಈ ಗ್ರಾಮ ವಂಕಪೂರ, ವಂಕಾಪೂರ, ವೆಂಕಪುರ, ವೆಂಗಾಪೂರ, ಬಙ್ಕಪೂರ, ಬಂಕಪುರ್, ಬಂಕಾಪೂರ್, ಬಂಕಾಹುರ್, ಬೆಂಕೀಪೂರ್ ಇವು ಶಾಸನಗಳಲ್ಲಿ ಕಂಡುಬರುವ ಬಂಕಾಪುರ ಗ್ರಾಮನಾಮ ವೈವಿಧ್ಯಗಳು, ಇಲ್ಲಿಯ ವೆಂಕಪುರ, ಬೆಂಕೀಪುರಗಳೆಂಬ ಕಲ್ಪಿತ ಹೆಸರುಗಳನ್ನು ಬಿಟ್ಟರೆ ಮಿಕ್ಕವು ಈ ಊರ ನಿಜನಾಮದೆಡೆಗೆ ಬೆರಳು ನೀಡುತ್ತವೆ.

ಬಂಕಾಪೂರ ಇತಿಹಾಸ ಪ್ರಾರಂಭವಾಗುವುದು ರಾಷ್ಟ್ರಕೂಟರ ಕಾಲದಿಂದ ವಿಶಾಲವಾಗಿ ಹಬ್ಬಿದ ರಾಷ್ಟ್ರಕೂಟ ಸಾಮ್ರಾಜ್ಯದಲ್ಲಿ ಅಮೋಘವರ್ಷ ನೃಪತುಂಗ ಎರಡನೆಯ ಕೃಷ್ಣರು ಗಮನಿಸ ಬೇಕಾದ ದೊರೆಗಳು. ಈ ಸಾಮ್ರಜ್ಯಕ್ಕೆ ಸೇರಿದ ಪ್ರದೇಶಗಳಲ್ಲಿ ಪಾನುಂಗಲ್ಲ ಐನೂರ ಒಂದು ರಾಜಕೀಯ ವಿಭಾಗ. ಈ ಭಾಗವನ್ನಾಳುತ್ತಿದ್ದವರು ರಾಷ್ಟ್ರಕೂಟರ ಸಾಮಂತ ಚಲ್ಲಕೇತನರು. ಇವರನ್ನು 'ಮುಕುಲಕುಲ'ದವರೆಂದು ಶಾಸನಗಳು ಕರೆದಿವೆ. ರಾಷ್ಟ್ರಕೂಟರ ನೆರವು, ಚಲ್ಲಕೇತನರ ಸದಾಶ್ರಯದಲ್ಲಿ ಜಿನಸೇನಾಚಾರ್ಯರು ಪೂರ್ವಪುರಾಣ ರಚನೆ ಮಾಡಿದ್ದರೆ, ಗುಣಭದ್ರಾಚಾರ್ಯರು ಉತ್ತರಪುರಾಣ ರಚನೆ ಮಾಡಿದ್ದರು. ಚಲ್ಲಕೇತನ ಮನೆತನವನ್ನು ಕುರಿತಂತೆ ಉತ್ತರಪುರಾಣ

"ಚಲ್ಲಪತಾಕೇ ಚಲ್ಲದ್ವಜಾನುವೇ ಚಲ್ಲಕೇತನ ತನೂಜೇ
ಜೈನೇಂದ್ರಧರ್ಮ ವೃದ್ಧಿವಿಧಾಯಿನಿ ವಿಧುವೀಂದ್ರ ಪೃಥುಯಶಸಿ
ಪದ್ಮಾಲಯ ಮುಕುಲಕುಲ ಪ್ರವಿಕಾಸಕಸತ್ತ್ವ ತಾಪತತಮಹಸಿ
ಶ್ರೀಮತಿ ಲೋಕಾದಿತ್ಯೆ ಪ್ರಧ್ವಸ್ತ ಪ್ರಥಿತಶತ್ರು ಸಂತಮಸೀ
ವನವಾಸದೇಶಮುಖಿಲಂ ಭುಂಜತಿ ನಿಷ್ಕಂಟಕಂ ಸುಖದಸುಚಿರಂ
ತತ್ಪತ್ರನಿಜನಾಮಕೃತೇ ವಂಕಾಪುರೇ ಪರೇಷ್ವಧಿಕೇ"[೨] //

ಎಂದು ತಿಳಿಸಿದೆ. ಅಂದರೆ ಚಲ್ಲಕೇತನ ವಂಶದ ಲೋಕಾಧಿತ್ಯನೆಂಬವ ತನ್ನ ತಂದೆ ಬಂಕೇಯನ ಸ್ಮಾರಕಾರ್ಥವಾಗಿ ಈ ಊರಿಗೆ 'ವಂಕಾಪುರ'ವೆಂದು ಹೆಸರಿಸಿದ ಎಂದರ್ಥ. ಬಂಕೇಯ, ಲೋಕಾಧಿತ್ಯರು ಚಲ್ಲಕೇತನ ಮನೆತನದ ಪ್ರಸಿದ್ದ ದೊರೆಗಳು. ಹೀಗಾಗಿ ಕ್ರಿ.ಶ ೯ನೇಯ ಶತಮಾನದ ಉತ್ತರ ಪುರಾಣ ಬಂಕಾಪುರದ ಪ್ರಾಚೀನತೆಯನ್ನು ವ್ಯಕ್ತಪಡಿಸುವದಲ್ಲದೆ ಚಲ್ಲಕೇತನ ಮನೆತನಕ್ಕೂ ಬಂಕಾಪುರಕ್ಕಿದ್ದ ಸಂಬಂಧಕ್ಕೂ ಕೊಂಡಿಯೆನಿಸಿದೆ. ಬಂಕಾಪುರದ ಚಲ್ಲಕೇತನ ಮನೆತನದ ಆಶ್ರಯದಲ್ಲಿಯೆ ಉತ್ತರಪುರಾಣ ರಚಿತವಾಯಿತೆಂಬುದು ಈ ಕೃತಿಯಿಂದ ತಿಳಿದು ಬರುತ್ತದೆ.

ಕೊಣ್ಣೂರಿನ ಅಮೋಘವರ್ಷನ ಶಾಸನ(೮೬೦) ಚಲ್ಲಕೇತನ ಮನೆತನದ ಬಂಕೇಯನ ಹೋರಾಟವನ್ನು ಪ್ರಶಂಸಿಸಿ ರಾಷ್ಟ್ರಕೂಟ ದೊರೆ ಮನಮೆಚ್ಚಿ ಆತನಿಗಿತ್ತ ದಾನದ ಬಗೆಗೆ ತಿಳಿಸುತ್ತದೆ. ಈ ಶಾಸನದಲ್ಲಿ ಬಂಕಾಪುರ ಹೆಸರಿನ ಪ್ರಸ್ತಾಪವಿಲ್ಲ. ಈ ಸುಮಾರಿಗೆ ಲೋಕಾದಿತ್ಯ ತನ್ನ ತಂದೆಯ ಹೆಸರಿನಲ್ಲಿ ಈ ಊರನ್ನು ನಿರ್ಮಿಸಿರುವ ಸಾಧ್ಯತೆ ಇದೆ. ಈ ಗ್ರಾಮದ ಪ್ರಥಮ ಉಲ್ಲೇಖ 'ಬಙ್ಕಪುರ'ವೆಂದು ಅಸುಂಡಿ(೯೨೫) ಶಾಸನದಲ್ಲಿದೆ. ನಂತರದ ಕೋಳೂರ (೧೦೪೫), ಬಂಕಾಪುರ(೧೦೫೫) ಶಾಸನಗಳು ಈ ಗ್ರಾಮದ ಪ್ರಸ್ತಾಪ ಮಾಡಿವೆ.

ಕ್ರಿ.ಶ ೧೧ನೆಯ ಶತಮಾನದಲ್ಲಿ ಈ ಪ್ರದೇಶಕ್ಕೆ ಇಂದ್ರೇಶ್ವರಗಿರಿ, ಇಂದ್ರೇಶ್ವರಪುರ ಎಂಬ ಪ್ರಸ್ತಾಪಗಳೂ ಬಂದಿವೆ. ಹೆಬ್ಬೂರ(೧೦೦೭-೦೮) ಶಾಸನ 'ಇಂದ್ರೇಶ್ವರಗಿರಿಯ ಉಲ್ಲೇಖ ನೀಡಿದರೆ,

ಕ್ರಿಶ ೧೧೬೨ರಲ್ಲಿ ಪೆರ್ಗಡೆ ಚಾವುಂಡಯ್ಯನೆಂಬವ ಇಂದ್ರೇಶ್ವರಪುರದ ಅಧಿಕಾರ ನೋಡುತ್ತಿದ್ದನೆಂದಿದೆ. ಇದಕ್ಕೆ ಇಲ್ಲಿಯ ಇಂದ್ರೇಶ್ವರ ದೇವಸ್ಥಾನದ ಪ್ರಭಾವ ಕಾರಣವಾಗಿರಬೇಕು.

'ವಂಕಾಪುರಮುನೀಂದ್ರೋ ಭೂದೇವೇಂದ್ರೋರುಂದ್ರ ಸದ್ಗುಣ' ಎಂಬ ಶ್ರವಣಬೆಳಗೋಳ (೧೨೦೦)ದ ಹೇಳಿಕೆಯನ್ನು ಗಮನಿಸಬೇಕು. ಮೂಲದ ಈ ವಂಕಾಪುರವೇ ಕಾಲಾಂತರದಲ್ಲಿ ಬಂಕಾಪುರವೆನಿಸಿದೆ. ಭಾಷಾ ಪ್ರಕ್ರಿಯೆಯಲ್ಲಿ ಇದು ಸಹಜವಾದ ಕಾರ್ಯ.

ಪ್ರಾಚೀನ ರಾಜಕೀಯ ವಿಭಾಗಕ್ಕೆ ಸಂಬಂಧಿಸಿದಂತೆ 'ಪಾನುಂಗಲ್ಲಯೂನ ಪೊಳಲ್ ಪಟ್ಟಣಂ ರಾಜಧಾನಿ' ಶ್ರೀ ಮದನಾನಿ ಪಟ್ಟಣ' ಶ್ರೀಮದ್‌ರಾಜಧಾನಿ ಪಟ್ಟಣ, ವಿಜಯ ರಾಜಧಾನಿ, 'ಪೊಳಲು ಬಂಕಾಪುರ, ಬಂಕಾಪುರ ನೆಲವೀಡು' ಎಂಬ ವಿಭಿನ್ನ ಪ್ರಕಾರದ ಸ್ಥಾನಮಾನಗಳು ಈ ಊರಿಗೆ ಸಂದಿವೆ. ಹೀಗೆ ಕಾಲದಿಂದ ಕಾಲಕ್ಕೆ ಬಂಕಾಪುರ ತನ್ನದೇ ಆದ ಸ್ಥಾನಮಾನ ಪಡೆದಿದೆ.

ಗ್ರಾಮದಲ್ಲಿ ಅನೇಕ ಐತಿಹ್ಯಗಳಿವೆ. ಈ ಐತಿಹ್ಯಗಳಲ್ಲೆವೂ ಗ್ರಾಮದ ಪರಿಕಲ್ಪನೆಯನ್ನು ಅನಾವರಣ ಮಾಡುತ್ತವೆ. ಇಂತಹ ಐತಿಹ್ಯಗಳಲ್ಲಿ ಈ ಕೆಳಗಿನ ಐತಿಹ್ಯ ಪ್ರಮುಖವಾಗಿದೆ. ಬಂಕಾಪುರದಲ್ಲಿ ಬಕಾಸುರನಿದ್ದನು, ಅವನು ಜನರನ್ನು ಪೀಡಿಸಿ ತಿನ್ನುತ್ತಿದ್ದ. ಈ ತೊಂದರೆಯಿಂದ ತಪ್ಪಿಸಿಕೊಳ್ಳಲು ಪ್ರತಿದಿನ ಬಂಡಿ ಅನ್ನ ಕಳುಹಿಸಲಾಗುತ್ತಿತ್ತು. ಆದರೂ ಆತನ ಹಾವಳಿ ತಪ್ಪಿರಲಿಲ್ಲ. ಒಮ್ಮೆ ಜನರೆಲ್ಲ ಕೂಡಿ ಕುಂದೂರಿನ ಕುಂದಲ್ಲಮ್ಮನಿಗೆ ಈ ಆಪತ್ತಿನಿಂದ ಪಾರಾಗಲು ಬೇಡಿಕೊಂಡರು. ಆಗ ಕುಂದಲ್ಲಮ್ಮ ದೇವತೆ ಭೀಮನ ನೇತೃತ್ವದಲ್ಲಿ ಹೋಗಿ ಬಕಾಸುರನನ್ನು ಕೊಲ್ಲಲು ಸಾಧ್ಯವೆಂದು ತಿಳಿಸುತ್ತಾಳೆ. ಅದರಂತೆಯೇ ಜನ ಭೀಮನ ನೇತೃತ್ವದಲ್ಲಿ ಹೋಗಿ ಬಂಕಾಪುರದಲ್ಲಿದ್ದ ಬಕಾಸುರನನ್ನು ಕೊಂದರಂತೆ. ಆದ್ದರಿಂದಲೇ ಬಕಾಸುರನಪುರ ಎಂಬ ಹೆಸರು ಬಳಕೆಗೆ ಬಂತು. ಈ ಹೆಸರು ಕಾಲದ ನಂತರ ಬಂಕಾಪುರವಾಯಿತಂತೆ. ಎನ್ನುವ ಕಥನವು ಜೀವಂತವಾಗಿದೆ.

### ೨.೩. ಬಂಕಾಪುರದ ಚಾರಿತ್ರಿಕ ನೋಟ

ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನ ಗಣ್ಯ ಸೇನಾನಿ ಮಾಂಡಲಿಕನಾದ ಬಂಕೇಯ ಅರಸನ ಹೆಸರಿನ ಮೇಲೆ ಈ ಊರಿಗೆ ಬಂಕೇಯಪುರ ಅಥವಾ ಬಂಕಾಪುರವೆಂದು ಹೆಸರು ಬಂದಿತೆಂದು ಗುಣಭದ್ರಾಚಾರ್ಯನ ಉತ್ತರ ಪುರಾಣದಿಂದ ತಿಳಿದುಬರುತ್ತದೆ. ಊರಿನಲ್ಲಿ ಹಾಳುಬಿದ್ದ ಕೋಟೆಯಿದೆ. ಊರ ಕೋಟೆಯಲ್ಲಿ ಚಾಲುಕ್ಯರ ಶೈಲಿಯಲ್ಲಿ ನಿರ್ಮಿತವಾಗಿರುವ ನಗರೇಶ್ವರ ಅಥವಾ ಅರುವತ್ತಾರು ಕಂಬದ ದೇವಾಲಯವಿದೆ. ಅಲ್ಲದೆ ಈ ಕೋಟೆಯು ವಿಶಾಲವಾಗಿದ್ದು ೧೪೫ ಎಕರೆ ಜಮೀನನ್ನು ಆವರಿಸಿಕೊಂಡಿದೆ. ಇದರಲ್ಲಿ ಮದ್ದು ಗುಂಡುಗಳ ತಯಾರಿಕೆ ಮತ್ತು ಸಂಗ್ರಹಕ್ಕಾಗಿ ದೊಡ್ಡ ಖಾನೆಯಿದೆ, ಪಶ್ಚಿಮ ಕರಾವಳಿ ಪ್ರಾಂತಗಳಿಗೆ

ಹೋಗುವ ಆಯಕಟ್ಟಿನ ಪ್ರದೇಶದಲ್ಲಿರುವ ಬಂಕಾಪುರವು ಐತಿಹಾಸಿಕ ಸ್ಥಳವಾಗಿದೆ. ಹಲವಾರು ಶಿಲಾಶಾಸನಗಳಲ್ಲಿ ಈ ಊರನ್ನು ಬಂಕಾಪುರವೆಂದು ಉಲ್ಲೇಖಿಸಲಾಗಿದೆ. ೧೧ ನೇ ಶತಮಾನದಲ್ಲಿ ಈ ಊರು ಚಾಲುಕ್ಯರ ಸಾಮಂತ ಕದಂಬ ಅರಿಕೇಸರಿಯ ಆಡಳಿತಕ್ಕೆ ಒಳಪಟ್ಟಿತ್ತೆಂದು ಶಾಸನಗಳ ಆಧಾರದಿಂದ ತಿಳಿದುಬರುತ್ತದೆ. ಕ್ರಿ.ಶ ೧೧೪೦ ರಲ್ಲಿ ಹೊಯ್ಸಳ ವಿಷ್ಣುವರ್ಧನನು ಬಂಕಾಪುರವನ್ನು ಸ್ವಾಧೀನಪಡಿಸಿಕೊಂಡು ಅದನ್ನು ತನ್ನ ಸಾಮ್ರಾಜ್ಯದ ಉತ್ತರದ ರಾಜಧಾನಿಯನ್ನಾಗಿ ಮಾಡಿಕೊಂಡನು. ಮುಂದೆ ಆತನು ಅಲ್ಲಿಯೇ ಮಡಿದನು. ಆ ನಂತರ ವಿಜಯನಗರದ ಅರಸರಿಗೂ ಹಾಗೂ ಬಹಮನಿ ಸುಲ್ತಾನರಿಗೂ ಬಂಕಾಪುರದ ಮೇಲಿನ ಒಡೆತನಕ್ಕಾಗಿ ಯುದ್ಧಗಳು ನಡೆಯುತ್ತಲೆ ಇದ್ದವು ಕ್ರಿ.ಶ. ೧೫೭೦ರಲ್ಲಿ ಆಲಿ ಆದಿಲ್ ಷಾ ಸ್ವತಃ ಇದನ್ನು ಗೆದ್ದುಕೊಂಡು ಇಲ್ಲಿ ದೊಡ್ಡ ಮಸೀದಿ ಕಟ್ಟಿಸಿದನೆಂದು ಜುಬೇರಿ ಹೇಳಿದ್ದಾನೆ. ಮುಂದೆ ಬಿಜಾಪುರದ ದಳಪತಿ ಮುಸ್ತಫಾಖಾನ್ ಈ ಸ್ಥಳದಲ್ಲಿ ನೆಲೆಸಿದನು. ಬಿಜಾಪುರದ ಸುಲ್ತಾನನು ಕ್ರಿ.ಶ ೧೬೩೦ರಲ್ಲಿ ಪಠಾಣ ರಾವುಫ ಖಾನನನ್ನು ಬಂಕಾಪುರದ ಪ್ರಾಂತ್ಯಾಧೀಶನನ್ನಾಗಿ ನೇಮಿಸಿದನು. ಆತನು ಮುಂದೆ ಮೊಘಲರಿಗೆ ಶರಣಾದನು. (ನಂತರ ಸವಣೂರಿಗೆ ಕೇಂದ್ರವನ್ನು ಬದಲಾಯಿಸಿದನು). ಆನಂತರ ಈ ಪ್ರದೇಶವು ಮರಾಠರ ವಶವಾಗಿ ೧೮೦೨ರಲ್ಲಿ "ಬೆಸ್ಸಿನ ಒಪ್ಪಂದ"ದ ಪ್ರಕಾರ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿತ್ತು. ಬಂಕಾಪುರವು ಪೂರ್ವಕಾಲದಲ್ಲಿ ಒಂದು ಸಾಂಸ್ಕೃತಿಕ ಕೇಂದ್ರವು ಆಗಿತ್ತು, ಜೈನ ಮತಕ್ಕೆ ಬಂಕೇಯನಿಂದ ಹೆಚ್ಚಿನ ಮನ್ನಣೆ ದೊರೆತ್ತಿದ್ದು ಇದೊಂದು ಜೈನ ವಿದ್ಯಾಪೀಠವಾಗಿತ್ತೆಂದು ಪ್ರತೀತಿಯಿದೆ. ಇಲ್ಲಿ ಹಲವು ಶಿವಾಲಯಗಳಿದ್ದು ಅವು ಪಾಶುಪತ ಪಂಥದವರ ಅಧೀನದಲ್ಲಿದ್ದವು. ಇಂತಹ ಅನೇಕ ಆಡಳಿತ ವ್ಯವಸ್ಥೆಗಳು ಇಲ್ಲಿದ್ದವು. ಇವು ಭಿನ್ನವಾದ ಸಾಂಸ್ಕೃತಿಕ ಚರಿತ್ರೆಯನ್ನು ಜೀವಂತಗೊಳಿಸುತ್ತಿದ್ದವು. ಗ್ರಾಮವನ್ನು ಕಟ್ಟುವ ಕಾರ್ಯವನ್ನು ಮಾಡುತ್ತಿದ್ದವು ಇವತ್ತು ಸಹ ಮಾಡುತ್ತಿವೆ. ಹಾಗಾಗಿ ಇವುಗಳ ಆಶಯ, ಸಾಧಕ ಮತ್ತು ಬಾಧಕಗಳನ್ನು ವಿಶ್ಲೇಷಣೆ ಮಾಡಲಾಗಿದೆ.

ಕೋಟೆಯೊಳಗೆ ಪಶ್ಚಿಮ ಭಾಗದಲ್ಲಿರುವ ನಗರೇಶ್ವರ ದೇವಾಲಯ ವಿಶಾಲವಾದ ನಿವೇಶನದಲ್ಲಿ ನಿರ್ಮಿಸಲಾಗಿರುವ ಚಾಲುಕ್ಯರ ಶೈಲಿಯ ಭವ್ಯ ಸುಂದರ ವಾಸ್ತುಶಿಲ್ಪವಾಗಿದೆ. ಇದರಲ್ಲಿ ಎತ್ತರವಾದ ಬೃಹದಾಕಾರವಾದ ಕಂಬಗಳಿರುವುದರಿಂದ ಇದನ್ನು ೬೬ ಕಂಬಗಳ ದೇವಾಲಯವೆಂದು ಕರೆಯುತ್ತಾರೆ. ಇದರಲ್ಲಿ ಗರ್ಭಗೃಹ, ಅರ್ಧಮಂಟಪ, ನವರಂಗ ಹಾಗೂ ಮುಖಮಂಟಪಗಳಿವೆ. ಮುಖಮಂಟಪದ ಮುಂದೆ ಇನ್ನೊಂದು ವಿಶಾಲ ಮಂಟಪವಿದ್ದು ಅದರ ಎಡ-ಬಲಗಳಲ್ಲಿ ಪ್ರವೇಶದ್ವಾರದ ಮೇಲೆ ಕಿರು ಮಂಟಪಗಳಿವೆ. ಚಾಲುಕ್ಯರ ಶೈಲಿಯಂತೆ ಬಹುಕೋನಾಕಾರವಾದ ಗರ್ಭಗೃಹದ ದ್ವಾರದಲ್ಲಿ ಅಲಂಕಾರಯುತವಾದ ಕೆತ್ತನೆಯಿದೆ. ಅರ್ಧಮಂಟಪದ ಇಕ್ಕೆಲಗಳಲ್ಲಿ ಜಾಲರಂಧ್ರಗಳಿವೆ. ಇದರ ಮುಂಭಾಗದಲ್ಲಿ ನವರಂಗದಲ್ಲಿರುವ ಸಪ್ತಮಾತೃಕಾ ಪಟ್ಟಿಕೆಗೆ ಮಕರತೋರಣವಿರುವುದು ವಿಶೇಷವಾಗಿದೆ. ನವರಂಗದ ಭಾವಣಿಯ

ಅಲಂಕೃತವಾದ ಭುವನೇಶ್ವರಿಯನ್ನ ಹೊಂದಿದೆ. ಮಧ್ಯದಲ್ಲಿರುವ ವೃತ್ತಾಕಾರದ ನಾಲ್ಕು ಕಂಬಗಳು ಹಾಗೂ ವೃತ್ತಾಕಾರವಾದ ನಾಟ್ಯಮಂಟಪ ಆಕರ್ಷಕವಾಗಿ ನಿರ್ಮಿತವಾಗಿದೆ. ನವರಂಗದಿಂದ ಮುಖಮಂಟಪಕ್ಕೆ ಕಕ್ಷಾನವಿರುವ ಸಂಪರ್ಕ ಮಂಟಪವಿದೆ. ಇದರ ದ್ವಾರಬಂದರು ಸುಂದರ ಹಾಗೂ ಸೂಕ್ಷ್ಮವಾದ ಅಲಂಕಾರವನ್ನು ಹೊಂದಿದೆ. ವಿಶಾಲವಾದ ಎದುರಿನ ಮುಖಮಂಟಪವು ೬೦ಕ್ಕೂ ಮೇಲ್ಪಟ್ಟು ಬೃಹದಾಕಾರವಾದ ಕಂಬಗಳಿಂದ ಅಲಂಕೃತವಾಗಿದೆ. ಈ ದೇವಾಲಯದ ಹೊರಭಿತ್ತಿ, ಕಕ್ಷಾಸನ ಹಾಗೂ ಒಳಗಡೆ ಇರುವ ಒಂದೊಂದು ಮೂರ್ತಿಯನ್ನು ಬಿಡದೆ ಧ್ವಂಸಮಾಡಲಾಗಿದೆ. ದೇವಾಲಯದ ಗರ್ಭಗೃಹದ ಬಲಗಡೆ ಮಾತ್ರ ಬಲಿಯ ಕಥೆಗೆ ಸಂಬಂಧಿಸಿದ ಶಿಲ್ಪಗಳಿವೆ. ನವರಂಗದ ಕಕ್ಷಾಸನದಲ್ಲಿ ಕೆಲವು ಅಡಿ ಅಂತರದವರೆಗೆ ಮಾತ್ರ ಹೊರಗಡೆ ಸೂರ್ಯ, ಬ್ರಹ್ಮ, ಕಾಮ, ವಿಷ್ಣು, ಭೈರವ, ಶಿವ, ಕಾರ್ತಿಕೇಯ, ಗಣಪತಿ, ಬೇತಾಳ ಮುಂತಾದ ಕಿರು ಮೂರ್ತಿಗಳಿವೆ. ದೇವಾಲಯದ ಈ ಭಾಗದಲ್ಲಿ ಮಣ್ಣು ಮುಚ್ಚಿತ್ತೆಂದು ಹೀಗಾಗಿ ಈ ಮೂರ್ತಿಗಳು ಉಳಿದವೆಂದು ಸ್ಥಳೀಕರು ಹೇಳುತ್ತಾರೆ. ಸುತ್ತಲೂ ನೂರಾರು ಮೂರ್ತಿಗಳೆಲ್ಲ ಭಗ್ನವಾಗಿದ್ದು ಈ ಕೆಲವು ಮಾತ್ರ ಉಳಿದಿವೆ. ಮುಖಮಂಟಪದ ಸುತ್ತಲೂ ಛಾವಣಿಯಿಂದ ಎರಡು ಕಡೆ ಇಂಗ್ಲೀಷಿನ ಎಸ್ ಅಕ್ಷರದಂತೆ ಬಾಗಿದ ಛಜ್ಜಾಗಳಿವೆ. ದೇವಾಲಯದ ಸಮೀಪವೇ ಇರುವ ದನದ ಕೊಟ್ಟಿಗೆಯ ಹತ್ತಿರ ಸುಮಾರು ೮ ಹಾಗೂ ಒಂದು ಅಡಿ ಆಳವಿರುವ ಬೃಹದಾಕಾರವಾದ ಕಲ್ಲಿನ ಏಕಶಿಲಾ ತೊಟ್ಟಿಯಿದೆ. ಇದರ ಹೊರಭಾಗದಲ್ಲಿ ಹಲವು ವಿಧವಾದ ಮೀನುಗಳ ಉಬ್ಬು ಶಿಲ್ಪಗಳಿವೆ. ಕೋಟೆಯಲ್ಲಿರುವ ಗೋಸಂವರ್ಧನಾ ಕೇಂದ್ರದ ಬಳಿ ಒಂದು ಮುರಿದ ಕಂಬದ ತುಂಡಿನ ಬುಡದಲ್ಲಿ ಶಾಸನವಿದೆ. ಇದರ ಪ್ರಕಾರ ಕಲ್ಯಾಣದ ಚಾಲುಕ್ಯರ ದೊರೆ ಮೊದಲನೆ ಸೋಮೇಶ್ವರನ (೧೦೬೩) ಅಧಿನದಲ್ಲಿದ್ದ ಪಡೆವಳ ಬೀರಯ್ಯ, ಅಲ್ಲಮಯ್ಯ ಮತ್ತು ಶ್ರೀಧರಯ್ಯ ಪೆರ್ಗಡೆಗಳಿಂದ ಬಂಕಾಪುರದ ಇಂದ್ರೇಶ್ವರ ದೇವಾಲಯಕ್ಕೆ ಸುಂಕದಾನ ಮಾಡಿದುದ್ದರ ಬಗೆಗೆ ಉಲ್ಲೇಖವಿದೆ. ಇದರ ಬಳಿಯೇ ಇರುವ ಇನ್ನೊಂದು ಶಾಸನವು ಇದೇ ಕಾಲಕ್ಕೆ ಸೇರಿದ್ದು (೧೦೭೯) ಅರಸನಿಂದ ಬಂಕಾಪುರ ನಗರೇಶ್ವರ ದೇವಾಲಯಕ್ಕೆ ಸ್ಥಳವೃತ್ತಿಯೆಂದು ಗಾವುಂಡವಳಿ ಗ್ರಾಮದಾನದ ಬಗೆಗೆ ಉಲ್ಲೇಖಿಸುತ್ತದೆ. ಈ ಶಾಸನಗಳಿರುವ ಸಮೀಪವೇ ಬೇವಿನಮರದ ಕೆಳಗೆ ಎರಡು ಕಲ್ಲಿನ ಆನೆಗಳು, ಒಂದು ತಾಳವಾರ, ಒಂದು ಭಗ್ನವಿಷ್ಣು, ಸಪ್ತಮಾತೃಕೆಯರ ಜೋಡು ಶಿಲ್ಪದ ಭಾಗ ಮುಂತಾದ ಅವಶೇಷಗಳೂ ಬಿದ್ದಿದೆ. ಇಲ್ಲಿಂದ ಸ್ವಲ್ಪ ದೂರದಲ್ಲಿ ಹಲವು ಸಣ್ಣಮಟ್ಟ ಗುಡಿಗಳಾದ ಲಕ್ಷ್ಮಿ, ಪರಶುರಾಮ, ಹನುಮಂತ ಮತ್ತು ಭರಮದೇವರ ಗುಡಿಗಳಿವೆ. ವಿಜಯನಗರೋತ್ತರ ಶೈಲಿಯಲ್ಲಿ ನಿರ್ಮಿತವಾಗಿರುವ ಲಕ್ಷ್ಮೀ ಗುಡಿಯಲ್ಲಿರುವ ಮೂಲವಿಗ್ರಹವು ಶಂಕ, ಚಕ್ರ, ವರದ ಹಾಗೂ ಅಭಯ ಹಸ್ತಗಳಿರುವ ಚತುರ್ಭುಜ ವಿಗ್ರಹವಾಗಿದೆ. ಗೋಸಂವರ್ಧನಾ ಕಛೇರಿಯ ಬಳಿ ಎತ್ತರವಾದ ಕೋಟೆಯ ಬುರುಜುವಿದೆ. ಇಲ್ಲಿಯೇ ಶಾಸನಗಳಲ್ಲಿ ಉಲ್ಲೇಖವಾಗಿರುವ ಇಂದ್ರೇಶ್ವರ

ದೇವಾಲಯದ ಅವಶೇಷಗಳಿವೆ. ಇದನ್ನು ರಾಷ್ಟ್ರಕೂಟ ೪ನೆಯ ಇಂದ್ರನು ಸುಮಾರು ೯೭೩-೭೪ರಲ್ಲಿ ಕಟ್ಟಿಸಿದನೆಂದು ಅವನು ಮಳಖೇಡವನ್ನು ಕಳೆದುಕೊಂಡ ಮೇಲೆ ಬಂಕಾಪುರವನ್ನು ರಾಜ್ಯಧಾನಿಯಾಗಿ ಮಾಡಿಕೊಂಡಿದ್ದನು. ಇದರ ಪಕ್ಕದಲ್ಲೇ ಯಲ್ಲಮ್ಮ ದೇವಾಲಯವಿದೆ. ಈ ಗುಡಿ ಬಳಿಯೊಂದು ಧಿಕ್ಪಾಲಕರಿರುವ ಶಿಲೆಯಿದ್ದು, ಈಶಾನ್ಯ ಮಿರುತ್ತಿಯರ ಕೆತ್ತನೆಗಳಿವೆ, ಯಮ ಹಾಗು ಸಪ್ತ ಮಾತೃಕೆಯರ ಜೋಡುಶಿಲ್ಪದ ಭಾಗವಿದೆ. ಇಲ್ಲಿ ಒಂದು ನಿಷಿದಿ ಕಲ್ಲಿದೆ. ಯಲ್ಲಮ್ಮನ ಗುಡಿಯ ಭಾಗಿಲುವಾಡವು ರಾಷ್ಟ್ರಕೂಟ ಲಕ್ಷಣಗಳನ್ನು ವ್ಯಕ್ತಪಡಿಸುತ್ತದೆ. ಮೂಲ ವಿಗ್ರಹವು ಕುಳಿತ ಭಂಗಿಯಲ್ಲಿರುವ ಕಾಳಿಯ ವಿಗ್ರಹವಾಗಿದೆ. ಕೋಟೆಯ ಮುಖ್ಯದ್ವಾರದ ಬಳಿ ಬಲಗಡೆ ಒಂದು ಸುಂದರ ಮಸೀದಿ ಇದೆ. ಇದು ಮುಂಭಾಗದಲ್ಲಿ ಪೂರ್ತಿ ತೆರೆದಿದ್ದು ಎರಡು ಅಂಕಣಗಳ ಭವನವನ್ನು ಹೊಂದಿದೆ. ಇದರ ಹಿಂಭಾಗದ ಮಿಹ್ರಾಬಿ ಅಲಂಕೃತವಾಗಿದ್ದು ಅದರ ಮೇಲುಗಡೆ ಒಂದು ಪರ್ಶಿಯನ ಶಾಸನವಿದೆ. ಮಸೀದಿಯ ಎದುರಿಗೆ ಅಣತಿ ದೂರದಲ್ಲಿಯೇ ಒಂದು ಕನ್ನಡ ಶಾಸನವಿದ್ದು ವಿಜಯನಗರದ ಈ ಬರಹದ ಚಪ್ಪಡಿಯ ಮೇಲೆ ಕನ್ನಡಿ, ಕತ್ತರಿ, ಭಾಳುಗಳ ಚಿತ್ರವಿದ್ದು ಇದು ಸದಾಶಿವರಾಯನ ಕೆಲಸಿಗರಿಗೆ ಕೊಟ್ಟ ದಾನಶಾಸನವಾಗಿದೆ. ವಿಜಯನಗರದ ಸಂಗಮ ಅರಸರ ಕೈತಪ್ಪಿದ ಬಂಕಾಪುರ ತುಳುವರ ಕಾಲದಲ್ಲಿ ಮತ್ತವರ ಕೈಗೆ ಬಂತೆನ್ನಲೂ ಈ ಶಾಸನ ಸಾಕ್ಷಿಯಾಗಿದೆ. ಕೋಟೆಯಲ್ಲಿ ಮಸೀದಿಗೂ ಮೊದಲು ಭರಮಪ್ಪನ ಗುಡಿಯಿದ್ದು ಅದರ ಬಳಿಯೊಂದು ಭಾರಿ ಬಂಡೆಯಿದೆ. ಅದರ ಹತ್ತಿರವೇ ಶಿರವಿಲ್ಲದ ಮಹೇಶ ಮರ್ಧಿನಿಯ ಮೂರ್ತಿಯಿದೆ. ಕೋಟೆಯ ಹೊರಗೆ ಹಳೇ ಕಾಲದ ಕಾವಲು ಚೌಕಿಯ ಕಟ್ಟಡವಿದ್ದು ಕೋಟೆಯ ಸುತ್ತಲೂ ಕಂದಕವಿದೆ.

ಕೋಟೆಯೊಳಗಿನ ಸರಕಾರಿ ಗೋರಕ್ಷಣಾ ಕೇಂದ್ರವು ಖಿಲಾರಿ ಹಸುಗಳ ವರ್ಧನೆ ಮಾಡುತ್ತಿದ್ದು. ಇಲ್ಲಿ ಮೊಲದ ತಳಿಗಳ ವರ್ಧನೆಯ ಕೇಂದ್ರವು ಇದೆ. ದೇಶ-ವಿದೇಶಗಳ ಆಕರ್ಷಕ ಮೊಲಗಳನ್ನು ಇಲ್ಲಿ ಸಾಕಿದ್ದಾರೆ. ಈ ಕೇಂದ್ರದಿಂದಾಗಿ ಕೋಟೆಯೊಳಗೆ ಶುಚಿಯಾದ ಶಿಸ್ತಿನ ವ್ಯವಸ್ಥೆಯಾಗಿದೆ.

ಬಂಕಾಪುರದ ಸುಂಕದಕೇರಿಯಲ್ಲಿರುವ ಸಿದ್ದೇಶ್ವರ ದೇವಾಲಯವು ಚಾಲುಕ್ಯ ಶೈಲಿಯಲ್ಲಿ ನಿರ್ಮಿತವಾಗಿರುವ ಕಟ್ಟಡವಾಗಿದೆ. ಇದರಲ್ಲಿ ಗರ್ಭಗೃಹ ಅರ್ಧಮಂಟಪ ಹಾಗೂ ವಿಶಾಲವಾದ ನವರಂಗಗಳಿವೆ. ಗರ್ಭಗೃಹದ ದ್ವಾರದಲ್ಲಿ ಪಂಚಶಾಕೆ ಅಲಂಕಾರವಿದ್ದು ಅರ್ಧಮಂಟಪದ ಬಾಗಿಲ ಎರಡು ಪಕ್ಕದಲ್ಲಿ ಜಾಲಂದ್ರಗಳಿವೆ. ಗರ್ಭಗೃಹದ ಮೇಲ್ಬಾಗದಲ್ಲಿ ಕದಂಬ ನಾಗರ ಶಿಖರವಿದೆ. ಅರ್ಧಮಂಟಪದ ಲಲಾಟದ ಮೇಲೆ ಬ್ರಹ್ಮ, ಶಿವ, ವಿಷ್ಣು ಹಾಗೂ ಲಲಾಟದಲ್ಲಿ ಗಜಲಕ್ಷ್ಮಿಯ ಶಿಲ್ಪಗಳಿವೆ. ನವರಂಗದಲ್ಲಿ ಸಪ್ತಮಾತೃಕೆಯರ ಜೋಡು ಶಿಲ್ಪದಲ್ಲಿ ಮೇಲ್ಬಾಗದಲ್ಲಿ ತೋರಣಗಳಿವೆ. ಇಲ್ಲಿ ಇರುವ ಇತರೆ ಶಿಲ್ಪಗಳೆಂದರೆ ಗಣೇಶ, ವೃಷಭಾರೂಢ ಶಿವ ಹಾಗೂ

ಭಗ್ನವಾದ ಮಹಿಷಮರ್ಧಿನಿಗಳು. ದೇವಾಲಯದ ಮುಂದೆ ಪತ್ರಿವನವಿದೆ. ೧೯೭೫ ರಲ್ಲಿ ಖಾಸಗಿಮನೆಯ ಪಾಯಹಾಕುವಾಗ ಸುಮಾರು ೪ ಅಡಿ ಎತ್ತರದ ಪಾರ್ಶನಾಥ ಹಾಗೂ ಚವ್ವೀಸ ತಿರ್ಥಂಕರನ ಶಿಲ್ಪಗಳು ದೊರೆತಿವೆ. ಇವುಗಳ ಕಾಲವನ್ನು ಡಾ. ಸುಂದರವರು ಕ್ರಿ.ಶ. ೧೧-೧೨ನೇ ಶತಮಾನವೆಂದು ಗುರುತಿಸುತ್ತಾರೆ. ಈ ಮೂರ್ತಿಗಳ ಪಾದಪೀಠದ ಮೇಲಿರುವ ಶಾಸನದಿಂದ ಇಲ್ಲಿ ನಿಟ್ಟಿಸಿಂಗಿ ಬಸದಿ ಇತ್ತೆಂಬ ಅಂಶ ಗೊತ್ತಾಗುತ್ತದೆ. ಈ ಶಾಸನ ಜಂಜಿಯ ಚಾಮಯನ ಮಗ ಲಖಯನು ನಿಟ್ಟಿಸಿಂಗಿಯ ಬಸಿದಿಯ ಮಾಡಿದ ಚವ್ವೀಸ ತಿರ್ಥಂಕರ ದೇವರು ಎಂದು ಹೇಳುವುದರೊಂದಿಗೆ ಬಂಕಾಪುರವು ಪ್ರಾಚೀನ ಕಾಲದಲ್ಲಿ ಜೈನಕೇಂದ್ರವು ಆಗಿತ್ತೆಂಬ ಅಂಶವನ್ನು ಪುಷ್ಟಿಕರಿಸುತ್ತದೆ. ಈ ಶಿಲ್ಪದಲ್ಲಿ ನಡುವೆ ವೃಷಭನಾಥನಿದ್ದು ಸುತ್ತಲೂ ಉಳಿದ ೨೩ ತಿರ್ಥಂಕರರ ಕಿರುಕೆತ್ತನೆಯಿದೆ. ಬಸದಿ ಹಾಳಾಗಿದ್ದರೂ ಈ ಶಿಲ್ಪಗಳು ಉಳಿದು ಬಂದಿವೆ.

ಬಂಕಾಪುರದಲ್ಲಿರುವ ಇತರೆ ದೇವಾಲಯಗಳೆಂದರೆ ಮೈಲಾರದೇವರು, ಯಲ್ಲಮ್ಮ, ವಿಠ್ಠಲ, ವೀರಭದ್ರ, ಬಸವಣ್ಣ, ಹನುಮಂತ, ಬಂಡಿಗಣೇಶ, ದ್ಯಾಮವ್ವ, ದುರ್ಗವ್ವ, ಚಾಮುಂಡೇಶ್ವರಿ, ಬ್ರಾಹ್ಮಣರ ಬೀದಿಯಲ್ಲಿ ವೀರೂಪಾಕ್ಷ, ನಗರೇಶ್ವರ. ಮಾತಂಗೆವ್ವ, ಮಾಯವ್ವ ಮುಂತಾದವುಗಳು. ಪ್ರತಿಯೊಂದು ಬೀದಿಯಲ್ಲು ಹನುಮಂತನ ಗುಡಿಗಳು ಇವೆ. ದುರ್ಗಮ್ಮನ ಜಾತ್ರೆ ದೊಡ್ಡ ಪ್ರಮಾಣದಲ್ಲಿ ೫ ದಿನಗಳ ಕಾಲ ಬನದ ಹುಣ್ಣಿಮೆಯವೇಳೆಗೆ ನಡೆಯುತ್ತದೆ. ಯಲ್ಲಮ್ಮನ ಜಾತ್ರೆಯು ಈ ಊರಿನಲ್ಲಿ ಜನಪ್ರಿಯವಾಗಿ ಜರುಗುತ್ತದೆ. ಊರಿನಲ್ಲಿ ನಿರ್ಮಿತವಾಗಿರುವ ನಗರೇಶ್ವರ ದೇವಾಲಯದಲ್ಲಿ ಚಾಲುಕ್ಯ ಶೈಲಿಯ ಮಹಿಷ ಮರ್ಧಿನಿ ಹಾಗೂ ಗಣಪತಿಯ ಶಿಲ್ಪಗಳಿವೆ. ಇದರ ಸಮೀಪವೇ ಇರುವ ವೀರೂಪಾಕ್ಷ ದೇವಾಲಯದ ಹೊರಗೆ ಬಸವ ಇರುವ ಉಮಾಮಹೇಶ್ವರ ಪೀಠವಿದೆ. ದೇವಾಲಯದ ಹೊರಗೋಡೆಯಲ್ಲಿ ಗಣಪತಿಯ ಭಗ್ನ ಉಬ್ಬು ಶಿಲ್ಪವಿದೆ. ಈ ದೇವಾಲಯದ ಮುಖ್ಯದ್ವಾರದ ದ್ವಾರ ಬಂಧವು ಚಾಲುಕ್ಯ ಲಕ್ಷಣಗಳನ್ನು ವ್ಯಕ್ತಪಡಿಸುತ್ತದೆ ಹಾಗೂ ಗರ್ಭಗೃಹದ ಲಲಾಟದಲ್ಲಿ ಸರಸ್ವತಿಯ ಶಿಲ್ಪವಿದ್ದು ಒಳಗಡೆ ಶಿವಲಿಂಗವಿರುವದು ಕುತೂಹಲಕಾರಿಯಾಗಿದೆ. ಮೂಲಕಟ್ಟಡದ ಪಕ್ಕದಲ್ಲಿ ಪಾರ್ವತಿಯ ಚಿಕ್ಕ ಗುಡಿಯಿದೆ. ಈ ದೇವಾಲಯದ ಮೂಲ ವಿಗ್ರಹವು ವಿಜಯನಗರ ಶೈಲಿಯ ದ್ವಿಭಾಹು ಮೂರ್ತಿಯಾಗಿದ್ದು, ಪದ್ಮ ಹಾಗೂ ಅಭಯಹಸ್ತಗಳನ್ನು ಹೊಂದಿದೆ. ಗರ್ಭಗೃಹದ ಲಲಾಟದಲ್ಲಿ ಗಣೇಶನ ಶಿಲ್ಪವಿದೆ. ಮುಂಭಾಗದಲ್ಲಿ ವಿಶಾಲವಾದ ತೆರೆದ ಮಂಟಪವಿದೆ. ಕೆಂಡದಮಠ. ಹಾಗೂ ಅರಳೆಲೆ ಹಿರೇಮಠವೆಂಬ ವೀರಶೈವ ಮಠಗಳಿವೆ. ಹಾಗೂ ರುದ್ರಮುನಿ ಶಿವಾಚಾರ್ಯರ ಸ್ವಾಮಿಗಳ ಗದ್ದುಗೆಯಿದೆ.

ಈ ಊರಿನಲ್ಲಿರುವ ಪಂಚಮಲಕಪ್ಪನ ಬಾವಿಯು ಗಮನ ಸೆಳೆಯುತ್ತದೆ. ಇದರ ರಚನೆ ಆಕರ್ಷಕವಾಗಿದೆ. ಇದು ದೊಡ್ಡ ಈಜುಕೊಳವನ್ನು ಹೊಂದಿದ ಒಂದು ಅತ್ಯಂತ ಆಕರ್ಷಕ

ರಚನೆ. ಇದರ ವಿನ್ಯಾಸ ವಿಶಿಷ್ಟವಾಗಿದ್ದು ಇಲ್ಲಿ ನಾಗಬಂಧದ ಅಲಂಕರಣವಿರುವ ಛಾವಣಿ, ಗಣಪತಿ ಹಾಗೂ ಲಿಂಗವಿರುವ ಗುಡಿ ಮುಂತಾದವು ಇದೆ. ಇದು ಒಂದು ಪ್ರೇಕ್ಷಣೀಯ ಪ್ರವಾಸಿ ಆಕರ್ಷಣೆಯಾಗಿದೆ.

ಊರಿನಲ್ಲಿ ಹಲವು ಮಸೀದಿಗಳಿದ್ದು ಕೋಟೆಯೊಳಗಿರುವ ಮಸೀದಿಯು ಪ್ರಾಚೀನವಾದುದು. ಇದಲ್ಲದೆ ಅಲಿ ಆದಿಲಷಾ ಕಟ್ಟಿಸಿದ ಜುಮ್ಮಾಮಸೀದಿ ಹಾಗೂ ಸರ್ಜಾ ಮಸೀದಿ, ಕಾಲಿ ಮಸೀದಿ, ಗುಡ್ಡದಮೇಲಿನ ಜಬ್ಬಲಮಸೀದಿ ಹಾಗೂ ಇನ್ನಿತರೆ ಹತ್ತು ಕಿರಿಯ ಮಸೀದಿಗಳಿವೆ. ಊರಲ್ಲಿ ೨೦ಕ್ಕೂ ಹೆಚ್ಚು ದರ್ಗಾಗಳಿವೆ. ಅವುಗಳಲ್ಲಿ ಅಲಾದಿನ ಷಾ ಖಾದ್ರಿನೂರಲ್ಲಾ ಷಾ ಖಾದ್ರಿಷಾಬಾನ, ರೋಕರಷಾವಲಿ, ಮೆಹಬೂಬಷಾವಲಿ, ಜಲಾಲ್‌ಬುಖಾರಿ ಹಾಗೂ ಪೈಗಂಬರ ಆಸಾರ ಷರೀಪ ದರ್ಗಾಗಳು ಮುಖ್ಯವಾದವುಗಳು.

**ರಾಷ್ಟ್ರಕೂಟರು:** "ಕರ್ನಾಟಕ ಚರಿತ್ರೆಯಲ್ಲಿ ರಾಷ್ಟ್ರಕೂಟರ ಸಾಮ್ರಾಜ್ಯ ಮಹತ್ವವಾದುದು. ಅಮೋಘವರ್ಷ ನೃಪತುಂಗ ಈ ಮನೆತನದ ಅಮೋಘ ವ್ಯಕ್ತಿತ್ವದ ಚಕ್ರವರ್ತಿ. ದಕ್ಷಿಣೋತ್ತರವಾಗಿ ಅಧಿಕಾರ ಚಾಚಿದ ಸಾಮ್ರಜ್ಯವಿದು. 'ಕಾವೇರಿಯಿಂದಮಾ ಗೋದಾವರಿವರಂ' ಹಬ್ಬಿದ ಕನ್ನಡನಾಡು, ಹಿಮವತ ಪರ್ವತದ ಗಂಗಾಜಲ ಪಾನಮಾಡಿದ ಗಜತುರಗಬಲ, ರಾಜ್ಯದ ಕ್ಷಾಮ ಪರಿಹಾರಕ್ಕೆ ನಾಡದೇವಿ ಮಹಾಲಕ್ಷ್ಮಿ ಕೈಬೆರಳನ್ನು ಕತ್ತರಿಸಿಕೊಟ್ಟ ದೊರೆ, ಕನ್ನಡಿಗರ ಕೀರ್ತಿ ವಾರ್ತೆಗೆ ಮನಸೋತು ಬಂದ ವಿದೇಶಿವರ್ಗ, ಒಟ್ಟಿನಲ್ಲಿ ರಾಷ್ಟ್ರಕೂಟರ ಆಡಳಿತ ಕನ್ನಡನಾಡಿನ ವೈಭವದ ಕಾಲ.

ಆಡಳಿತ ದೃಷ್ಟಿಯಿಂದ ರಾಷ್ಟ್ರಕೂಟರು ತಮ್ಮ ವಿಶಾಲ ಸಾಮ್ರಜ್ಯವನ್ನು ಹದಿನಾರು ಮಂಡಲ ಗಳನ್ನಾಗಿ ವಿಂಗಡಿಸಿಕೊಂಡಿದ್ದರೆಂದು ಸಂಜಾನ ತಾಮ್ರಪಟ ಹೇಳುತ್ತದೆ. ಬನವಾಸಿ ಪನ್ನಿರ್ಚಾಸಿರ ಇದರಲ್ಲೊಂದು ಭಾಗ. ಬನವಾಸಿಯನ್ನೊಳಗೊಂಡು ಮೂವತ್ತು ಸಾವಿರಹಳ್ಳಿಗಳ ಅಧಿಪತ್ಯ ರಾಷ್ಟ್ರಕೂಟರ ಸಾಮಂತ ಚಲ್ಲಕೇತನರದಾಗಿತ್ತು. ಇವರು ಅಧಿಪತ್ಯದಿಂದ ಸಾಮಂತರೆನಿಸಿದ್ದರೂ ಅಮೋಘವರ್ಷ ನೃಪತುಂಗ, ಎರಡನೆ ಕೃಷ್ಣರೊಂದಿಗೆ ಆತ್ಮೀಯ ಸಂಬಂಧ ಹೊಂದಿದವರು.

ಶ್ರವಣಬೆಳಗೊಳ(೯೨೫) ಶಾಸನದ ಪ್ರಕಾರ ಬಂಕಾಪುರ ನಿತ್ಯವರ್ಷ ನಾಲ್ಕನೆಯ ಗೋವಿಂದನ ಆಳ್ವಿಕೆಗೆ ಒಳಪಟ್ಟಿತ್ತು. ರಾಷ್ಟ್ರಕೂಟ ಇಂದ್ರವಲ್ಲಭ ಅಥವಾ ನಾಲ್ಕನೆಯ ಇಂದ್ರ ಇದನ್ನು ಕೆಲಕಾಲ ತನ್ನ ರಾಜಧಾನಿಯನ್ನಾಗಿಸಿಕೊಂಡಿದ್ದ. ಈ ಇಂದ್ರನನ್ನು ಶ್ರೀ ರಾಜತ್ ಕೃಷ್ಣರಾಜೇಂದ್ರನ ಮಗನ ಮಗಂ ಸತ್ಯ ಶೌಚದ್ವಯಾಳಂಕಾರಂ ಶ್ರೀ ಗಂಗಗಾಂಗೇನ ಮಗಳ ಮಗಂ ವೀರಲಕ್ಷ್ಮೀ ವಿಳಾಸಾಗರಂ ಶ್ರೀ ರಾಜ ಚೂಡಾಮಣಿಯಳಿಯಂ' ಎಂದು ಶ್ರವಣಬೆಳಗೊಳ(೯೮೨) ಶಾಸನ ಕರೆದಿದೆ. ರಾಷ್ಟ್ರಕೂಟ ಪಟ್ಟಕ್ಕಾಗಿ ಬಂಕಾಪುರದಲ್ಲಿ ಇವನಿಗೆ ಕ್ರಮಬದ್ಧವಾದ ಪಟ್ಟಾಭಿಷೇಕವಾಯಿತು. 'ಶ್ರೀ ಮದಿನ್ದ್ರರಾಜ ಪಟ್ಟಬನ್ಧೋತ್ಸವದ ಬಗೆಗೆ ಶಾಸನಗಳು ತಿಳಿಸಿವೆ. ಇಮ್ಮಡಿ ಮಾರಸಿಂಹ ಈ ಇಂದ್ರನನ್ನು ರಾಷ್ಟ್ರಕೂಟ ಸಿಂಹಾಸನದ ಮೇಲೆ ಕುಳ್ಳಿರಿಸಲು ಸರ್ವ ಪ್ರಯತ್ನ ಕೈಕೊಂಡ.

ಆದರೆ ಪರಿಸ್ಥಿತಿಯೇ ಬೇರೆಯಾಗಿತ್ತು. ಮಾರಸಿಂಹ ೯೭೫ ರಲ್ಲಿ ಬಂಕಾಪುರದಲ್ಲಿ ಮರಣ ಹೊಂದಿದರೆ, ನಾಲ್ಕನೆಯ ಇಂದ್ರ ೯೮೨ ರಲ್ಲಿ ಮರಣ ಹೊಂದಿದ ವಿಷಯ ಶ್ರವಣಬೆಳಗೊಳ ಶಾಸನದಲ್ಲಿದೆ. ಇದರಿಂದ ರಾಜ್ಯಭಾರದ ಪ್ರಯತ್ನ ಮಧ್ಯದಲ್ಲಿಯೆ ನಿಂತುಹೋಯಿತು. ಇಂದ್ರನ ಮರಣ ಪ್ರಸ್ತಾಪ ಮಾಡಿದ ಈ ಶಾಸನದಲ್ಲಿ ಮರಣ ಸ್ಥಳದ ಪ್ರಸ್ತಾಪವಿಲ್ಲ. ಹೀಗಾಗಿ ಇದು ಇತ್ತೀಚಿಗೆ ಸಂದೇಹಕ್ಕೆ ಅವಕಾಶ ಮಾಡಿಕೊಟ್ಟಿದೆ.

ಡಾ ಪಿ.ಬಿ. ದೇಸಾಯಿಯವರು 'ಬಂಕಾಪುರವು ೧೨ನೆಯ ಶತಮಾನದಲ್ಲಿಯೂ ಇಂದ್ರವಲ್ಲಭನ ರಾಜಧಾನಿಯೆಂದು ಪ್ರಸಿದ್ಧವಾಗಿದ್ದುದರಿಂದ ಇಂದ್ರನು ತನ್ನ ಕೊನೆಗಾಲದವರೆಗೂ ಅಲ್ಲಿಯೇ ಇದ್ದಿರಬೇಕೆಂದು ಸೂಚಿಸಿದ್ದಾರೆ. ಭೋಗಾನೂರಿನ (೧೨೦೦) ಶಾಸನದಲ್ಲಿ 'ಶ್ರೀ ಮದಿಂದ್ರವಲ್ಲಭ ರಾಜಧಾನಿ..... ಬಂಕಾಪುರ'ವೆಂಬ ಹೇಳಿಕೆ ಇದೆ. ಎಪಿಗ್ರಾಫಿಯಾ ಕರ್ನಾಟಕದ ದ್ವಿತೀಯ ಆವೃತ್ತಿಯ ಮುನ್ನುಡಿಯಲ್ಲಿ 'ಅವನು ಎಲ್ಲಿ ತೀರಿಕೊಂಡನೆಂದು ತಿಳಿಸಿಲ್ಲ. ಈ ಶಾಸನಗಂಬದ ಪಶ್ಚಿಮ ಮುಖದ ಮೇಲಿರುವ ಕೊನೆಯ ಭಾಗವು ಹೇಮಾವತಿಯಲ್ಲಿರುವ ಒಂದು ಕಲ್ಲಿನ ಮೇಲೂ ಇರುವುದು ಕುತೂಹಲಕಾರಿಯಾಗಿದೆ' ಎಂದು ತಿಳಿಸುತ್ತಾ, ಇದು ಇಂದ್ರನು ಹೇಮಾವತಿಯಲ್ಲಿ ತೀರಿಕೊಂಡಿರಬೇಕೆಂಬ ಊಹೆಗೆ ಕಾರಣ, ಆದರೆ ಇದು ಸಹೇತಕವಾಗಿಲ್ಲ, ಎಂದು ಹೇಳಿದೆ. ಒಟ್ಟಿನಲ್ಲಿ ನಾಲ್ಕನೆಯ ಇಂದ್ರ ಬಂಕಾಪುರದಲ್ಲಿಯೇ ತನ್ನ ಕೊನೆಯ ದಿನಗಳನ್ನು ಕಳೆದಿರುವ ಸಾಧ್ಯತೆ ಇದೆ.

ಒಟ್ಟಿನಲ್ಲಿ ರಾಷ್ಟ್ರಕೂಟ ದೊರೆಗಳ ಅಧಿಕಾರಕ್ಕೆ ಒಳಪಟ್ಟ ಈ ಪ್ರದೇಶ ಅವರ ಸಾಮಂತ ಚಲ್ಲಕೇತನರ ಕೇಂದ್ರಸ್ಥಳವಾಗಿ ಉತ್ತರಪುರಾಣದಂತಹ ಮಹತ್ವದ ಕೃತಿಯನ್ನು ಕೊಡುವಲ್ಲಿ ಯಶಸ್ವಿಯಾಗಿದೆ."

**ಸಾಮಂತ ಚೆಲ್ಲಕೇತನರು:** ರಾಷ್ಟ್ರಕೂಟರ ಸಾಮಂತರಲ್ಲಿ ನಿಷ್ಟಾಪೂರ್ಣ ಸೇವೆಸಲ್ಲಿಸಿದ ರಾಜ ಮನೆತನಗಳಲ್ಲಿ ಚೆಲ್ಲಕೇತನರದು ಒಂದು. ಬಂಕಾಪುರವನ್ನು ತಮ್ಮ ಕೇಂದ್ರಸ್ಥಳವನ್ನಾಗಿಸಿಕೊಂಡ ಚೆಲ್ಲಕೇತನರು ಉತ್ತರಪುರಾಣದಂತಹ ಮಹೋನ್ನತ ಕೃತಿ ರಚನೆಯಾಗುವುದುಕ್ಕೆ ಸಹಕರಿಸಿದವರು. ಈ ಪುರಾಣ ಕೊಣ್ಣೂರ ಶಾಸನಗಳು ಈ ಮನೆತನವನ್ನು 'ಪದ್ಮಾಲಯ ಮುಕುಲಕುಲ'ವೆಂದು ಕರೆದಿವೆ.

ಚಲ್ಲಕೇತನ ಮನೆತನದ ಪ್ರಥಮ ಪ್ರಸ್ಥಾಪ ಬರುವುದು ಕೊಣ್ಣೂರು (೮೬೦) ಶಾಸನದಿಂದ 'ಎರಕೋರಿ' ಈ ಮನೆತನದ ಮೂಲಪುರುಷ. ಕೊಣ್ಣೂರು ಶಾಸನ ಈತನನ್ನು 'ವಿಕ್ರಮವಿಲಾಸ ನಿಲಯೋ ಮುಕುಲಕುಲೇ ಪೂರ್ವಬಂಧುಭಿರಮ್ಯನಃ ಎರಕೋರಿ ನಾಮಧೇಯಃ ಪ್ರವಿಕಾಸಿತೋ ಭೂತ್ರಸೂನ ಸಮಃ ಎಂದು ಪರಿಚಯಿಸಿದೆ'. ಈತನ ಮಗ ದೋರನೆಂಬವ ಕೊಳನೂರಿನ ಮೇಲ್ವಿಚಾರಣೆ ಕೈಕೊಂಡಿದ್ದನು. ಇವನು ರಾಷ್ಟ್ರಕೂಟರ ಸೇನಾನಾಯಕನೂ ಆಗಿದ್ದ. ಧೋರನ

ಪತ್ನಿ ವಿಜಯಾಂಬೆ. ಈ ದಂಪತಿಗಳ ಸುಪುತ್ರ ಬಂಕೇಯ. ಇವನನ್ನು ಶಾಸನ, ಕಾವ್ಯಗಳು ಬಂಕೇಯ, ಬಂಕೇಯರಸ, ಬಂಕರಾಜ ಎಂದು ಕರೆದಿವೆ.

ಮಹಾಶೂರ, ಧೈರ್ಯಶಾಲಿ, ಯುದ್ಧೋತ್ಸಾಹದಲ್ಲಿ ಅಪ್ರತಿಮ ಆಕಾಂಕ್ಷೆ ಹೊಂದಿದ ಬಂಕೇಯ ತಂದೆಯಂತೆ ರಾಷ್ಟ್ರಕೂಟ ದಂಡನಾಯಕನೆನಿಸಿದ್ದ. ದೊರೆ ನೃಪತುಂಗ ಚಕ್ರವರ್ತಿಯ ಸೇನಾಪತಿಯಾಗಿದ್ದ, ತನ್ನ ಹೋರಾಟಪರ ಮನೋಭಾವ, ಅಸಾಧಾರಣ ಸಾಹಸದಿಂದ ಬನವಾಸಿ ಮೂವತ್ತು ಸಾವಿರಹಳ್ಳಿಗಳ ಮೇಲ್ವಿಚಾರಣೆ ಕೈಕೊಂಡಿದ್ದ. ರಾಷ್ಟ್ರಕೂಟದೊರೆಗಳಿಗೆ ಬಲಗೈಯೆನಿಸಿದ್ದ.

ಅಮೋಘವರ್ಷ ನೃಪತುಂಗ ಚಿಕ್ಕವಯಸ್ಸಿನಲ್ಲಿಯೇ ಪಟ್ಟಕ್ಕೆ ಬಂದುದರಿಂದ ಸುತ್ತಲಿನ ಅನೇಕ ಸಮಸ್ಯೆಗಳನ್ನು ಏಕಕಾಲದಲ್ಲಿಯೇ ಎದುರಿಸುವಂತಾಯಿತು. ರಾಷ್ಟ್ರಕೂಟರ ಸಾಮಂತರೇ ಆಗಿದ್ದ ಗಂಗ ಎರಡನೆಯ ಶಿವಮಾರ, ರಾಚಮಲ್ಲ ವೆಂಗೆಯ ಚಾಲುಕ್ಯ ಗುಣಗ ವಿಜಯಾದಿತ್ಯರು ಸ್ವತಂತ್ರರಾಗಲು ಹವಣಿಸುತ್ತಿದ್ದರು. ಇಂತಹ ಸಂದಿಗ್ಧ ಸಂದರ್ಭದಲ್ಲಿ ಬಂಕೇಯನ ಅನುಪಮ ಸಹಕಾರ ಅಮೋಘವರ್ಷನಿಗಿತ್ತು. ನೃಪತುಂಗನಿಗೆ ಕೃಷ್ಣನೆಂಬ ಮಗನೊಬ್ಬನಿದ್ದ. ಬಂಕೇಯನ ವೀರನಿಷ್ಠೆಯನ್ನು ನಂಬಿದ ಅಮೋಘವರ್ಷ ಆತನಲ್ಲಿ ಪರಮವಿಶ್ವಾಸವನ್ನಿರಿಸಿಕೊಂಡಿದ್ದ. ರಾಷ್ಟ್ರಕೂಟರಿಗೆ ಮುಳ್ಳುಕಂಟಕವಾಗಿದ್ದ ಗಂಗವಂಶವನ್ನು ಸದೆಬಡೆಯಲು ಅವರ ಮೇಲೆ ಬಂಕೇಯ ದಂಡೆತ್ತಿ ಹೋದುದನ್ನು ಕೋಣ್ಣೂರ (೮೬೦) ಶಾಸನ ತಿಳಿಸುತ್ತದೆ. ಈ ಹೋರಾಟದಲ್ಲಿ ನೀತಿ ಮಾರ್ಗ, ರಣವಿಕ್ರಮರನ್ನು ಕೊಂದು ಅಮೋಘವರ್ಷನ ಸಮಸ್ಯೆಯನ್ನು ದೂರಗೊಳಿಸಿದ್ದ. ಈ ಹೋರಾಟ ಕ್ರಿಶ ೮೪೫ರಿಂದ೮೬೦ರ ಮಧ್ಯದಲ್ಲಿ ಜರುಗಿರಬೇಕೆಂದು ಶ್ರೀ ಪಂಚಮುಖಿಯವರು ಹೇಳುತ್ತಾರೆ. ಈ ಹೋರಾಟ ಅಮೋಘವರ್ಷ ಮತ್ತು ಬಂಕೇಯರನ್ನು ಇನ್ನೂ ಆತ್ಮೀಯರನ್ನಾಗಿಸಿರಬೇಕು.

ಏಕೆಂದರೆ ಬಂಕೇಯ ಕೇದಾಳದುರ್ಗಕ್ಕೆ ಮುತ್ತಿಗೆ ಹಾಕಿ ಗಂಗರಾಜನನ್ನು ತಲವನಪುರದಿಂದ ಓಡಿಸಿ ಗಂಗರಾಜ್ಯವನು ಸ್ವಾಧೀನಪಡಿಸಿಕೊಂಡನು. ಇದನ್ನು 'ತತ್ಕೇದಾಳಾಭಿದಾನಂ ದುರ್ಗ್ಗಂ ವಪ್ರಾರ್ಗ್ಗಳಾದಿ ದುರ್ಲ್ಲಂಘ್ಯಂ ಮೌಳಬಲಾಧಿಷ್ಠಿ ತಮಪಿ ಸದಯಃ ಪ್ರೋಲ್ಲಂಘ್ಯ ಹೇಳಯಾ ಗ್ರಾಹಿ// ಜನಪದ ಮದಃ ಕೃತ್ವಾ ಹಸ್ತೆ...... // ಕಾವೇರಿಂ ಗುರುಪುರ ದುರ್ಗ್ಗಮತಮಾಮುಲ್ಲಂಘ್ಯ ಸಿಂಹಕ್ಕಮಾತ್...... ನಿರ್ದಹ್ಯಕಪದೇನ ಸಪ್ತಪದಕಾನ್ ವಿದ್ವಿಡ್ವನೋಚ್ಛೇದಿನಾಯೇನಾ ಕಂಪಿ ಜಗತ್ಕಂಪನ ಪಟೋರ್ವ್ಯ ರಾಜ್ಯಮಪೂರ್ಜಿತಮ್' ಎಂದು ತಿಳಿಸಿದೆ.

ಇದೇ ವೇಳೆಗೆ ಅಮೋಘವರ್ಷನ ಮಗ ಕೃಷ್ಣ, ಗುಜರಾತದ ಮಾಂಡಲಿಕ ಅರಸ ಕರ್ಕನ ಮಗ ದ್ರುವ ಅಮೋಘವರ್ಷನ ವಿರುದ್ಧ ಬಂಡೆದ್ದರು.

ಗಂಗರನ್ನು ಸದೆಬಡಿಯಲು ತೆರಳಿದ್ದ ಬಂಕೇಯ ತಾನು ಕೈಕೊಂಡ ಕಾರ್ಯವನ್ನು ಅರ್ಧಕ್ಕೆ ನಿಲ್ಲಿಸಿ ಮರಳಿ ಬರಬೇಕಾಯಿತು. ಇದನ್ನು ತತ್ರಾನ್ತರೇ ಮದಂತಿಕಮಂತರ್ಭೇದೇನ

ಜಾತ ಸಂಕ್ಷೋಭೇ ಪ್ರತ್ಯಾಗಂತವ್ಯ ಮಿತಿತ್ವಯೇತಿ ಮದ್ವಚನ ಮಾತೇಣ' ಎಂದು ತಿಳಿಸಿದೆ. ಕೊಣ್ಣೂರ ಶಾಸನ ಈ ಒಳಜಗಳ ಯಾವ ಸ್ವರೂಪದ್ದು ಎಂಬುದನ್ನು ತಿಳಿಸಿದ್ದರೆ ರಾಷ್ಟ್ರಕೂಟರ ರಾಜಕೀಯ ಇತಿಹಾಸ ಸ್ಪಷ್ಟವಾಗಿ ತಿಳಿಯುತ್ತಿತ್ತು.

ಇಂಥ ಸಂದರ್ಭದಲ್ಲಿ ವೀರಬಂಕೇಯನ ನಿಷ್ಠೆಯನ್ನು ಮೆಚ್ಚಿದ ಅಮೋಘವರ್ಷ 'ಮದಿಯೋ' ವಿತತಜ್ಯೋತಿರ್ನಿಶಿತೋ ಸಿರಿವಾಪರ:' ಅಂದರೆ ಝಳಝಳಿಸುವ ನನ್ನ ಬೇರೊಂದು ಖಡ್ಗ' ಎಂದು ಹೊಗಳಿದ್ದಾನೆ. ಬಂಕೇಯನ ಈ ನಿಷ್ಠಾಪರ ಮನೋಭಾವ ರಾಷ್ಟ್ರಕೂಟರ ಸಾಮ್ರಾಜ್ಯದ ಸೀಮೆಯನ್ನು ಹೆಚ್ಚಿಸಿತು. ಕ್ರಿ.ಶ.೮೬೦ರ ಕಾಲಕ್ಕಿದ್ದ ಬಂಕೇಯನ ಬನವಾಸಿ ಪನ್ನಿರ್ಚ್ಛಾಸಿರದ ಆಳ್ವಿಕೆ ಕ್ರಿಶ ೮೭೮ರ ವೇಳೆಗೆ 'ಬನವಾಸಿ ಪನ್ನಿರ್ಚ್ಛಾಸಿರ ಬೆಳ್ಗಲಿಮುನೂರುಮಾಮ್ ಕುಂದರ್ಗೆ ಎಪ್ಪತ್ತುಮಾಮ್ ಕುಂದೂರು ಐನೂರುಮಾಮ್' ಹೆಚ್ಚಿಸಿದ್ದು ಇದಕ್ಕೆ ಸಾಕ್ಷಿ. ಇಂಥ ಸಂಧರ್ಭದಲ್ಲಿ ಬಂಕೇಯನ ಕಾರ್ಯಸಾಧನೆಗೆ ಹೆಗಲುಕೊಟ್ಟ ಮಂತ್ರಿ ಮಹತ್ತರ ಗಣಪತಿ.

ಬಂಕೇಯನಂತಹ ಸಮರ್ಥ ಸೇನಾಪತಿಯ ನೆರವು ರಾಷ್ಟ್ರಕೂಟ ಮನೆತನದ ಏಳ್ಗೆಗೆ ಕಾರಣವಾಯಿತು. ಇಂತಹ ಸ್ವಾಮಿನಿಷ್ಠನ ಅಚಲ ವಿಶ್ವಾಸ ಉಳಿಸಿಕೊಳ್ಳಲು ನೃಪತುಂಗ ಆತನಿಗೆ ಏನಾದರು ಕಾಣಿಕೆ ಕೊಡಲು ಬಯಸಿದರೆ ಬಂಕೇಯ ಬೇಡಿದ್ದೇನು? 'ನಿಮ್ಮಿಂದ ಸನ್ಮಾನಿಸಿ ಕೊಳ್ಳುವದಕ್ಕಿಂತ ನಿಮ್ಮಭೃತ್ಯನಾಗಿ ಉಳಿಯುವದೇ ನನ್ನಾಸೆ, ತಾವು ನನಗಾಗಿ ಏನಾದರು ಮಾಡುವುದಿದ್ದರೆ ಕೊಣ್ಣೂರಿನ ಜೈನ ಬಸದಿಗೆ ನಿಮ್ಮ ಹೆಸರಿನಿಂದ ದಾನವೊಂದನ್ನು ಕೊಡಿ' ಎಂದು ಕೇಳಿದನಂತೆ. ನೃಪತುಂಗ ಆತನ ಬೇಡಿಕೆಯನ್ನೇ ಕೊಣ್ಣೂರು ಶಾಸನದಲ್ಲಿ ಬರೆಸಿ ಬಂಕೇಯನ ಇಷ್ಟಾರ್ಥದಂತೆ ಜೈನಬಸದಿಗೆ ದಾನಮಾಡಿರುವನು.' ರಾಷ್ಟ್ರಕೂಟರಿಗೆ ವೇಳೆವಾಳಿಯಾಗಿ ಮೆರೆದ ಬಂಕೇಯನ ಹೆಸರಿನಿಂದ ಒಂದು ಶಾಶ್ವತ ಕೆಲಸ ಮಾಡಿಸಲು ಆತನ ಮಗ ಲೋಕಾದಿತ್ಯ ವಿಚಾರಿಸಿದುದೇತತ್ಪಿತ್ರ ನಿಜನಾಮ ಕೃತ ಬಂಕಾಪುರ' ಸ್ಥಾಪನೆ.'

ಈ ಬಂಕೇಯನಿಗೆ ಕುಂದಟೆ ಮತ್ತು ಲೋಕಟೆ ಎಂಬಿಬ್ಬರು ಮಕ್ಕಳಿದ್ದರು. ಕುಂದಟೆ ತಂದೆಯ ಆಳ್ವಿಕೆಯ ಕಾಲದಲ್ಲಿ ನಿಡಗುಂದಗೆ ಹನ್ನೆರಡರ ಮೇಲ್ವಿಚಾರಕನಾಗಿದ್ದ. ಗುಡ್ಡದ ಚೆನ್ನಾಪುರದ ಶಾಸನದಲ್ಲಿ ಲೋಕಟೆಯ ಸೋದರನೊಬ್ಬ ಕುಂದುರು ಮೂವತ್ತರ ಆಳ್ವಿಕೆ ಕೈಕೊಂಡಂತೆ ವಿಷಯವಿದೆ. ಅಲ್ಲಿ ಆ ಸೋದರನ ಹೆಸರಲ್ಲಿ. ಹೀಗಿದ್ದಲ್ಲಿ ಈ ಲೋಕಟೆಯ ಸೋದರ ಕುಂದಟೆಯೆ ಆಗಿರಬೇಕು.

ಬಂಕೇಯನ ದ್ವಿತೀಯ ಪುತ್ರ ಲೋಕಟೆ ಅಥವಾ ಲೋಕಾದಿತ್ಯ. ಬನವಾಸಿ ಪನ್ನಿರ್ಚ್ಛಾಸಿರ ಈತನ ಆಳ್ವಿಕೆಯ ಪ್ರದೇಶವೆನಿಸಿತು. ಬಂಕಾಪುರ ಅದರ ಕೇಂದ್ರ ಸ್ಥಳವಾಗಿತ್ತು. ಈ ಕಾಲಕ್ಕೆ ನೃಪತುಂಗನ ಮಗ ಎರಡನೆಯ ಕೃಷ್ಣನ ಆಳ್ವಿಕೆ ಪ್ರಾರಂಭವಾಗಿತ್ತು. ಅಮೋಘವರ್ಷ ನೃಪತುಂಗರಷ್ಟೇ ಆತ್ಮೀಯತೆ ಕೃಷ್ಣ ಮತ್ತು ಲೋಕಾದಿತ್ಯರದು.

ಈ ಲೋಕಾದಿತ್ಯನ ಪರಾಕ್ರಮವನ್ನು ಮನಗಂಡ ಜೈನಗುರು ಗುಣಭದ್ರಾಚಾರ್ಯರು ಇವನನ್ನು 'ಪದ್ಮಾಲಯ ಮುಕುಲಕುಲ ಪ್ರವಿಕಾಸಕ ಸತ್ತ್ರತಾಪತತ. ಮಹಸಿ' ಎಂದು ಕೊಂಡಾಡಿರುವರು. ತನ್ನ ಅಧಿಕಾರ ವ್ಯಾಪ್ತಿಯಲ್ಲಿ ಜನಪ್ರಿಯತೆಗಳಿಸಿಕೊಂಡ ಲೋಕಟೆಯನ್ನು ಲೋಕಟ್ಟೆ, ಲೋಕಡೆ, ಲೋಕಾದಿತ್ಯ ಲೋಕಟೆಯರಸ ಎಂದು ವಿಭಿನ್ನ ರೀತಿಯಲ್ಲಿ ಕರೆದಿದೆ. ಈ ಬಂಕೇಯ ಕುಂದಟೆ, ಲೋಕಾದಿತ್ಯರ ಕಾರ್ಯಸಾಧನೆ ಗಮನಿಸಿದ ಶಾಸನ ಕಾವ್ಯಗಳು ಇವರನ್ನು ಚಲ್ಲಕೇತನ, ಚಲ್ಲಧ್ವಜ, ಚಲ್ಲಪತಾಕ ಎಂದು ಕರೆದಿವೆ. ಕೇತನ, ಧ್ವಜ, ಪತಾಕ ಈ ಮೂರು ಧ್ವಜ ಸೂಚಕ ಪದಗಳು. ಹೀಗಿದ್ದು ಈ ಮೂವರನ್ನು ಒಂದೇ ಪದದಿಂದ ಗುರುತಿಸಿ ಅವರ ಕಾರ್ಯ ಗೌರವ ಅರಿಯಬೇಕು.

ಬಂಕಾಪುರ ತಾಲೂಕಿನ ಕುಣಿಮೆಳಳ್ಳಿ(೮೯೫), ಹೊನ್ನತ್ತಿ(೮೯೬), ಹಲಸೂರು(೮೯೬), ಗುಡ್ಡದ ಚೆನ್ನಾಪುರ(೮೯೬), ಅಣಜಿ(೯೦೦), ಬ್ಯಾಡಗಿ(೯೦೨), ಸಿಡೇನೂರು(೯೦೪), ಶಾಸನಗಳು ಲೋಕಟೆಯ ಬನವಾಸಿ ಪನ್ನಿರ್ಚ್ಛಾಸಿರದ ಆಳ್ವಿಕೆಯನ್ನು ಸೂಚಿಸಿದರೆ, ಬ್ಯಾಡಗಿ(೯೦೨) ಶಾಸನ ಈತನ ಆಳ್ವಿಕೆಗೆ ೩೨, ೧೦೨ ಹಳ್ಳಿಗಳು ಸೇರ್ಪಡೆಯಾದುದನ್ನು ಸೂಚಿಸಿದೆ. ಅವುಗಳಲ್ಲಿ ಬನವಾಸಿ ೧೨೦೦೦, ಪಲಸಿಗೆ ೧೨೦೦೦, ಮಾನ್ಯಖೇಟ ೬೦೦೦, ಕೊಳನೂರು ೩೦, ಇಷ್ಟು ಅತ್ಯಲ್ಪಕಾಲದಲ್ಲಿ ಲೋಕಾದಿತ್ಯ ಇಂಥ ತುಂಬು ಜವಾಬ್ದಾರಿ ನಿರ್ವಹಿಸಬೇಕಾದರೆ ಇದು ಅವನ ಮಹತ್ವಾಕಾಂಕ್ಷಿ ಭಾವನೆಯನ್ನು ಸೂಚಿಸಿದೆ. ಲೋಕಟೆ ಪೊಂಬುಳ್ಚದ ಮೇಲೆ ದಾಳಿಮಾಡಿ ಅದನ್ನು ವಶಪಡಿಸಿಕೊಂಡ ಸಂಗತಿ ಸೀಡೆನೂರು ಶಾಸನದಲ್ಲಿ ಉಲ್ಲೇಖವಾಗಿದೆ ಸ್ವಾಮಿ ನಿಷ್ಠನಾದ ಲೋಕಟೆ ಬಂದಳಿಕೆಯಲ್ಲಿ ಬಸದಿಯೊಂದನ್ನು ಕಟ್ಟಿಸಿಕೊಟ್ಟುದು ಆತನ ಧಾರ್ಮಿಕ ಮನೋಭಾವನೆಯನ್ನು ಸೂಚಿಸುತ್ತದೆ.

ಲೋಕಾದಿತ್ಯನಿಗೆ ಮೂವರು ಜನ ಗಂಡುಮಕ್ಕಳಿದ್ದರು. ಅವರಲ್ಲಿ ಪ್ರಥಮ ಪುತ್ರ ಮೊದಲನೆಯ ಕಲಿವಿಟ್ಟ ಪುನ್ನವಂತಿ ಹನ್ನೆರಡರ ಜೊತೆಗೆ ಬನವಾಸಿ ಪ್ರದೇಶದ ಮೇಲ್ವಿಚಾರಣೆ ಮಾಡುತ್ತಿದ್ದ. ಇನ್ನಿಬ್ಬರು ಮಕ್ಕಳಾದ ಎರಡನೆಯ ಧೋರ ಮತ್ತು ಎರಡನೆಯ ಬಂಕೇಯರು ಕಾಲಾನುಕ್ರಮದಲ್ಲಿ ಬನವಾಸಿಯ ರಾಜ್ಯಭಾರ ನಿರ್ವಹಿಸಿರುವರು. ರಾಷ್ಟ್ರಕೂಟ ಮೂರನೆಯ ಇಂದ್ರ ಮತ್ತು ನಿತ್ಯವರ್ಷರ ಕಾಲದಲ್ಲಿ ಇವರ ಆಳ್ವಿಕೆ ಇತ್ತು.

ಎರಡನೆಯ ಬಂಕೇಯನ ಮಗ ಎರಡನೆಯ ಕಲಿವಿಟ ಚಲ್ಲಕೇತನ ಮನೆತನದ ಕೊನೆಯ ಸಾಮಂತ ದೊರೆ. ಈ ತಂದೆ ಮಕ್ಕಳ ಕಾಲಕ್ಕೆ ಚಲ್ಲಕೇತನ ಮನೆತನಕ್ಕೆ 'ಪಂಚಮಹಾಶಬ್ದ' ಮನ್ನಣೆ ದೊರೆತಿದೆ. ಹಾನಗಲ್ಲು ತಾಲೂಕಿನ ಕ್ಯಾಸನೂರು ಶಾಸನ ಇವರನ್ನು 'ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತ ಚಲ್ಲಕೇತನ ವಂಶೋದ್ಧವರ್' ಎಂದು ಕರೆದಿದೆ. ಇಲ್ಲಿಯವರೆಗೆ ಚಕ್ರವರ್ತಿಗಳಿಗೆ ಇರುತ್ತಿದ್ದ 'ಪಂಚಮಹಾಶಬ್ದದ' ಗೌರವ ಒಂದು ಸಾಮಂತ ಮನೆತನಕ್ಕೆ ದೊರೆತಿರುವುದು ಗಮನಿಸಬೇಕಾದ ಸಂಗತಿ.

ಚಲ್ಲಕೇತನ ಮನೆತನದಲ್ಲಿ ಧೋರ, ಕಲಿವಿಟ, ಬಂಕೇಯರ ಹೆಸರುಗಳು ಮತ್ತೆ ಮತ್ತೆ ಕೇಳಿಬರುತ್ತವೆ. ಲೋಕಟೆಯ ಅಜ್ಜ ಧೋರ, ಲೋಕಟೆಯ ಮೊಮ್ಮಗನೂ ಧೋರ. ಈ ಹೆಸರಿನ ಪುನರುಕ್ತಿ ಒಂದು ಮಾತನ್ನು ಸ್ಪಷ್ಟಪಡಿಸಬಹುದು. ಹಿಂದುಗಳಲ್ಲಿ ಅಜ್ಜನ ಹೆಸರನ್ನು ಮೊಮ್ಮಕ್ಕಳಿಗಿಡುವ ಪರಿಪಾಠವನ್ನು ಚಲ್ಲಕೇತನ ಮನೆತನ ಉಳಿಸಿಕೊಂಡಿದೆ. ಸಾಮಾನ್ಯವಾಗಿ ಇವರಲ್ಲಿ ಹೆಚ್ಚು ಜನಪ್ರಿಯತೆ ಗಳಿಸಿದ ಧೋರ ಹೆಸರು 'ಧ್ರುವ' ಎಂಬುದರ ಆಡುರೂಪ. ರಾಷ್ಟ್ರಕೂಟ ಮನೆತನದಲ್ಲಿ 'ದ್ರುವ' ಎಂಬುದು ಸಮರ್ಥ ದೊರೆಯೊಬ್ಬನ ಹೆಸರು. ಆತನ ಪ್ರಭಾವ ಈ ಮನೆತನದಲ್ಲಿ ಹೆಸರಿನ ರೂಪದಲ್ಲಿ ಉಳಿದಿರಬೇಕೆನಿಸುತ್ತದೆ.

ಹೀಗೆ ಸುಮಾರು ೨೦೦ ವರ್ಷ ಚಲ್ಲಕೇತನ ಮನೆತನ ಗೌರವಯುತವಾಗಿ ಬಾಳಿ ಉತ್ತರಪುರಾಣದಂತಹ ಕೃತಿಯನ್ನೂ, ರಾಷ್ಟ್ರಕೂಟರೊಂದಿಗಿನ ರಾಜಕೀಯ ಮೇಲ್ಮಟ್ಟದ ಸಾಧನೆಯನ್ನು ಮಾಡಿ ಬಂಕಾಪುರದ ವಿಶೇಷತೆಯನ್ನು ಹೆಚ್ಚಿಸಿದೆ.

**ಕಲ್ಯಾಣಿ ಚಾಲುಕ್ಯರು:** ಹತ್ತನೆಯ ಶತಮಾನದ ಉತ್ತರಾರ್ಧಕ್ಕೆ ರಾಷ್ಟ್ರಕೂಟರ ಆಳ್ವಿಕೆ ಕೊನೆಗೊಂಡು ಕಲ್ಯಾಣದ ಚಾಲುಕ್ಯರು ತಲೆ ಎತ್ತಿದರು. ರಾಜಕೀಯ ಜವಾಬ್ದಾರಿ ಈಗ ರಾಷ್ಟ್ರಕೂಟರ ಹೆಗಲಿನಿಂದ ಚಾಲುಕ್ಯರ ಹೆಗಲಿಗೆ ಸರಿಯಿತು. ಮತ್ತೆ ಕಲ್ಯಾಣವು ಇವರ ರಾಜಕೀಯ ಕೇಂದ್ರವಾಯಿತು. ಈ ಹೊಣೆಗಾರಿಕೆ ಈಗ ಚಕ್ರವರ್ತಿಗಳಿಗಿಂತ ಅವರ ಸಾಮಂತ, ಮಂಡಲೇಶ್ವರ ಮಂತ್ರಿಮುಖ್ಯರ ಹೆಗಲಿಗೆ ಇಳಿಯಿತೆನ್ನಬೇಕು. ಹೀಗಾಗಿ ಹನ್ನೊಂದನೆಯ ಶತಮಾನದಿಂದ ಮುಂದೆ ಚಾಲುಕ್ಯರು, ಅವರ ಮಾಂಡಲಿಕರಾದ ಬನವಾಸಿ ಮತ್ತು ಹಾನುಗಲ್ಲ ಕದಂಬರ ಆಳ್ವಿಕೆಗೆ ಈ ಪ್ರದೇಶ ಸೇರಿತು.

ಕಲ್ಯಾಣಿ ಚಾಲುಕ್ಯ ಅರಸರಲ್ಲಿ ನೇರ ಬಂಕಾಪುರ ಸಂಪರ್ಕವನ್ನಿರಿಸಿಕೊಂಡವರು ತ್ರೈಲೋಕ್ಯಮಲ್ಲ (ಸೋಮೇಶ್ವರ೧), ಭುವನೈಕಮಲ್ಲ (ಸೋಮೇಶ್ವರ೨) ಮತ್ತು ತ್ರಿಭುವನಮಲ್ಲರು (ವಿಕ್ರಮಾದಿತ್ಯ ೬), ಕಲ್ಯಾಣ ಇವರೆಲ್ಲರ ರಾಜಧಾನಿಯಾಗಿದ್ದರೂ ಹಾನುಗಲ್ಲ ಪರಿಸರದ ಬಂಕಾಪೂರ ಇವರ ರಾಜಕೀಯ ತಾಣವಾಯಿತು. ಕ್ರೀ.ಶ(೧೦೪೫) ರ ಕೋಳೂರು ಶಾಸನ ತ್ರೈಲೋಕ್ಯಮಲ್ಲ ಸೋಮೇಶ್ವರನ ಆಳ್ವಿಕೆಯನ್ನು ಸೂಚಿಸಿದೆ. ಒಂದನೆಯ ಸೋಮೇಶ್ವರ ಮರಣ ಹೊಂದಲು ಅವನ ಹಿರಿಯ ಮಗ ಸೋಮೇಶ್ವರ ಎರಡನೆಯ ಸೋಮೇಶ್ವರನೆಂಬ ಹೆಸರಿನಿಂದ ಪಟ್ಟವೇರಿದ. ಪೂರ್ವಜರಿಂದ ಬಂದ ಬಿರುದುಗಳೊಂದಿಗೆ ಭುವನೈಕಮಲ್ಲ'ನೆಂಬ ಬಿರುದು ಇವನದಾಗಿತ್ತು. ಈತ ಕಲ್ಯಾಣವನ್ನು ರಾಜಧಾನಿಯನ್ನಾಗಿಸಿದ್ದರೂ ಈತನ ಆಳ್ವಿಕೆಯ ಬಹುಕಾಲ ಕಳೆದುದು ಪ್ರಸ್ತುತ ಬಂಕಾಪುರ ಮತ್ತು ಅದರ ಸುತ್ತಮುತ್ತಲಿನ ಪರಿಸರದಲ್ಲಿ. ಕ್ರಿ.ಶ. (೧೦೭೩)ರ ತೊರವಂಡದ (೧೦೭೪) ನೀರಲಗೆಯ (೧೦೭೧,೭೫)ರ ಶಿಕಾರಿಪುರದ, (೧೦೭೪) ವಿಜಾಪುರದ ಶಾಶನಗಳು(೧೦೭೪) ಇವನ ಬಂಕಾಪುರದ ಆಳ್ವಿಕೆಯನ್ನು ಖಚಿತಪಡಿಸುತ್ತವೆ.

ಎರಡನೆಯ ಸೋಮೇಶ್ವರ ಕ್ರಿ.ಶ. ೧೦೬೮ ರಲ್ಲಿ ಪಟ್ಟವೇರಿದ. ಅವನ ಸಹೋದರ ಆರನೆಯ ವಿಕ್ರಮಾದಿತ್ಯನಿಗೆ ಸಿಂದವಾಡಿ ಮತ್ತು ನೋಳಂಬವಾಡಿಗಳ ಆಡಳಿತ ದೊರೆಯಿತು. ಆದರೆ ಅಣ್ಣ ತಮ್ಮಂದಿರ ವೈಮನಸ್ಸಿನಿಂದಾಗಿ ಇಬ್ಬರೂ ಒಂದೆಡೆ ಇರಲಾರದೆ ವಿಕ್ರಮಾದಿತ್ಯ ತಾನು ಮೊದಲು ಆಡಳಿತ ಕೈಕೊಂಡಿದ್ದ ಬನವಾಸಿಯನ್ನೇ ತನಗೆ ಕೊಡಬೇಕೆಂದು ಆಗ್ರಹಪಡಿಸಿದ. ಬಂಕಾಪುರ ಎರಡನೆಯ ಸೋಮೇಶ್ವರನ ರಾಜಧಾನಿಯಾಗಿದ್ದರಿಂದ ಅದರ ಸಮೀಪದಲ್ಲಿದ್ದ ಬನವಾಸಿ ಪ್ರಾಂತವನ್ನು ಬಿಟ್ಟು ಕೊಡಲು ಸೋಮೇಶ್ವರ ಒಪ್ಪಿಕೊಳ್ಳಲಿಲ್ಲ. ಕೊನೆಗೆ ವಿಕ್ರಮಾದಿತ್ಯ ಉಪಾಯದಿಂದಲೆ ಬನವಾಸಿ ೧೨೦೦೦ದ ಒಡೆತನ ಪಡೆದುಕೊಳ್ಳಬೇಕಾಯಿತು. ಅನಂತರ ಇವನು ಅದರ ಮೇಲ್ವಿಚಾರಣೆಯನ್ನು ವಿಜಯಾದಿತ್ಯನಿಗೂ, ನೊಳಂಬವಾಡಿ ಸಿಂದವಾಡಿ ಪ್ರಾತಗಳ ಆಡಳಿತವನ್ನು ಜಯಸಿಂಹನಿಗೂ ಒಪ್ಪಿಸಿ, ತಾನು ಮೂರು ಪ್ರಾಂತಗಳ ಮೇಲ್ವಿಚಾರಣೆ ಕೈಕೊಂಡನು. ಇದೇ ಸಂದರ್ಭದಲ್ಲಿ ವಿಕ್ರಮಾದಿತ್ಯ ವಿಜಯಾದಿತ್ಯರ ಮುಖಾಂತರ ಬಂದ ನೀರಲಗೆಯ ೩೦೦ ಮಹಾಜನರ ವಿನಂತಿಯನ್ನು ಸೋಮೇಶ್ವರ ಮಾನ್ಯ ಮಾಡಿದನು. ಬಿಜಾಪುರ (೧೦೭೪) ಶಾಸನದಲ್ಲಿ ಭುವನೈಕಮಲ್ಲ ಬಂಕಾಪುರ ನೆಲವೀಡಿನಲ್ಲಿದ್ದಾಗ ಕೈಕೊಂಡ ದಾನವನ್ನು ಸೂಚಿಸಿದೆ. ಕಲಕೇರಿ (೧೦೭೬) ಶಾಸನ ಬಂಕಾಪುರದ ಭುವನೈಕಮಲ್ಲನ ಆಳ್ವಿಕೆಯನ್ನು ಸೂಚಿಸುವ ಅಂತಿಮ ಸಾಲಿನ ಶಾಸನವೆನಿಸಿದೆ.

ಅಣ್ಣ ಎರಡನೆಯ ಸೋಮೇಶ್ವರನ ನಂತರ ತ್ರಿಭುವನಮಲ್ಲ ವಿಕ್ರಮಾದಿತ್ಯ ಅಧಿಕಾರಕ್ಕೆ ಬಂದರೂ ಅಣ್ಣನಂತೆ ಬಂಕಾಪುರವನ್ನು ತನ್ನ ದ್ವಿತೀಯ ರಾಜಧಾನಿಯನ್ನಾಗಲಿ ಅಥವಾ ಒಂದು ಪ್ರಮುಖ ಸ್ಥಳವನ್ನಾಗಲಿ ಮಾಡಿಕೊಂಡಂತಿಲ್ಲ. ಈ ಪ್ರದೇಶದ ಅಧಿಕಾರ ವಿಕ್ರಮಾದಿತ್ಯನಿಗಿದ್ದರೂ ಅದರ ಸಂಪೂರ್ಣ ಜವಾಬ್ದಾರಿಕೆಯನ್ನು ತನ್ನ ಮಂಡಲೇಶ್ವರರಿಗೆ ವಹಿಸಿಕೊಟ್ಟಂತಿದೆ. ಇಂಥ ಪ್ರಮುಖ ಮಂಡಲೇಶ್ವರರಲ್ಲಿ ಒಂದು ಮನೆತನ ಬನವಾಸಿ ಕದಂಬರದು.

**ಗೋವೆಯ ಕದಂಬರು:** ಕಲ್ಯಾಣಿ ಚಾಲುಕ್ಯರ ವಿಶಾಲವಾದ ಸಾಮ್ರಾಜ್ಯವನ್ನು ಮಹಾ ಮಂಡಳೇಶ್ವರ ಮತ್ತು ಸಾಮಂತರು ವ್ಯವಸ್ಥಿತವಾಗಿ ರಕ್ಷಣೆ ಮಾಡಿಕೊಂಡಿದ್ದರು. ಈ ವ್ಯವಸ್ಥಿತ ಕಾರ್ಯದಲ್ಲಿ ಅವರಿಗೆ ನಿಷ್ಠಾವಂತ ಸಾಮಂತರಾಗಿ ನೆರವಾದವರು ಗೋವೆಯ ಕದಂಬರು, ಬನವಾಸಿ ಕದಂಬರು, ಹಾನಗಲ್ಲು ಕದಂಬರು, ಇವರಲ್ಲಿ ಗೋವೆಯ ಕದಂಬರು ಸುಮಾರು ೩ ಶತಮಾನಗಳ ಕಾಲ ಗೋವೆಯನ್ನು ಕೇಂದ್ರವಾಗಿಟ್ಟುಕೊಂಡು ಆಳಿದರು.

ರಾಜಕೀಯ ನೀತಿ, ವ್ಯವಸ್ಥಿತ ರಾಜ್ಯಾಡಳಿತದ ಅನುಕೂಲತೆಗಾಗಿ ಚಾಲುಕ್ಯ ಆರನೇಯ ವಿಕ್ರಮಾದಿತ್ಯ ಗೋವೆಯ ಕದಂಬ ಜಯಕೇಸಿಗೆ ತನ್ನ ಮಗಳು ಮೈಳಲದೇವಿಯನ್ನಿತ್ತು ಮದುವೆ ಮಾಡಿದ್ದ. ಈ ರಕ್ತ ಸಂಬಂಧ ಮಾವ ಅಳಿಯಂದಿರಲ್ಲಿ ಒಳ್ಳೆಯ ಬಾಂಧವ್ಯವನ್ನುಂಟುಮಾಡಿತ್ತು.

ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಅವರ ಮಂಡಳೇಶ್ವರರಲ್ಲಿ ಒಬ್ಬರಾದ ಹೊಯ್ಸಳರು ಒಳಗೊಳಗೆ ಸ್ವತಂತ್ರರಾಗಲು ಹವಣಿಕೆ ಹಾಕುತ್ತಿದ್ದರು. ಇವರ ಮಹತ್ವಾಕಾಂಕ್ಷೆಯನ್ನು ಮನಗಂಡ ಕದಂಬ ಜಯಕೇಶಿ ಹೊಯ್ಸಳ ವಿಷ್ಣುವರ್ಧನನ್ನು ಕೆಣಕಿದ. ಈ ತಿಕ್ಕಾಟದಲ್ಲಿ ಹೊಯ್ಸಳ ವಿಷ್ಣುವರ್ಧನ ವಶಪಡಿಸಿಕೊಂಡಿದ್ದ ಹಾನಗಲ್ಲನ್ನು ಕೆಲಕಾಲ ಜಯಕೇಸಿ ಆಕ್ರಮಿಸಿಕೊಂಡನು. ಕರ್ರೆಗಾಲು(೧೧೪೦) ಶಾಸನ ಜಯಕೇಸಿಯ ಆಳ್ವಿಕೆಯನ್ನು ಸೂಚಿಸಿದೆ.

ವಿಷ್ಣುವರ್ಧನ ಈ ಸುಮಾರಿಗೆ ರಾಜಧಾನಿ ಬಂಕಾಪುರದಲ್ಲಿಯೆ ಇದ್ದರೂ ಮೇಲಿಂದ ಮೇಲೆ ಏರಿ ಬರುವ ಜಯಕೇಶಿಯ ದಾಳಿಯನ್ನು ತಡೆಯದೆ ತತ್ತರಿಸಿದಂತಿದೆ. ಇಂಥ ಸಂದರ್ಭದಲ್ಲಿ ಕೆಲಕಾಲ ಹಾನಗಲ್ಲು ಜಯಕೇಶಿಯ ಕೈವಶವಾದರೂ ಬೆನಚಿಗೆರೆ(೧೧೪೦) ಶಾಸನದಲ್ಲಿ ವಿಷ್ಣುವರ್ಧನ ಮಡದಿ ಬಮ್ಮಲಾದೇವಿಯೊಂದಿಗೆ ಬಂಕಾಪುರದಲ್ಲಿ ರಾಜ್ಯಭಾರ ಮಾಡುತ್ತಿದ್ದ ಉಲ್ಲೇಖವಿದೆ.

ಕದಂಬ ಜಯಕೇಸಿಗೆ ಬಂಕಾಪುರದ ನೇರವಾದ ಸಂಬಂಧ ಬಾರದೇ ಹೋದರೂ ಈ ಪರಿಸರದ ಆಡಳಿತವನ್ನು ಆತ ಕೆಲದಿವಸ ಕೈಕೊಂಡಂತಿದೆ.

**ಬನವಾಸಿ ಕದಂಬರು:** ಕಲ್ಯಾಣಿ ಚಾಲುಕ್ಯರ ಸಾಮಂತರಲ್ಲಿ ಬನವಾಸಿ ಕದಂಬರು ಕೆಲಕಾಲ ಬಂಕಾಪುರ ಪ್ರದೇಶವನ್ನಾಳಿದವರು. ಇವರನ್ನೇ ಬಂಕಾಪುರದ ಕದಂಬರು ಎಂದು ಕರೆದಿರುವ ಸಾಧ್ಯತೆಯೂ ಇದೆ.

ಕ್ರಿ.ಶ ೯೮೦ರಲ್ಲಿ ಕದಂಬ ಮನೆತನದ ಇರಿವಬೆಡಂಗನ ಮಗನಾದ ಚಟ್ಟದೇವನು ಬನವಾಸಿಯನ್ನಾಳುತ್ತಿದ್ದ. ಮುಂದೆ ಈತನ ವಂಶಜನಾದ ಕದಂಬ ಮಯೂರವರ್ಮನ ನಂತರ ಒಂದನೆಯ ತೈಲ ಅಥವಾ ತೋಯಿಮದೇವ ಕದಂಬ ರಾಜ್ಯದ ಒಡೆಯನಾದ. ಕದಂಬರು ಕಲ್ಯಾಣದ ಚಾಲುಕ್ಯರಿಗೆ ಮಂಡಲೇಶ್ವರರಷ್ಟೇ ಅಲ್ಲ, ಅವರ ರಕ್ತಸಂಬಂಧವನ್ನು ಇರಿಸಿಕೊಂಡ ಅಧಿಕಾರಿಗಳಾಗಿದ್ದರು. ಈ ಕದಂಬ ತೋಯಿಮದೇವನ ತಾಯಿ ಚಾಲುಕ್ಯ ಜಯಸಿಂಹನ ಒಡಹುಟ್ಟಿದ ಸೋದರಿ ಅಕ್ಕಾದೇವಿ. ಇವಳು 'ವನವಾಸೆ ಪನ್ನಿರ್ಚ್ಛಾಸಿರಮುಮಂ ಸುಖ ಸಂಕಥಾ ವಿನೋದ'ದಿಂದಾಳುತ್ತಿದ್ದಳು. ಹೊಟ್ಟೂರ(೧೦೩೭) ಶಾಸನ ಮುಂದುವರೆದು 'ಬನವಾಸಿ ಪುರವರೇಶ್ವರಂ ಹರಿಕಾಂತನಸಿಂಗ... ಶ್ರೀಮತ್ ಮಯೂರವರ್ಮದೇವರು ಬನವಾಸಿಪನ್ನಿರ್ಚ್ಛಾಸಿರ ಮುಮಂ ಪಾನುಂಗಲೈನೂರುಮನ್ ಏಕಾಯತ ಹದಿನಾಲ್ಕು ಸುಖಸಂಕಥಾವಿನೋದದೊಳಿರೆ' ಎಂದಿದೆ. ಇದನ್ನು ಗಮನಿಸಿದರೆ ಕ್ರಿ.ಶ. ೧೦೩೭ಕ್ಕೆ ಮುನ್ನವೇ ಚಾಲುಕ್ಯರು ಕದಂಬ ಮನೆತನಕ್ಕೆ ತಮ್ಮ ಮಗಳನ್ನಿತ್ತು ಸಂಬಂಧ ಬೆಳೆಸಿದ್ದು, ಅಕ್ಕಾದೇವಿ ಕದಂಬ ಮಯೂರವರ್ಮನನ್ನು ಮದುವೆಯಾಗಿ ಕೆಲಕಾಲ ಅವನೊಂದಿಗೆ ಈ ಬನವಾಸಿ, ಪಾನಂಗಲ್ಲ ಪ್ರದೇಶದ ಆಳ್ವಿಕೆ ಕೈಕೊಂಡಿದ್ದಳೆನ್ನಬೇಕಾಗುತ್ತದೆ.

ಮಹಾಮಂಡಳೇಶ್ವರನಾಗಿ 'ವಾನವಾಸಿ ಪನ್ನಿರ್ಚ್ಛಾಸಿರಮುಮಂ ಪಾನುಂಗಲ್ಲೆ ನೂರುಮಂ' ಆಳುತ್ತಿದ್ದ ತೋಯಿಮದೇವರಸ ಇವರ ಮಗನೆಂಬುದನ್ನು ಸ್ಪಷ್ಟಪಡಿಸುವ ಹೊಟ್ಟೂರ ಶಾಸನ 'ತೋಯಿಮದೇವರಬ್ಬೆಗಳ್ ಶ್ರೀಮದ್ ಅಕ್ಕಾದೇವಿಯರ್ ಎಂದಿದೆ. ಈ ಶಾಸನದಲ್ಲಿ ತಂದೆಯಾದ ಕದಂಬ ಮಯೂರವರ್ಮನ ಉಲ್ಲೇಖವಿಲ್ಲ. ಆದರೆ (೧೦೩೭)ರ ಹೊಟ್ಟೂರು ಶಾಸನ ಮಯೂರ ವರ್ಮನನ್ನು 'ಹರಿಕಾಂತನಸಿಂಗ' ಎಂದು ಗುರುತಿಸಿದ್ದರೆ, ೧೦೬೪ರ ಅದೇ ಊರಿನ ಇನ್ನೊಂದು ಶಾಸನದಲ್ಲಿ 'ತೋಯಿಮದೇವರಸನನ್ನು 'ಹರಿಗನಸಿಂಗ' ಎಂದು ಗುರುತಿಸಿದೆ. ಈ ಜೊತೆ ಬಿರುದುಗಳ ಸಾಮ್ಯತೆಯನ್ನು ಗಮನಿಸಿದ ವಿದ್ವಾಂಸರು ಇವರನ್ನು ತಂದೆ ಮಕ್ಕಳೆಂದು ಕರೆದಿದ್ದಾರೆ. ತೋಯಿಮದೇವ ಬನವಾಸಿಯನ್ನು ಆಳುತ್ತಿದ್ದಾಗ ಬಂಕಾಪುರದ ಇಂದ್ರೇಶ್ವರ ದೇವರಿಗೆ ಅನೇಕ ದಾನ ದತ್ತಿಗಳನ್ನು ಬಿಟ್ಟಿದ್ದ.

ಚಾಲುಕ್ಯ ಆರನೆಯ ವಿಕ್ರಮಾದಿತ್ಯ ಗಂಗವಾಡಿ ತೊಂಬತ್ತಾರು ಸಾವಿರ, ಬನವಾಸಿ ಹನ್ನೆರಡು ಸಾವಿರಗಳ ಅಧಿಪತ್ಯ ಕೈಕೊಂಡಿದ್ದ. ಆಗ ಕದಂಬ ವಂಶದ ಹರಿಕೇಸರಿ 'ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಂ ಬನವಾಸಿ ಪುರವರೇಶ್ವರಂ ತ್ರಕ್ಷಕ್ಷಾ ಸಂಭವಂ। ಚತುರಾಶೀತಿ ನಗರಾಧಿಷ್ಟಿತ ಲಲಾಟಲೋಚನ ಚತುರ್ಭುಜ ಜಗದ್ವಿತಾಷ್ಪಾದಶಾಶ್ವಮೇಧ ದೀಕ್ಷಿತ ಹಿಮವದ್ಗಿರೀಂದ್ರ ರುಂದ್ರ ಶಿಖರ ಶಕ್ತಿ ಸಂಸ್ಥಾಪಿತ ಸ್ಪಟಿಕ ಶಿಳಾಸ್ತಂಭ ಬದ್ದಮದಗಜ ಮಹಾ ಮಹಿಮಾಭಿರಾಮ ಕಾದಂಬಚಕ್ರಿ ಮಯೂರವರ್ಮ ಮಹಾಮಹೀಪಾಳಕುಳಭೂಷಣಂ ಪೆಮ್ಮಟ್ಟಿತೂರ್ಯ್ಯ ನಿಗ್ಫೋಶಣಂ ಶಾಖಾಚರೇಂದ್ರಧ್ವಜ ವಿರಾಜಮಾನಮಾನೋತ್ತುಂಗ ಸಿಂಹಲಾಂಛನ ದತ್ತಾರ್ತ್ತಿಕಾಂಚನ ಮಾಕ್ಕೊಳ್ವರಗಣಂ ಕದಂಬಕುಳ ಕಮಳ ಮಾರ್ತ್ತಣ್ಣ ರಿಪು ಕುಂಜಕುಂಜರ। ಶರಣಾಗತ ವಜ್ರಪಂಜರ । ಪ್ರತಿ ಪನ್ನಮೇರು ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀ ಮನ್ಮಹಾ ಮಣ್ಡಳೇಶ್ವರಂ ಬನವಾಸಿ ಪನ್ನಿರ್ಚ್ಛಾಸಿಕ್ಕಮರಸು' ಗೈಯುತ್ತಿದ್ದನು.

ಈ ಕದಂಬ ಚಕ್ರೇಶ್ವರನ ಮಡದಿ ಲಚ್ಚಲದೇವಿ. ಇವಳನ್ನು 'ಸ್ವಸ್ತ್ಯನವರತ ಪರಮಕಲ್ಯಾಣ ಭ್ಯುದಯ ಸಹಸ್ರ ಫಳಭೋಗಭಾಗಿನಿ। ದ್ವಿತೀಯ ಲಕ್ಷ್ಮೀ ಸಮಾನೆ । ತ್ಯಾಗನಿಧಾನೆ । ಶೃಂಗಾರ ಗಂಗಾ ತರಂಗಿಣಿ ದಾನಚಿನ್ತಾಮಣಿ । ಗಿರಿಲಬ್ದವರಪ್ರಸಾದೆ ಚಂಪಕಾಮೋದೆ । ವಿವೇಕ ವಿದ್ಯಾಧರಿ । ಸಕಳಕಳಾಧರಿ । ಗೋತ್ರಪವಿತ್ರೆ । ದುರ್ವ್ವಾಂಕುರಶ್ಯಾಮ ಗಾತ್ರೆ । ಯಾಸ್ತಾನರಂಜನೆ । ಸಮತಿಮದಭಂಜನೆ ।ಉಪ್ಪಟ್ಟ ವರ್ಷೆ ಧರ್ಮಸಂಕರ್ಷೆ, ಶ್ರೀಮಾನ್ ಹರಿಗ ಮನಸ್ಸರೋವರ ರಾಜಹಂಸಿ । ಸುಭಗವಿಳಾಸಿ । ಹರಿಗನರ್ದ್ಧಾಂಗಿ ಪರಿವಾರಸುರಭಿ'ಯೆಂಬ ಬಿರುದಿನ ಚೌಕಟ್ಟು ಅವಳ ವ್ಯಕ್ತಿತ್ವದ ಉನ್ನತಮಟ್ಟದ ಬೆಳವಣಿಗೆಗೆ ತುಂಬ ಸಹಕಾರಿಯಾಗಿರುವಳು. ಇವಳನ್ನು ಕುರಿತು ಮನದುಂಬಿ ಹೊಗಳಿದ ಶಿಗ್ಗಾಂವ ಶಾಸನ.

ಭೂವನಿತಾವರಂ ಹರಿಗನಾನೃಪಧೀರನು[ರ] ಸ್ಥಳಕ್ಕೆ ಲ
ಕ್ಷ್ಮೀವಧು ಪೀನಬಾಹುಯುಗಳಕ್ಕೆ ಜಯಾಂಗನೆ ತನ್ಮುಖಕ್ಕೆ ವಾಕು
ಶೀ ವಧುವಾಗಿ ರಂಜಿಸಿ ಮಹೋನ್ನತಿಯಂ ಪಡೆದುದ್ವಕೀರ್ತ್ತಿಲೀ
ಳಾವತಿಯೆಂದು ಬಣ್ಣಿಪುದು ಲಚ್ಚಲದೇವಿಯನೀ ಜಗಜ್ಜನ ॥

ವಿನಯದ ಮೇರೆ ಧರ್ಮ್ಮದ ತವರ್ಮ್ಮನೆ ಸತ್ಯದ ಜನ್ಮಭೂಮಿ ಮಾಂ
ತನದ ಗುನ್ತಿ ಚಾಗದ ಮಹಾನಿಧಿ ಪೆಂಪಿನ ರತ್ನರಾಶಿ ಸ
ಜ್ಜನಿಕೆಯ ರಮ್ಯಹರ್ಮ್ಮೆಮರಿವಿಂಗೆರೆವಟ್ಟು ವಿದಗ್ದಮುಗ್ದೆ ಸ
ಜ್ಜನನುತೆಯೆಂದು ಬಣ್ನಿಪುದು ಲಚ್ಚಲದೇವಿಯನೀ ಜಗಜ್ಜನ ॥

ಎಂಬ ಸುಂದರವಾದ ವೃತ್ತಗಳು ಲಚ್ಚಲದೇವಿಯ ಭವ್ಯಬದುಕಿಗೆ ಪೂರಕವಾಗಿವೆ. 'ವಂಗ, ಅಂಗ, ಮಗಧ, ಕೊಂಗು, ಕಳಿಂಗಾಂಗ, ದ್ರವಿಳ, ಮಳಯ, ಮಾಳವ ವೆಂಗಿ ಗಾಂಗೇಯ ಪಾಣ್ಡ್ಯಮಣ್ಡಲಿಕಾಂಗನೆಯರ್ ನಿನಗೆ ದೊರೆಯೇ ಲಚ್ಚಲದೇವಿ' ಎಂದು ಶಾಸನ ಸಾರುವಲ್ಲಿ ಅನ್ಯ ಮಂಡಳಿಕರ ಪತ್ನಿಯರ ಸಾಲಿನಲ್ಲಿ ಲಚ್ಚಲದೇವಿಯ ಗಂಭೀರ ಜೀವನ ವ್ಯಕ್ತವಾಗದೇ ಇರದು.

ಕದಂಬ ಹರಿಕೇಸರಿ ತನ್ನ ಅಧಿಕಾರದ ಅವಧಿಯಲ್ಲಿ ಬಂಕಾಪುರವನ್ನು ವ್ಯಾಪಾರಿ ಕೇಂದ್ರವನ್ನಾಗಿ, ಧಾರ್ಮಿಕ ಧಾಮವನ್ನಾಗಿ ಪರಿವರ್ತಿಸಿರುವನು. ಬಂಕಾಪುರದ ಕದಂಬೇಶ್ವರ ದೇವಸ್ಥಾನ ಈ ಮನೆತನದ ಬಹುದೊಡ್ಡ ಕೊಡುಗೆ. ಇವನ ಉದಾರ ಹಸ್ತವನ್ನು ವಿವರಿಸುವ ಈ ಶಾಸನ.

ಹರಿರಾಜ ಧ್ವಜಸಪ್ತಸಪ್ತತಿಳಕಂ ಬಾಧಿತ ಪೆಮ್ಮಟ್ಟ ತೂ
ರ್ಯ್ಯರನಷ್ಟಾದಶವಾಜಿಮೇಧ ಚತುರಸ್ರಾಶೀತ ಸಂಖ್ಯಾಪುರೇ
ಶ್ವರ ರುದ್ರಾನ್ವಯ ಸಿಂಹಲಕ್ಷ್ಮಿಮಶೈಳೇಂದ್ರೋ ಪರಿಸ್ಥಾಪಿತ
ಸ್ಥಿರ ಶಕ್ತ್ಯುದ್ವಹಿರಣ್ಯಾ ಗರ್ಬ್ಬಮಹಿಮಂ ಕಾದಂಬ ಚಕ್ರೇಶ್ವರ ॥

ಎಂದು ಹೇಳಿ ಅವನು ಕೈಕೊಂಡ ಅನುಪಮ ದಾನದ ಬಗ್ಗೆ ಬೆಳಕು ನೀಡಿದೆ. ಇಲ್ಲಿಂದ ಮುಂದೆ ೧೦೪೫, ೧೦೭೭,೧೦೮೫–೮೬ರ ಕೋಳೂರಿನ ಮೂರು ಶಾಸನಗಳು ತ್ರೈಲೋಕ್ಯಮಲ್ಲ ಮತ್ತು ತ್ರಿಭುವನಮಲ್ಲರ ಆಳ್ವಿಕೆಯಲ್ಲಿ 'ಕದಂಬಾನ್ವಯ ಸಮುದ್ದರಣ' ನೆನಿಸಿದ ರಾಜಗುರುದೇವನ ಉಲ್ಲೇಖ ಮಾಡಿವೆ. ಇದೇ ಸಂದರ್ಭದಲ್ಲಿ ವೀರನೊಳಂಬ ಪಲ್ಲವ ಪೆರ್ಮಾಡಿಯ ಆಳ್ವಿಕೆಯ ಕಾಲದಲ್ಲಿ ರಾಜಧಾನಿ ಬಂಕಾಪುರದ ಪಟ್ಟಣಾಧಿಪತಿ ದಂಡನಾಯಕ ಕೇಸಿಮಯ್ಯನೆಂಬವ ಸವಣೂರಿನ ಇನ್ನೂರು ಜನ ಅಗ್ರಹಾರದ ಮಹಾಜನರಿಗೆ ದಾನಕೊಟ್ಟ ಉಲ್ಲೇಖವಿದೆ.

**ಮಂಡಲೇಶ್ವರ ಕಲಿಯಮರಸ:** ಕಲ್ಯಾಣದ ಚಾಲುಕ್ಯರ ಮಹಾಸಾಮಂತರೆಂಬ ಕೀರ್ತಿ ಪಡೆದವರಲ್ಲಿ ಬಾಸವೂರ ೧೪೦ನ್ನು ಆಳುತ್ತಿದ್ದ. ಕಲಿಯಮರಸನ ಮನೆತನವೂ ಒಂದು. ಬಂಕಾಪುರ(೧೦೯೦) ಶಾಸನವೊಂದು ' ಪಾನುಂಗಲ್ಲಯೂ ಮಾಂಡಲಿಕತ್ವವೂ ಇದೇ ಮನೆತನಕ್ಕೆ ಸಂಬಂಧಿಸಿತ್ತು. ಎಂದು ತಿಳಿಸಿದೆ. ಜೀಮೂತವಾಹನನಾದ ಖಚರವಂಶದ 'ರಾಜಾದಿತ್ಯನಸಿಂಗ' ನೆಂಬ ಬಿರುದು ಹೊತ್ತ ಕಲಿಯಮರಸ ಈ ಮನೆತನದ ವ್ಯಕ್ತಿ. ಈತ ಬಾಸವೂರ ನೂರನಾಲ್ವತ್ತರ ಮನ್ನೆಯದ ಅರಸುತನಗೈಯುತ್ತಿದ್ದ. 'ತ್ರೈಲೋಕ್ಯಮಲ್ಲ ಸೋಮೇಶ್ವರನಲ್ಲಿ ಮಂಡಲೇಶ್ವರನೆನಿಸಿದ್ದ ಈತ ಚಾಲುಕ್ಯ ವಿಕ್ರಮಾದಿತ್ಯ ಆಳ್ವಿಕೆಗೆ ಬರುವುದರೊಳಗೆ 'ಮಹಾಸಾಮಂತ'ನೆನಿಸಿರುವನು.

ಈತನ ತಂದೆ ಮನ್ನೆಯ ಹೆಮ್ಮಾಡಿಯರಸ ತನ್ನನ್ನು ಮೊದಲು 'ಪದ್ಮಾವತೀ ಲಬ್ದವರ ಪ್ರಸಾದ' ನೆಂದು ಕರೆದುಕೊಂಡಿರುವದರಿಂದ ಇವನು ಬಹುಶ: ಜೈನ ಮತಾವಲಂಬಿಯೆಂದು ತಿಳಿಯಬಹುದು. ತರುವಾಯ ಅವನು 'ಮಹೇಶ್ವರ ದೀಕ್ಷೆ ಕೈಕೊಂಡು ತ್ರಿಭುವನಸಿಂಗಿ ಪಂಡಿತರ ಪಾದತೊಳೆದು ತ್ರಿಭುವನೇಶ್ವರಕ್ಕೆ ದತ್ತಿಕೈಕೊಡುವುದರ ಮೂಲಕ ಶೈವಧರ್ಮ ಮತಾಂತರ ಮಾಡಿಕೊಂಡಂತಿದೆ. ಇದು ಈ ಮನೆತನದಲ್ಲಿ ಬಹುದೊಡ್ಡ ತಿರುವು. ಕಲಿಯಮರಸನ ಮೇಲೆಯೂ ಇದರ ಪ್ರಭಾವ ಸಾಕಷ್ಟಾಗಿದೆ.

ಕಲಿಯಮರಸನ ಬಂಕಾಪುರದ (೧೦೯೦)ರ ಶಾಸನವೊಂದು ಪಾನುಂಗಲ್ಲದ ಆಳ್ವಿಕೆ ಸೂಚಿಸುತ್ತ 'ಪೊಳಲಪಟ್ಟಣ ರಾಜಧಾನಿ ಬಂಕಾಪುರದೊಳ್ ಪಟ್ಟಗಾರ ಅರ್ಕ್ಕಲಿಯ ಪೊಕ್ಕಿಣವಲ್ಲಿ ಪೆರ್ವ್ವಸದ ಮಾರಸಿಂಗನಾಯಕಂ ತಳ್ತಿರೆದು ದೇವಲೋಕಕ್ಕೆ ಸನ್ದ' ವಿಷಯವನ್ನು ಸೂಚಿಸಿದೆ. ಕಲಿಯಮರಸ 'ಚನ್ನಲದೇವಿಯ ಗಂಧವಾರಣ' ಎಂದು ತನ್ನನ್ನು ಪರಿಚಯಿಸಿಕೊಂಡಿದ್ದಾನೆ. ಈ ಚಂದಲದೇವಿಯ ಕಲ್ಯಾಣದ ಚಾಲುಕ್ಯಮನೆತನದ ೬ನೆಯ ವಿಕ್ರಮಾದಿತ್ಯನ ಮಡದಿ ಶಿಲಾಹಾರ ಮನೆತನದ ಚಂದ್ರಲೇಖೆ. ಇದನ್ನು ಗಮನಿಸಿದರೆ ಈ ಕಲಿಯಮರಸ ೬ನೆಯ ವಿಕ್ರಮಾದಿತ್ಯನಿಗೆ ಪ್ರಿಯವ್ಯಕ್ತಿಯಾಗಿದ್ದನೆನ್ನಬೇಕು.

ಇದೇ ಸಂದರ್ಭದಲ್ಲಿ ಕಲಿಯಮರಸನ ಮನೆತನಕ್ಕೆ ಹೊಸ ತಿರುವು ಕೊಟ್ಟು ಅವರನ್ನು ಶೈವಮತಾಭಿಮಾನಿಗಳನ್ನಾಸಿದ ತ್ರಿಭುವನಸಿಂಗಿ ಪಂಡಿತರು' ಶ್ರೀಮದ್ ಬಂಕಾಪುರದ...ಶ್ರೀ ಮುಮಂ ದೇವಂಗೇರಿ ತಮ್ಮುಗೆ ಕಳಸೂರುಮುಂ....ಪ್ರಭು ಸ್ವಾಮ್ಯದಿಂದ ಆಳುತ್ತಿದ್ದರು.

**ಹೊಯ್ಸಳರು:** ಕಲ್ಯಾಣದ ಚಾಲುಕ್ಯರ ಮಹಾಮಂಡಲೇಶ್ವರರಾಗಿ ಕಾರ್ಯ ನಿರ್ವಹಿಸಿದ ಇನ್ನೊಂದು ಮನೆತನ ಹೊಯ್ಸಳರದು. ವಿಶಾಲವಾಗಿ ಹಬ್ಬಿದ ಕಲ್ಯಾಣದ ಚಾಲುಕ್ಯರ ಸಾಮ್ರಾಜ್ಯ ಕೊನೆಕೊನೆಗೆ ದುರ್ಬಲ ವ್ಯಕ್ತಿಗಳನ್ನು ಅರಸರನ್ನಾಗಿ ಪಡೆಯುವುದರ ಮೂಲಕ ತನ್ನ ಅವನತಿಯನ್ನು ತಾನೇ ಸಾರತೊಡಗಿತು ಚಾಲುಕ್ಯರ ರಾಜಕೀಯ ಅವನತಿ ಅವರ ಮಂಡಲೇಶ್ವರರ ಸ್ವಾತಂತ್ರ್ಯ ಬೀಜ ವಿಷ್ಣುವರ್ಧನದ ಆಡಳಿತದ ಕಾಲಕ್ಕೆ ಹೂವಾಗಿ ಅರಳಿತ್ತು. ವಿಷ್ಣುವರ್ಧನ ಚಾಲುಕ್ಯರಲ್ಲಿ

ತೋರಿಕೆಯ ಮಾಂಡಲಿಕತ್ವವನ್ನು ವಹಿಸಿಕೊಂಡಿದ್ದರೂ ವಹಿಸಿಕೊಂಡಿದ್ದರೂ ಅಂತರಂಗದ ಅಭೀಪ್ಸೆಯಂತೆ ಸ್ವತಂತ್ರ ರಾಜನಂತೆಯೇ ವರ್ತಿಸುತ್ತಿದ್ದ.

ಚಾಲುಕ್ಯ ಕೊನೆಯ ತೈಲಪದ ದೌರ್ಬಲ್ಯ ವಿಷ್ಣುವರ್ಧನನ ಮಹತ್ವಾಕಾಂಕ್ಷೆಗೆ ಆಹ್ವಾನವನಿತ್ತರು. ಚಾಲುಕ್ಯರನ್ನು ಪಟ್ಟಣದಿಂದ ತಳ್ಳಿದ ವಿಷ್ಣುವರ್ಧನ ಅಲ್ಲಿ ಹೊಯ್ಸಳ ಧ್ವಜವನ್ನು ನೆಟ್ಟು ತನ್ನ ಅಧಿಪತ್ಯವನ್ನು ಸಾರಿದ. ಇಂಥ ಸಂದಿಗ್ದ ಸಂದರ್ಭದಲ್ಲಿ ಇನ್ನುಳಿದ ಮಂಡಲೇಶ್ವರ ಸಾಮಂತರನ್ನು ತಣ್ಣಗಾಗಿಸುವಲ್ಲಿ ವಿಷ್ಣುವರ್ಧನನಿಗೆ ಕಾಲಾವಕಾಶ ಬೇಕಾಯಿತು. ಚೋಳರನ್ನು ಗೆದ್ದು ವಿಜಯಧ್ವಜ ವನ್ನು ಹಾರಿಸಿದ ವಿಷ್ಣುವರ್ಧನ ತನ್ನ ಸಾಮ್ರಾಜ್ಯಕ್ಕೆ ಕಂಟಕಸ್ವರೂಪರಾಗಿದ್ದ ಚಾಲುಕ್ಯ ಸಾಮಂತರನ್ನು ಸದೆಬಡಿಯಲು ದಕ್ಷಿಣದತ್ತ ದಂಡಯಾತ್ರೆ ಕೈಕೊಂಡನು. ಆಗ ಬಂಕಾಪುರ ಪರಿಸರದ ಆಳ್ವಿಕೆ ಕೈಕೊಂಡವರು ಬನವಾಸಿಯ ಕದಂಬರು. ಇವರನ್ನೆದುರಿಸಲು ವಿಷ್ಣುವರ್ಧನ ಎಡೆಬಿಡದೆ ದಾಳಿ ಮಾಡಿದುದನ್ನು ಅನೇಕ ಶಾಸನಗಳು ತಿಳಿಸಿವೆ. ಕ್ರಿ.ಶ. ೧೧೩೦ರಲ್ಲಿ ವಿಷ್ಣುವರ್ಧನ ಹಾನುಗಲ್ಲನ ಮೇಲೆ ದಂಡೆತ್ತಿ ಹೋಗಿ ಕದಂಬರನ್ನು ಎದುರಿಸಿ ಹಾನಗಲ್ಲನ್ನು ತನ್ನ ರಾಜ್ಯಕ್ಕೆ ಸಮಾವೇಶಗೊಳಿಸಿಕೊಂಡಿದ್ದ ಅಲ್ಲದೆ ಹಾನಗಲ್ಲ ಪಕ್ಕದ ಬಂಕಾಪುರವನ್ನು ತನ್ನ ದ್ವಿತೀಯ ಬೀಡನ್ನಾಗಿಸಿಕೊಂಡಿದ್ದನ್ನು (೧೧೩೦)ರ ನಾಗರಕಟ್ಟೆಯ ಶಾಸನ ತಿಳಿಸುತ್ತದೆ.

ಬನವಾಸಿಯ ಕದಂಬರ ವಿರುದ್ಧ ಜಯಸಾಧನೆ ವಿಷ್ಣುವರ್ಧನನಿಗೆ ತಕ್ಕ ಮಟ್ಟಿಗೆ ತೊಂದರೆದಾಯಕವೇ ಆಗಿತ್ತು. ಕದಂಬ ರಾಜಧಾನಿಯಾದ ಹಾನಗಲ್ಲನ್ನು ವಶಪಡಿಸಿಕೊಳ್ಳಬೇಕಾದರೆ ಮೊದಲು ಬನವಾಸಿ ಕೈವಶ ಮಾಡಿಕೊಳ್ಳುವುದು ಅತ್ಯಾವಶ್ಯವಾಗಿತ್ತು. ಅದಕ್ಕೆ ಮೊದಲು ಬನವಾಸಿಯನ್ನೇ ಪಡೆದುಕೊಳ್ಳಬೇಕೆಂದು ಯೋಚಿಸಿದ. ಆಗ ಬನವಾಸಿಯನ್ನಾಳುತ್ತಿದ್ದವ ಮಸಣನೆಂಬ ಕದಂಭ ಮಾಂಡಲಿಕ. ವಿಷ್ಣುವರ್ಧನನ ತೋಳ್ಬಲದ ಎದುರಿನಲ್ಲಿ ಮಸಣ ಬಹುಕಾಲ ನಿಲ್ಲದೆ ಹೋದ. ಬನವಾಸಿಯೊಂದಿಗೆ ಹಾನಗಲ್ಲು ವಿಷ್ಣುವರ್ಧನನ ಕೈಸೇರಿತು. ಆದರೆ ಈ ಜಯ ಬಹಳ ದಿವಸ ಉಳಿದಂತೆ ಕಾಣುವದಿಲ್ಲ. ಕ್ರಿ.ಶ.೧೧೩೮ರಲ್ಲಿ ಕದಂಬಮಂಡಲೇಶ್ವರ ತೈಲಪನ ಮಗ ಮಲ್ಲಿಕಾರ್ಜುನ ಬನವಾಸಿ ಪನ್ನಿರ್ಚ್ಛಾಸಿರ ಮತ್ತು ಹಾನಗಲ್ಲು ಐನೂರರ ಒಡೆಯನೆಂದು ಹೇಳಿಕೊಂಡಿರುವನು. ಈ ಹೇಳಿಕೆಯನ್ನು ಗಮನಿಸಿದರೆ ಈ ಮಧ್ಯದ ಕೆಲಕಾಲ ಹಾನಗಲ್ಲು ವಿಷ್ಣುವರ್ಧನ ಕೈಬಿಟ್ಟಿರಬೇಕೆನಿಸುತ್ತದೆ. ಇಂಥ ಸಂದರ್ಭದಲ್ಲಿ ಹಿಡಿದ ಹಟ ಕೈಬಿಡದ ಹೊಯ್ಸಳ ದೊರೆ ಕಳೆದುಕೊಂಡ ಹಾನಗಲ್ಲನ್ನು ಮರಳಿ ಪಡೆಯಲೋಸುಗ ಮತ್ತೆ ದಂಡೆತ್ತಿ ನಾಶಪಡಿಸಲು ಹೊಯ್ಸಳ ಭೂಪಾಲನ ಶೌರ್ಯಸಿಂಹ ಹಾನಗಲ್ಲಿಗೆ ಪಾದಾರ್ಪಣೆ ಮಾಡಿದುದನ್ನು ಹಳೆವೂರಿನ ಶಾಸನ ಪದ್ಯವೊಂದು

ತಳಕಾಡೊಳ್ ಸುಳಿದಾಡಿ ತುಂಗಗಜಮುಚ್ಚಂಗಿಯ ಸಾರ್ದುದಾ
ಕುಳಚಿತ್ತಂ ಬನವಾಸೆಯಾಗೆ ನಡೆದಾರ್ಪ್ಪಿಂ ಬೆಳ್ವಲಂಗೊಂಡು ನಿ

ಕ್ಷೀಳಿತಂ ಪೆರ್ದೊರೆಗಂ ಸಂತೋಷದೊಸೆದಾ ಹಾನಂಗಲ್ಲೊದ್ದತ್ತು ಹೊಯಿ
ಸಳಭೂಪಾಳನ ಶೌರ್ಯಸಿಂಹವಸುಹೃದ್ಭೂಪರ್ ಭಯಂಗೊಳ್ವಿನಂ ॥

ಎಂದು ತಿಳಿಸಿದೆ. ಬಂಕಾಪುರದಲ್ಲಿ ಹೊಯ್ಸಳರಿಗೂ ಕದಂಬರಿಗೂ ಸಂಗ್ರಾಮ ಜರುಗಿ ಕದಂಬರು ಸೋತು ಹಿಂಜರಿಯಬೇಕಾಯಿತು. ಈ ಹೋರಾಟದಲ್ಲಿ ಕದಂಬ ದಳಪತಿಯ ಮಗ ಸೋವಣ ಎಂಬಾತ ತನ್ನ ಶೌರ್ಯ ಸಾಮರ್ಥ್ಯದಿಂದ ಹೋರಾಡಿದರೂ ಜಯಲಕ್ಷ್ಮಿ ಹೊಯ್ಸಳರಿಗೆ ಮಾಲೆ ಹಾಕಿದಳು. ಈ ಸಂಗ್ರಾಮದಲ್ಲಿ ಸ್ವಾಮಿಕಾರ್ಯಕ್ಕಾಗಿ ಹೋರಾಡಿದ ಸೋವಣ 'ಗೆಲಲಾರ್ಪೊಡಿರಿದು ಗೆಲ್ವುದು, ಗೆಲಲರದೊಡ್ಮಣಿ ಸಾವುದಾಳ್ಗಿನಿತೆ ಗುಣಂ, ಎಂದು ನಂಬಿ ಹೋರಾಡಿ ವೀರಮರಣ ಪಡೆದ. ತಗರೆಯ ೧೧೩೩ ಶಾಸನ,

ಸ್ವಸ್ತಿ ಶ್ರೀ ಮತ ತಗರೆಯ ಮಸಣಯನ ಸೋವಣನು
ಬಂಕಪುರದ ಕವಿಯ ಕಾಳಗದಲು ಬಿದ್ದನು ॥

ಎಂದು ಆತನ ಕೀರ್ತಿಯ ಗುಣಗಾನ ಮಾಡಿದೆ.

ವಿಷ್ಣುವರ್ಧನ ಹಾನಗಲ್ಲನ್ನು ಗೆದ್ದು ಬಂಕಾಪುರವನ್ನು ತನ್ನ ರಾಜಧಾನಿಯನ್ನಾಗಿಸಿಕೊಂಡ. ಇಲ್ಲಿಯವರೆಗೆ ವಿಷ್ಣುವರ್ಧನ ವಿಸ್ತಾರವಾದ ಸಾಮ್ರಾಜ್ಯಕ್ಕೆ ದೋರಸಮುದ್ರವನ್ನು ಕೇಂದ್ರ ರಾಜಧಾನಿಯನ್ನಾಗಿಸಿಕೊಂಡಿದ್ದರೆ, ಅಲ್ಲಲ್ಲಿ ಉಪರಾಜಧಾನಿಗಳಿದ್ದವು. ಬನವಾಸಿ ಹಾನಗಲ್ಲಗಳನ್ನೊಳ ಗೊಂಡ ಉತ್ತರ ಕರ್ನಾಟಕದ ಈ ದಿಕ್ಕಿನಲ್ಲಿಯೂ ಒಂದು ರಾಜಧಾನಿಯ ಅವಶ್ಯಕತೆ ಅವರಿಗೆ ಕಂಡಿರಬೇಕು. ಗೋವಿಂದಪುರದ (೧೦೩೫) ಶಾಸನ "ಶ್ರೀಮದ್ವಿಷ್ಣುವರ್ಧನ ದೇವರತ್ತ ಬಂಕಾಪುರ ವಿತ್ತತಳವನಪುರಮಂ ರಾಜಧಾನಿಗಳಾಗೆ ಸುಖಸಂಕಥಾ ವಿನೋದದಿಂ ಪ್ರಿಥ್ವೀರಾಜ್ಯಂಗೆಯುತಿರೆ" ಎಂದು ತಿಳಿಸಿದೆ. ಈ ಕಾಲಕ್ಕೆ ವಿಷ್ಣುವರ್ಧನನ ಪಲಸಿಗೆ ಪನ್ನಿರ್ಚ್ಛಾಸಿರ ಎರಡರುನುರು ಒಳಗೊಂಡಿದ್ದು ಬಂಕಾಪುರ ವಿಜಯ ರಾಜ ಧಾನಿಯೆನಿಸಿತ್ತು. ಪೂಮೆಗಾಮೆಯ ಶಾಸನ ನಂಗಲಿ ಕೊಂಗು ಸಿಂಗಮಲೆ ರಾಯಪುರ ತಳಕಾಡು ರೊಡ್ಡವಾ ಬೆಂಗಿ ಬಳ್ಳರೆ ವಲ್ಲೂರು ಚಕ್ರಗೊಟ್ಟ ಮುಚ್ಚಂಗಿ ವಿರಾಟನಪೊಳಲು ಬಂಕಾಪುರ ಬನವಾಸಿಗಳು ವಿಷ್ಣುವರ್ಧನನ ಆಳ್ವಿಕೆಗೆ ಒಳಪಟ್ಟುದನ್ನು ಸೂಚಿಸಿದೆ.

ಹೊಯ್ಸಳ ವಿಷ್ಣುವರ್ಧನ ಕೊನೆಗಾಲದ ಜೀವನ ಇದೇ ಪ್ರದೇಶದಲ್ಲಿ ಕಳೆದಿರುವಂತೆ ಆಧಾರಗಳಿವೆ. ಉತ್ತರಕರ್ನಾಟಕದ ಈ ಪ್ರದೇಶಗಳು ವಿಷ್ಣುವರ್ಧನನಿಗೆ ತಕ್ಕ ಅವಕಾಶ ಕಲ್ಪಿಸಿಕೊಟ್ಟಿವೆ. 'ರಾಜನಿಷ್ಠೆ ಸ್ವರ್ಗಕ್ಕೆ ದಾರಿ' ಎಂದು ನಂಬಿದ ಕನ್ನಡಿಗರ ಆತ್ಮವಿಶ್ವಾಸ ವಿಷ್ಣುವರ್ಧನನಿಗೆ ಕೆಲಕಾಲ ಇತ್ತ ನಿಲ್ಲಲು ಅನುವು ಮಾಡಿಕೊಟ್ಟಿವೆ. ಕ್ರಿ.ಶ. ೧೧೪೧ರಲ್ಲಿ ವಿಷ್ಣುವರ್ಧನ ಬಂಕಾಪುರ ದಲ್ಲಿಯೆ ಅಸುನೀಗಿದಂತೆ ತಿಳಿದು ಬರುತ್ತದೆ. 'ಶಕವರ್ಷ ೧೦೬೩ನೆಯ ದುರ್ಮ್ಮತಿ ಸಂವತ್ಸರದಂದು ಬಂಕಾಪೂರದಲು ಹಿರಿಯರಸ ಬಿಟ್ಟದೇವ ಕಾಲಂಗೆಯ್ಯ' ಎಂಬ ಚಿಕ್ಕಮಗಳೂರು ಜಿಲ್ಲೆಯ

ಹೆವಳ್ಳಿ ಶಾಸನ ಇದಕ್ಕೆ ಆಧಾರ ಹೊಯ್ಸಳರ ನಿಷ್ಠಾವಂತ ದಳಪತಿ ಗಂಗರಾಜನ ಮಗನಾದ ಬೊಪ್ಪದೇವದಂಡನಾಯಕ ವಿಷ್ಣುವರ್ಧನನ ಕಳೇವರವನ್ನು ಮೂಡಗೆರೆಗೆ ತರಲು ಬಯಸಿದ. ಆಗ ವಿಷ್ಣುವರ್ಧನನ ರಾಣಿ ಲಕ್ಷ್ಮೀಮಹಾದೇವಿಯ ಮಗ ಒಂದನೆಯ ನಾರಸಿಂಹ ಇನ್ನೂ ಅಪ್ರಾಪ್ತ ವಯಸ್ಸಿನ ಬಾಲಕ. ವಿಷ್ಣುವಿನ ಶವವನ್ನು ಮೂಡಗೆರೆಗೆ ಸಾಗಿಸುವಾಗ ಮಾರ್ಗದಲ್ಲಿ ತಳಿಗೆನಾಡಿನ ಮಿರಿಯಾಳಪಳ್ಳಿಯ ಬಿಣ್ಣಗೌಡನೆಂಬವ ತಡೆಹಿಡಿದಂತೆ ತಿಳಿದು ಬರುತ್ತದೆ. ಇದಕ್ಕೆ ಮುಖ್ಯವಾದ ಉದ್ದೇಶ ಶಾಸನವೇ ತಿಳಿಸುವಂತೆ ಅಪ್ರಾಪ್ತ ವಯಸ್ಸಿನ ನಾರಸಿಂಹನಿಗೆ ಪಟ್ಟಪ್ರಾಪ್ತಿಯಾಗಬೇಕೆಂಬುದು ಹೀಗಾಗಿ ಮಾರ್ಗಮಧ್ಯದಲ್ಲಿ ಶವಯಾತ್ರೆಯನ್ನು ತಡೆಹಿಡಿದ ಬಿಣ್ಣಗೌಡ ವಿಷ್ಣುವಿನ ಪಟ್ಟದಾನೆ, ರಾಜ್ಯಕೋಶಗಳನ್ನು ಬಲಾತ್ಕಾರದಿಂದ ವಶಪಡಿಸಿಕೊಂಡ. ಇಲ್ಲಿ ಬರುವ ಒಂದು ಸಮಸ್ಯೆ ಎಂದರೆ ನಾರಸಿಂಹನ ಪಟ್ಟಾರೋಹಣವೇ ಬಿಣ್ಣಗೌಡನಿಗೆ ಮುಖ್ಯ ಉದ್ದೇಶವಾಗಿದ್ದರೆ. ಆತ ಶವಯಾತ್ರೆಯನ್ನು ತಡೆಹಿಡಿದು ವಸ್ತುವಾಹನಗಳನ್ನು ದೋಚುವ ಅವಶ್ಯಕತೆ ಏನಿತ್ತು? ಎಂಬುದು. ಬಹುಶಃ ವಿಷ್ಣುವರ್ಧನನ ಮರಣ ವಾರ್ತೆ ಕೇಳಿದ ಎಷ್ಟೋ ಮಂಡಲೇಶ್ವರರು ಪಟ್ಟಕ್ಕಾಗಿ ಬಡಿದಾಟ ಪ್ರಾರಂಭಿಸಿರಬೇಕು. ಪಟ್ಟಪಿಪಾಸುಗಳ ಕಪಿಮುಷ್ಠಿಗೆ ಬಾಲಕ ನಾರಸಿಂಹನನ್ನು ಬಿಡದೆ, ಅವನಿಗೆ ಪಟ್ಟಗಟ್ಟಬೇಕೆಂಬ ಬಿಣ್ಣಗೌಡನ ಜೋಳವಾಳಿತನ ಇಲ್ಲಿ ಕಾರ್ಯ ಮಾಡಿಸಿದಂತಿದೆ.

ಬಂಕಾಪುರದಲ್ಲಿ ಮಡಿದ ವಿಷ್ಣುವರ್ಧನನ ಕಳೆವರವನ್ನು ಮೂಡಗೆರೆಗೆ ತರುವ ಉದ್ದೇಶ ಏನಿತ್ತೊ? ತಿಳಿಯದು. ಬಹುಶಃ ಬೊಪ್ಪದೇವದಂಡನಾಯಕ ತನ್ನ ದೊರೆಯ ಶವವನ್ನು ಅವರ ಮೂಲಪ್ರದೇಶ ಸೊಸೆವೂರಿಗೋ ಅಥವಾ ದ್ವಾರಸಮುದ್ರಕ್ಕೋ ಕೊಂಡೊಯ್ದು ರಾಜೋಚಿತವಾಗಿ ಶವಸಂಸ್ಕಾರ ಮಾಡುವ ಯೋಜನೆ ಹೊಂದಿದ್ದಿರಬೇಕೆನಿಸುತ್ತದೆ. ಮಾರ್ಗಮಧ್ಯದಲ್ಲಿ ಸ್ವಾಮಿನಿಷ್ಠೆಗಾಗಿ ಹೋರಾಡಿ ವೀರಮರಣ ಪಡೆದ ಬಿಣ್ಣಗೌಡನ ಮನಸ್ಸನ್ನು ಅರಿತು. ಅವನ ಮಗ ಬೂತೆಗೌಡನಿಗೆ ಆ ಮನೆತನದವರಿಗೆ ನಾರಸಿಂಹನಿಂದ ಕೆಲ ಭೂಮಿಯನ್ನು ಉಂಬಳಿಯಾಗಿ ಕೊಡಿಸಿರುವನು. ತಳಿಗೆನಾಡಿನ ಗಾವುಂಡರ ವಿನಂತಿಯನ್ನು ಮಾನ್ಯ ಮಾಡಿದ ನಾರಸಿಂಹನ ಬಾಲಕ ವಯಸ್ಸಿನ ಪ್ರಬುದ್ಧ ಕಾರ್ಯವಿದು.

ಮುಂದೆ ವಿಷ್ಣುವರ್ಧನನ ಶವಸಂಸ್ಕಾರ ಎಲ್ಲಿ ಜರುಗಿತು ಎಂಬುದು ತಿಳಿದು ಬರುವುದಿಲ್ಲ. ಕ್ರಿ.ಶ. ೧೧೪೧ರಲ್ಲಿ ವಿಷ್ಣುವರ್ಧನ ಬಂಕಾಪುರದಲ್ಲಿ ಮರಣ ಹೊಂದಿದ್ದರೂ ಕ್ರಿ.ಶ.೧೧೪೨, ೪೮, ೬೦ರ ಶಾಸನಗಳು ವಿಷ್ಣುವರ್ಧನನ್ನೇ ಹೊಯ್ಸಳ ಚಕ್ರವರ್ತಿಯೆಂದು ಸಾರಿವೆ. ಸುಂಕಾತೊಂಡನೂರು (೧೧೬೦) ಶಾಸನ ವಿಷ್ಣುವರ್ಧನನ ಆಳ್ವಿಕೆಯನ್ನು ಸೂಚಿಸುತ್ತ ಬಂಕಾಪುರವೂ ಅವನ ಅಧೀನಕ್ಕೆ ಒಳಪಟ್ಟ ಪ್ರದೇಶವೆಂದು ತಿಳಿಸಿದೆ. ಈ ತರಹದ ಯೋಜನೆಯನ್ನು ರಾಜನೀತಿ ಎಂದು ಸಾರ ಬೇಕಾಗುತ್ತದೆ. ರಾಜ್ಯವಾಳುವ ಪ್ರಖ್ಯಾತ ಚಕ್ರವರ್ತಿಯೊಬ್ಬ ಅಕಾಲ ಮರಣ ಹೊಂದಿದರೆ,

ಅವನ ಅಪ್ರಾಪ್ತ ವಯಸ್ಸಿನ ಮಕ್ಕಳ ರಕ್ಷಣೆಗೆ, ವೈರಿಗಳ ಕೈವಶವಾಗುವ ರಾಜ್ಯದ ಉಳುಮೆಗೆ ಬರುವ ವೀರನಾರಸಿಂಹನ, ಕ್ರಿ.ಶ.೧೯೯೦ರ ಸುಮಾರಿಗೆ ಬರುವ ವೀರಬಲ್ಲಾಳನ ಶಾಸನಗಳು ಅವರ ಪ್ರಬುದ್ಧತೆಯನ್ನು ಸಾರುತ್ತಿದ್ದು ಆ ಕಾಲದಲ್ಲಿಯೂ ಬಂಕಾಪುರ ಅವರ ರಾಜಕೀಯ ಪ್ರಭಾವಕ್ಕೆ ಒಳಪಟ್ಟ ಪ್ರದೇಶವಾಗಿತ್ತೆಂಬುದು ತಿಳಿದು ಬರುತ್ತದೆ.

ವಿಷ್ಣುವರ್ಧನನ ಮರಣಾನಂತರ ಹೊಯ್ಸಳ ಪ್ರಾಬಲ್ಯ ತಕ್ಕಮಟ್ಟಿಗೆ ಕಡಿಮೆಯಾಯಿತು. ಒಂದು ಕಾಲಕ್ಕೆ ಮೂಲೆಗೊತ್ತಲ್ಪಟ್ಟ ಹಾನಗಲ್ಲ ಕದಂಬರು ಮತ್ತೆ ಎಚ್ಚೆತ್ತು ಬಂಕಾಪುರದ ಪರಿಸರವನ್ನು ಕೈವಶಪಡಿಸಿಕೊಂಡರು. ಅಧಿಕಾರ ಹೊಯ್ಸಳರದಿದ್ದರೂ ಕದಂಬರ ರಾಜಕೀಯ ಬಿಸಿಯನ್ನು ಗಮನಿಸಿದರೆ ಈ ಮಧ್ಯದ ಬಂಕಾಪುರದ ಎರಡು ಶಾಸನಗಳು ಮಹಾಮಂಡಳೇಶ್ವರ ಕದಂಬ ಕೀರ್ತಿದೇವನ ಆಳ್ವಿಕೆಯನ್ನು ಸೂಚಿಸಿವೆ. ಹೀಗೆ ಹಲವಾರು ರಾಜಮನೆತನಗಳ ರಾಜಕೀಯ ಏರಿಳಿತಗಳನ್ನು ಅನುಭವಿಸಿ ಬಂಕಾಪುರ ಮುಂದೆ ವಿಜಯನಗರ ಮನೆತನದ ಆಡಳಿತಕ್ಕೆ ಸಿದ್ಧತೆ ಮಾಡಿಕೊಂಡಿತ್ತು.

**ವಿಜಯನಗರ–ಬಹುಮನಿ ಅರಸರು:** ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಇತಿಹಾಸದಲ್ಲಿಯೇ ಚಿರಸ್ಮರಣೀಯವಾದುದು. ಹಿಂದೂ ಧರ್ಮದ ಶ್ರೀರಕ್ಷೆಗಾಗಿ ಉದಯವಾದುದು ಈ ಮನೆತನ. ಹದಿನಾಲ್ಕನೆಯ ಶತಮಾನದ ವೇಳೆಗೆ ಹೊಯ್ಸಳರು ದುರ್ಬಲರಾದರು. ದೇವಗಿರಿಯ ಸೇವುಣರು, ಓರಂಗಲ್ಲಿನ ಕಾಕತೀಯರು ಇತಿಹಾಸ ಪುಟದಿಂದ ಮರೆಯಾಗತೊಡಗಿದ್ದರು. ಇಂಥ ಸಂದಿಗ್ಧ ಸಂದರ್ಭದಲ್ಲಿ ಉದಯವಾದ ವಿಜಯನಗರ ಸಾಮ್ರಾಜ್ಯ ಭಾರತದ ಇತಿಹಾಸದಲ್ಲಿಯೇ ಉಚ್ಛ್ರಾಯ ಸ್ಥಿತಿಯಲ್ಲಿದ್ದ, ಕೊನೆಯ ಹಿಂದೂ ಸಾಮ್ರಾಜ್ಯ. ಕ್ರಿ.ಶ. ೧೩೩೬ಕ್ಕೆ ಸಾಮ್ರಾಜ್ಯ ಉದಯವಾದುದು. ಸಂಗಮನ ಐವರು ಮಕ್ಕಳಾದ ಹರಿಹರ, ಬುಕ್ಕ, ಕಂಪಣ, ಮಾರಪ್ಪ, ಮತ್ತು ಮುದ್ದಪ್ಪರು ಈ ಸಾಮ್ರಾಜ್ಯ ಸ್ಥಾಪಕರು ಎಂಬ ಹೇಳಿಕೆ ಇದೆ. ಇದಕ್ಕೆ ಮಹಾಮಹಿಮರಾದ ಮಾಧವಾಚಾರ್ಯ ಅಥವಾ ವಿದ್ಯಾರಣ್ಯರ ಸಮರ್ಥ ನಿರ್ದೇಶನವಿತ್ತು. ಅವರಿಗೆ ಪ್ರೇರಕಶಕ್ತಿಯಾಗಿ ಹರಿಹರ ಬುಕ್ಕರ ಗುರುಗಳು ಕ್ರಿಯಾಶಕ್ತಿಗಳು ಬೆನ್ನಿಗಿದ್ದರು.

"ಸಂಗಮ ವಂಶದ ಮೊದಲ ದೊರೆ ಹರಿಹರ. ಇವನು ಕ್ರಿ.ಶ. ೧೩೩೬ರಿಂದ ಎರಡು ದಶಕಗಳ ಕಾಲ ರಾಜ್ಯವಾಳಿದನು. ಭದ್ರಬುನಾದಿಯ ಮೇಲೆ ರಾಜ್ಯವನ್ನು ಸ್ಥಾಪಿಸಿ ತನ್ನ ನಾಲ್ವರು ತಮ್ಮಂದಿರ ನೆರವಿನಿಂದ ರಾಜಕೀಯ ಅಸ್ಥಿರತೆಯನ್ನು ತಡೆದು ಶಾಂತಿ ನೆಲೆಸುವಂತೆ ಮಾಡಿದ. ಇವನ ಕಾಲದಲ್ಲಿ ಅಲ್ಲಾ ಉದ್–ದಿನ್ ಹಸನ್ ಬಹುಮನ್ ಷಾ ಎಂಬುವನು ೧೩೪೭ ರಲ್ಲಿ ಗುಲಬರ್ಗದಲ್ಲಿ ಬಹುಮನೀ ರಾಜ್ಯವನ್ನು ಸ್ಥಾಪಿಸಿದನು. ಮುಂದೆ ಎರಡು ರಾಜ್ಯಗಳು ರಾಜಕೀಯ ರಣರಂಗದಲ್ಲಿ ದೀರ್ಘಕಾಲ ಹೋರಾಟ ನಡೆಸಿದವು."[೩]

ಹರಿಹರನ ನಂತರ ಅವನ ಕಿರಿಯ ಸೋದರ ಒಂದನೆಯ ಬುಕ್ಕರಾಯನು ಸಿಂಹಾಸನ ವನ್ನೇರಿದನು. ಇವನು ರಾಜ್ಯಸ್ಥಾಪನೆಯ ಮಹತ್ಕಾರ್ಯದಲ್ಲಿ ಅಣ್ಣನಿಗೆ ಬಲಭುಜದಂತಿದ್ದನು. ರಾಜ್ಯವಿರೋಧಿ ಶಕ್ತಿಗಳನ್ನು ಹತ್ತಿಕ್ಕುವದೇ ಇವನ ಮುಖ್ಯ ಉದ್ದೇಶವಾಗಿತ್ತು. ಬುಕ್ಕರಾಯ ಬಹಮನಿ ಸುಲ್ತಾನರೊಂದಿಗೆ ಹಲವಾರು ಯುದ್ಧಗಳನ್ನು ಮಾಡಬೇಕಾಯಿತು. ಇದು ಬಹುಕಾಲ ಮುಂದುವರೆಯಿತು. ಬಹಮನಿ ಸುಲ್ತಾನ ಮುದುಗಲ್ ಮತ್ತು ಆದವಾನಿ ದುರ್ಗಗಳನ್ನು ವಶಪಡಿಸಿಕೊಂಡು ವಿಜಯನಗರದವರೆಗೂ ಧಾವಿಸಿ ಬಂದನು. ಆದರೆ ಕೊನೆಗೆ ಸೋತು ಹಿಮ್ಮೆಟ್ಟಬೇಕಾಯಿತು.

ಬುಕ್ಕರಾಯ ರಾಜ್ಯವಿಸ್ತರಣೆಯತ್ತ ಗಮನವಿತ್ತಷ್ಟೇ ಆಂತರಿಕ ಸುಧಾರಣೆಗೂ ಗಮನವಿತ್ತಿದ್ದ. ತನ್ನ ರಾಜ್ಯದ ಅನೇಕ ಸ್ಥಳಗಳಲ್ಲಿ ವಾಣಿಜ್ಯಕ್ಕೆ ಹೆಚ್ಚಿನ ಮಹತ್ವವಿತ್ತಿದ್ದ. ಆರ್ಥಿಕ ಭದ್ರತೆಯನ್ನು ಸಾಧಿಸಿದ್ದ. ಬಂಕಾಪುರ ಇವನ ಸಾಮ್ರಾಜ್ಯದ ಸುಪ್ರಸಿದ್ದ ವ್ಯಾಪಾರಿ ಸ್ಥಳವೆನಿಸಿತ್ತು. ಈಗಾಗಲೇ ಬಂಕಾಪುರ ವಾಣಿಜ್ಯ ಕ್ಷೇತ್ರವಾಗಿ ಭದ್ರವಾದ ಕೋಟೆಯ ಪ್ರದೇಶವಾಗಿ ಸಾಕಷ್ಟು ಮಹತ್ವ ಪಡೆದಿತ್ತು. ಇದಕ್ಕಾಗಿ ದಖನ್ನಿನ ಸುಲ್ತಾನರ ಗಮನ ಸದಾ ಬಂಕಾಪುರದ ಮೇಲಿರುತ್ತಿತ್ತು. ಈ ಕಾಲದಲ್ಲಿ ಧಾರ್ಮಿಕ ವಿಷಯದಲ್ಲಿ ಜೈನರಿಗೂ ಶ್ರೀ ವೈಷ್ಣವರಿಗೂ ವಾದ ವಿವಾದ ಹುಟ್ಟಿ ವಿಕೋಪಕ್ಕೆ ಹೋಗಲು ಬುಕ್ಕನ ಮಧ್ಯ ಪ್ರವೇಶದಿಂದ ವಿವಾದ ಸುಖಾಂತವಾಗಿ ಕೊನೆಗೊಂಡಿತು. ಇದೇ ಕಾಲದಲ್ಲಿ ಸಮಗ್ರವೇದ ಸಂಹಿತೆಗಳ ಮೇಲೆ ಭಾಷ್ಯ ರಚನೆ ಕಾರ್ಯ ನಡೆಯಿತು. ಇದು ಸಾಯಣಾಚಾರ್ಯ ಮತ್ತು ಅವರ ಸೋದರ ಮಾಧವಾಚಾರ್ಯರ ಸಾಧನೆಯ ಫಲ.

ಈ ಸಂದರ್ಭದ ವೀರಬುಕ್ಕರಾಯ ಅವನ ಮಗ ಎರಡನೆಯ ಹರಿಹರರ ಕಾಲದ ಶಾಸವೊಂದು ಬಂಕಾಪುರದ ಸರಕಾರಿ ಪಶು ಸಂಗೋಪನ ಕ್ಷೇತ್ರದಲ್ಲಿದೆ. ಅದರಲ್ಲಿ 'ಸಮಸ್ತ ವಸ್ತು ವಿಸ್ತಿರ್ನ್ನಪೂರ್ನ್ನಘೂರ್ನ್ನಿತಾರ್ನ್ನವಾವೃತ ವಸುಮತೀವಳಯ ಪ್ರ..... ಕೀರ್ತಿವರಂ ಶ್ರೀ ಮನ್ಮಹಾಮಂಡಳೇಶ್ವರಂ ಮದವರಿನ್ರುಪಾಳ ಮತ್ತಮಾತಂಗ ಕುಂಭಸ್ಥಳ ನಿಪಾತ .......... ಗ್ರ ಕಂಠೀರವೋಪಮಾನ ಸಹಜ ಸಾಹಸಾರೂಢ ಅರಿರಾಯ ವಿಭಾಡಂ ವಿಷಮ ವಿದ್ವಿಷ್ಟ ...... ತಾಶನ ಪ್ರಚಂಡದೋರ್ದಂಡ ಮಂಡಿತ ಮಂಡಲಾಗ್ರಭಿಳಕಾಳಾಹಿ ಸಂಚರಣಿ ತ್ರಾಣಂ ಹಿ ........ ಯ ಸುರಿತಾಣಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀ ವೀರ ಬುಕ್ಕಧರಾಧೀಶ್ವರಂ ಪೂರ್ವ ದಕ್ಷಿಣ ಪಶ್ಚಿಮೋದಧಿತ್ರಯಾವಧಿಯ ಸಕಳ ವಸುಧಾ ವಳಯಮನೇಕತ್ಸದಿಂದಾಳ್ದು ಪಲಕಾಲಂ ರಾಜ್ಯಂಗೈಯುತ್ತಮಿರೆ' ಎಂದು ಅವನ ರಾಜ್ಯಭಾರದ ವಿವರಣೆಯ ಬಗೆಗೆ ಹೇಳಿದೆ. ಈತ ಕೈಕೊಂಡ ಸಮಗ್ರ ಹೋರಾಟದ ಬಗೆಗೆ ಇಲ್ಲಿ ವಿಷಯ ದೊರಕುತ್ತದೆ. ಈತನ ಸಾಮರ್ಥ್ಯದ ಎದುರು ಯಾವ ವೈರಿಗಳೂ ತಲೆ ಎತ್ತಿ ನಿಲ್ಲುವಂತಿರಲಿಲ್ಲ, ಇದನ್ನು ಕುರಿತು ಪ್ರಸ್ತುತ ಶಾಸನ

ನಾಡೆ ತೆಲಂಗನಂ ನಿಲಿಸಿ ಪಾಂಡ್ಯನಂ ದಂಡಿಸಿ ಚೋಳನಂ ಬಿಸು
ಳ್ತೋಡಿಸಿ ಚೋರ ಕೇರಳರನಾರಡಿಗೊಂಡರೆ ತುಳ್ವರಾಯರಂ
ರೋಡಿಸಿ ಕಾಡಿ ಕೊಂಕಣನ ಬಿಂಕಮನೀಳ್ಕುಳಿಗೊಂಡು ನಿರ್ಭಯಂ
ಮಾಡಿ ನಿಜಾಜ್ಞೆಯೊಳು ನಿಲಿಸಿದಂ ಧರೆಯಂ ಕಲಿಬುಕ್ಕ ಭೂಭುಜಂ"

ಎಂದು ವರ್ಣಿಸಿದೆ. ಈತನ ನಂತರದಲ್ಲಿ ಇವನ ಮಗ ಎರಡನೆಯ ಹರಿಹರ ಪಟ್ಟಕ್ಕೆ ಬಂದ. ಇವನು ಕ್ರಿ.ಶ. ೧೩೭೭ ರಿಂದ ೧೪೦೪ ರವರೆಗೆ ಸುಮಾರು ೨೭ ವರ್ಷಗಳ ಕಾಲ ಆಳ್ವಿಕೆ ನಡೆಸಿದ. ಈ ಅವಧಿಯಲ್ಲಿ ಅನೇಕ ದಂಗೆಗಳು ಸಂಭವಿಸಿದವು. ಇವನ ಮಕ್ಕಳಾದ ಬುಕ್ಕರಾಯ, ವಿರೂಪಾಕ್ಷ ಮತ್ತು ದೇವರಾಯ ಎಂಬುವರು ದಂಗೆಗಳನ್ನು ಯಶಸ್ವಿಯಾಗಿ ದಮನ ಮಾಡಿದರು. ಹರಿಹರನು ಅನೇಕ ಪ್ರಚಂಡಕಾರ್ಯಗಳನ್ನು ಕೈಕೊಂಡು ಅವುಗಳಿಗೆ ವಿಪುಲವಾಗಿ ಧನ ಸಹಾಯ ವನ್ನು ನೀಡಿದನು. ಇವನ ದೈವೀಪ್ರೇರಿತ ವ್ಯಕ್ತಿತ್ವವನ್ನು ಹೇಳುವ ಈ ಪದ್ಯ

ಸಕಳಧರಾಧಿಪತ್ತ್ಯ ಭುಜಸಾಹಸ ಶುಚಗುಣಂ ಸು
ಯುಕ್ತಿ ತ್ರಿಯಂಬಕ ಪದಭಕ್ತಿ ಸದ್ಗುರುಕಟಾಕ್ಷ ನಿರೀಕ್ಷಣ ಭುಮಿದೇವಪಾ
ಲಕ ಗುಣಮೆಲ್ಲವಂ ನೆರೆಸಿ ಕಂಜಸಮುದ್ಭವ ನಿರ್ಮಿಸಿಟ್ಟನೀ
ಸುಕ್ರುತ ಸುರದ್ರುಮಮಂ ಹರಿಹರೇಶನ ಕೀರ್ತಿವಧೂ ನಿಶೇಜನಂ" ॥

ಎನ್ನುವಲ್ಲಿ ಹರಿಹರನ ಗುಣಮಹತ್ವ ತಿಳಿಯುತ್ತದೆ. ಈ ಹರಿಹರನಿಗೆ 'ಪದ ಸೇವಾ ಸಂಪದಮೆ ಜೀವನೋಪಾಯ'ವೆನ್ನುವಂತೆ 'ಭೂಮಿನುತ ಮಾಧವಾಂಕ ಚಮೂವಲ್ಲಭ' ನೆಸಿದ್ದನು. ದೊರೆಯಂತೆ ಈತನೂ ಔದಾರ್ಯಗುಣವುಳ್ಳವನಾಗಿದ್ದ. ಬಂಕಾಪುರದ ಈ ಶಾಸನ ಮಾಧವಾಂಕ ಮಂತ್ರಿಯ ಗುಣಾವಗುಣಗಳ ಬಗೆಗೆ ಈ ಪದ್ಯಗಳಲ್ಲಿ ಸ್ಪಷ್ಟವಾಗಿ ವಿವರಿಸಿದೆ.

ಸಿವಪದಭಕ್ತಿಯೊಳ್ಗುರು ಪದಾಂಬುಜಸೇವೆಯೊಳುದ್ವಶುರ್ಯ್ಯದಿಂ
ವಿವಿಧಕಳಾವಿವಗ್ನತೆಯೊಳಂ ಸಲೆ ಭೂಸುರಪಾಲಕತ್ವದಿಂ
ಪ್ರವಿದಿತ ದುಷ್ಟನಿಗ್ರಹವಿಸಿಷ್ಟ ಸಂರಕ್ಷಣವ್ರಿತ್ತಿಯಿಂದಂ ಮಾ
ಧವಂ ವರಮಂತ್ರಿಮುಖ್ಯ ಮಲೆಯಂ ಸಲೆಯಾಳ್ದನನೇಕವತಾರಂ" ॥

ಸ್ವಸ್ತಿ ಮಲೆರಾಜರಾಜ ಮಲೆಪರೊಳುಗಂಡ ಕದನ ಪ್ರಚಂಡ ದುಷ್ಟಮಂತ್ರಿ ಗೋಧೂಮ ಘನಘರಟ್ಟ ಕೊಂಕರಾಯದಿಶಾಪಟ್ಟನೆನಿಪಮಾಧವಾಂಕಚಮೂಪಂ ಕೊಂಕಣದೇಶ ಘಟ್ಟಾವಳಿಯಾದಿ ಯಾದ ಕೊಂಬೇಳು ಮಲೆಯಂ ಪೆಣ್ನುಡೆ ಉಡಿಸಿ ನಿಜಾಜ್ಞೆಯೊಳು ನಿಲಿಸಿ ಸುಖದಿಂ ರಾಜ್ಯಂ ಗೆಯ್ಯುತ್ತಮಿರೆ

ಆ ಮಾಧವಮಂತ್ರಿ ಪದ
ತಾಮರ ಸಾಮೋದಮತ್ತ ಮಧುಕರನೆನಿಪಂ

ಭೀಮಬಳಂ ಸವಿಳಾಸೋ
ದ್ದಾಮಂ ಮಾದವನಕುಲೋದ್ಭವಂ ಕಂಪನೃಪಂ
ತದಪತ್ಯರನೇಕರೊಳಂ
ವಿದಿತಯಶಂ ಶಉರಿಯ ಧೈರ್ಯಸಾಮಾರ್ಥ್ಯಯುತಂ
ಸದಮಳ ಮಾಧವಮಂತ್ರಿ
ಪದ ಪದ್ಮೋನ್ಮತ್ತಭೃಂಗ ಹರಿಹರನೆಸೆದಂ[೭] ॥

ಎಂದು ಹೇಳುವಲ್ಲಿ ಮಡುಗಟ್ಟಿ ನಿಂತ ಮಾಧವಮಂತ್ರಿಯ ಗೌರವ ಪೂರ್ಣ ವ್ಯಕ್ತಿತ್ವ ವಿಧಿತವಾಗುತ್ತದೆ.



ಹರಿಹರನ ಮರಣಾನಂತರ ಅವನ ಪುತ್ರರಲ್ಲಿ ಸಿಂಹಾಸನಕ್ಕಾಗಿ ಕಲಹವೇರ್ಪಟ್ಟಿತು. ಇದರಲ್ಲಿ ಜಯಶೀಲನಾದ ಒಂದನೆಯ ದೇವರಾಯ ಕ್ರಿ.ಶ.೧೪೦೬ ರಲ್ಲಿ ಸಿಂಹಾಸನ ಪಡೆದನು. ಇವನು ತಂದೆಯಂತೆ ಯುದ್ದಕೋವಿದನಾಗಿದ್ದು ಚತುರತೆ, ದಕ್ಷತೆಯಿಂದಲೇ ರಾಜ್ಯವಾಳಿದ. ಇವನು ಬಹುಮನಿ ಸುಲ್ತಾನ ಫಿರೋಜ್ ಷಾನೊಂದಿಗೆ ಎರಡು ಸಲ ಯುದ್ಧ ಮಾಡಬೇಕಾಯಿತು. ಸುಲ್ತಾನರು ಸದಾಕಾಲ ವಿಜಯನಗರದ ವಾಣಿಜ್ಯ ಕೇಂದ್ರಗಳ ಮೇಲೆ ಕಣ್ಣಿರಿಸಿದ್ದರು. ಬಂಕಾಪುರ ಕೋಟೆಯಂತಹ ಭದ್ರ ಸಂಪದ್ಭರಿತ ಸ್ಥಳದ ಮೇಲೆ ಇವರ ಗಮನ ಸದಾ ಇರುತ್ತಿತ್ತು. ಬಹುಮನಿಯ ಮೂರನೆಯ ದೊರೆ ಮುಜಾಹಿದನಂತೂ ಅನಾವಶ್ಯಕ ಕಾರಣವೊಂದನ್ನು ಮುಂದುಮಾಡಿ ದೊರೆ ಬುಕ್ಕನಿಗೆ ಬಂಕಾಪುರಕೋಟೆಯನ್ನು ತನಗೆ ಬಿಟ್ಟು ಕೊಡುವಂತೆ ಬೇಡಿಕೆಯೊಂದನ್ನಿಟ್ಟ. ಗಂಡುಮೆಟ್ಟಿನ ಸ್ಥಳವೆನಿಸಿದ ಬಂಕಾಪುರ ವಿಜಯನಗರದ ಪ್ರಮುಖ ಕೇಂದ್ರಗಳಲ್ಲಿ ಒಂದನೆಸಿದ್ದರಿಂದ ಬುಕ್ಕರಾಯ ಮುಜಾಹಿದನ ಬೇಡಿಕೆಯನ್ನು ತಿರಸ್ಕರಿಸಿದ. ಇಷ್ಟಾದರೂ ಸುಲ್ತಾನರ ಆಸೆ ಕಡಿಮೆಯಾಗಲಿಲ್ಲ.

೧೪೦೬ರಲ್ಲಿ ಎಂಟನೆಯ ಬಹುಮನಿ ಫಿರೋಜಶಹ ಬಂಕಾಪುರ ಕೋಟೆಗೆ ಮುತ್ತಿಗೆ ಹಾಕಿದ. ವಿಜಯನಗರದ ಸಮೀಪದಲ್ಲಿಯೇ ತಳವೂರಿದ ಫಿರೋಜಶಹ ಕೋಟೆಗಾಗಿ ಮೊದಲನೆಯ ದೇವರಾಯನೊಂದಿಗೆ ಹೋರಾಟ ಕೈಕೊಳ್ಳಬೇಕಾಯಿತು. ಸ್ತ್ರೀಯೊಬ್ಬಳ ಸಂಬಂಧವಾಗಿ ಈ ಯುದ್ಧ ನಡೆಯಿತೆಂದು ವಿದೇಶಿ ಪ್ರವಾಸಿ ಫೆರಿಸ್ತಾನನ ಹೇಳಿಕೆ ಇದೆ. ಫಿರೋಜಶಹ ಸುಲ್ತಾನ ಹಿಂದೂ ಸೈನ್ಯವನ್ನು ಸದೆ ಬಡೆದು ತನ್ನ ಇಷ್ಟಾನುಸಾರವಾಗಿ ದೇವರಾಯನಿಂದ ಸಂಧಿಪತ್ರವೊಂದನ್ನು ಬರೆಯಿಸಿಕೊಂಡನು, ಈ ಸಂಧಿಯ ಹೇಳಿಕೆಯ ಪ್ರಕಾರ ದೇವರಾಯ ಬಂಕಾಪುರವನ್ನು ಬಹುಮನಿ ರಾಜರಿಗೆ ಬಿಟ್ಟುಕೊಡಬೇಕಾಯಿತಲ್ಲದೆ ಸುಲ್ತಾನನಿಗೆ ತನ್ನ ಮಗಳೊಬ್ಬಳನ್ನು ನಿಕಾ ಮಾಡಿಕೊಡಬೇಕಾಯಿತು. ಗ್ರೀಕ ಭೂಗೋಳಕಾರ ಟಾಲೆಮಿ ಈ ಹೋರಾಟವನ್ನು ಕೂಲಂಕಷವಾಗಿ ವಿವರಿಸಿದ್ದಾನೆ.

ಮುದಗಲ್ಲ ನಗರದ ಒಬ್ಬ ಚಲುವೆಗೋಸ್ಕರ ವಿಜಯನಗರದ ಹಾಗೂ ಬಹುಮನಿ ರಾಜ್ಯಗಳಲ್ಲಿ ವೈರ ಮಸೆಯಿತು. 'ಮುದಗಲ್ಲು ನಗರದಲ್ಲಿ ಒಬ್ಬ ರೈತನಿದ್ದ, ಅವನಿಗೆ ಬಹುಚೆಲುವಿಯಾದ ಮಗಳೊಬ್ಬಳಿದ್ದಳು, ವಿಧಾತನು ಅವಳನ್ನು ನಿರ್ಮಿಸುವಾಗ ತನ್ನೆಲ್ಲ ಪರಿಣತಿಯನ್ನು ಉಪಯೋಗಿಸಿ ಅವಳು ಪರಿಪೂರ್ಣವಾಗುಂತೆ ನೋಡಿಕೊಂಡಿರಬೇಕು. ಅವಳ ಸೌಂದರ್ಯದ ಬಗ್ಗೆ ಕೇಳಿ ತಿಳಿದು ಮೋಹಿತನಾದ ದೇವರಾಯ ಅವಳನ್ನು ಮದುವೆಯಾಗ ಬಯಸಿ ಅವಳ ತಂದೆ ತಾಯಿಗಳಿಗೆ ಅಮೂಲ್ಯ ಕಾಣಿಕೆಗಳನ್ನು ಕೊಟ್ಟು ಕಳಿಸಿದ. ವಿಜಯನಗರದ ಅರಸುಗಳೊಂದಿಗೆ ಸಂಬಂಧವೆಂದು ಆ ಹುಡುಗಿಯ ತಂದೆ ತಾಯಿಗಳ ಹಿಗ್ಗು. ಆದರೆ ಅವರ ಮಗಳು ತನಗೆ ಇಷ್ಟವಿಲ್ಲವೆಂದು ಅರಸು ಕಳಿಸಿದ ಕಾಣಿಕೆಗಳನ್ನು ತಿರಸ್ಕರಿಸಿದಳು. 'ವಿಜಯನಗರದ ಅರಸರ ಜನಾನಖಾನೆಯನ್ನು ಸೇರಿದ ಯಾವ ಹೆಂಗಸೂ ಹೊರಗೆ ಬರುವುದಿಲ್ಲ ನಿಮ್ಮನ್ನು ಶಾಶ್ವತವಾಗಿ ಆಗಲಿ ಇರಲಾರೆ' ಎಂದು ಅವಳು ಕಣ್ಣೀರುಗರೆದು ಹೇಳಿದಾಗ ಅವರ ಹೃದಯ ಕರಗಿತು. ಅವರು ಕಳಿಸಿದ ಕಾಣಿಕೆಗಳನ್ನು ಅವುಗಳನ್ನು ತಂದ ಬ್ರಾಹ್ಮಣರೊಂದಿಗೆ ಹಿಂದಿರುಗಿಸಿದರು.

ಅರಸನು ಹುಡುಗಿಯ ಬಗೆಗೆ ಹುಚ್ಚು ಹಚ್ಚಿಸಿಕೊಂಡ. ಅವಳನ್ನು ಹೇಗಾದರೂ ಮಾಡಿ ಪಡೆಯಲೇಬೇಕೆಂದು ಅವನ ಮನಸ್ಸಿನಲ್ಲಿ ನಿರ್ಧಾರ ಮೂಡಿತು. ತನ್ನೊಂದಿಗೆ ಆಯ್ದ ಸೈನಿಕರನ್ನು ಕರೆದುಕೊಂಡು ದೇವರಾಯ ಮುದಗಲ್ಲಿನ ಮೇಲೆ ದಂಡೆತ್ತಿ ಹೋದ. ಸೈನ್ಯ ಬರುವದೆನ್ನುವದನ್ನು ತಿಳಿದು ತಮ್ಮ ರಕ್ಷಣೆಗೊಸ್ಕರ, ಆ ಊರಿನ ಜನರು ಚಲ್ಲಾಪಿಲ್ಲಿಯಾಗಿ ಚದುರಿ ಹೋಗಿದ್ದರು. ಈ ಘಟನೆ ವಿಜಯನಗರದ ಹಾಗೂ ಬಹುಮನಿ ಜನಗಳ ಇತಿಹಾಸವನ್ನು ರಕ್ತದಲ್ಲಿ ಬರೆಯಿತು. ಮುದಗಲ್ಲಿನ ಈ ಹುಡುಗಿ ದಕ್ಕಲಿಲ್ಲ ಮಾತ್ರವಲ್ಲ, ವಿಜಯನಗರ ಅರಸು ಬಹುಮನಿ ಫಿರೋಜಶಹನ ಮಗನಿಗೆ ಈ ಕೋಟೆ ಸಮೇತ, ತನ್ನ ಮಗಳನ್ನು ಕೊಡಬೇಕಾದ ದುರ್ಗತಿಯನ್ನು ಅನುಭವಿಸಬೇಕಾಗಿ ಬಂತು. ಮುಂದೆ ಈ ಕೋಟೆ ಬಹುಕಾಲ ಬಹುಮನಿ ಅರಸರ ವಶದಲ್ಲಿಯೇ ಉಳಿಯಿತು.

ಮುಂದೆ ಕ್ರಿ.ಶ. ೧೪೪೩ರಲ್ಲಿ ವಿಜಯನಗರದ ನಾಲ್ಕನೆಯ ದೊರೆ ದೇವರಾಯ ಕಳೆದುಕೊಂಡ ಬಂಕಾಪುರ ಕೋಟೆಯನ್ನು ಮರಳಿ ಪಡೆಯಲು ಸನ್ನಾಹ ನಡೆಸಿ ಒಂದು ಸೈನ್ಯ ಪಡೆಯನ್ನು ಕಳಿಸಿದ. ವಿಜಯನಗರದವರ ವಿರುದ್ಧ ಹೋರಾಡಲು ಮೊದಲನೆಯ ಅಲ್ಲಾವುದ್ದೀನನು ಮಲಿಕವುಲ್ ತಾಜೂರನೊಂದಿಗೆ ದೌಲತಾಬಾದದ ಸೈನ್ಯ ಪಡೆಯೊಂದನ್ನು ಕಳಿಸಿಕೊಟ್ಟನು. ಈ ಹೊರಾಟದಲ್ಲಿ ವಿಜಯನಗರ ಹಿಂದೆ ಸರಿಯಬೇಕಾಯಿತು.

ಇವನ ನಂತರದಲ್ಲಿ ಪಟ್ಟಕ್ಕೆ ಬಂದ ಎರಡನೆಯ ಪ್ರೌಢದೇವರಾಯ ಕಳೆದುಕೊಂಡ ಸಾಮ್ರಾಜ್ಯದ ಎಲ್ಲ ಪ್ರಮುಖ ಸ್ಥಳಗಳನ್ನು ಮರಳಿ ಪಡೆಯುವುದರ ಮೂಲಕ ವಿಜಯನಗರದ ಕೀರ್ತಿಯನ್ನು ಉಳಿಸಿದ, ಬೆಳೆಸಿದ. ಇತಿಹಾಸದಲ್ಲಿ ಇದನ್ನು ಚಿರಸ್ಮರಣೀಯ ಕಾಲವನ್ನಾಗಿಸಿ ಕನ್ನಡ ಸಾಹಿತ್ಯಕ್ಕೆ, ಅದರಲ್ಲೂ ವಚನ ಸಾಹಿತ್ಯದ ಪುನರುಜ್ಜೀವನಕಾರ್ಯಕ್ಕೆ ಅವಕಾಶವನ್ನಿತ್ತು ಅಮರನಾದ.

**ಕೆಳದಿ ಅರಸರು:** ವಿಜಯನಗರದ ದೊರೆಗಳ ತರುವಾಯ ಹಿಂದೂಧರ್ಮ ಸಂಸ್ಕೃತಿಯ ಪೋಷಣೆ ಮಾಡಿಕೊಂಡು ಬಂದವರು ಕೆಳದಿ ಅರಸರು. ಕನ್ನಡ ಸಂಸ್ಕೃತಿಯ ಉದ್ದೀಪನಕ್ಕಾಗಿ ಶ್ರಮಿಸಿದವರಲ್ಲಿ ಕೆಳದಿ ಅರಸರಿಗೆ ವಿಶಿಷ್ಟ ಸ್ಥಾನ ಸಲ್ಲುತ್ತದೆ. ಕ್ರಿ.ಶ.೧೪೯೯ ರಲ್ಲಿ ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಚಿಕ್ಕಗ್ರಾಮ ಕೆಳದಿ ಈ ಮನೆತನದವರ ಕೇಂದ್ರಸ್ಥಳವಾಯಿತು. ಅಂದು ಪ್ರಾರಂಭವಾದ ಈ ಮನೆತನ ಸದಾಶಿವನಾಯಕ, ಶಿಸ್ತಿನ ಶಿವಪ್ಪನಾಯಕ, ಕೆಳದಿ ಚೆನ್ನಮ್ಮಾಜಿಯಂತಹ ಮಹತ್ವದ ಮುಂದಾಳುಗಳನ್ನು ನಾಡಿಗೆ ಅರ್ಪಣೆ ಮಾಡಿ ತನ್ನ ಕೃತಕೃತ್ಯತೆ ಸಾರಿದೆ. ಸುಮಾರು ೨೬೫ ವರ್ಷಗಳ ದೀರ್ಘಕಾಲ ಒಳ್ಳೆಯ ಘನತೆ ಗಾಂಭೀರ್ಯತೆ ಪಡೆದು ಹಿಂದೂ ಧರ್ಮದ ರಕ್ಷಾಕವಚವೆಂಬಂತೆ ಬಾಳಿಬದುಕಿದ ಮನೆತನವಿದು.

ಕೆಳದಿಯ ಮನೆತನದವರಿಗೂ ಬಂಕಾಪುರದವರಿಗೂ ರಕ್ತಸಂಬಂಧ ಬೆಳೆದುಬಂದಿತಲ್ಲದೆ ಕೆಳದಿ ಅರಸರೂ ಬಂಕಾಪುರದ ಬಗೆಗೆ ವಿಶೇಷ ಗಮನಕೊಟ್ಟಿದುಂಟು. ಈ ಮನೆತನದ ಸದಾಶಿವರಾಯ ದಕ್ಷ ಆಡಳಿತಗಾರನೆಂದು ಕೀರ್ತಿ ಪಡೆದವ. ರಾಜ್ಯಭಾರದ ದಕ್ಷತೆಯೊಂದಿಗೆ ಆತ ಸಮರ್ಥ ದಂಡನಾಯಕನೂ ಆಗಿದ್ದ. ಈತನ ಕಾಲದಲ್ಲಿ ವಿಜಯನಗರದ ದೊರೆಯಾಗಿ ಕೃಷ್ಣದೇವರಾಯ ರಾಜ್ಯಭಾರ ಕೈಕೊಂಡಿದ್ದ. ಸದಾಶಿವರಾಯನ ಸಮಯೋಚಿತ ಹೋರಾಟ ಕೃಷ್ಣದೇವರಾಯನ ರಾಜ್ಯಭಾರವನ್ನು ಸುಸೂತ್ರವಾಗಿ ಮುನ್ನಡೆಸಿಕೊಂಡು ಬಂದಿತ್ತು.

ಸದಾಶಿವನಾಯಕ ವಿಜಯನಗರದ ಕೃಷ್ಣದೇವರಾಯನ ಆಜ್ಞಾನುಸಾರವಾಗಿ ಅನೇಕ ಸಲ ದಂಡಯಾತ್ರೆಗಳನ್ನು ಕೈಕೊಂಡಿದ್ದುಂಟು. ಚಂದ್ರಗುತ್ತಿಯ ಚೋರನಾಯಕ, ಬಿದಿರೆಯ ಬರೀದಷಹ, ಬಿಜಾಪುರದ ಶಾತೇಯಖಾನ ಮುಂತಾದವರು ಸದಾಶಿವನಾಯಕನಿಗೆ ಶರಣಾಗತರಾಗಿದ್ದರು. ಈ ಎಲ್ಲ ಸಮರಗಳಲ್ಲಿ ಸದಾಶಿವನಾಯಕನ ಶೌರ್ಯಸಾಹಸಗಳನ್ನು ಮನಗಂಡ ಕೃಷ್ಣದೇವರಾಯ ಆವನಿಗೆ 'ಶತ್ರು ಸಪ್ತಾಂಗ ಹರಣ' ಅರಿದಲೆ ಮೇಘಡಂಬರ ದಿವಾಪ್ರದೀಪ' ಎಂಬ ಬಿರುದುಗಳನ್ನಿತ್ತು ಸತ್ಕರಿಸಿದ್ದ. ಒಂದು ಸಂದರ್ಭದಲ್ಲಿ ಸದಾಶಿವನಾಯಕನ ಹೋರಾಟವನ್ನು ಕುರಿತು,

ಧರೆಗಧಿಕನೆನಿಪ ಬಂಕಾ
ಪುರದುರಮಾದಣವೊಡೆಯರುಮಂ ಶಿಕ್ಷಿಸಿ ರಾ
ಯರಿನಷ್ಟಾದಶ ಕಂಪಣ
ವೆರೆದಾಗರದವಸಿಯ ವರಮಂ ನೆರೆ ಪಡೆದಂ

ಎಂದು ವರ್ಣಿಸಿದೆ. ಯುದ್ಧರಂಗದಲ್ಲಿ ಬಂಕಾಪುರದ ಮಾದಣ ಒಡೆಯನನ್ನು ಸೋಲಿಸಿದ್ದಲ್ಲದೆ ಈತ ಅದೇ 'ಬಂಕಾಪುರದ ಮಾದಣವೊಡೆಯರ ಮುಖದಿಂ ಮದಗದ ಕೆಲಸಮಂ ತೆರಳ್ಚಿಸಿ ತಂದು ಅವರಿಂದ ತಟಾಕ ಪ್ರತಿಷ್ಠೆ' ಮಾಡಿಸಿದ್ದ. ಇವನ ನಂತರದಲ್ಲಿ ಎಲ್ಲಪವೊಡೆಯನೆಂಬವ ಬಂಕಾಪುರದ ಆಳ್ವಿಕೆ ಕೆಲಕಾಲ ಕೈಕೊಂಡಿದ್ದ.

ಸದಾಶಿವನಾಯಕ ಮನೆತನದ ಸುಮಾರು ೧೩ ನೆಯ ತಲೆಮಾರಿನ ವ್ಯಕ್ತಿ ಇಮ್ಮಡಿ ಬಸವಪ್ಪನಾಯಕ. ಈತ ವಿವೇಕಿಯೂ ದೂರದೃಷ್ಟಿಯುಳ್ಳನೂ ಆಗಿದ್ದ. ಈತನಿಗೆ ಚೆನ್ನಮ್ಮಾಜಿ, ವೀರಮ್ಮಾಜಿ ಎಂಬ ಇಬ್ಬರು ಪತ್ನಿಯರು. ಇವರಲ್ಲಿ ವೀರಮ್ಮಾಜಿ ಬಂಕಾಪುರದ ಹೆಣ್ಣುಮಗಳು. ಇಮ್ಮಡಿ ಬಸವಪ್ಪನಾಯಕನಿಗೆ ಮಕ್ಕಳಿಲ್ಲದ್ದರಿಂದ ಚೆನ್ನಬಸವಪ್ಪನಾಯಕನೆಂಬವನನ್ನು ಕೆಳದಿಯ ಅರಸು ಮನೆತನಕ್ಕೆ ದತ್ತಕ ತೆಗೆದುಕೊಳ್ಳಲಾಗಿತ್ತು. ಆದರೆ ಈತ ಅಕಾಲದಲ್ಲಿ ಮರಣ ಹೊಂದಿದ್ದರಿಂದ ಬಸವಪ್ಪನಾಯಕನ ಮಡದಿ ವೀರಮ್ಮನಿಗೆ ಮುಂದೆ ಕೆಳದಿ ಪಟ್ಟಕ್ಕೆ ಯಾರನ್ನು ತರಬೇಕೆಂದು ಚಿಂತೆ ಅವಳ ಮನಸ್ಸನ್ನು ತುಡಿಯುತ್ತಿತ್ತು.

ಚನ್ನಬಸವೇಂದ್ರಭೂಪಂ
ಪನ್ನಗಭೂಷಣನೊಳೈಕ್ಯಮಾಗಲ್ಕೊಡ ನಾ
ಚೆನ್ನವೀರಾಂಬೆ ಸಂಸ್ಥಾ
ನನ್ನಡೆವೊಡೆಮುಂತೆ ಮಾರ್ಗಮಂ ಕಾಣದಣಂ//

ಪಿರಿದುಂ ಚಿಂತಿಸಿ ಬಳಿಕೊಂ
ದುರುಪಥಮಂ ಕಂಡು ತಮ್ಮ ಸೋದರಮಾವಂ
ಗರೆ ಪುತ್ರರ್ನಾಲ್ವರಿರ್ಪ
ರ್ಪರಿಕಿಪೊಡಾ ನಾಲ್ವರೊಳ್ ಕನಿಷ್ಠಾತ್ಮಜನಂ//

ಧರೆಯೊಳಗತಿಶಯಬಂಕಾ
ಪುರದುಜ್ವಲ ಚನ್ನವೀರಪನ ಸುಕುಮಾರಂ
ಧುರಧೀರಸೋಮಶೇಖರ
ಧರಣೀಶ್ವರವರರ್ಯನಮರಗಿರಿನಿಭಧೈರ್ಯಂ//

ಸುಲಭದೆ ಗೃಹೀತಪುತ್ರನ
ನೊಲವಿಂದ ಮಾಡಿಕೊಂಡು ಸಂಸ್ಥಾನಕ್ಕಂ
ನಿಲಿಪುದೆ ಸುಮಂತ್ರಮೆಂದಾ
ಲಲನಾಮಣಿ ತನ್ನ ಮನದೆ ನಿಶ್ಚಯಿಸುತದತುಂ//

ನಿಶ್ಚಯಂಗೈದನಂತರಮಾ ಚೆನ್ನವೀರಮ್ಮಾಜಿ ಈಶ್ವರ ಸಂವತ್ಸರದ ಶ್ರಾವಣ ಬಹುಳ ಪಂಚಮಿ ಗುರುವಾರದೊಳ್ತಮ್ ಸೋದರಮಾವನಾದ ಬಂಕಾಪುರದ ಪಟ್ಟಣಸೆಟ್ಟಿ ಚನ್ನವೀರಪ್ಪನವರ ಕನಿಷ್ಠಪುತ್ರನಂ ಸರ್ವಸಂಭ್ರಮದೊಳರಮನೆಯ ದೇವರ ಭವಂತಿಗೆಬಿಜಯಂಗೈಸಿ ತಂದ ಶೇಷಗುರಿ ಕಾರರ ಮುಂದಿಟ್ಟು ಕುಮಾರನಂ ಶಾಸ್ತ್ರೋಕ್ತ ಪ್ರಕಾರದಿಂ ತನಗೆ ಗೃಹೀತಪುತ್ರನಂ ಮಾಡಿಕೊಂಡಾ

ಕುಮಾರಗಂ ಸೋಮಶೇಖರನಾಯಕನೆಂದು ನಾಮಕರಣಮಂ ರಚಯಿಸಿ ಪಟ್ಟಗಟ್ಟಿಸಿದ್ದಳು. ಇಷ್ಟಾದರೂ ಅಪ್ರಾಪ್ತವಯಸ್ಸಿನ ಈ ಬಾಲಕನನ್ನು ಮುಂದಿರಿಸಿಕೊಂಡು ಚನ್ನವಿರಮ್ಮಾಜಿ ತಾನೇ ರಾಜಕೀಯ ಸೂತ್ರಗಳನ್ನು ಮುನ್ನಡಿಸಿಕೊಂಡು ಬಂದಿದ್ದಳು.

ಈ ನಡುವೆ ಕೆಳದಿಯ ಮೇಲೆ ಮರಾಠರ ಉಪಟಳ ಹೆಚ್ಚಾಗತೊಡಗಿತು. ಅವರನ್ನು ಸಮಾಧಾನಗೊಳಿಸಲು ವೀರಮ್ಮಾಜಿ ಪ್ರಜೆಗಳ ಮೇಲಿನ ಕರ ತೆರಿಗೆಗಳನ್ನು ಹೆಚ್ಚಿಸಬೇಕಾಯಿತು. ಇದು ಪ್ರಜೆಗಳನ್ನು ಹೆಚ್ಚಿನ ರೂಪದಲ್ಲಿ ಕುಪಿತಗೊಳಿಸತೊಡಗಿತು. ರಾಣಿ ಮತ್ತು ಪ್ರಜೆಗಳ ಮಧ್ಯ ಸೌಹಾರ್ದವಿಲ್ಲದುದನ್ನು ಮನಗಂಡ ಹೈದರಾಲಿ ಕೆಳದಿಯ ಮೇಲೇರಿ ಬಂದು ವೀರಮ್ಮ, ಅವಳ ದತ್ತುಪುತ್ರನನ್ನು ಸೆರೆಹಿಡಿದು ಕೆಳದಿ ಸಾಮ್ರಾಜ್ಯವನ್ನು ಕೈವಶಪಡಿಸಿಕೊಂಡ. ಹೀಗೆ ಸುಮಾರು ೩೦೦ ವರ್ಷಗಳ ವರೆಗೆ ಹೆಸರನ್ನು ಸಂಪಾದಿಸಿಕೊಂಡ ಕೆಳದಿ ಅರಸು ಮನೆತನ ಇತಿಹಾಸದಪುಟದಲ್ಲಿ ಲೀನವಾಗಿ ಹೋಯಿತು.

**ಬಿಜಾಪುರದ ಆದಿಲಶಹ ಮನೆತನ:** ಕ್ರಿ.ಶ.೧೫೭೩ರಲ್ಲಿ ಬಿಜಾಪುರದ ಮೊದಲನೆಯ ಆಲಿ ಆದಿಲಶಾಹ (೧೫೫೮–೮೦) ಧಾರವಾಡವನ್ನು ಗೆದ್ದು ಬಂಕಾಪುರಕ್ಕೆ ಮುತ್ತಿಗೆ ಹಾಕಿದ. ಈ ಕಾಲಕ್ಕೆ ವಿಜಯನಗರದ ಆಳರಸನಾಗಿದ್ದ ವೆಲ್ಲಪರಾಯನೆಂಬವ ಸ್ವತಂತ್ರವಾಗಿ ಬಂಕಾಪುರವನ್ನು ತನ್ನ ರಾಜಧಾನಿಯನ್ನಾಗಿಸಿಕೊಂಡಿದ್ದ. ಆದಿಲಶಹನ ಮುತ್ತಿಗೆಯ ಕಾಲಕ್ಕೆ ವೆಂಕಟಾದ್ರಿಯ ಸಹಾಯ ಸಕಾಲಕ್ಕೆ ವೆಲ್ಲಪರಾಯನಿಗೆ ದೊರಕದೆ ಹೋದರೂ ಆತ ಸಮರ್ಥನಾಗಿಯೇ ಹೋರಾಡಿದ. ಆದರೆ ವಿಜಾಪುರದ ಸೇನಾಪತಿ ಮುಸ್ತಫಾಖಾನನೆಂಬವ ಹಿಡಿದ ಪಟ್ಟು ಬಿಡದೆ ಹದಿನೈದು ತಿಂಗಳು ಹೋರಾಡಿ ಬಂಕಾಪುರವನ್ನು ವಶಪಡಿಸಿಕೊಂಡ. ಬಂಕಾಪುರದ ಕೋಟೆ ಆತನ ಕೈವಶವಾದ ಕೂಡಲೇ ಕೋಟೆಯಲ್ಲಿದ್ದ ದೇವಸ್ಥಾನವೊಂದನ್ನು ನಾಶಪಡಿಸಿ ಆ ದೇವಸ್ಥಾನದ ತಳಹದಿಯ ಮೇಲೆ ಮಸೀದಿಯೊಂದರ ಅಡಿಗಲ್ಲನ್ನಿಟ್ಟ. ಅವನ ಸಾಹಸಕ್ಕೆ ಮೆಚ್ಚಿದ ಆದಿಲಶಹ ಮುಸ್ತಫಾಖಾನನಿಗೆ ಅನೇಕ ನಗರಗಳ ಆದಾಯವನ್ನು ಬಿಟ್ಟುಕೊಟ್ಟ. ಮುಂದೆ ಕ್ರಿಶ. ೧೫೭೮ರವರೆಗೆ ಮುಸ್ತಫಾಖಾನ ಬಂಕಾಪುರದಲ್ಲಿ ತಳಊರಿದ. ಅವನ ಆವಸಾನವೂ ಇದೇ ಸ್ಥಳದಲ್ಲಿ ಆಯಿತು.

ವಿಜಾಪುರದ ಸಿಕಂದರ ಆದಿಲಶಹ (೧೬೭೨–೧೬೮೬) ಸುಲ್ತಾನನು ಕ್ರಿಶ ೧೬೭೩ ರಲ್ಲಿ ಅಬ್ದುಲ್ ಕರೀಮಖಾನನೆಂಬ ಸವಣೂರ ನವಾಬನ ವಂಶಜನನ್ನು ವಿಜಾಪುರದ ಪರವಾಗಿ ಬಂಕಾಪುರ ಪ್ರಾಂತದ ಮಂಡಲಾಧಿಕಾರಿಯಾನ್ನಾಗಿ ನಿಯಮಿಸಿದ. ಇಮ್ಮಡಿ ಆದಿಲಶಾಹನು ಕ್ರಿಶ ೧೬೭೨ರಲ್ಲಿ ನಿಧನನಾದ ತರುವಾಯ ಸ್ವಾದಿ, ಕೊಂಕಣ ಪ್ರದೇಶಗಳನ್ನೊಳಗೊಂಡ ಕರ್ನಾಟಕ ಪ್ರದೇಶದ ಬಹುಭಾಗ ಇವನ ಕೈವಶಕ್ಕೆ ಬಂದಿತು. ಅಬ್ದುಲ್ ಕರೀಮಖಾನ ಬಂಕಾಪುರವನ್ನು ತನ್ನ ರಾಜಧಾನಿಯನ್ನಾಗಿಸಿಕೊಂಡ. ಇವನಿಗೆ ನಾಲ್ಕು ಜನ ಗಂಡುಮಕ್ಕಳು. ಅವರಲ್ಲಿ ಅಬ್ದುಲ್ ರಾವೂಫಖಾನ ಕ್ರಿಶ ೧೬೭೮ ರಿಂದ ೧೭೧೪ರವರೆಗೆ ಮುಂಬೈ ಕರ್ನಾಟಕ ಪ್ರಾಂತದ ಸುಭೇದಾರನಾಗಿ ಆಡಳಿತ ನಡೆಸಿದ.

ರಾವೂಫಖಾನ ಅಧಿಕಾರಕ್ಕೆ ಬಂದ ಕೆಲವೇ ಕಾಲದಲ್ಲಿ ಔರಂಗಜೇಬ ವಿಜಾಪುರದ ಮೇಲೆ ದಂಡೆತ್ತಿ ಬಂದು ಸಿಕಂದರಶಾಹನನ್ನು ಸೋಲಿಸಿದ. ಕೂಡಲೇ ಸಿಕಂದರಶಹ ತನ್ನ ರಾಜಮುದ್ರೆ ಮತ್ತು ಕೀಲಿಕೈಗಳನ್ನು ಅಬ್ದುಲ್ ರಾವೂಫ್ ಖಾನನ ಮೂಲಕ ಔರಂಗಜೇಬನಿಗೆ ತಲುಪಿಸಿ ಶರಣಾಗತನೆಂದು ಸಾರಿದ. ಈ ಹೋರಾಟದಲ್ಲಿ ಅಬ್ದುಲ್ ರಾವೂಫ್‌ಖಾನನ ಶೌರ್ಯ ಸಾಹಸಗಳನ್ನು ಮೆಚ್ಚಿದ್ದ ಔರಂಗಜೇಬ ಆತನಿಗೆ 'ದಿಲೆರ ಜಂಗ ಬಹದ್ದೂರ' ಎಂಬ ಬಿರುದನ್ನಿತ್ತು ಗೌರವಿಸಿದ್ದನಲ್ಲದೆ ತನ್ನ ಮಗಳನ್ನು ಆತನಿಗಿತ್ತು ವಿವಾಹ ಮಾಡಿ ಬಾಂಧವ್ಯದ ಬೆಸುಗೆ ಹಾಕಿದ. ಈ ಶುಭಸಮಯದಲ್ಲಿ ರಾವೂಫಖಾನನಿಗೆ ಬಂಕಾಪುರ, ಅಜಂನಗರ, ತೊರಗಲ್ ಹೆಸರಿನ ಉಂಬಳಿ ಹಾಕಿಕೊಟ್ಟ. ಈ ಸಮಗ್ರ ಜಹಗೀರು ಸುಮಾರು ಎರಡು ಕೋಟಿ ನಾಲ್ವತ್ತು ಸಾವಿರ ರೂಪಾಯಿಯ ಉತ್ಪನ್ನ ಪಡೆದಿತ್ತು. ಈ ಕಾಲದಿಂದ ಬಂಕಾಪುರವನ್ನು 'ಬಾವೀಸ ಮಹಲ್ ಕಟ್ಟಿಮನಿ' ಎಂಬ ಹೆಸರಿನಿಂದ ಕರೆಯಲಾಯಿತು. ಈ ಬಾವೀಸ ಮಹಲ್‌ದಲ್ಲಿ ಒಳಗೊಂಡಿದ್ದ ಪ್ರದೇಶಗಳು;

೧ ಪರಗಣ – ಕುಂದಗೋಳ

೨ ಪರಗಣ – ಕಾರಡಗಿ

೩ ಪರಗಣ – ಮಿಶ್ರಿಕೋಟಿ

೪ ಸಮತ – ಬೊಮ್ಮಿಗಟ್ಟಿ

೫ ಸಮತ – ಕಲಘಟಗಿ

೬ ಸಮತ – ತಡಸ

೭ ಸಮತ – ಕೆರೂರ–ತಡಸ

೮ ಸಮತ – ಕೆರೂರ–ಖುರ್ದ

೯ ಸಮತ – ಖೋಡ

೧೦ ಸಮತ – ಕಾಗಿನೆಲೆ

೧೧ ಪರಗಣ – ರಾಣೆಬೆನ್ನೂರ

೧೨ ಸಮತ – ನಿಡಸಂಗಿ

೧೩ ಸಮತ – ಶಿಗ್ಗಾಂವ

೧೪ ಪರಗಣ – ಹಾನಗಲ್ಲ್

೧೫ ಪರಗಣ – ಬಂಕಾಪುರ

೧೬ ಪರಗಣ – ತಿಳುವಲ್ಲಿ

೧೭ ಪರಗಣ – ಆಡೂರು

೧೮ ಪರಗಣ – ಕುಪೇಲೂರು

೧೯ ಸಮತ – ಮಾಸೂರ

೨೦ ಪೇಟ – ಕಸಬಾ ಹಾವೇರಿ

೨೧ ಪೇಟ – ಹಂಸಭಾವಿ

೨೨ ದೇಹಾತ – ಕಿಲ್ಲೇ ಐರಣಿ

ಔರಂಗಜೇಬ, ಅಬ್ದುಲ್ ರಾವೂಫಖಾನನಿಗೆ ಕೊಟ್ಟ ಮೂರು ಸರ್ಕಾರಗಳಲ್ಲಿ ಬಂಕಾಪುರ ಸರ್ಕಾರ ಒಂದಾಗಿತ್ತು, ಅವನಿಗೆ ಹಾಕಿ ಕೊಟ್ಟ ಜಹಗೀರುಗಳಲ್ಲಿ ಪಮುಖ ಸ್ಥಳವಿದಾಗಿದ್ದುದರಿಂದ ಇಂದಿಗೂ ಬಂಕಾಪುರಕ್ಕೆ 'ಬಾವೀಸಮಹಲ್ ಕಟ್ಟೀಮನಿ ಬಂಕಾಪುರ' ಎಂಬ ಹೆಸರು ಉಳಿದು ಕೊಂಡಿದೆ.

ಮುಂದೆ ಕ್ರಿ.ಶ. ೧೭೪೭ ರಲ್ಲಿ ಅಬ್ದುಲ್ ರಾವೂಫಖಾನರ ತಮ್ಮ ಗಫಾರಖಾನನ ಮಗ ಅಬ್ದುಲ್ ಮುಜೀದಖಾನರ ಕಾಲಕ್ಕೆ ಮರಾಠರೊಂದಿಗೆ ಒಪ್ಪಂದ ಮಾಡಿಕೊಂಡು ಹುಬ್ಬಳ್ಳಿ, ಹಾನುಗಲ್ಲ ಬಂಕಾಪುರಕೋಟೆ ಮತ್ತು ಇತರ ಕೆಲವು ಪ್ರದೇಶಗಳನ್ನು ತನ್ನ ವಶದಲ್ಲಿರಿಸಿಕೊಂಡು ಉಳಿದ ಭಾಗಗಳಾದ ಧಾರವಾಡ, ನವಲಗುಂದ, ಗದಗ, ರಾಣೇಬೆನ್ನೂರಿನ ಕೆಲವು ಭಾಗಗಳನ್ನು ಮತ್ತು ಖೋಡ ಎಂಬ ಗ್ರಾಮವನ್ನು ಅವರಿಗೆ ಬಿಟ್ಟುಕೊಡಲಾಯಿತು.

**ಹೈದರಲಿ ಮತ್ತು ಟಿಪ್ಪುಸುಲ್ತಾನ:** ೧೭೫೫ರಲ್ಲಿ ಫ್ರೆಂಚ್ ಜನರಲ್ ಬಂಕಾಪುರವನ್ನು ಮುತ್ತಿದಾಗ ಸವಣೂರ ನವಾಬ ಬಂಕಾಪುರ ಕೋಟೆಯನ್ನು ಹೋಲ್ಕರನಿಗೆ ಒತ್ತಿ ಹಾಕಿದ. ೧೭೭೬ರ ಸುಮಾರಿಗೆ ಹೈದರಲಿ ಬಂಕಾಪುರವನ್ನು ಗೆದ್ದು ತನ್ನ ಹಿತರಕ್ಷಕರಿಗೆ ಕೊಟ್ಟು ಮೈಸೂರಿಗೆ ತೆರಳಿದ. ೧೭೮೦ರಲ್ಲಿ ಆತನ ಮಗ ಟಿಪ್ಪೂ ಸುಲ್ತಾನ ಸವಣೂರನ್ನು ಗೆದ್ದ ನಂತರ ಬಂಕಾಪುರದಲ್ಲಿ ಮೊಹರಮ್ ಹಬ್ಬದ ಆಚರಣೆಯನ್ನು ಅದ್ದೂರಿಯಿಂದ ಮಾಡಿದ. ೧೮೦೦ರ ವೇಳೆಯ ಮರಾಠಾ ದಾಖಲೆಯಿಂದ ಬಂಕಾಪುರ ೧೬ ಪರಗಣೆಯ ಮುಖ್ಯ ಕೇಂದ್ರವಾಗಿತ್ತು. ಮುಂದೆ ಪ್ಲಾಸಿಯ ಒಪ್ಪಂದದ ಪ್ರಕಾರ ಇದನ್ನು ಬ್ರಿಟಿಷ ವಶಕ್ಕೆ ಬಿಟ್ಟುಕೊಡಲಾಯಿತು. ಇಲ್ಲಿಂದ ಬಂಕಾಪುರದ ಆಳ್ವಿಕೆ ಸವಣೂರ ನವಾಬರ ಪಾಲಿಗೆ ಬಂದಿತು.[೯] ಇಲ್ಲಿಯ ಕೋಟೆ ಇವರ ಕಾಲದಲ್ಲಿ ಭದ್ರತೆಗೆ ಹೆಸರಾಗಿತ್ತು. ಅಂದಿನ ಕಾಲದಲ್ಲಿಯೂ ಈ ಪ್ರದೇಶಗಳು ಸವಣೂರು ಬಂಕಾಪುರಗಳೆಂದೇ ಹೆಸರಾಗಿದ್ದವು. ಮೊದಮೊದಲು ನವಾಬರ ಮುಖ್ಯ ಸ್ಥಳವಾಗಿ, ಪ್ರಮುಖ ವ್ಯಾಪಾರಿ ಕೇಂದ್ರವೆನಿಸಿದ ಬಂಕಾಪುರ ಕ್ರಮೇಣ ಅನೇಕ ಸಾಂಸ್ಕೃತಿಕ ಚಟುವಟಿಕೆಗಳ ಮೂಲ

ಸ್ಥಳವೆನಿಸಿತು. ಇಂಥ ಸಂದರ್ಭದಲ್ಲಿ ೨೨ ಜಹಗೀರುಗಳಲ್ಲಿ 'ಕಟ್ಟೀಮನಿ' ಸ್ಥಾನವನ್ನು ಬಂಕಾಪುರ ಪಡೆದುದು ಮಹತ್ವದ್ದು. ೧೮೦೨ರಲ್ಲಿ ಪೇಶ್ವೆ ಅವರ ಬೇಸಿನ್ ಸಂಧಾನ ಪ್ರಕಾರ ಸವಣೂರ ಜೊತೆಗೆ ಬಂಕಾಪುರ ತಾಲೂಕನ್ನು ಬ್ರಿಟಿಷರಿಗೆ ಒಪ್ಪಿಸಿದರೂ ಬುಂದೇಲ್ ಖಂಡಕ್ಕೆ ಪ್ರತಿಯಾಗಿ ಮತ್ತೆ ಪೇಶ್ವೆಗೆ ೧೮೦೩ರಲ್ಲಿ ವಾಪಸ್ಸು ಕೊಡಲಾಯಿತು.

**ಹಂಡೆ ಪಾಳೆಯಗಾರರು:** ವಿಜಯನಗರದ ಅಚ್ಯುತರಾಯನ ಕಾಲದಲ್ಲಿ ವಿಜಾಪುರ ಜಿಲ್ಲೆಯ ಮುತ್ತಗಿ ಎಂಬ ಗ್ರಾಮದಲ್ಲಿ ಗೌಡಿಕೆಮಾಡಿಕೊಂಡು ಬಾಳುತ್ತಿದ್ದ ಒಂದು ಮನೆತನ ಹಂಡೆಯವರದು. (ಕ್ರಿ. ಶ.೧೫೬೭ ಕ್ರಿ. ಶ.೧೭೭೫) ಅಚ್ಯುತರಾಯ, ಕೃಷ್ಣದೇವರಾಯರ ತರುವಾಯ ಆದಿಲಶಹನ ಕಾಲದಲ್ಲಿ ಬಿಜಾಪುರದ ಕೃಷ್ಣಾನದಿಗೆ ಉತ್ತರಭಾಗದಲ್ಲಿರುವ ಮುರ್ತಿಗಿರಿ ಎಂಬ ಗ್ರಾಮದಲ್ಲಿ ಹಂಡೆಕುರುಬ ಜಾತಿಯವರಾದ ಇವರು ತಮ್ಮ ಅಧಿಕಾರವನ್ನು ಮುಂದುವರೆಸಿಕೊಂಡು ಹೋಗಿದ್ದರು. ಈ ಮನೆತನದವರ ಬಗೆಗೆ ನಮಗೆ ಅಧಿಕೃತವಾಗಿ ದೊರಕುವ ದಾಖಲೆಗಳು ಬಳ್ಳಾರಿ ಮತ್ತು ಕುರುಗೋಡ ಕೈಫಿಯತ್ತುಗಳು.

ಈ ಹಂಡೆ ಮನೆತನದ ಮೂಲಪುರುಷ ಬಾಲದ ಹನುಮಪ್ಪನಾಯಕನೆಂಬವ. ಈತ ದೈವಾನುಗ್ರಹದಿಂದ, ಬುದ್ಧಿವಂತಿಕೆಯಿಂದ ಬಿಜಾಪುರದ ಸುಲ್ತಾನರ ವಿಶ್ವಾಸವನ್ನು ಸಂಪಾದಿಸಿಕೊಂಡು ಅವರಿಂದ ಪೌಜುದಾರಿ ಮೊಕರೂರು ಪಡೆದಿದ್ದನು. ಅವನ ನಿಷ್ಠಾಪೂರ್ಣ ಸೇವೆ ಹೆಚ್ಚು ಗೌರವಕ್ಕೆ ಅವಕಾಶ ಮಾಡಿಕೊಟ್ಟಿತ್ತು. ಅವನ ಸೇವೆಗೆ ಮೆಚ್ಚಿದ ಸುಲ್ತಾನ ಆತನಿಗೆ 'ವಜೀರಪ್ಪನಹ' ಎಂಬ ಬಿರುದನ್ನಿತ್ತು ಗೌರವಿಸಿದ್ದ. ಕುರುಗೋಡ ಕೈಫಿಯತ್ತಿನ ಪ್ರಕಾರ 'ಈತನಿಗೆ ಬಂಕಾಪುರದ ಸೀಮೆ ಅಲ್ಲದೆ ಅಲ್ಲಿಂದ ಬಳ್ಳಾರಿಗೆ ಬಂದು ಅಲ್ಲೇ ಕೋಟೆಯನ್ನು ಕಟ್ಟಿಸಿ ಕುರುಗೋಡ ಪರಗಣೆ ೧, ಶಿರಗುಪ್ಪ ಪರಗಣೆ, ಕಣೆಕಲ್ಲು ಸಮ್ಮತ್ತು ೧, ಅನಂತಪುರ, ಧರ್ಮಾವುರ ವಗ್ಯೆರೆ ಪರಗಣೆ ನಂದ್ಯಾಲ ಸಿರಿವಾಳ ಪರಗಣೆಗಳು ಈತನ ಕೈವಶದಲ್ಲಿದ್ದವು.

ಕೆಲಕಾಲದಲ್ಲಿ ದಕ್ಷಿಣಪ್ರಾಂತ ಅರಾಜಕತೆಗೆ ಒಳಗಾಗಲು ಸುಲ್ತಾನನು ಈ ಬಾಲದ ಹನುಮಪ್ಪ ನಾಯಕನನ್ನು ಅದರ ಮೇಲ್ವಿಚಾರಣೆಗೆ ಕಳುಹಿಸಿದನು, ತನ್ನ ಸಮಸ್ತ ಬಲದೊಂದಿಗೆ ಬಾಲದ ಹನುಮಪ್ಪನಾಯಕ ಬಳ್ಳಾರಿ ಕುರುಗೋಡು ತೆಕ್ಕಲುಕೋಟೆ ಮೂಲಕ ಬಂಕಾಪುರಕ್ಕೆ ಬಂದು ಕಿಲ್ಲೆ ಕಟ್ಟಿಸಿ ಶಾಂತಿಯ ವ್ಯವಸ್ಥೆ ಮಾಡಿದ. ಅವನ ಸೇವಾಪರ ಮನೋಭಾವಕ್ಕೆ ಮಾರುಹೋದ ಸುಲ್ತಾನ ಅವನನ್ನು ತನ್ನ ವಿಶ್ವಾಸದ ವ್ಯಕ್ತಿಯನ್ನಾಗಿ ಸ್ವೀಕರಿಸಿ ಬಹುಮಾನಗಳನ್ನಿತ್ತು ಸತ್ಕರಿಸಿದ. ಈ ಹನುಮಪ್ಪನಾಯಕನಿಗೆ ಐದು ಜನ ಗಂಡುಮಕ್ಕಳು. ಇವರನ್ನು ಕುರುಗೋಡ ಕೈಫಿಯತ್ತು

ಧರಿಗೆ ಧರ್ಮಜನಂಕುಶ
ಪರಬಲದೊಳ್ ಭೀಮದೇವ ಅರ್ಜುನರಾಮ
ಧುರಧೀರನುನಕುಲಮಲ್ಲನು
ನೆರೆಗೆಲೆ ಸಹದೇವ ಚಿಕ್ಕಮಲ್ಲವಜೀರ//

ಎಂದು ಹೊಗಳಿದೆ. ಇವರು ಕ್ರಮವಾಗಿ ಅಂಕುಶರಾಯ, (೨) ದೇವಪ್ಪನಾಯಕ (೩) ನಿಚ್ಚಮ ದುವಣಿಗ ರಾಮಪ್ಪನಾಯಕ(೪) ಹೀರೆಮಲ್ಕಪ್ಪನಾಯಕ(೫) ಚಿಕ್ಕಮುಲ್ಕಪ್ಪನಾಯಕ ನಾಯಕ ಎಂಬವರು.

ಹಂಡೆ ಬಾಲದ ಹನುಮಪ್ಪನಾಯಕ ಈ ಐದು ಮಂದಿ ಮಕ್ಕಳನ್ನು ಕರೆದುಕೊಂಡು ಒಂದು ಸಲ ಸುಲ್ತಾನರ ಭೇಟಿಗೆ ಹೋದ. ಸುಲ್ತಾನರು ಸುಂದರಾವಾದ ಈ ಐದುಮಕ್ಕಳನ್ನು ನೋಡಿ ಆಲೋಚನಪರರಾದರು. ಇವರೊಳಗೆ ಒಬ್ಬ ಮಗನನ್ನು ಕೊಟ್ಟರೆ ಸುಂತಿ ಮಾಡಿ ತನ್ನ ಬಳಿಯಲ್ಲಿ ಇಟ್ಟುಕೊಳ್ಳಬೇಕೆಂಬುದು ಸುಲ್ತಾನರ ಇಚ್ಛೆ. ಈತ ಸಮಯ ಸಾಧಿಸಿ ಬಾಲದ ಹನುಮಪ್ಪನಾಯಕನ ಮುಂದೆ ಈ ವಿಚಾರ ಇಟ್ಟ. 'ನಿನ್ನ ಮಕ್ಕಳೊಳಗೆ ಒಬ್ಬ ಮಗನನ್ನು ನಮಗೆ ಕೊಡು' ಎಂದು ಬಾಯಿಬಿಟ್ಟು ಕೇಳಿದಾಗ ಹನುಮಪ್ಪನಾಯಕನಿಗೆ ಸಿಟ್ಟು ತಡೆಯದಾಯಿತು. ಆತ ತುಂಬ ಕೋಪಿಷ್ಟನಾಗಿ ಸುಲ್ತಾನನಿಗೆ 'ನಿಮ್ಮ ಜನಾನಾದೊಳಗಿರುವ ಒಬ್ಬ ಬೀಬಿಯನ್ನು ಕೊಟ್ಟರೆ ಇಂತಹ ಮಗನನ್ನು ಹುಟ್ಟಿಸಿ ಕೊಡುತ್ತೇನೆ' ಎಂದು ಹೇಳಿ ಅಲ್ಲಿಂದ ಹೊರಬಿದ್ದನು. ಸುಲ್ತಾನ ತನ್ನ ಸೈನ್ಯದೊಂದಿಗೆ ಹನುಮಪ್ಪನಾಯಕನ ಬೆನ್ನು ಹತ್ತಿದ. ಆ ವೇಳೆಗೆ ಕೃಷ್ಣಾನದಿ ತುಂಬಿ ಬಂದಿದ್ದರಿಂದ ಸುಲ್ತಾನರ ಸೈನ್ಯಕ್ಕೆ ಮಾರ್ಗ ಸಿಗದೇ ಹೋಗಲು ಅವರು ಮರಳಿ ಹೋಗಬೇಕಾಯಿತು. ಇತ್ತ ಹನುಮಪ್ಪನಾಯಕ ತನ್ನ ಐವರು ಮಕ್ಕಳೊಂದಿಗೆ ಬಳ್ಳಾರಿಗೆ ಬಂದು ಕೆಲಕಾಲ ರಾಜ್ಯವಾಳಿದ. ಬಳಿಕ ತನ್ನ ರಾಜ್ಯದಲ್ಲಿ ಹಿರಿಯ ಮಗ ಅಂಕುಶರಾಯನಿಗೆ ಬಂಕಾಪುರಸೀಮೆ, ದೇವಪ್ಪನಾಯಕನಿಗೆ ಶಿರಿವಾಳದಸೀಮೆ, ನಿಚ್ಚಮದುವಣಿಗ ಲಿಂಗರಾಮಪ್ಪ ನಾಯಕನಿಗೆ ಕುಂದರ್ಪಿಸೀಮೆ, ಚಿಕ್ಕ ಮುಲ್ಕಪ್ಪನಾಯಕನಿಗೆ ಅನಂತಪುರ, ಧರ್ಮಾವರಂ, ಹಿರಿಯ ಮುಲ್ಕಪ್ಪನಾಯಕನಿಗೆ ಬಳ್ಳಾರಿ ಕುರುಗೋಡುಗಳನ್ನು ಹಂಚಿಕೊಟ್ಟು ರಾಜ್ಯಬಾರದ ವ್ಯವಸ್ಥೆ ಮಾಡಿಕೊಟ್ಟ.

ಈ ಐವರ ಗುಣಾವಗುಣಗಳ ವಿವೇಚನೆ ಮಾಡಿದ ಬಳ್ಳಾರಿ ಕೈಫಿಯತ್ತು ಅಂಕುಶರಾಯನನ್ನು ಬಹುಧರ್ಮಿಷ್ಟನೆಂತಲೂ, ದ್ಯಾಮಣ್ಣನಾಯಕನನ್ನು ಬಹುಪರಾಕ್ರಮಿ ಎಂದೂ, ಹಿರೇಮುಲ್ಕಪ್ಪನಾಯಕ, ಚಿಕ್ಕಮಲ್ಕಪ್ಪನಾಯಕರನ್ನು ಪ್ರಸಿದ್ಧ ಪುರುಷರೆಂದು ಹೇಳುತ್ತದೆ.

ಅಂಕುಶರಾಯನ ವಂಶಸ್ಥರಾದ ಸಿದ್ದಪ್ಪನಾಯಕ ಮತ್ತು ಪ್ರಸನ್ನಪ್ಪನಾಯಕರೆಂಬ ಅಣ್ಣತಮ್ಮಂದಿರು ಮುಂದೆ ಕೆಲಕಾಲ ಬಂಕಾಪುರದ ಸೀಮೆಯಲ್ಲಿ ತಮ್ಮ ಅಧಿಕಾರ ಮುಂದುವರೆಸಿ ಕೊಂಡು ಹೋದುದು ತಿಳಿದುಬರುತ್ತದೆ. ಒಟ್ಟಿನಲ್ಲಿ ಹಂಡೆ ಮನೆತನ ಬಂಕಾಪುರದಲ್ಲಿ ಆಳಿದ ಕಾಲದ ಬಗೆಗೆ ನಿಖರವಾದ ದಾಖಲೆಗಳು ಗೊತ್ತಾಗದಿದ್ದರೂ ಕ್ರಿ.ಶ. ೧೫೬೭ ರಿಂದ ೧೭೭೫ರ ವರೆಗೆ ಇವರು ಪಾಳೆಯಗಾರಿಕೆ ಮಾಡಿದ ಬಗೆಗೆ ಕೈಫಿಯತ್ತುಗಳು ತಿಳಿಸಿವೆ.

**ನರಗುಂದ ಸಂಸ್ಥಾನ:** ಕ್ರಿ.ಶ. ೧೯ನೆಯ ಶತಮಾನದ ವೇಳೆಗೆ ಭಾರತ ದೇಶದಲ್ಲಿ ಸ್ವಾತಂತ್ರ್ಯ ಚಳವಳಿಯ ಗಾಳಿ ಬೀಸತೊಡಗಿತ್ತು. ಇಂಥ ಸಂದರ್ಭದಲ್ಲಿ ಕ್ರಿ.ಶ. ೧೮೫೭ರ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ ಸಂಸ್ಥಾನಗಳಲ್ಲಿ ನರಗುಂದ ಸಂಸ್ಥಾನವೂ ಒಂದು. ನರಗುಂದ ಬಾಬಾಸಾಹೇಬ ಸ್ವಾಂತಂತ್ರ್ಯಕ್ಕಾಗಿ ಬ್ರಿಟಿಷ ಸರಕಾರದ ವಿರುದ್ಧ ಬಂಡಾಯ ಹೂಡಿದರೂ ನೆರೆಯ ಸಂಸ್ಥಾನಿಕರ ಸಹಾಯ ಸಹಕಾರಗಳು ಸಕಾಲಕ್ಕೆ ದೊರಕದೆ ಹೋದುದು ಸಂಸ್ಥಾನದ ಅಳಿವಿಗೆ ಕಾರಣವಾಯಿತು.

ಮ್ಯಾನಸನ್ ಎಂಬ ಆಂಗ್ಲ ಅಧಿಕಾರಿಯ ಕೊಲೆಯ ಆರೋಪ ಹೊತ್ತ ಬಾಬಾಸಾಹೇಬ ತಲೆ ಮರೆಸಿಕೊಳ್ಳಬೇಕಾಯಿತು. ಆಗ ಆತನ ತಾಯಿ ಯಮುನಾಬಾಯಿ ಮಡದಿ ಸಾವಿತ್ರಿ ಬಾಯಿಯವರು ಮರ್ಯಾದೆಗೆ ಅಂಜಿ ಮಲಪ್ರಭೆಗೆ ಆಹುತಿಯಾದರು. ಈ ಘಟ್ಟದವರೆಗಿನ ಬಾಬಾ ಸಾಹೇಬನ ಚರಿತ್ರಾತ್ಮಕ ಗ್ರಂಥಗಳಲ್ಲಿ ಏಕರೂಪತೆ ವ್ಯಕ್ತವಾಗುತ್ತದೆ. ಬಾಬಾಸಾಹೇಬನ ಸೆರೆ ಹಿಡಿದು ಕೊಟ್ಟವರಿಗೆ ಹತ್ತು ಸಾವಿರ ರೂಪಾಯಿಗಳನ್ನು ಬಹುಮಾನ ಕೊಡುವುದಾಗಿ ಬ್ರಿಟಿಷ ಸರಕಾರ ಸಾರಿತ್ತು. ಇಂಥ ಸಂದಿಗ್ದ ಸಂದರ್ಭವನ್ನು ಕೆಲವು ಕೃತಿಗಳು ಬಾಬಾಸಾಹೇಬ ತೊರಗಲೆ ಸಂಪಗಾವಿಯಲ್ಲಿ ಸೆರೆ ಸಿಗಲು ಬ್ರಿಟಿಷರು ಅವನನ್ನು ತಂದು ಬೆಳಗಾವಿಯಲ್ಲಿ ಗಲ್ಲಿಗೇರಿಸಿದರು ಎಂದು ತಿಳಿಸಿದರು, ಇನ್ನು ಕೆಲವು ಕೃತಿಗಳು ಅವನು ನೇಪಾಳದ ಕಡೆಗೂ, ದೇಶಾಂತರವಾಗಿಯೋ ಹೋದನೆಂದು ತಿಳಿಸುತ್ತವೆ.

ಬಂಕಾಪುರ ಪ್ರಾಚೀನ ಕಾಲದಿಂದಲೂ ಭದ್ರವಾದ ಸ್ಥಳವಾಗಿದ್ದಿತಷ್ಟೇ. ಈ ಪ್ರದೇಶದಿಂದ ಹಾನುಗಲ್ಲಿಗೆ ಹೋಗುವ ರಸ್ತೆಗೆ ಹೊಂದಿಕೊಂಡು 'ಜೇರಗಟ್ಟಿಮಠ' ಎಂಬ ಹೆಸರಿನ ವೀರಶೈವ ಮಠವಿದೆ. ಕಾಡು ಮುಳ್ಳುಗಳ್ಳಿಯಿಂದ ಆವೃತವಾದ ಈ ಮಠಕ್ಕೆ ಹೊಂದಿಕೊಂಡಂತೆ ಇತ್ತೀಚೆಗೆ ಮಂಗಳೂರು ಹಂಚಿನ ಎರಡುಕೋಣೆಗಳನ್ನು ಸೇರಿಸಲಾಗಿದೆ. ಇಲ್ಲಿಯ ಒಂದು ಕೋಣೆಯಲ್ಲಿರುವ ಎರಡು ಸಮಾಧಿಗಳಲ್ಲಿ ಇಂದಿಗೂ ಒಂದನ್ನು ನರಗುಂದ ಬಾಬಾಸಾಹೇಬನ ಸಮಾಧಿ ಎಂದು ಕರೆಯುತ್ತಾರೆ. ತಲೆ ತಪ್ಪಿಸಿಕೊಂಡು ಬಂದ ಬಾಬಾಸಾಹೇಬ ಇದು ಸುರಕ್ಷಿತಸ್ಥಳವೆಂದು ಬಗೆದು ಎದುರಿನಲ್ಲಿದ್ದ ಒಂದು ಸಮಾಧಿಯನ್ನು ಪೂಜಿಸಿಕೊಂಡು ಸನ್ಯಾಸಿವೇಷದಿಂದ ತನ್ನ ಜೀವನದ ಕೊನೆಯ ಭಾಗವನ್ನು ಈ ಪ್ರದೇಶದಲ್ಲಿ ಕಳೆದನೆಂದು ಅಲ್ಲಿಯ ಕೆಲವು ವಯೋವೃದ್ಧರು ಹೇಳುತ್ತಾರೆ. ಅವನ ಜೀವನಕ್ಕೆ ಸಂಬಂಧಿಸಿದಂತೆ ಹಲವಾರು ವಿಚಾರಗಳನ್ನು ತಿಳಿಸುತ್ತಾರೆ. ಮರಣಸಮಯದಲ್ಲಿ ಹೊಗೆಸೊಪ್ಪು ಸೇದುವ ಅವನ ಚಿಲುಮೆಯನ್ನು ಸಮಾಧಿಯಲ್ಲಿ ಇರಿಸಿದೆ ಎಂದು ಹೇಳುತ್ತಾರೆ. ಬಾಬಾಸಾಹೇಬನದೆನ್ನಬಹುದಾದ ಒಂದು ಸುಂದರ ಬೀಸಣಿಕೆಯೂ ಅಲ್ಲಿ ದೊರೆತಿದೆ. ಇವೆಲ್ಲವನ್ನು ಗಮನಿಸಿದರೆ ಬಾಬಾಸಾಹೇಬ ತನ್ನ ಕೊನೆಗಾಲವನ್ನು ಬಂಕಾಪುರ ದಲ್ಲಿಯೇ ಕಳೆದಿರಬೇಕೆನಿಸುತ್ತದೆ. ಇದಕ್ಕೆ ಪುಷ್ಟಿ ಕೊಡುವಂತೆ 'ಜನಪದ ನರಗುಂದ' ಎಂಬ ಗ್ರಂಥದಲ್ಲಿ ಕ್ರಾಂತಿವೀರ ಬಾಬಾಸಾಹೇಬ ಹೆಸರಿನ ಲಾವಣಿಯ ಭಾಗವೊಂದು ಹೀಗಿದೆ.

ಇತ್ತ ಇಂಗ್ರೇಜರು ಬಾಬಾಸಾಹೇಬನ
ಪತ್ತೆ ಹಚ್ಚಬೇಕಂತ ಹುಡುಕಿದರೊ,
ತೊರಗಲ್ಲದಾರಿಯೊಳಗ ಹೆಡೆತುಳಿದ ನಾಗರದ್ಹಾಂಗ
ಹರದಾಡುತಿರುವವನ ನೋಡಿದರೋ,
ಅವನ ಬೆನ್ನು ಹತ್ತಿ ಹೋಗಿ ಗುಂಡ ಹಾರಿಸಿದರೊ ಜಗ್ಗಿ
ಗುಂಡು ತಾಗಿ ಬಿದ್ದವನ ಹಿಡಿದಾರೋ,
ಸೋಗು ಹಾಕಿ ಓಡಿದ ವೈರಿ ಕೈಗೆ ಸಿಕ್ಕಾನಂತ
ಕೂಗಿ ಕ್ಯಾಕಿಹಾಕಿ ಕುಣಿದಾಡಿರೋ,
ಗುಂಡು ಬಡಿದು ಬಿದ್ದ ಬಂಟ ತಿಳಿದು ಬಾಬಾಸಾಹೇಬಂತ
ಬೇಡಿ ಹಾಕಿ ಬೆಳಗಾವಿಗೆ ಕಳಿಸೀದರೋ,
ಬೆಳಗಾವಿಕೋಟಿಯೊಳಗ ಬಂದಿಖಾನ್ಯಾಗ ಇಟ್ಟ ಅವನ
ನ್ಯಾಯ ವಿಚಾರಣೆ ನಡೆಸಿದೊ,
ನ್ಯಾಯ ವಿಚಾರ ಎಲ್ಲ ಮುಗಿದಿತು,
ಜಜ್ಜ ಸಾಯ್ಬನ ತೀರ್ಪು ಹೊರಬಿತ್ತು,
ಬಾಬಾಸಾಹೇಬಗ ಗಲ್ಲಿನ ಶಿಕ್ಷಾಆತು ಇದು
ಇಂಗ್ರೇಜರ ನ್ಯಾಯದ ಗತ್ತು.
ಸೆರೆಯಾಳಾಗಿ ಬಿದ್ದ ಬಂಟ ಬಾಬಾಸಾಹೇಬ ಅಲ್ಲಂತ
ಒಳಗಿಂದೊಳಗ ನಡೆದಿತ್ತ ಮಾತು
ಮರಿಗೆ ಮುಚ್ಚಿ ಖರೇ ಸಂಗ್ತಿ ಇವನ ಬಾಬಾಸಾಹೇಬಂತ
ಎಲ್ಲರು ಕೂಡಿ ಮಾಡಿದಾರೋ ಗೊತ್ತು
ಗಲ್ಲಿಗೆ ಹಕೂದಿನ ಸನೇ ಬಂತಲ್ಲ
ಒಳಂಗಿದೊಳಗ ಹಾಕತಾರ ಅಕಲಾ
ಬಾಬಾಸಾಹೇಬ ನಮಗ ಸಿಗಲಿಲ್ಲ.
ಇವ ಖರೆ ಬಾಬಾಸಾಹೇಬ ಅಲ್ಲ,
ನಮ್ಮ ಮಾನ ಹೋಗಬಾರದಲ್ಲ,ಅದಕಾಗಿ
ಇವಂಗ ಕೊಡಬೇಕರಿ ಗಲ್ಲ.
ಈಗ ಮಾಡು ಹಂಗಿಲ್ಲ ಯಾವ ಗುಲ್ಲ ಒಳಂ
ದೊಳಗ ಹಿಂಗ ನಡಿತಲ್ಲ,

ಬಾಬಾಸಾಹೇಬಂತ ಬ್ಯಾರರ ಯಾರನ್ನೋ
ಗಲ್ಲಿಗೇರಿಸಿ ಕೆಲಸ ಮುಗಿಸಿದರೊ,
ತಿಳಿಯದ ಜನಗಳ ಕಣ್ಣಿಗೆ ಇಂಗ ಹಚ್ಚಿ
ಮಂಕ ಬೂದಿ ತೂರಿ ಮಳ್ಳ ಮಾಡಿದರೋ[೧೦] //

ಬಂಕಾಪುರದ ವಯೋವೃದ್ದರ ಹೇಳಿಕೆ ಮತ್ತು ಈ ಲಾವಣಿಯ ವಿಷಯಗಳ ಹಿನ್ನೆಲೆಯಲ್ಲಿ ವಿದ್ವಾಂಸರು ಬಾಬಾಸಾಹೇಬನ ಕೊನೆಯ ದಿನಗಳ ಬಗೆಗೆ ಮತ್ತೆ ಸಂಶೋಧನೆಯನ್ನು ಕೈಗೆತ್ತಿ ಕೊಳ್ಳಬೇಕಿದೆ. ಸ್ವಾತಂತ್ರ್ಯನಂತರ ಧಾರವಾಡ ಜಿಲ್ಲೆಯ ಒಂದು ಭಾಗವಾಗಿ ಇಪ್ಪತ್ತೆರಡು ಹಳ್ಳಿಗಳನ್ನು ಒಳಗೊಂಡ ತಾಲೂಕಾಗಿ ಮೆರೆದ ಬಂಕಾಪುರ ಈಗ ಶಿಗ್ಗಾಂವ ತಾಲೂಕಿನ ಒಂದು ಕೇಂದ್ರ ಸ್ಥಳವೆನಿಸಿದೆ. ತದನಂತರದಲ್ಲಿ ಬಂಕಾಪುರವನ್ನು ಬಿಜಾಪೂರದ ಆದಿಲಷಾಹಿಗಳ ಮನೆತನ,ಹಂಡೆಯ ಪಾಳೆಗಾರರು, ನರಗುಂದ ಸಂಸ್ಥಾನದವರು ಆಡಳಿತ ನಡೆಸಿದರು.

**ಸ್ವಾತಂತ್ರ್ಯ ಹೋರಾಟಗಾರರು:** ಭಾರತ ದೇಶದ ಸ್ವಾತಂತ್ರ್ಯ ಸಂಗ್ರಾಮ ಅಸದೃಶ್ಯವಾದುದು. ಮಹಾತ್ಮಗಾಂಧಿಯವರ ಅಹಿಂಸೆ, ಸೇವೆ, ತ್ಯಾಗದ ಕರೆಗೆ ಓಗೊಟ್ಟು ಜನಸಾಮಾನ್ಯರು ಈ ಸಂಗ್ರಾಮದಲ್ಲಿ ಧುಮುಕಿದರು. ಈ ಹೋರಾಟದಲ್ಲಿ ತನ್ನ ಪ್ರಾಮಾಣಿಕ ಸೇವೆ ಸಲ್ಲಿಸಿದ ಕೀರ್ತಿ ಬಂಕಾಪುರಕ್ಕಿದೆ. ಅಂತಹ ಸ್ವತಂತ್ರ ಹೋರಾಟಗಾರರೆಂದರೆ.

ಶ್ರೀ ಚಿಕ್ಕನಗೌಡ ನಿಂಗನಗೌಡ ಪಾಟೀಲ್, ಶ್ರೀ ಕೃಷ್ಣ ಚಂದ್ರಾಮ್ ಜೋಶಿ, ಶ್ರೀ ಶಂಕರ ದೀಕ್ಷಿತ ಕರ್ಮಠ, ಶ್ರೀ ರಾಮಚಂದ್ರ ಜಂತ್ಲಿ, ಶ್ರೀ ನಿಂಗನಗೌಡ ಗಿಡ್ಡನಗೌಡ ಪಾಟೀಲ, ಶ್ರೀ ಕಾಂತಪ್ಪ ಗಂಟೆಪ್ಪನವರ, ಶ್ರೀ ಗೋಪಾಲರಾವ ಹಜೀಬ ಇನ್ನು ಅನೇಕರು ಹೋರಾಡಿದ್ದಾರೆ. ಈ ಎಲ್ಲ ಹಿನ್ನೆಲೆ ಗಮನಿಸಿದರೆ ಬಂಕಾಪೂರದ ಸುತ್ತಮುತ್ತಲಿನ ಪ್ರದೇಶದಲ್ಲಿ ಸ್ವಾತಂತ್ರ್ಯ ಹೋರಾಟ ಕಾರ್ಯ ವ್ಯವಸ್ಥಿತವಾಗಿ ಮುನ್ನಡೆದಿತ್ತೆಂದು ತಿಳಿದುಬರುತ್ತದೆ.

**ಅಡಿಟಿಪ್ಪಣಿ**

೧. ಕೆ.ಸಿ.ಸುರೇಶ, ರಾಮನಗರ ಜಿಲ್ಲೆಯ ಸ್ಥಳನಾಮಗಳ ಅಧ್ಯಯನ, ಪುಟ ೩, ಕ.ವಿ.ವಿ. ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ

೨. ಚೆನ್ನಕ್ಕಾ ಎಲಿಗಾರ, ಬಂಕಾಪುರ ಶೋಧನ, ಪು. ೬, ೭.

೩. ಅದೇ, ಪುಟ ಸಂಖ್ಯೆ ೩೧

೪. ಅದೇ, ಪುಟ ಸಂಖ್ಯೆ ೩೨

೫. ಅದೇ, ಪುಟ ಸಂಖ್ಯೆ ೩೨

೬. ಅದೇ, ಪುಟ ಸಂಖ್ಯೆ ೩೩

೭. ಅದೇ, ಪುಟ ಸಂಖ್ಯೆ ೩೩

೮. ಅದೇ, ಪುಟ ಸಂಖ್ಯೆ ೩೭-೩೮

೯. ಬಾಂಬೆ ಗೇಝೆಟಿಯರ್, ಪು.೫೪೦

೧೦. ಹೂಗಾರ್ ಎ.ಎಸ್., ಜಾನಪದ ನರಗುಂದ, ಪು.೫೩

**ಮಾಹಿತಿದಾರರು**

೧. ಬಂಕಾಪುರ ಪುರಸಭೆ ಹಾಗೂ ಅಂಕಿ ಸಂಖ್ಯಾ ವಿಭಾಗ, ಶಿಗ್ಗಾಂವ

೨. ಕೃಷಿ ಇಲಾಖೆ, ಶಿಗ್ಗಾಂವ

೩. ಖಿಲಾರಿ ತಳಿ ಗೋ-ಸಂವರ್ಧನಾ ಕೇಂದ್ರ, ಬಂಕಾಪುರ

## ಅಧ್ಯಾಯ : ಮೂರು

# ಬಂಕಾಪುರ ಗ್ರಾಮದ ಸಾಮಾಜಿಕ ಜೀವನ

೩.೧. ವಸತಿ ನಿರ್ಮಾಣ
೩.೨. ಆಹಾರ ಪದ್ಧತಿ
೩.೩. ಸಮುದಾಯಗಳು
೩.೪. ಕುಟುಂಬ ಪದ್ಧತಿ
೩.೫. ಬಂಧುತ್ವ
೩.೬. ಜನಪದ ಕಲೆಗಳು
೩.೭ ವ್ಯಾಪಾರ
೩.೮. ಸಾರಿಗೆ ವ್ಯವಸ್ಥೆ
೩.೯. ಸಂಘ-ಸಂಸ್ಥೆಗಳು

## ಅಧ್ಯಾಯ : ಮೂರು

# ಬಂಕಾಪುರ ಗ್ರಾಮದ ಸಾಮಾಜಿಕ ಜೀವನ

ಗ್ರಾಮದ ಸಾಮಾಜಿಕ ವ್ಯವಸ್ಥೆಯನ್ನು ಅನಾವರಣ ಮಾಡುವ ಅನೇಕ ಆಕರಗಳು ಗ್ರಾಮದಲ್ಲಿ ಅಸ್ತಿತ್ವದಲ್ಲಿವೆ. ಇವುಗಳಲ್ಲಿ ಕೆಲವು ಸಮಷ್ಟಿಕೃತವಾದ ವ್ಯವಸ್ಥೆಗಳು ಇವೆ. ಇನ್ನು ಕೆಲವು ಪ್ರಭುತ್ವ ಕೇಂದ್ರಿತವಾದ ವ್ಯವಸ್ಥೆಗಳಿವೆ. ಇವುಗಳ ನಡುವೆ ಸಂಘರ್ಷಗಳು ಮತ್ತು ಹೊಂದಾಣಿಕೆಗಳು ನಡೆಯುತ್ತಲೆ ಮುನ್ನಡೆಯುತ್ತವೆ. ಅವುಗಳನ್ನು ಈ ಕೆಳಗಿನಂತೆ ಕಾಣಬಹುದು.

ಗ್ರಾಮೀಣರು ಪ್ರಾಚೀನ ಕಾಲದಿಂದಲೂ ನಡೆಸಿಕೊಂಡು ಬಂದಂತಹ ಆಚಾರ-ವಿಚಾರ, ಉಡುಗೆ-ತೊಡುಗೆ ಸಾಂಪ್ರದಾಯಿಕ ಅಂಶಗಳ ಆಗರವಾಗಿರುತ್ತವೆ. ಇಂತಹ ಅನನ್ಯವಾದ ಸಂಸ್ಕೃತಿಯ ಶ್ರೀಮಂತಿಕೆಯನ್ನು ಹೊಂದಿದಂತಹ ಗ್ರಾಮಗಳು ಆಧುನಿಕ ಸಂದರ್ಭದಲ್ಲಿ ನಗರೀಕರಣ, ಜಾಗತೀಕರಣಗಳ ಪ್ರಭಾವದಿಂದ ತಮ್ಮ ಮೂಲ ಸಂಸ್ಕೃತಿಯನ್ನು ಕಳೆದುಕೊಳ್ಳುತ್ತಿವೆ. ಇಂತಹ ಆತಂಕಕಾರಿ ಸಂದರ್ಭದಲ್ಲಿ ಗ್ರಾಮಗಳ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸುವ ಮತ್ತು ಬೆಳೆಸುವ ನಿಟ್ಟಿನಲ್ಲಿ ಅಧ್ಯಯನಗಳು ನಡೆಯಬೇಕಾಗಿದೆ. ಆ ದೃಷ್ಟಿಯಿಂದ ಬಂಕಾಪುರ ಗ್ರಾಮದ ಅಧ್ಯಯನ ಕೂಡ ಮಹತ್ವವಾಗುತ್ತದೆ. ಯಾವುದೇ ಒಂದು ಸಮಾಜ ಅಥವಾ ಸಮುದಾಯ ಬೆಳೆಯಬೇಕಾದರೆ ಗ್ರಾಮ ಎನ್ನುವುದು ಅತಿ ಮುಖ್ಯ ಪಾತ್ರ ನಿರ್ವಹಿಸುತ್ತದೆ.

ಗ್ರಾಮವೆಂದರೆ ನಾವು ಬೆಳೆದ ತೊಟ್ಟಿಲು. ಗ್ರಾಮ ಎಂದಿನಿಂದಲೂ ನಮಗೆ ಆಹಾರ ಮತ್ತು ಕಚ್ಚಾ ವಸ್ತುಗಳನ್ನು ಕೊಟ್ಟು ಪೋಷಿಸುತ್ತ ಬಂದಿದೆ. ಜೊತೆಗೆ ನಗರಗಳಿಗೆ ಆಹಾರವನ್ನು ಮಾತ್ರವಲ್ಲ ಜನಸಂಖ್ಯೆಯನ್ನು ಕೊಡುತ್ತಾ ಬಂದಿದೆ. ಹೀಗೆ ನಗರಗಳು ಬೆಳೆಯವಂತೆ ಮಾಡಿವೆ. ವಿಶ್ವದ ನೈಸರ್ಗಿಕ ಸಂಪತ್ತನ್ನು ಕಾಪಾಡುವುದು ಗ್ರಾಮದ ಪ್ರಮುಖ ಪಾತ್ರವಾಗಿದೆ. ಹೀಗೆ ಗ್ರಾಮವು ದೇಶವನ್ನು ಸದೃಢಗೊಳಿಸುವಲ್ಲಿ ಅಥವಾ ಸಂಪದ್ಭರಿತಗೊಳಿಸುವಲ್ಲಿ ದೇಶದ ಸರ್ವತೋಮುಖ ಬೆಳವಣಿಗೆಯಲ್ಲಿ ಬಹುಪಾಲು ಹೊಂದಿರುವುದರಿಂದ ಗ್ರಾಮದ ಪಾತ್ರ ಬಹಳ ಹಿರಿದಾಗಿದೆ ಎಂಬುದು ನಮಗೆ ತಿಳಿಯುತ್ತದೆ.

ಅಂದರೆ ಅಲ್ಲಲ್ಲಿ ನೆಲೆನಿಂತ ಜನಸಮೂಹಗಳೆ ಹಳ್ಳಿಗಳಾಗಿ ಪರಿಣಮಿಸಿದವು. ಅಲ್ಲಿ ಕುಟುಂಬ, ಸಮಾಜ, ಧರ್ಮ ಮುಂತಾದ ಸಂಸ್ಥೆಗಳು ಜನ್ಮತಾಳಿದವು. ಇದು ಒಂದು

ರೀತಿಯಲ್ಲಿ ಸಾಮಾಜಿಕ ಸ್ವರೂಪವನ್ನು ಹೊಂದಿರುತ್ತದೆ ಎಂಬುದು ಗ್ರಾಮಗಳ ಅಧ್ಯಯನದಿಂದ ತಿಳಿದು ಬರುತ್ತದೆ.

**೩.೧. ವಸತಿ ನಿರ್ಮಾಣ**

ಪ್ರಕೃತಿಯ ವೈಪರೀತ್ಯದಿಂದ ರಕ್ಷಣೆ ಪಡೆಯಲು ಮತ್ತು ಕುಟುಂಬ ವ್ಯವಸ್ಥೆಯನ್ನು ರೂಢಿಸಿಕೊಂಡ ಮಾನವ ವಾಸಿಸಲು ಪ್ರಾರಂಭದಲ್ಲಿ, ಗುಹೆ, ಪೊಟರೆ, ಹುಲ್ಲಿನ ಗುಡಿಸಲುಗಳಲ್ಲಿ ಇದ್ದನು. ಕಾಲಾನಂತರದಲ್ಲಿ ಮನೆಗಳ ನಿರ್ಮಾಣಕ್ಕೆ ತೊಡಗಿದ. (ಕಾಲಕ್ರಮೇಣ ಮನೆಗಳ ನಿರ್ಮಾಣದಲ್ಲಿ ಸುಧಾರಣೆಗಳಾದವು) ಭೌಗೋಳಿಕ ಪರಿಸರಕ್ಕನುಸಾರವಾಗಿ ಗೃಹಗಳ ನಿರ್ಮಾಣವಾದವು. ಮನುಷ್ಯನ ವಸತಿಯನ್ನು ಕುರಿತಾದ ಅಧ್ಯಯನವು ನೇರವಾಗಿ ವಾಸ್ತುಶಿಲ್ಪದ ಅಧ್ಯಯನವೇ ಆಗಿದೆ. ಅದು ಮಾನವನ ಸಾಂಸ್ಕೃತಿಕ ಬದುಕಿನ ಅಧ್ಯಯನವೂ ಹೌದು. ಮುಖ್ಯವಾಗಿ ಭೌಗೋಳಿಕ ಕಾರಣಕ್ಕಾಗಿ ವಿಶಿಷ್ಠ ವಿನ್ಯಾಸ ಮತ್ತು ಮಾದರಿಗಳ ವಸತಿಗಳು ಕರ್ನಾಟಕದ ಉದ್ದಗಲಕ್ಕೂ ಕಂಡು ಬರುವುದರಿಂದ ಈ ಅಧ್ಯಯನ ಮಹತ್ವಪೂರ್ಣದ್ದಾಗಿದೆ. ವಾಸ್ತುಶಿಲ್ಪದ ಇತಿಹಾಸದಲ್ಲಿ ಮೊದಲು ನಾವು ಕಾಣುವುದು ಗ್ರಹಗಳನ್ನು, ತನಗಾಗಿ ತನ್ನವರಿಗಾಗಿ ವಾಸಸ್ಥಳವೊಂದನ್ನು ರಚಿಸಿಕೊಳ್ಳಬೇಕೆಂಬ ಕಲ್ಪನೆ ಮಾನವನಿಗೆ ಬಂದುದೇ ಏಳುಸಾವಿರ ವರ್ಷಗಳ ಹಿಂದೆ, ಕ್ರಿಪೂ ಸುಮಾರು ಐದುಸಾವಿರದ ಸುಮಾರಿಗೆ ಎನ್ನಬಹುದು. ಅದಕ್ಕೂ ಹಿಂದೆ ಆತ ತನ್ನ ಸುತ್ತಲಿನ ಪ್ರಾಕೃತಿಕ ಸನ್ನಿವೇಶಗಳನ್ನು ಅವಲಂಬಿಸಿದ್ದ. ಅಲೆಮಾರಿ ಜೀವನವನ್ನು ಮುಕ್ತಾಯಗೊಳಿಸಿ ಒಂದು ಕಡೆ ಸ್ಥಿರವಾಗಿ ನೆಲೆಸುವುದನ್ನು ಕಲಿತು, ಜನರೊಡನೆ ಗುಂಪುಗೂಡಿ ವಾಸಮಾಡಲಾರಂಭಿಸಿ ತಾನು, ತನ್ನದು ಎಂಬ ಮನೋಭಾವ ಬೆಳೆದು ಕುಟುಂಬ ಪದ್ಧತಿ ಆರಂಭವಾದಾಗ ಮನೆಯ ಅಗತ್ಯತೆ ಉಂಟಾಯಿತು. ಈ ಮನೆಗಳು ಪ್ರಾರಂಭದಲ್ಲಿ ಗುಡಿಸಲು ಗಳಾಗಿದ್ದವು. ಮೊದಮೊದಲು ಮನೆಗಳು ಗಾಳಿಮಳೆಗಳಿಂದ ರಕ್ಷಿಸಿಕೊಳ್ಳಲು ನಿರ್ಮಾಣವಾದವು. ಅನಂತರದ ಕಾಲಘಟ್ಟದಲ್ಲಿ ಆತನು ವ್ಯವಸಾಯ ಕೈಗೊಂಡು ಪಶುಪಾಲನೆ ಆರಂಭಿಸಿದಾಗ ಅವನಿಗೆ ಕೃಷಿ ಸಲಕರಣೆಗಳನ್ನು ಇಡುವುದಕ್ಕೂ ಸಾಕುಪ್ರಾಣಿಗಳನ್ನು ಗಾಳಿ ಮಳೆಗಳಿಂದ ರಕ್ಷಿಸಿ ಕೊಳ್ಳುವುದಕ್ಕೂ ಮನೆಯನ್ನು ಕಟ್ಟಿದನು. ಇಂದಿನ ಹಾಗೆ, ಹಿಂದೆ ಕಲ್ಲು ಇಟ್ಟಿಗೆಗಳನ್ನು ಬಳಸಿ ಮನೆ ಕಟ್ಟುತ್ತಿರಲಿಲ್ಲವಾದರೂ ಅವು ಭದ್ರವಾಗಿದ್ದು ಮಳೆಯಿಂದ ರಕ್ಷಿತವಾಗಿದ್ದವು. ಅವುಗಳನ್ನು ಕಟ್ಟುವಾಗಲೇ ನೆಲದಿಂದ ಕಡಿಮೆ ಎತ್ತರದಲ್ಲಿ ಗಾಳಿಯ ಹೊಡೆತ ಇರುವ ಸ್ಥಳವನ್ನೇ ಆಯ್ಕೆ ಮಾಡಿಕೊಳ್ಳುತ್ತಿದ್ದರು. ಬದಲಾದ ಇತ್ತೀಚಿನ ದಿನಗಳಲ್ಲಿ ತಮಗೆ ಬೇಕಾದ ರೀತಿಯಲ್ಲಿ ಗೃಹ ನಿರ್ಮಾಣ ಮಾಡಿಕೊಂಡಿದ್ದಾರೆ.

ಪ್ರಸ್ತುತ ಈ ಗ್ರಾಮದಲ್ಲಿ ಹಂಚಿನ ಮನೆಗಳು, ಮಾಳಿಗೆ ಮನೆಗಳು, ಹೆಚ್ಚಿನ ಸಂಖ್ಯೆಯಲ್ಲಿದ್ದು ಕೆಲವು ತಾರಸಿ ಹಾಗೂ ಮಹಡಿ ಮನೆಗಳು ಇವೆ. ಆಶ್ರಯ ಮನೆಗಳು, ಬಸವ ವಸತಿ ಮನೆಗಳು, ಇಂದಿರಾ ಆವಾಸ್ ಮನೆಗಳು, ದೇವದಾಸಿ ಮನೆಗಳನ್ನು ಪಡೆದ ಫಲಾನುಭವಿಗಳಿದ್ದಾರೆ.

ವಸತಿ ರಹಿತ ಕುಟುಂಬಗಳು ಇವೆ. ಶೌಚಾಲಯ ಹೊಂದಿರುವ ಕುಟುಂಬಗಳು ಕಡಿಮೆಯಿದ್ದರೆ. ಶೌಚಾಲಯ ಹೊಂದಿಲ್ಲದಿರುವ ಕುಟುಂಬಗಳು ಹೆಚ್ಚಾಗಿವೆ. ಶೌಚಾಲಯಗಳನ್ನು ಗ್ರಾಮ ಪಂಚಾಯತಿ ಸಹಕಾರದಿಂದ ನಿರ್ಮಲಗ್ರಾಮ ಯೋಜನೆಯಡಿ ನಿರ್ಮಿಸಿಕೊಂಡವರು ಇದ್ದಾರೆ.

ಬಂಕಾಪುರ ಗ್ರಾಮ ಕೇಂದ್ರೀಕೃತ ಗ್ರಾಮಗಳ ಲಕ್ಷಣವನ್ನು ಹೊಂದಿದ್ದು, ಊರಿನ ಸುತ್ತಲೂ ಹೊಲ, ಗದ್ದೆ, ತೋಟಗಳಿಂದ ಕೂಡಿದೆ. ಗ್ರಾಮದಲ್ಲಿನ ಮನೆಗಳು ಒಂದರ ಪಕ್ಕದಲ್ಲಿ ಒಂದನ್ನು ವ್ಯವಸ್ಥಿತವಾಗಿ ಕಟ್ಟಲಾಗಿದೆ. ಬೀದಿಗಳು ಪೂರ್ವ ಪಶ್ಚಿಮ ಅಭಿಮುಖವಾಗಿದ್ದು ಸೂರ್ಯನ ಉದಯ ಸಮಯದಲ್ಲಿ ಮತ್ತು ಸೂರ್ಯಾಸ್ತದ ಸಮಯದಲ್ಲಿ ಬೀದಿಗಳು ಸೂರ್ಯನ ಕಿರಣಗಳಿಂದ ಕಂಗೊಳಿಸುತ್ತವೆ. ಇಲ್ಲಿನ ಮನೆಗಳು ಬಹುತೇಕ ಹೆಂಚಿನ ಮನೆಗಳಾಗಿವೆ. ಇಲ್ಲಿನ ಮೂಲ ಹಳೆಯ ಮನೆಗಳು ನಾಡ ಹೆಂಚಿನ ಮನೆಗಳಾಗಿದ್ದು, ತುಂಬಾ ಹಳೆಯದಾಗಿವೆ. ಈ ಮನೆಗಳನ್ನು ಆಡು ಭಾಷೆಯಲ್ಲಿ ಕರಿಹಂಚಿನ ಮನೆಗಳೆಂದು ಕರೆಯುತ್ತಾರೆ.

ಸೀಮೆಯ ಹೆಂಚಿನ ಮನೆಗಳನ್ನು ಇತ್ತೀಚೆಗೆ ಹೆಚ್ಚಿನದಾಗಿ ನಿರ್ಮಿಸಿಕೊಂಡಿದ್ದಾರೆ. ಯಾವುದೇ ಹೊಸ ಮನೆಯ ನಿರ್ಮಾಣ ಮಾಡಿದರೆ ಸೀಮೆಯ ಹೆಂಚುಗಳು ಸಾಮನ್ಯವಾಗಿ ಬಳಕೆಯಾಗುತ್ತವೆ. ಹಳೆಯ ಕಾಲದ ಕರಿ ಹೆಂಚುಗಳ ಬಳಕೆ ಕ್ರಮೇಣ ಕಡಿಮೆಯಾಗಿ ಮಂಗಳೂರ ಹೆಂಚು ಎಂದೇ ಕರೆಯಲಾಗುವ ಹೆಂಚುಗಳ ಮನೆಗಳ ನಿರ್ಮಾಣ ಕಳೆದ ಹದಿನೈದು-ಇಪ್ಪತ್ತು ವರ್ಷಗಳಿಂದ ಬಳಕೆಯಲ್ಲಿವೆ.

ಈ ಮನೆಗಳು ಹಿಂದೆ ಮತ್ತು ಮುಂದೆ ಅಂದರೆ ಬೀದಿಯ ಕಡೆ ಮತ್ತು ಮನೆಯ ಹಿಂದೆ ಹಿತ್ತಲ ಕಡೆ ಎರಡು ಕಡೆ ಇಳಿಜಾರಿನಿಂದ ಕೂಡಿರುತ್ತವೆ. ಮನೆಯ ಮಧ್ಯದ ಗೋಡೆ ಎತ್ತರವಾಗಿದ್ದು ಹಿತ್ತಲ ಮತ್ತು ಬೀದಿಯ ಕಡೆ ಹಂತಹಂತವಾಗಿ ಇಳಿಜಾರು ಮಾಡಿರುತ್ತಾರೆ. ಮುಂದೆ ಬೀದಿಯ ಕಡೆ ಹತ್ತಿರ ಜಾಗದಲ್ಲಿ ಪಡಸಾಲೆಯನ್ನು ಮಾಡಿ ಹೆಂಚಿನ ಸೂರಿಗೆ ನಾಲ್ಕು ಕಂಬಗಳನ್ನು ಕೊಟ್ಟು ನಿಲ್ಲಿಸುವುದು ಹಾಗೆಯೇ ಮನೆಯ ಗೋಡೆಗಳನ್ನು ಸಿಮೆಂಟಿನಲ್ಲಿ ಪ್ಲಾಸ್ಟಿಂಗ ಮಾಡಿ ಎಲ್ಲಾ ಮನೆಗಳಿಗೂ ಸುಣ್ಣ-ಬಣ್ಣ ಬಳಿದಿದ್ದಾರೆ.

ಮನೆಯ ಒಳಗೆ ದೇವರ ಮನೆ, ಅಡುಗೆ ಮನೆ, ಒಂದು ವಿಶೇಷವಾದ ಕೋಣೆಯಿರುತ್ತದೆ. ಒಂದು ವಿಶಾಲವಾದ ಹಜಾರ ಇರುತ್ತದೆ. ದೇವರ ಮನೆ ಕೆಲವು ಮನೆಗಳಲ್ಲಿ ಮಾತ್ರ ಪ್ರತ್ಯೇಕವಾಗಿದ್ದು, ಬಹುತೇಕ ಮನೆಗಳಲ್ಲಿ ಹಜಾರದ ಒಂದು ಮೂಲೆಯಲ್ಲೇ ದೇವರ ಪೋಟೋಗಳನ್ನು ಇಟ್ಟುಕೊಂಡಿದ್ದಾರೆ.

ಇತ್ತೀಚಿನ ದಿನಗಳಲ್ಲಿ ಆಧುನೀಕರಣ, ನಗರೀಕರಣದ ಪ್ರಭಾವದಿಂದ ಇಲ್ಲಿನ ವಸತಿ ವ್ಯವಸ್ಥೆಯಲ್ಲಿ ಬದಲಾವಣೆಗಳುಂಟಾಗಿವೆ. ಮಣ್ಣಿನ ಗೋಡೆಗಳಿಗೆ ಬದಲಾಗಿ ಸಿಮೆಂಟಿನಿಂದ ಕಟ್ಟಿದ ಗೋಡೆಗಳು, ಮಣ್ಣಿನ ಇಟ್ಟಿಗೆಗಳ ಬದಲಾಗಿ ಯಂತ್ರದಿಂದ ಅಚ್ಚಾದ ಇಟ್ಟಿಗೆಗಳ

ಉಪಯೋಗವೇ ಹೆಚ್ಚಾಗಿದೆ. ನಾಡ ಹೆಂಚುಗಳು ಮತ್ತು ಸೀಮೆ ಹೆಂಚುಗಳಿಗೆ ಬದಲಾಗಿ ಸಿಮೆಂಟಿನಿಂದ ಮಾಡಿದ ಸೀಟುಗಳನ್ನು (ತಗಡು) ಮನೆಯ ಮೇಲ್ಛಾವಣಿಗೆ ಬಳಸುವುದು ಸಾಮಾನ್ಯವಾಗಿದೆ. ಕಾರಣ ಇದು ಬೇರೆ ಸೀಮೆ ಹೆಂಚುಗಳಿಗಿಂತ ಕಡಿಮೆ ಖರ್ಚು ಮತ್ತು ಬಾಳಿಕೆ ಬರುತ್ತದೆ. ಕೆಲಸವು ಬೇಗ ಮುಗಿಯುತ್ತದೆ.

ಆರ್ಥಿಕವಾಗಿ ಸದೃಢವಾದ ವ್ಯಕ್ತಿಗಳು ತಮ್ಮ ವಾಸದ ಮನೆಗಳನ್ನು ಆಧುನಿಕವಾಗಿ ನಗರವಾಸಿಗಳಂತೆ ತಾರಸಿ (ಬಿಲ್ಡಿಂಗ್) ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಇದು ಇಲ್ಲಿರುವ ಎಲ್ಲಾ ಸಮುದಾಯದ ಜನರಲ್ಲಿ ಸಾಮಾನ್ಯವಾಗಿದೆ. ಈ ಮನೆಗಳಲ್ಲಿ ಎಲ್ಲವು ಸುಸಜ್ಜಿತವಾದ ವ್ಯವಸ್ಥೆಯನ್ನು ಮಾಡಿಕೊಳ್ಳಲಾಗಿದೆ. ಅಡುಗೆ ಮನೆ, ದೇವರ ಕೋಣೆ, ಪ್ರತ್ಯೇಕ ಮಲಗುವ ಕೋಣೆಗಳು, ಶೌಚಾಲಗಳು, ವಿಶಾಲವಾದ ಹಜಾರಗಳು ವ್ಯವಸ್ಥಿತವಾಗಿ ನಿರ್ಮಿಸಿದ್ದಾರೆ.

ಹಿಂದಿನ ಕಾಲದಲ್ಲಿ ಒಂದೊಂದು ಸಮುದಾಯದ ಜನರು ಒಂದೊಂದು ಪ್ರತ್ಯೇಕ ಬೀದಿಗಳಲ್ಲಿ ವಾಸಿಸುತ್ತಿದ್ದರು. ಆದರೆ ಇಂದು ಅಂತಹ ಪರಿಸ್ಥಿತಿ ಬದಲಾಗಿದೆ. ಪರಿಶಿಷ್ಟರು ಊರ ಹೊರಗೆ ಅವರ ಬೀದಿಗಳು ಇರುತ್ತಿದ್ದವು. ಈಗ ಎಲ್ಲ ಮನೆಗಳು ಅಕ್ಕ-ಪಕ್ಕದಲ್ಲಿ ನಿರ್ಮಾಣಗೊಂಡಿವೆ. ಇದು ಬದಲಾವಣೆಯತ್ತ ಸಾಗುತ್ತಿರುವ ಸೂಚನೆಗಳಾಗಿವೆ.

### ೩.೨. ಆಹಾರ ಪದ್ಧತಿ

ಪ್ರಾಚೀನ ಕಾಲದಲ್ಲಿ ಮನುಷ್ಯ ಕೇವಲ ಹಸಿಯಾದಂತಹ ಆಹಾರ ಪದಾರ್ಥಗಳನ್ನು ಸೇವಿಸುತ್ತಿದ್ದ. ಇವು ಮುಂದಿನ ದಿನಮಾನಗಳಲ್ಲಿ ಮಾನವನು ಬೆಂಕಿಯಿಂದ ಆಹಾರವನ್ನು ಬೇಯಿಸಿಕೊಳ್ಳಲು ಪ್ರಾರಂಭಿಸಿದ. ಹೀಗೆ ರುಚಿಯ ಬೆನ್ನುಹತ್ತಿ ಬಗೆ-ಬಗೆಯ ಹಲವು ರೀತಿಯಾದ ಅಡುಗೆ ಮಾಡಿಕೊಳ್ಳಲು ಪ್ರಾರಂಭಿಸಿದ. ಈ ಆಹಾರ ಪದ್ಧತಿಯು ಕೂಡಾ ಪ್ರದೇಶದಿಂದ ಪ್ರದೇಶಕ್ಕೆ ಸಮುದಾಯದಿಂದ ಸಮುದಾಯಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಮನುಷ್ಯನ ಜೀವನ ಏಕತೆಯುಳ್ಳ ಊಟ ಉಪಚಾರ ವಸ್ತು ವಿನ್ಯಾಸಗಳಲ್ಲಿ ಬದಲಾವಣೆ ಕಂಡು ಬರುವದನ್ನು ಕಾಣುತ್ತೇವೆ. ಜನಪದ ಸಮಾಜ ಪ್ರವೇಶಿಸಿದರೆ ಅಲ್ಲಿನ ಊಟೋಪಚಾರಗಳಲ್ಲಿ ವೈವಿಧ್ಯತೆ ಕಂಡುಬರುತ್ತದೆ. "ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ" ಎಂಬ ಗಾದೆಯು ಅಡುಗೆ ಉದ್ದೇಶ ಆರೋಗ್ಯ ಎಂಬುದರ ಸೂಚಕ. "ಊಟ ತನ್ನಿಚ್ಚೆ ನೋಟ ಪರರಿಚ್ಚೆ" ಎಂಬ ಗಾದೆ ದೇಹಕ್ಕೆ ಒಗ್ಗುವ ಆಹಾರವನ್ನು ಅಗತ್ಯವಿದ್ದಷ್ಟು ಮಾತ್ರ ಸೇವಿಸಬೇಕೆಂದು ಹೇಳುತ್ತದೆ.

ಈ ಜಗದಲ್ಲಿ "ಎಲ್ಲಾರೂ ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ". ಎಂದು ಪುರಂದರದಾಸರು ತಮ್ಮ ಕೀರ್ತನೆಯಲ್ಲಿ ಅತ್ಯಂತ ಸೊಗಸಾಗಿ ಹೇಳಿದ್ದಾರೆ. ಅದೇ ರೀತಿ

ಸರ್ವಜ್ಞನು 'ಅನ್ನ ದೇವರ ಮುಂದೆ ಇನ್ನು ದೇವರು ಉಂಟೆ. ಅನ್ನವಿರುವ ತನಕ ಪ್ರಾಣವು ಜಗದೊಳು ನನ್ನದೇ ದೈವ ಸರ್ವಜ್ಞ'. ಎಂದು ಹೇಳಿದ್ದಾರೆ.

ಜನಾಂಗಗಳು ವಾಸಿಸುತ್ತಿರುವ ಭೌಗೋಳಿಕ ಪರಿಸರಕ್ಕೆ ಅನುಗುಣವಾಗಿ ಅಡುಗೆ ಪದ್ಧತಿಯು ಇರುತ್ತದೆ. ಎಲ್ಲಾ ಕಡೆಯು ಒಂದೇ ರೀತಿ ಅಡುಗೆ ಪದ್ಧತಿ ಇರಲು ಸಾಧ್ಯವಿಲ್ಲ. ಈ ಕಾರಣದಿಂದಾಗಿ ಬಯಲುಸೀಮೆ, ಉತ್ತರಕರ್ನಾಟಕ, ದಕ್ಷಿಣಕರ್ನಾಟಕ, ಕರಾವಳಿಗಳಲ್ಲಿ ಊಟೋಪಚಾರಗಳಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಆಹಾರ ಪಾನೀಯಗಳು ಮಾನವನಿಂದ ಮಾನವನಿಗೆ ಜನಾಂಗದಿಂದ ಜನಾಂಗಕ್ಕೆ ಪ್ರಾಂತ್ಯದಿಂದ ಪ್ರಾಂತ್ಯಕ್ಕೆ ಭಿನ್ನವಾಗುತ್ತಾ ಸಾಗುತ್ತದೆ. ವಸ್ತುಸ್ಥಿತಿ ಹೀಗಿರುವದರಿಂದಲೇ ಆಹಾರ-ಪಾನೀಯ ಪದ್ಧತಿಗಳು ಸಂಸ್ಕೃತಿಯ ದ್ಯೋತಕವೆನಿಸಿಕೊಂಡಿತು. ಅವುಗಳ ಅಧ್ಯಯನವೇ ಒಂದು ಸಮಾಜದ ಒಂದು ಸಂಸ್ಕೃತಿಯ ಪುನರಚನೆಯಾಗುತ್ತದೆ. ಆದ್ದರಿಂದ ಒಂದು ಜನಾಂಗದಲ್ಲಿಯೇ ಅವರು ನೆಲೆಸಿರುವ ಪ್ರದೇಶಕ್ಕೆ ಅನುಗುಣವಾಗಿ ಊಟೋಪಚಾರದಲ್ಲಿ ವ್ಯತ್ಯಾಸಗಳು ಉಂಟಾಗುತ್ತವೆ. ಪ್ರಸ್ತುತ ಉ.ಕರ್ನಾಟಕದ ಬಂಕಾಪುರದ ಅಡುಗೆ ಪದ್ಧತಿಯನ್ನು ಇಲ್ಲಿ ಚರ್ಚೆಗೆ ಒಳಪಡಿಸಲಾಗಿದೆ.

ಮುಖ್ಯವಾಗಿ ಆಹಾರವನ್ನು ೨ ರೀತಿಯಾಗಿ ವಿಂಗಡಿಸುತ್ತೇವೆ.

೧. ಸಸ್ಯಾಹಾರ ಅಡುಗೆ

೨. ಮಾಂಸಾಹಾರ ಅಡುಗೆ

**ಸಸ್ಯಾಹಾರ ಅಡುಗೆ:** ಈ ಗ್ರಾಮದ ಬಹುಸಂಖ್ಯೆಯ ಜನರು ಸಸ್ಯಾಹಾರಿಗಳಾಗಿದ್ದಾರೆ. ಇದರಲ್ಲಿ ಸಿಹಿ ಪದಾರ್ಥಗಳು ಹಾಗೂ ಹಲವು ರೀತಿಯ ಖಾರದ ಅಡುಗೆಗಳನ್ನು ಕಾಣಬಹುದು.

**ದಿನನಿತ್ಯದ ಅಡುಗೆ:** ದಿನನಿತ್ಯದ ಆಹಾರವಾಗಿ ರೊಟ್ಟಿ-ಪಲ್ಯ, ಅನ್ನ-ಸಾರು ಉಪಯೋಗಿಸುತ್ತಾರೆ. ವಿಶೇಷ ಸಂದರ್ಭಗಳಲ್ಲಿ, ಹಬ್ಬಹರಿದಿನಗಳಲ್ಲಿ ತುಂಬಾ ವೈವಿಧ್ಯಮಯವಾದ ತಿಂಡಿ ತಿನಿಸು ಮಾಡುವುದುಂಟು. ಆಯಾ ಸಂದರ್ಭಕ್ಕೆ ತಕ್ಕಂತೆ ಒಂದೊಂದು ಹಬ್ಬಕ್ಕೂ ಒಂದೊಂದು ರೀತಿಯ ಅಡುಗೆಯನ್ನು ಮಾಡುವ ರೀತಿ ಮತ್ತು ರೂಢಿ ಇದೆ. ಈ ಭಾಗದಲ್ಲಿ ಗ್ರಾಮದಲ್ಲಿ ರೊಟ್ಟಿ ಪ್ರಮುಖ ಆಹಾರವಾಗಿರುವುದರಿಂದ ಅದರೊಂದಿಗೆ ಮಾಡುವ ಪಲ್ಯಗಳು, ಹಿಂಡಿ, ಚಟ್ನಿ, ಕರಿಹಿಂಡಿ, ಪಚಡಿಗಳೆ ಹಲವಾರು ಇದ್ದು ತುಂಬಾ ವೈವಿಧ್ಯಮಯ ಹಾಗೂ ರುಚಿಕರ ಮತ್ತು ಆರೋಗ್ಯಕರ ಆಹಾರ ಪದ್ಧತಿ ಇರುವುದು ಕಂಡು ಇದು ದೇಶಿ ಆಹಾರ ಪದ್ಧತಿಯನ್ನು ಸಾರುತ್ತದೆ. ಹಾಗಾಗಿ ಇಲ್ಲಿ ದೇಶಿ ಆಹಾರ ಜ್ಞಾನಗಳು ಜೀವಂತವಾಗಿವೆ. ಇದು ಆರೋಗ್ಯದ ಸುಧಾರಣೆಗೂ ಕಾರಣವಾಗಿದೆ ಎನ್ನುವುದು ಹಿರಿಯರ ಅಭಿಪ್ರಾಯ.

**೩.೩. ಸಮುದಾಯಗಳು**

ಗ್ರಾಮದ ಭೌಗೋಳಿಕ ಹಿನ್ನೆಲೆಯಲ್ಲಿ ಇರುವಂತೆ ಹಲವಾರು ಮತಪಂಥಗಳ ವಿವಿಧ ವರ್ಗಗಳ ಜನರು ಇದ್ದಾರೆ. ಭಾರತೀಯ ಸಾಂಸ್ಕೃತಿಕ ಪರಂಪರೆಯ ಹಿನ್ನೆಲೆಯಲ್ಲಿ ಸಮುದಾಯವು

ಸಾಮಾಜಿಕ, ಆರ್ಥಿಕತೆ ಮೊದಲಾದ ಅಂಶಗಳ ಜೊತೆಗೆ ಕಲೆ, ಸಾಹಿತ್ಯ, ಸಾಂಸ್ಕೃತಿಕ ಅಂಶಗಳಿಂದ ವಿಶೇಷತೆಯನ್ನು ಹೊಂದಿದೆ. ಬಂಕಾಪುರ ಗ್ರಾಮದಲ್ಲಿ ಬಹುತೇಕವಾಗಿ ಮುಸ್ಲಿಮರು, ಜಂಗಮರು, ಸಾದರು ಪಂಚಮಸಾಲಿ, ಬಣಜಿಗರು, ನೊಣಬರನ್ನು ಒಳಗೊಂಡ ಲಿಂಗಾಯತ ದೊಡ್ಡ ಸಮುದಾಯ, ಕುರುಬರು, ವಾಲ್ಮೀಕಿ, ಹರಿಜನರು, ಬಾರ್ಕಿ, ಬ್ರಾಹ್ಮಣರು, ಮರಾಠರು, ಬಡಿಗರು, ಕ್ಷೌರಿಕರು ಸಣ್ಣ ಸಮುದಾಯಗಳಿವೆ. ಕನ್ನಡ ಪ್ರಮುಖ ಭಾಷೆ, ಉರ್ದು ಭಾಷೆ, ಮರಾಠಿಗರ ಭಾಷೆ, ಈ ಸಮುದಾಯಗಳಲ್ಲಿ ಸಮುದಾಯ ಪದ್ದತಿ ಹಿಂದೂ ಸಮಾಜದ ಒಂದು ವಿಶಿಷ್ಟ ಲಕ್ಷಣವಾಗಿದೆ. ಸಮುದಾಯಗಳಲ್ಲಿ ಜಾತಿಯೆಂಬುದು ವೃತ್ತಿ ಆಧಾರವಾಗಿರುತ್ತದೆ. ಉಡುಗೆ-ತೊಡುಗೆ, ಆಹಾರ ಪದ್ಧತಿ, ಧಾರ್ಮಿಕ ವಿಚಾರ, ಆಚರಣೆಗಳು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುತ್ತವೆ. ತಾವು ಇತರರಿಗಿಂತ ಬೇರೆ ಎಂಬ ಭಾವನೆ ಪ್ರತಿ ಸಮುದಾಯದಲ್ಲು ಇರುತ್ತದೆ. ಇದರಂತೆ ಹಾವೇರಿ ಜಿಲ್ಲೆಯ ಶಿಗ್ಗಾಂವ ತಾಲೂಕಿನ ಬಂಕಾಪುರ ಗ್ರಾಮದ ಈ ಅನೇಕ ಸಮುದಾಯಗಳಲ್ಲಿ ಸಮುದಾಯ ವ್ಯವಸ್ಥೆಯನ್ನು ಕಾಣಬಹುದಾಗಿದೆ.

**ವೀರಶೈವ ಲಿಂಗಾಯತರು:** ಈ ಗ್ರಾಮದಲ್ಲಿ ವೀರಶೈವ ಲಿಂಗಾಯತ ಸಮುದಾಯ ಬಹುಸಂಖ್ಯಾತರಾಗಿದ್ದು ಅನೇಕ ಮನೆಗಳಿವೆ. ಇವರು ಆರ್ಥಿಕವಾಗಿ ಸಬಲರಾಗಿದ್ದಾರೆ. ವೀರಶೈವರಲ್ಲಿ ಪ್ರಮುಖವಾಗಿ ಜಂಗಮ, ಪಂಚಮಸಾಲಿ, ಗಾಣಿಗ, ಬಣಜಿಗ, ನೇಕಾರ, ಸಾದರ ಎಂಬ ಅನೇಕ ಒಳಪಂಗಡಗಳಿವೆ. ಜಂಗಮರೇ ಶ್ರೇಷ್ಠರು ಎಂಬ ಪರಿಕಲ್ಪನೆ ಇವರಲ್ಲಿದೆ. ಆಚಾರ-ವಿಚಾರಗಳು ಒಂದೇ ಆಗಿದ್ದು ಅವರು ಕೃಷಿ ವ್ಯಾಪಾರ, ನೌಕರಿ, ಕೂಲಿ ಮುಂತಾದ ಅನೇಕ ವೃತ್ತಿಗಳಲ್ಲಿ ಸಹ ಮುಂಚೂಣಿಯಲ್ಲಿದ್ದಾರೆ. ಇವರ ಪ್ರಮುಖ ಆರಾಧ್ಯ ಧೈವ ಬಸವಣ್ಣ, ಮೈಲಾರಲಿಂಗ, ಯಲ್ಲಮ್ಮ, ವೀರಭದ್ರ ಮುಂತಾದವು.

**ಕುರುಬರು:** ಗ್ರಾಮದಲ್ಲಿ ನೂರಾರು ಕುಂಟುಬಗಳಿವೆ. ಇವರು ಸಹ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದಾರೆ. ಇವರಿಗೆ ಹಾಲುಮತದವರೆಂದು ಕರೆಯುತ್ತಾರೆ. ಕೃಷಿ ಮತ್ತು ವೃತ್ತಿಯಲ್ಲಿ ಕುರಿಕಾಯುವದರ ಜೊತೆ ಇನ್ನಿತರ ವೃತ್ತಿಪರ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದಾರೆ. ಇವರಲ್ಲಿ ಪ್ರಮುಖವಾಗಿ ಉಣ್ಣಿ ಕಂಕಣ, ಹತ್ತಿ ಕಂಕಣ ಎಂಬ ಎರಡು ಪಂಗಡಗಳಿವೆ. ಅನೇಕ ರೀತಿಯ ಬೆಡಗುಗಳಿದ್ದು ಇವರು ಒಂದೇ ಬೆಡಗಿನಲ್ಲಿ ಮದುವೆಯಾಗುವುದಿಲ್ಲ. ಇವರ ವಿವಾಹ ಬಹುತೇಕವಾಗಿ ಗಂಡಿನ ಮನೆಯಲ್ಲಿ ನಡೆಯುತ್ತದೆ. ಹಿಂದೆ ಗಂಡಸರು ಹೊರಗೆ ಹೋಗುವಾಗ ಹೆಗಲ ಮೇಲೆ ಕಂಬಳಿ ಹಾಕಿಕೊಂಡು ತಲೆಗೆ ರುಮಾಲು ಸುತ್ತಿಕೊಂಡು ಹೋಗುತ್ತಿದ್ದರು. ಇತ್ತೀಚೆಗೆ ಇದು ಕಡಿಮೆಯಾಗಿ ಆಧುನಿಕ ಉಡುಪುಗಳನ್ನು ಅವರು ತೊಡುತ್ತಿದ್ದಾರೆ.

ಹಲವಾರು ಹಬ್ಬಗಳನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಇದರ ಜೊತೆಗೆ ಡೋಲು ಡೊಳ್ಳುಗಳನ್ನು ಸಹ ಪವಿತ್ರ ಭಾವನೆಯಿಂದ ಕಾಣುತ್ತಾರೆ. ಇವರು ಬೀರೇಶ್ವರ, ದೇವರಗುಡ್ಡ, ಮೈಲಾರ, ಯಲ್ಲಮ್ಮ, ರೇವಣಶಿದ್ದೇಶ್ವರ ಮೊದಲಾದ ದೇವರುಗಳಿಗೆ ನಡೆದುಕೊಳ್ಳುತ್ತಾರೆ. ಇವರಲ್ಲಿ

ಶವವನ್ನು ಹೂಳುವ, ಸುಡುವ ಪದ್ಧತಿಯಿದೆ. ಡೊಳ್ಳಿನ ಕುಣಿತ ಇವರ ಜನಪ್ರಿಯ ಜನಪದ ಕಲೆಯಾಗಿದೆ.

**ಮುಸ್ಲಿಮರು:** ಈ ಗ್ರಾಮದಲ್ಲಿ ನೂರಾರು ಮುಸ್ಲಿಂ ಕುಟುಂಬಗಳಿವೆ. ಇವರು ಕೃಷಿಗಿಂತ ಹೆಚ್ಚಾಗಿ ಬೇರೆ-ಬೇರೆ ಕಸುಬುಗಳನ್ನು ಮಾಡುತ್ತಾರೆ. ಇಲ್ಲಿ ಹಲವಾರು ದರ್ಗಾಗಳು, ಮಸೀದಿಗಳಿದ್ದು ಉದಾ ಅಲ್ಲಾವುದ್ದಿನ ಷಾ ಖಾದ್ರಿ ದರ್ಗಾ ಪ್ರಸಿದ್ಧಿಯನ್ನು ಹೊಂದಿದ್ದು ದೂರ-ದೂರದ ಪ್ರದೇಶದಿಂದ ಇಲ್ಲಿಗೆ ಜನರು ಬರುತ್ತಾರೆ. ಹಬ್ಬ ಹರಿದಿನಗಳಲ್ಲಿ ಹಿಂದೂ-ಮುಸ್ಲಿಮರು ಸೇರಿ ಹಬ್ಬಗಳನ್ನು ಆಚರಿಸುವ ಮೂಲಕ ಭಾವೈಕ್ಯತೆಯನ್ನು ಸಾರಿದ್ದಾರೆ. ಬಂಕಾಪುರ ಗ್ರಾಮದಲ್ಲಿ ಇವರು ವ್ಯಾಪಾರ ಇನ್ನು ಕೆಲವರು ವ್ಯವಸಾಯ ಮತ್ತಿತ್ತರ ಕೆಲಸಗಳಲ್ಲಿ ತೊಡಗಿರುತ್ತಾರೆ.

**ಅಗಸರು: ಈ** ಊರಿನಲ್ಲಿ ಸುಮಾರು ಅಂದಾಜು ೩೦ ಕುಟುಂಬಗಳಿವೆ. ಮಡಿವಾಳ, ದೋಭಿ ಮುಂತಾದ ಹೆಸರುಗಳಿಂದ ಇವರನ್ನು ಕರೆಯಲಾಗಿದೆ. ಇವರ ಪ್ರಮುಖ ಕೆಲಸವೆಂದರೆ ಬಟ್ಟೆಯನ್ನು ಸ್ವಚ್ಛತೆ ಮಾಡುವದು. ಕೆಲವರು ಕೃಷಿ ಹಾಗೂ ಇತರೆ ಉದ್ಯೋಗಗಳಲ್ಲಿ ತೊಡಗಿಕೊಂಡಿರುತ್ತಾರೆ. ಜೊತೆಗೆ ಇಸ್ತ್ರಿ ಕೆಲಸವನ್ನು ಮಾಡುತ್ತಾರೆ. ಅಲ್ಲದೇ ಬೇರೆ ಬೇರೆ ಸಮುದಾಯದ ಹಾಗೂ ಧರ್ಮಗಳ ಮದುವೆ ಹಾಗೂ ಶುಭ ಕಾರ್ಯಗಳಲ್ಲಿ ಹಂದರಗಳಿಗೆ ಬಟ್ಟೆಯನ್ನು ಕಟ್ಟುವ ಕೆಲಸ ಕಾರ್ಯ ಮಾಡುವುದು ಪ್ರಮುಖವಾಗಿದೆ.

**ಸುಣಗಾರು:** ಈ ಗ್ರಾಮದಲ್ಲಿ ಅಂದಾಜು ೫೦ ಕುಟುಂಬಗಳಿವೆ. ಸುಣಗಾರ ಮುಖ್ಯ ಕಸಬು ಸುಣ್ಣ ತಯಾರಿಸುವದಾಗಿದೆ. ಸುಣಗಾರ ಹೆಣ್ಣುಮಕ್ಕಳು ೭ ದಿನಗಳ ಕಾಲ ಜೋಕುಮಾರ ನನ್ನು ಹೊತ್ತುಕೊಂಡು ಹುಣ್ಣಿಮೆಯಲ್ಲಿ ಮನೆಮನೆಗಳಿಗೆ ಹೋಗಿ ಬರುತ್ತಾರೆ. ಭಾದ್ರಪದ ೧೪ನೇ ದಿನ ಆ ಮೂರ್ತಿಯನ್ನು ಅಗಸರು ಬಟ್ಟೆ ಒಗೆಯುವ ಕಲ್ಲಿನ ಬುಡದಲ್ಲಿ ಇಟ್ಟು ಬರುತ್ತಾರೆ.

**ಮಾದಿಗರು:** ಸುಮಾರು ೨೦೦ ಕ್ಕಿಂತಲೂ ಹೆಚ್ಚು ಮನೆಗಳು ಈ ಗ್ರಾಮದಲ್ಲಿ ಕಂಡುಬರುತ್ತವೆ. ಈ ಸಮುದಾಯದವರು ಆರ್ಥಿಕವಾಗಿ ಹಿಂದುಳಿದವರಾಗಿದ್ದು. ಸಾಮಾಜಿಕವಾಗಿ, ಧಾರ್ಮಿಕವಾಗಿ ಶೋಷಣೆಗಳನ್ನು ಅನುಭವಿಸುತ್ತಿದ್ದಾರೆ. ಇವರಲ್ಲಿ ಅನೇಕ ಒಳಪಂಗಡಗಳಿವೆ. ಚರ್ಮದ ಕೆಲಸವನ್ನು ಮಾಡುತ್ತಾರೆ. ಜೊತೆಗೆ ಕೂಲಿ, ಬೇಸಾಯ ಉದ್ಯೋಗವಾಗಿದೆ.

**ಬಡಿಗೇರ:** ಈ ಗ್ರಾಮದಲ್ಲಿ ೪೦ ಮನೆಗಳಿವೆ. ಇವರನ್ನು ವಿಶ್ವಕರ್ಮ, ಪಾಂಚಾಳರು ಎಂಬ ಹೆಸರುಗಳಿಂದ ಕರೆಯುತ್ತಾರೆ. ಬಡಗಿತನ ಇವರ ಮುಖ್ಯ ಕೆಲಸವಾಗಿದೆ. ಇವರು ಮೌನೇಶ್ವರ, ಕಾಳಿಕಾದೇವಿಯನ್ನು ಇವರು ಆರಾಧಿಸುತ್ತಾರೆ.

**ತಳವಾರ:** ಈ ಗ್ರಾಮದಲ್ಲಿ ೨೫ ಕುಟುಂಬಗಳಿದ್ದು. ಇದು ಒಂದು ವೃತ್ತಿ ಸೂಚಕ ಹೆಸರಾಗಿದೆ. ತಳವಾರ ಎಂದರೆ ಗ್ರಾಮದ ರಕ್ಷಕ ಎಂದರ್ಥವಾಗುತ್ತದೆ. ಊರಲ್ಲಿ ತೆರಿಗೆ ವಸೂಲಿ ಮಾಡುವುದು ಮತ್ತು ವಾಲಿಕಾರಿಕೆ ಮಾಡುವುದು ಇವರ ಪ್ರಮುಖ ಕೆಲಸವಾಗಿದೆ.

**ಕಮ್ಮಾರ:** ರೈತನಿಗೆ ಕೃಷಿ ಸಲಕರಣೆಗಳನ್ನು ಮಾಡಿಕೊಡುವಲ್ಲಿ ಬಡಿಗಾರನ ಪಾತ್ರ ಎಷ್ಟು ಮುಖ್ಯವೋ, ಹಾಗೆ ಕಮ್ಮಾರನ ಪಾತ್ರ ಅಷ್ಟೇ ಮುಖ್ಯವಾಗಿರುತ್ತದೆ. ಈ ಗ್ರಾಮದಲ್ಲಿ ೨೦ ಕ್ಕೂ ಹೆಚ್ಚು ಕಮ್ಮಾರರ ಮನೆಗಳಿವೆ. ಇವರು ಕೊಡಲಿ, ಬೇಸಾಯಕ್ಕೆ ಬೇಕಾದ ಕಬ್ಬಿಣದ ಸಲಕರಣೆ, ಕುಂಟಿ, ಕುಡಗೋಲು ಮುಂತಾದ ಸಾಮಾನುಗಳನ್ನು ಸಿದ್ಧಪಡಿಸುತ್ತಾರೆ.

**ಕೊರಗರು:** ಸುಮಾರು ಹತ್ತಕ್ಕು ಹೆಚ್ಚು ಮನೆಗಳಿವೆ. ಇವರು ಇಂದಿಗೂ ಕೆಲವರು ಇದೆ ವೃತ್ತಿಯಲ್ಲಿ ಮುಂದುವರಿದರೆ ಕೆಲವರು ಬೇರೆ ಬೇರೆ ಕೆಲಸದಲ್ಲಿ ತೊಡಗಿದ್ದಾರೆ. ಬೇರೆ ಬೇರೆ ಪ್ರದೇಶಗಳಿಂದ ಇದಕ್ಕೆ ಬೇಕಾಗುವ ಸಾಮಗ್ರಿಗಳನ್ನು ತಂದು ತಯಾರಿಸುತ್ತಾರೆ.

**ಕುಂಬಾರರು:** ಮನುಷ್ಯನಿಗೆ ಪಾರಂಪರಿಕ ಮೂಲಸೌಲಭ್ಯದ ಪರಿಕರಗಳನ್ನು ಮಾಡಿಕೊಡುವಲ್ಲಿ ಕುಂಬಾರರ ಪಾತ್ರ ದೊಡ್ಡದು. ಅತಿ ಮುಖ್ಯವಾಗಿ ಮನುಷ್ಯ ಹುಟ್ಟಿನಿಂದ ಸಾಯುವ ತನಕ ಆಚರಿಸುವಂತಹ ಆಚರಣೆಗಳಿಗೆ ಮಡಿಕೆ, ಕುಡಿಕೆ, ಇತ್ಯಾದಿಗಳು ಬಹುಮುಖ್ಯವಾದುವು. ಇವುಗಳನ್ನು ಬಳಸುವುದರಿಂದ ಮಾನವನ ಆರೋಗ್ಯದ ಮೇಲೆ ಯಾವುದೇ ರೀತಿಯ ದುಷ್ಪರಿಣಾಮವಾಗುವು ದಿಲ್ಲಾ. ಈ ಊರಿನಲ್ಲಿ ಹಲವಾರು ಮನೆತನಗಳು ಇವೆ. ಹಬ್ಬ ಹರಿದಿನಗಳಲ್ಲಿ ಮನೆ ಮನೆಗೆ ಬಂದು ನಾಗರ ಪಂಚಮಿ, ಮಣ್ಣೆತ್ತಿನ ಅಮವಾಸ್ಯೆಯಂದು ಮಣ್ಣಿನ ನಾಗರ, ಬಸವಣ್ಣನನ್ನು ಮಾರುತ್ತಾರೆ.

**ರಜಪೂತ:** ಈ ಗ್ರಾಮದಲ್ಲಿ ನೂರಕ್ಕೂ ಹೆಚ್ಚು ರಜಪೂತ ಕುಟುಂಬಗಳಿವೆ. ಇವರು ಹೆಚ್ಚು ವ್ಯಾಪಾರವನ್ನು ಅವಲಂಬಿಸಿದ್ದಾರೆ. ಹಾಗೂ ಕೂಲಿ, ಕೃಷಿ ಕೆಲಸದಲ್ಲಿ ತಮ್ಮನ್ನು ತೊಡಗಿಸಿ ಕೊಂಡಿದ್ದಾರೆ. ಇವರ ಮನೆದೇವರು ತುಳಜಾಭವಾನಿಯನ್ನು ಆರಾಧ್ಯದೈವವಾಗಿ ಪೂಜಿಸುತ್ತಾರೆ.

**ಜೈನರು:** ಈ ಗ್ರಾಮದಲ್ಲಿ ಸುಮಾರು ೨೦ ಕ್ಕೂ ಹೆಚ್ಚು ಕುಟುಂಬಗಳಿದ್ದು. ಇವರು ಮೂಲತಃ ರಾಜಸ್ಥಾನದವರಾಗಿದ್ದು ಇವರ ಮಾತೃ ಭಾಷೆ ರಾಜಸ್ಥಾನಿಯಾಗಿದ್ದು. ಇವರು ಬಟ್ಟೆ ವ್ಯಾಪಾರವನ್ನು ಅವಲಂಬಿಸಿದ್ದಾರೆ. ಹಾಗೂ ಕೆಲವರು ಇನ್ನಿತರೆ ವೃತ್ತಿಗಳಲ್ಲಿ ತೊಡಗಿ ಕೊಂಡಿದ್ದಾರೆ. ೨೪ ತೀರ್ಥಂಕರರ ಜೊತೆಗೆ ಆಪಶ್ವೇರಜೀ ಹಾಗೂ ಅಂಬಿಕಾದೇವಿಯ ಆರಾಧಕ ರಾಗಿದ್ದಾರೆ.

**ವೃತ್ತಿ:** ಈ ಊರಿನಲ್ಲಿ ವ್ಯವಸಾಯವೇ ಪ್ರಧಾನ ಉದ್ಯೋಗ. ಇಲ್ಲಿ ಜೋಳ, ಹತ್ತಿ, ಶೇಂಗಾ, ಕಡಲೆ, ಸೋಯಾಬಿನ, ಹೆಸರು, ಗೋವಿನಜೋಳ, ಅಲಸಂಧಿ, ಕಬ್ಬು ಮುಂತಾದವುಗಳನ್ನು ಹೆಚ್ಚಾಗಿ ಬೆಳೆಯುತ್ತಾರೆ. ಈ ಗ್ರಾಮದಲ್ಲಿ ಅನೇಕ ಸಮುದಾಯಗಳಿದ್ದು ಬಹುತೇಕ ಸಮುದಾಯ ದವರು ವ್ಯವಸಾಯದಲ್ಲಿ ತೊಡಗಿದ್ದಾರೆ. ಇನ್ನು ಕೆಲವರು ಕೂಲಿ, ವ್ಯಾಪಾರ ಮಾಡಿ ತಮ್ಮ ಬದುಕನ್ನು ಸಾಗಿಸುತ್ತಾ ಇದ್ದಾರೆ. ಇತ್ತೀಚಿಗೆ ಮಹಿಳಾ ಸಬಲೀಕರಣಕ್ಕಾಗಿ ಗಾರ್ಮೇಂಟ್ಸ

ಹಾಗೂ ಆಹಾರ ತಯಾರಿಕಾ ಘಟಕಗಳು ಪ್ರಾರಂಭವಾಗಿ ಹಲವು ಮಹಿಳೆಯರಿಗೆ ಉದ್ಯೋಗ ದೊರೆತು ಆರ್ಥಿಕವಾಗಿ ಸ್ವಾವಲಂಬಿಯಾಗಿ ಬದುಕಲು ಸಾಧ್ಯವಾಗಿದೆ. ಪ್ರತಿಯೊಂದು ಸಮುದಾಯ ದವರು ದೇವರ ಬಗ್ಗೆ ಅಪಾರ ನಂಬಿಕೆಯುಳ್ಳವರಾಗಿದ್ದಾರೆ. ಬಹುತೇಕವಾಗಿ ಊರಲ್ಲಿ ಶಾಲೆಗೆ ಮಕ್ಕಳನ್ನು ಸೇರಿಸುವ ಉತ್ತಮ ಶಿಕ್ಷಣ ಕೊಡಿಸುವ ಪ್ರಯತ್ನ ಮಾಡುತ್ತಿದ್ದಾರೆ.

**ಪ್ರಮುಖ ಆಹಾರ ಬೆಳೆಗಳು:** ಜೋಳ, ಹೈಬ್ರೀಡ ಜೋಳ, ಗೋದಿ, ಅಲಸಂಧಿ, ಹೆಸರು, ತೊಗರಿ, ಅವರಿ, ಕಡಲೆ, ಗುರ್‍ಯಳ್ಳು ಇತ್ಯಾದಿ ಪ್ರಮುಖ ವಾಣಿಜ್ಯ ಬೆಳೆಗಳಾಗಿವೆ.

**ಪ್ರಮುಖ ವಾಣಿಜ್ಯ ಬೆಳೆಗಳು :** ಗೋವಿನ ಜೋಳ, ಹತ್ತಿ, ಕಬ್ಬು, ಶೇಂಗಾ, ಸೂರ್ಯಕಾಂತಿ, ಸೋಯಾಬಿನ್, ಮೆಣಸಿನಕಾಯಿ ಇತ್ತೀಚೆಗೆ ಚೆಂಡು ಹೂ, ಅಲ್ಲಲ್ಲಿ ಮಲ್ಲಿಗೆ, ಬಟನ್ ರೋಸ್, ತರಕಾರಿ ಸಹ ಬೆಳೆಯುತ್ತಾರೆ. ಜೊತೆಗೆ ಮಿಶ್ರ ಬೆಳೆ ಬೆಳೆಯುವ ಪದ್ದತಿ ಕೂಡಾ ಇದೆ.

ಎರಿ ಮತ್ತು ಮಸಾರಿ ಭೂಮಿಗಳಿವೆ. ಫಲವತ್ತಾದ ಎರಿಮಣ್ಣಿನಿಂದ ಉತ್ತಮ ಬೆಳೆ ಬೆಳೆಯಲು ಸಾಧ್ಯವಾಗಿದೆ. ಬಹುಪಾಲು ಮಳೆ ಆಧಾರಿತ ಕೃಷಿಯಾಗಿದೆ. ಅಲ್ಲಲ್ಲಿ ನೀರಾವರಿ ಕಂಡು ಬರುತ್ತಿದ್ದು ಅದರಲ್ಲಿ ಪಂಪಸೆಟ್ ನೀರಾವರಿ ಹೆಚ್ಚು ರೂಢಿಯಲ್ಲಿದೆ. ಕರೆ ಆಧಾರಿತವಾದ ವ್ಯವಸಾಯ ಕಂಡು ಬರುತ್ತದೆ.

ಕೃಷಿ ಜೊತೆಗೆ ಪಶುಸಂಗೋಪನೆಯನ್ನು ಒಟ್ಟೊಟ್ಟಿಗೆ ನಡೆಸಿಕೊಂಡು ಹೋಗುತ್ತಾರೆ. ವಿಶೇಷವೆಂದರೆ ಬಂಕಾಪುರದಲ್ಲಿ ಖಿಲಾರಿ ತಳಿಗಳ ಗೋ ಸಂವರ್ಧನಾ ಕೇಂದ್ರವಿದ್ದು ಇಲ್ಲಿ ಖಿಲಾರಿ ದನಗಳನ್ನು ಬೆಳೆಸುವ ಮತ್ತು ಅವುಗಳನ್ನು ಕೃಷಿಕರಿಗೆ ಒದಗಿಸುವ ಕೆಲಸ ನಡೆಯುತ್ತದೆ. ಇನ್ನುಳಿದಂತೆ ಎಮ್ಮೆ, ಆಕಳು, ಕುರಿ, ಹಂದಿ, ಕೋಳಿ, ಮೊಲ, ಆಡು ಸಾಕಾಣಿಕೆ ಕಂಡುಬರುತ್ತದೆ.

### ೩.೪. ಕುಟುಂಬ ಪದ್ದತಿ

ಕುಟುಂಬವು ಸಮಾಜದ ಮೂಲಭೂತ ಮತ್ತು ಶಕ್ತಿಶಾಲಿಯಾದದ್ದು. ಪ್ರಾಣಿಗಳಂತೆ ಬದುಕಿದ ಮಾನವ ಬರಬರುತ್ತಾ ಕೌಟುಂಬಿಕ ಬದುಕನ್ನು ಆರಂಭಿಸಿ ಕುಟುಂಬದ ಪ್ರೀತಿಯಲ್ಲಿ ಭಾಗಿಯಾದನು. ಕುಟುಂಬವನ್ನು ಕುರಿತು ಅಧ್ಯಯನ ಮಾಡಿದ ಸಮಾಜ ವಿಜ್ಞಾನಿಗಳು ಇದೊಂದು ಮಾನವ ಸಮಾಜದ ಪ್ರಾಥಮಿಕ ಸಂಸ್ಥೆಯೆಂತಲೂ ಕರೆಯುತ್ತಾರೆ.

ನಾಗರಿಕತೆಗೆ ಸಮಾಜ ತಳಹದಿಯಾದರೆ, ಸಮಾಜಕ್ಕೆ ಕುಟುಂಬವೇ ಮೂಲ. ಕುಟುಂಬದ ಅಸ್ತಿತ್ವವಿಲ್ಲದೆ ಯಾವುದೇ ಸಮಾಜವನ್ನು ಊಹಿಸುವುದು ತುಂಬಾನೆ ಕಷ್ಟವಾಗಿದೆ. ಕೌಟುಂಬಿಕ ಸಂಸ್ಕೃತಿಯೇ ಸಮಾಜ ಮತ್ತು ದೇಶದ ಸಂಸ್ಕೃತಿಯಾಗುತ್ತದೆ. ಕುಟುಂಬವೇ ಸಮಾಜದ ಮೂಲ ಸಾಮಾಜಿಕ ಸಂಸ್ಥೆಗಳಲ್ಲಿ ಕುಟುಂಬ ಚಿಕ್ಕ ಸಂಸ್ಥೆ. ಇದು ಇತರ ಎಲ್ಲಾ ಸಂಸ್ಥೆಗಳಿಗೂ ಮೂಲ. ಏಕೆಂದರೆ ಇತರೆ ಎಲ್ಲಾ ಸಂಸ್ಥೆಗಳು ನಿಂತಿರುವುದು ಕುಟುಂಬದ ಆಧಾರದ ಮೇಲೆ,

ಅದು ತನ್ನ ಸದಸ್ಯರ ಬಲಸತ್ವವನ್ನು ಪಡೆಯುವುದು ಕುಟುಂಬದಿಂದ. ಅಲ್ಲದೇ ಅದು ಎಲ್ಲಾ ಸಮಾಜಗಳಿಗೂ ಸರ್ವಸಾಮಾನ್ಯವಾದುದು. ಮಕ್ಕಳ ಆಟಕ್ಕೆ ಪಾಠಕ್ಕೆ, ದಾರ್ಮಿಕ ಬೆಳವಣಿಗೆಗೆ ಶಿಸ್ತು ಪಾಲಿಸುವ ಅಭ್ಯಾಸಕ್ಕೆ ಕುಟುಂಬವು ಮೂಲಕೇಂದ್ರವಾಗಿದೆ.

ಸಮಾಜದಲ್ಲಿರುವ ಎಲ್ಲಾ ಸಂಸ್ಥೆಗಳು, ಪಂಗಡಗಳು, ವೃತ್ತಿಗಳು ಎಲ್ಲಾ ರೀತಿ–ನೀತಿಗಳು ಜೀವನದ ಎಲ್ಲಾ ಅವಸ್ಥೆಗಳಿಗೂ ಎಲ್ಲಾ ಆಶ್ರಯಗಳು, ಸಂಬಂಧಗಳು ಹುಟ್ಟು ಪಡೆದಿರುವುದು ಕುಟುಂಬದಿಂದ. ತನ್ನವರು ಬೇರೆಯವರು ಸಮುದಾಯ, ಪರಸಮುದಾಯ, ಸ್ವಬಳಗ, ನೆರೆಹೊರೆ, ರಕ್ತಸಂಬಂಧ, ಬಂಧು–ಬಳಗ, ಸ್ನೇಹಿತರು, ಶತ್ರುಗಳು, ದಾಸ, ದಣಿ, ಧನಿಕ, ದರಿದ್ರ, ಸೇವಕ, ಸಹೊದ್ಯೋಗಿ ಮುಂತಾದ ಸಾಮಾಜಿಕ ಭೇದಗಳು ಹುಟ್ಟಿರುವುದು ಕುಟುಂಬ ಜೀವನದಿಂದ. ಮನೆ–ಮಠ, ತೋಟ ತುಡಿಕೆ, ಹಣ–ಆಸ್ತಿ, ಕೃಷಿ, ವ್ಯಾಪಾರ, ಕೈಗಾರಿಕೆ ಮುಂತಾದ ಜೀವನ ಮಾರ್ಗಗಳು ಉದ್ಯಮಿಗಳು ಕುಲಕಸುಬಿನವರು, ಕೋಮಿನವರು ಹುಟ್ಟಿರುವುದು ಕುಟುಂಬ ಜೀವನದಿಂದ. ತಂದೆ–ತಾಯಿ, ಮಗ–ಸೊಸೆ, ಮಗಳು–ಅಳಿಯ, ಮಾವ–ಅತ್ತೆ, ಅಜ್ಜ–ಅಜ್ಜಿ, ಅಣ್ಣ–ತಮ್ಮ, ಅಕ್ಕ–ತಂಗಿ ಮುಂತಾದ ಬಾಂಧವ್ಯಗಳು ಹುಟ್ಟಿರುವುದು ಕುಟುಂಬ ಜೀವನದಿಂದ.

**ಮೆಕೈವರ ಪೇಜರವರ** ಪ್ರಕಾರ ಕುಟುಂಬವು ಲೈಂಗಿಕ ಸಂಬಂಧದಿಂದ ಸೃಷ್ಟಿ ಪಡಿಸಲ್ಪಟ್ಟು ಖಚಿತವಾದ ಮಕ್ಕಳನ್ನು ಪಡೆಯಲು ಮತ್ತು ಪೋಷಿಸಲು ಅವಕಾಶ ಮಾಡಿಕೊಡುವಂತಹ ಒಂದು ಸಾಮಾಜಿಕ ಸಂಸ್ಥೆ. **'ಸಮ್ನರ ಮತ್ತು ಕೆಲ್ಲರ್'** ಇವರ ಹೇಳಿಕೆ ಪ್ರಕಾರ "ರಕ್ತ ಸಂಬಂಧ ಗಳಿಂದ ಕೂಡಿದ ಕನಿಷ್ಠ ಎರಡು ತಲೆಮಾರುಗಳನ್ನು ಒಳಗೊಂಡಿರುವ ಅತೀ ಸೂಕ್ಷ್ಮವಾದಂತಹ ಸಂಘಟನೆಯೇ ಕುಟುಂಬ". **'ಇಲಿಯಟ ಮೆರಿಲ್'** ರವರ ಪ್ರಕಾರ "ಕುಟುಂಬ ಜೈವಿಕ ಘಟಕ ವಾಗಿದ್ದು, ಗಂಡ–ಹೆಂಡತಿ ಮಕ್ಕಳನ್ನು ಒಳಗೊಂಡಿರುತ್ತದೆ. ಅಂದರೆ ಕುಟುಂಬವು ಒಂದು ಚಿಕ್ಕ ಘಟಕವಾಗಿದ್ದು, ಸಂಸಾರಿಕ ರೂಪದಲ್ಲಿ ಗಂಡ–ಹೆಂಡತಿಯರಲ್ಲಿ ವಂಶಾಭಿವೃದ್ದಿಯ ಜೊತೆಗೆ ಲೈಂಗಿಕ ಬಾಂಧವ್ಯಗಳನ್ನು ರೂಪಿಸುವಂತಹ ಗುಣಲಕ್ಷಣಗಳನ್ನು ಹೊಂದಿ, ಸಮಾಜದ ಎಲ್ಲ ಪ್ರಕಾರಗಳಲ್ಲಿ ಒಂದು ಸಂಸ್ಥೆಯಾಗಿ ಕಾರ್ಯ ನಿರ್ವಹಿಸುವುದಕ್ಕೆ ಕುಟುಂಬ ಎಂದಿದ್ದಾರೆ."[೧] ಬಂಕಾಪುರ ಗ್ರಾಮದ ಕುಟುಂಬದಲ್ಲಿ ಹಲವಾರು ಪ್ರಕಾರಗಳನ್ನು ಕಾಣಬಹುದಾಗಿದೆ. ಅವಿಭಕ್ತ ಕುಟುಂಬ, ವಿಭಕ್ತ ಕುಟುಂಬ, ಮಾತೃ ಪ್ರಧಾನ ಕುಟಂಬ, ಪಿತೃ ಪ್ರಧಾನ, ಏಕಪತ್ನಿ, ಬಹುಪತ್ನಿತ್ವ ಕುಟುಂಬಗಳು ಹೀಗೆ ಹಲವು ರೀತಿಯ ಪ್ರಕಾರಗಳನ್ನು ಕಾಣಬಹುದಾಗಿದೆ.

೧. ಅವಿಭಕ್ತ ಕುಟುಂಬ

೨. ವಿಭಕ್ತ ಕುಟುಂಬ

೩. ಪಿತೃ ಪ್ರಧಾನ ಕುಟುಂಬ

೪. ಮಾತೃ ಪ್ರಧಾನ ಕುಟುಂಬ

**ಅವಿಭಕ್ತ ಕುಟುಂಬ:** ಕುಟುಂಬದ ಪ್ರಕಾರಗಳಲ್ಲಿ ಅವಿಭಕ್ತ ಕುಟುಂಬವು ಒಂದಾಗಿದೆ. ಇದು ತಂದೆಯು ಸೇರಿ ಎರಡು ಮೂರು ತಲೆಮಾರಿನ ಜನರನ್ನು ಒಳಗೊಂಡಿರುತ್ತದೆ. ಇಲ್ಲಿ ಅಜ್ಜ–ಅಜ್ಜಿ, ತಂದೆ–ತಾಯಿ, ಮಕ್ಕಳು, ಅಣ್ಣ–ತಮ್ಮಂದಿರು, ಮೊಮ್ಮಕ್ಕಳು–ಮಕ್ಕಳು, ಮರಿಮೊಮ್ಮಕ್ಕಳು ಹೀಗೆ ಹಲವು ತಲೆಮಾರಿನ ರಕ್ತಸಂಬಂಧದವರು ಕೂಡಿ ಬಾಳುತ್ತಿರುತ್ತಾರೆ. ಕುಟುಂಬದ ಸಂಖ್ಯೆ ಹೆಚ್ಚಾದಷ್ಟು ಉತ್ಪಾದನೆ ಹೆಚ್ಚಾಗುತ್ತದೆ. ಇಲ್ಲಿಯ ಸುಖ ಸಂಬಂಧ ನಾನಾ ರೀತಿಯಾಗಿದ್ದು, ಪ್ರೀತಿ–ವಾತ್ಸಲ್ಯ ಸಂಬಂಧವು ಅತೀ ಮುಖ್ಯವಾಗಿರುತ್ತದೆ. ಇತ್ತೀಚಿನ ದಿನಗಳಲ್ಲಿ ಕೂಡಿಕೊಂಡು ಸಾಮಾಜಿಕ ಬದುಕಿನಲ್ಲಿ ಬಾಳುವವರು ಅತಿವಿರಳವಾಗಿದ್ದಾರೆ. ಪ್ರತಿಯೊಂದು ಸಮುದಾಯವು ಸಾಮಾನ್ಯವಾಗಿ ಪರಿಸರದ ಪದ್ಧತಿಯಂತೆ ಅನುಗುಣವಾಗಿ ಬದಲಾವಣೆಯಾಗುವುದು ಅತಿ ಮುಖ್ಯವಾಗಿರುತ್ತದೆ. ಪ್ರಮುಖವಾಗಿ ಪುರುಷ ಪ್ರಧಾನ ಕುಟುಂಬ ಅತಿ ಪ್ರಧಾನವಾಗಿರುತ್ತದೆ. ಕುಟುಂಬದವರ ಮೇಲೆ ಅಧಿಕಾರವನ್ನು ನಡೆಸುತ್ತಾನೆ. ಸ್ತ್ರೀ ಸಹಜವಾಗಿ ಮನೆಯಲ್ಲಿ ಕೆಲಸ ಮಾಡುತ್ತಾಳೆ.

**ಪಿತೃ ಪ್ರಧಾನ ಕುಟುಂಬ:** ಪ್ರಸ್ತುತ ಪ್ರದೇಶದಲ್ಲಿ ಪಿತೃ ಪ್ರಧಾನ ಕುಟುಂಬ ಅಸ್ತಿತ್ವದಲ್ಲಿ ಇರುವುದನ್ನು ಕಾಣಬಹುದು. ಪಿತೃ ಮೂಲಿಯ ವ್ಯವಸ್ಥೆ ಹಲವು ಅರ್ಥಗಳಲ್ಲಿ ವ್ಯವಸ್ಥೆ ಆಸ್ತಿಯ ಕೇಂದ್ರಿಕರಣದ ಬೇಸಾಯದ ಪ್ರಗತಿ, ಅಧಿಕಾರದ ಸರ್ವಾಧಿಕಾರ, ಕೈಗಾರಿಕೆ ಮತ್ತು ತಾಂತ್ರಿಕ ಬೆಳವಣಿಗೆ ಮತ್ತು ಅವುಗಳಲ್ಲಿನ ನೈಪುಣ್ಯತೆಗಳು ಸ್ತ್ರೀಯ ಪ್ರಾಮುಖ್ಯತೆಯನ್ನು ಕುಗ್ಗಿಸಿ, ಪಿತೃ ಪ್ರಧಾನ ಕುಟುಂಬದ ಹುಟ್ಟಿಗೆ ಕಾರಣವೆಂದು ಹಲವು ಮಾನವಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಪ್ರಾಚೀನ ಕಾಲದಲ್ಲಿ ಮಾತೃ ಪ್ರಧಾನ ಕುಟುಂಬಗಳೇ ಇದ್ದವು. ಇಷ್ಟಿದ್ದರೂ ಕೂಡಾ ಸಂಸಾರದ ಒಳಗೆ ಮಾತೃಗಳನ್ನು ಅಲ್ಲಗಳೆಯುವ ಹಾಗಿಲ್ಲ.

ಪಿತೃಪ್ರಧಾನ ಕುಟುಂಬದಲ್ಲಿ ಹಿರಿಯ ಪುರುಷನೇ ಮನೆಯ ಯಜಮಾನ. ನಿರಂಕುಶ ಪ್ರಭು, ಸರ್ವಾಧಿಕಾರಿಯಾಗಿದ್ದಾನೆ. ತನಗೆ ಇಷ್ಟ ಬಂದ ರೀತಿಯಲ್ಲಿ ನಡೆದುಕೊಳ್ಳುವ ಹಕ್ಕು ಆತನಿಗೆ ಇದೆ. ಆರ್ಥಿಕ, ರಾಜಕೀಯ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಆತನಿಗೆ ಸ್ವತಂತ್ರವಾದ ಅಧಿಕಾರವಿರುತ್ತದೆ. ಹಾಗೆಂದ ಮಾತ್ರಕ್ಕೆ ಇಲ್ಲಿನ ಕುಟುಂಬಗಳಲ್ಲಿ ಮನೆಯ ಯಜಮಾನ ತನ್ನ ಅಧಿಕಾರವನ್ನು ದುರಪಯೋಗ ಪಡಿಸುತ್ತಿದ್ದನೆಂದಲ್ಲ. ಇಲ್ಲಿ ಕೆಲವು ವಿಷಯಗಳಲ್ಲಿ ಮಹಿಳೆಯರ ಪಾಲೂ ಇದ್ದೇ ಇದೆ.

ಪಿತೃ ಪ್ರಧಾನ ಕುಟುಂಬದಲ್ಲಿ ಮಕ್ಕಳು ತಂದೆಯ ವಂಶಕ್ಕೆ ಸೇರುತ್ತಾರೆ. ಕುಟುಂಬದ ಆಸ್ತಿಯಲ್ಲಿ ಗಂಡು ಮಕ್ಕಳಿಗೆ ಮಾತ್ರ ಪಾಲು ಪಡೆಯುವ ಹಕ್ಕಿರುತ್ತದೆ. ಇತ್ತೀಚಿಗೆ ನ್ಯಾಯಾಲಯವು ನೀಡಿರುವ ತೀರ್ಪಿನ ಪ್ರಕಾರ ಹೆಣ್ಣು ಮಕ್ಕಳಿಗೆ ಆಸ್ತಿಯಲ್ಲಿ ಹಕ್ಕಿದೆ ಎಂಬ ಹಿನ್ನೆಲೆಯಲ್ಲಿ ಹೆಣ್ಣು ಮಕ್ಕಳಿಗೆ ಆಸ್ತಿಯನ್ನು ನೀಡುವುದರಿಂದಲೂ ಹೆಚ್ಚು ಗಂಡು ಮಕ್ಕಳ ಕಡೆಗೆ ಒಲವು ಮತ್ತು

ಬಲವಿರುವುದನ್ನು ಕಾಣಬಹುದು. ಅನುವಂಶೀಯ ಅಧಿಕಾರ ಮತ್ತು ಸ್ಥಾನಮಾನಗಳು ಗಂಡು ಸಂತತಿಗೆ ಮೀಸಲಾಗಿರುತ್ತವೆ. ಇಲ್ಲಿನ ಹೆಣ್ಣು ಮಕ್ಕಳು ವಿವಾಹವಾದ ಮೇಲೆ ಆಕೆಯ ಗಂಡನ ಮನೆಯಲ್ಲಿ ವಾಸಿಸುತ್ತಾರೆ. 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ' ಎಂಬ ಗಾದೆ ಇಲ್ಲಿನ ಕುಟುಂಬಕ್ಕೆ ಸರಿಹೊಂದುತ್ತದೆ.

**ವಿಭಕ್ತ ಕುಟುಂಬ:** "ಪ್ರಸ್ತುತ ಸಂದರ್ಭದಲ್ಲಿ ವಿಭಕ್ತ ಕುಟುಂಬಗಳೇ ಹೆಚ್ಚಾಗಿ ಕಂಡುಬರುತ್ತವೆ. ಗಂಡ-ಹೆಂಡತಿ ಮತ್ತು ಅವರ ಮಕ್ಕಳು ಒಂದೇ ಮನೆಯಲ್ಲಿ ವಾಸವಾಗಿರುವ ವಿಭಕ್ತ ಕುಟುಂಬವೇ ಸರಳ ಕುಟುಂಬವಾಗಿದೆ. ಇದನ್ನು ದಾಂಪತ್ಯ ಕುಟುಂಬವೆಂದು ಕರೆಯುತ್ತಾರೆ. ಗ್ರಾಮೀಣ ವ್ಯವಸಾಯ ಮತ್ತು ಗೃಹ ಕೈಗಾರಿಕೆಗಳು ಕ್ಷೀಣಿಸುವಿಕೆ, ಶೈಕ್ಷಣಿಕ ವೈಜ್ಞಾನಿಕ ಮತ್ತು ತಾಂತ್ರಿಕ ಪ್ರಗತಿಯಿಂದ ಕೈಗಾರಿಕೀಕರಣ, ಸ್ತ್ರೀಯರ ಶಿಕ್ಷಣ ಮತ್ತು ಆರ್ಥಿಕ ಸ್ವಾತಂತ್ರ್ಯ, ಪಾಶ್ಚಿಮಾತ್ಯ ಸಂಸ್ಕೃತಿಗಳ ಪ್ರಭಾವ ಪ್ರಜಾಪ್ರಭುತ್ವ ಆಧುನಿಕತೆಯಿಂದ ಮತ್ತು ಕಾಯ್ದೆಗಳು ಮುಂತಾದ ಅಂಶಗಳು ಸರಳ ಕುಟುಂಬದ ರಚನೆಗೆ ಕಾರಣವಾಗಿದೆ. ಅಲ್ಲದೆ ವೈಜ್ಞಾನಿಕ ಮತ್ತು ತಾಂತ್ರಿಕ ಪ್ರಗತಿ, ಸಾರಿಗೆ-ಸಂಪರ್ಕ, ಶಿಕ್ಷಣದಲ್ಲಿನ ಪ್ರಗತಿ, ಆರೋಗ್ಯ ಹೆಚ್ಚಳ ಮುಂತಾದ ವಾಸ್ತವವಾದ ಬೆಳವಣಿಗೆಗಳು ಸಹ ಸರಳ ಕುಟುಂಬ ರಚನೆಗೆ ಪೂರಕವಾಗಿವೆ. ರಾಜ್ಯದ ರಾಜಧಾನಿ ಬೆಂಗಳೂರು ಪ್ರಸ್ತುತ ಸಂದರ್ಭಕ್ಕೆ ಹತ್ತಿರವಾಗಿದ್ದು, ಇದರ ಸಂಪರ್ಕ ಹೆಚ್ಚಾಗಿದ್ದು ನಗರೀಕರಣದ ಪ್ರಭಾವ ಕೂಡ ಈ ಪ್ರದೇಶದ ಮೇಲಾಗಿದ್ದು ವಿಭಕ್ತ ಕುಟುಂಬಗಳ ರಚನೆಗೆ ಕಾರಣವಾಗಿದೆ".[೨]

**ವಿವಾಹ ಪದ್ಧತಿ:** ವಿವಾಹ ಮತ್ತು ಕುಟುಂಬ ಯಾವುದೇ ಸಮಾಜದ ಮೂಲಭೂತ ಅವಶ್ಯ ಮತ್ತು ಅನಿವಾರ್ಯ ಸಂಸ್ಥೆಗಳು. ಅವು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಪರಸ್ಪರ ಸ್ತ್ರೀ ಪುರುಷ ಈ ಎರಡು ಸಂಸ್ಥೆಗಳ ಆಧಾರ ಘಟಕಗಳು ಕುಟುಂಬದ ವ್ಯವಸ್ಥೆಗೆ ವಿವಾಹವೇ ಹೆಬ್ಬಾಗಿಲು. ವಿವಾಹ ಸಂಸ್ಥೆಗೆ ಕುಟುಂಬ ಪದ್ಧತಿಯೇ ಅಡಿಗಲ್ಲು. ಇವು ಸಾಮಾಜಿಕವಾಗಿ ಬಹಳ ಪ್ರಾಮುಖ್ಯತೆಗಳಿಸುವ ಸಂಸ್ಥೆಗಳು. ಸ್ತ್ರೀ ಪುರುಷರಿಗೆ ಏರ್ಪಡುವ ಪತ್ತು ಸಾಮಾಜಿಕ ಸಂಬಂಧದಲ್ಲಿ ವಿವಾಹ ಬಹುಮುಖ್ಯ ಪಾತ್ರವಹಿಸುತ್ತದೆ. ಈ ಸಂಬಂಧ ನಿರ್ದಿಷ್ಟ ಧಾರ್ಮಿಕ ಮತ್ತು ಸಾಮಾಜಿಕ ಕಟ್ಟುಪಾಡುಗಳು, ವಿಧಿ ಆಚರಣೆಗಳ ಮೂಲಕ ಸಾಧ್ಯ ವಾಗುತ್ತದೆ. ಸ್ತ್ರೀ ಪುರುಷರ ವೈಯಕ್ತಿಕ ಹಾಗೂ ಸಾಮಾಜಿಕ ಹಿತಕ್ಕಾಗಿ ಜರುಗುವ ಸಂಯೋಗವೇ ವಿವಾಹ. ಮಾನವ ಸಮಾಜದಲ್ಲಿ ಮಾತ್ರ ಕಂಡುಬರುವ ಈ ಪ್ರಬಲ ಸಂಸ್ಥೆ ವಿಶಿಷ್ಟವಾದುದು.

ಭಾರತದ ಇತಿಹಾಸ ಪೂರ್ವದ ಆದಿ ಮಾನವನಿಗೆ ಕುಟುಂಬ, ವಿವಾಹ ಸಂಸ್ಥೆ ವಿಷಯಗಳ ಬಗ್ಗೆ ಯಾವುದೇ ಕಲ್ಪನೆ ಇರಲಿಲ್ಲ. ಪ್ರಾಣಿಗಳಲ್ಲಿರುವಂತೆ ಕೇವಲ ಲೈಂಗಿಕ ಪ್ರವೃತ್ತಿಯಷ್ಟೆ ಜೀವನದ ನಿರಂತರತೆ ಸಂತಾನಾಭಿವೃದ್ಧಿಗೆ ಕಾರಣವಾಯಿತು. ಆದಿಮಾನವ ಒಂದೆಡೆ ನೆಲೆನಿಂತು ಕಣ್ಣು ತೆರೆದು ಪ್ರಕೃತಿಯ ರಹಸ್ಯವನ್ನು ಭೇದಿಸಲು ಅರಿತಾಗ ಸಂಸ್ಕೃತಿ

ಮತ್ತು ನಾಗರಿಕತೆ ಪ್ರಾರಂಭವಾಯಿತು. ಅದು ಸ್ತ್ರೀ ಪುರುಷರು ಜೊತೆಗೆ ಬಾಳಲು, ಬದುಕನ್ನು ಸಾಗಿಸಲು ಬೆಳವಣಿಗೆ ಹಂತದಲ್ಲಿ ಸ್ತ್ರೀ ಪುರುಷರ ಸಾಮಾಜಿಕ ಬಂಧುತ್ವ ಕಟ್ಟಿಕೊಂಡು ಕ್ರಮೇಣ ಧಾರ್ಮಿಕ ನಂಬಿಕೆಗಳು ಬೆರೆತು ವಿವಾಹ ಪದ್ಧತಿಗೆ ಹೊಸದಾದ ಆಯಾಮ ದೊರೆಯಿತು. ಸ್ತ್ರೀ ಪುರುಷರು ತಮ್ಮ ದಾಂಪತ್ಯ ಬದುಕಿಗಾಗಿ ಸಮಾಜದ ಸಮ್ಮತಿ ಅಂಗೀಕಾರವನ್ನು ಧರ್ಮಸಮ್ಮತವಾದ ವಿವಾಹ ಸಂಸ್ಕಾರಗಳ ಮೂಲಕ ಪಡೆಯತೊಡಗಿದರು. ವಿವಾಹವನ್ನು ನಾವು ಸಂಸ್ಕಾರದ ಪ್ರಜ್ಞೆಯಿಂದ, ವಿವಿಧ ಕಲಾಪಗಳಿಂದ, ಧಾರ್ಮಿಕ ವಿಧಿ ನಿಷೇಧಗಳನ್ನು ಆಚರಿಸುವುದೇ ಭಾರತೀಯ ಪರಿಸರದಲ್ಲಿನ ವಿವಾಹ ಪದ್ಧತಿಗಳಲ್ಲಿ ಹಲವು ವೈವಿಧ್ಯಪೂರ್ಣವಾಗಿವೆ. ವಿವಾಹದ ಮುಂಚೆಯೇ ನಡೆಸುವ ವಿವಾಹದ ವಿಧಿಗಳ ಸಿದ್ಧತೆಗಳು ವಿವಾಹಕ್ಕೆ ಬೇಕಾದ ಕೆಲವು ಅಗತ್ಯಗಳು ವಧು-ವರರ ವಯೋಮಾನ, ವಧು-ವರರ ಲಕ್ಷಣ ಮತ್ತು ಆಯ್ಕೆಯ ಕ್ರಮ, ಹೆಣ್ಣು ಕೇಳುವ ಕ್ರಮ, ನಿಶ್ಚಿತಾರ್ಥ, ನಂತರದ ವಿವಾಹ ದಿನ, ಮದುವೆ ಮಂಟಪ, ಹೆಣ್ಣು ಗಂಡುಗಳನ್ನು ಕರೆ ತರವುದು, ದೇವರ ಕಾರ್ಯ, ಹಂದರ ಹಾಕುವುದು, ಧಾರೆ ಎರೆಯುವುದು, ಮುಂತಾದ ಆಚರಣೆಗಳು ವಿವಾಹ ಎಂಬ ಬಂಧನಕ್ಕೆ ಒಳಗಾಗುವ ಮುನ್ನ ನಡೆಯುವ ಸಾಂಪ್ರದಾಯಿಕ ಆಚರಣೆಗಳಾಗಿವೆ.

ವಿವಾಹಕ್ಕೆ ಮೊದಲು ಹೆಣ್ಣು-ಗಂಡುಗಳ ವಿವಾಹದ ವಯಸ್ಸನ್ನು ನಿರ್ಧರಿಸುವುದು ಸಾಮಾನ್ಯವಾಗಿ ರೂಢಿಯಲ್ಲಿದೆ. ಕಾರಣ ಬಾಲ್ಯ-ವಿವಾಹ ಪದ್ಧತಿಯಂತಹ ಆಚರಣೆಗಳನ್ನು ತಡೆಯುವಲ್ಲಿ ಸಂವಿಧಾನ ಕಾನೂನುಗಳನ್ನು ರೂಪಿಸಿದೆ. ಗಂಡಿಗೆ ಇಪ್ಪತ್ತೊಂದು ವರ್ಷ, ಹೆಣ್ಣಿಗೆ ಹದಿನೆಂಟು ವರ್ಷ ವಯಸ್ಸಾಗಿರಬೇಕು ನಂತರ ಮದುವೆ ನಿಶ್ಚಯಿಸುವುದು ಸಾಮಾನ್ಯವಾಗಿದೆ. ಇದು ಗಂಡು ಹೆಣ್ಣುಗಳ ಕನಿಷ್ಠ ವಯಸ್ಸಾಗಿದ್ದು, ಈ ವಯಸ್ಸು ದಾಟಿದ ನಂತರವೇ ಬಹುತೇಕ ವಿವಾಹ ನಿಶ್ಚಯವಾಗುವುದು. ವಧು ವರರನ್ನು ಆಯ್ಕೆ ಮಾಡುವಲ್ಲಿ ಅವರ ಗುಣಲಕ್ಷಣ, ಎತ್ತರ, ಆಕಾರ ಈ ಎಲ್ಲಾ ಅಂಶಗಳನ್ನು ಗಮನಿಸುತ್ತಾರೆ. ವಧುವಿಗೂ-ವರನಿಗೂ ಸರಿಯಾಗಿ ಹೊಂದಾಣಿಕೆಯಾದಾಗ ಮಾತ್ರವೇ ಒಪ್ಪಿಗೆಯನ್ನು ಸೂಚಿಸಲಾಗುತ್ತದೆ. ಪ್ರಾಚೀನ ಕಾಲದಿಂದಲೂ ಮನೆಯ ಹಿರಿಯರ ತೀರ್ಮಾನವೇ ಅಂತಿಮವಾಗಿತ್ತು. ಹುಡುಗ-ಹುಡುಗಿಯರ ತೀರ್ಮಾನವೇ ಅಂತಿಮವಾಗಿತ್ತು. ಹುಡುಗ-ಹುಡುಗಿಯರ ಒಪ್ಪಿಗೆಯ ಮೇರೆಗೆ ಮುಂದಿನ ಕಾರ್ಯಗಳನ್ನು ಮಾಡುವರು. ಆದ್ದರಿಂದ ವಧು ವರರ ಪಾತ್ರವೂ ಸಹ ಬಹು ಮುಖ್ಯವಾಗಿದೆ. ಸಂಪ್ರದಾಯದ ಪ್ರಕಾರವೇ ಹುಡುಗ-ಹುಡುಗಿ ಒಪ್ಪಿದರೂ, ಕುಲ ಗೋತ್ರಕ್ಕೆ ಹೆಚ್ಚಾಗಿ ಪ್ರಾಶಸ್ತ್ಯತೆ ಕೊಡುವುದು ಇಂದಿಗೂ ಕಾಣಬಹುದು. ಇವರಿಬ್ಬರ ಬೆಡಗು ಬೇರೆಯಾಗಿದ್ದರೆ ಮಾತ್ರ ವಿವಾಹ ಸಂಬಂಧ ಏರ್ಪಡುತ್ತದೆ. ಬಂಕಾಪುರ ಗ್ರಾಮದಲ್ಲಿ ಎಲ್ಲಾ ಸಮುದಾಯಗಳಲ್ಲಿ ತಮ್ಮ ತಮ್ಮ ಸಮುದಾಯದೊಳಗೆ ವಿವಾಹವಾಗುವದನ್ನು ನಾವು ಸಾಮಾನ್ಯವಾದ ಸಂಗತಿಯೆಂದು ಹೇಳಬಹುದಾಗಿದೆ.

ಕಾಮ, ಆಹಾರ, ನಿದ್ರೆಗಳಷ್ಟೆ ಪ್ರಮುಖವಾದುದು. ಮೂಲಭೂತ ಪ್ರವೃತ್ತಿಯಾದ ಕಾಮ ಕೂಡಾ ಮನುಷ್ಯನಿಗೆ ಪ್ರಬಲ ಹಾಗೂ ಸಹಜವಾದುದು. ಇದು ಒಂದು ಕಾಲದಲ್ಲಿ ಲೈಂಗಿಕ ಸ್ವಚ್ಛಂದತೆಗೆ ಕಾರಣವಾಗಿತ್ತು. ಆದರೆ ವಿವಾಹ ಸಂಸ್ಥೆ ರೂಪುಗೊಂಡ ಮೇಲೆ ಸ್ವಚ್ಛಂದತೆಗೆ ಕಡಿವಾಣ ಬಿತ್ತು. ತದನಂತರ ಸ್ತ್ರೀ ಪುರುಷರು ತಮ್ಮ ದಾಂಪತ್ಯ ಬದುಕಿಗಾಗಿ ಸಮಾಜ ಸಮ್ಮತಿ ಅಥವಾ ಅಂಗೀಕಾರವನ್ನು ಧರ್ಮ ಸಮ್ಮತವಾಗಿ ವಿವಾಹ ಸಂಸ್ಕಾರದ ಮೂಲಕ ಪಡೆಯತೊಡಗಿದರು. ಹೀಗಾಗಿ ವಿವಾಹ ಧಾರ್ಮಿಕ ಪರವಾನಿಗೆ ಮುದ್ರೆಯನ್ನು ಪಡೆದುಕೊಂಡಿತು.

"ಭಾರತೀಯರಿಗೆ ವಿವಾಹ ಧಾರ್ಮಿಕ ಸಂಸ್ಥೆಯೂ ಹೌದು, ಸಾಮಾಜಿಕ ಸಂಸ್ಥೆಯೂ ಹೌದು ಹದಿನಾರು ಸಂಸ್ಕಾರಗಳಲ್ಲಿ ವಿವಾಹವೂ ಒಂದು ಮುಖ್ಯ ಸಂಸ್ಕಾರ. ಸ್ತ್ರೀ ವಿವಾಹದಿಂದಲೇ ಸಂಸಾರ ವಿಧಿ ಪ್ರಾರಂಭವಾಗುವುದು. ಬ್ರಹ್ಮಚರ್ಯ, ಸಂನ್ಯಾಸ, ವಾನಪ್ರಸ್ಥ ಮುಂತಾದ ಆಶ್ರಮಗಳಿಗೆ ಗೃಹಸ್ಥಾಶ್ರಮವೇ ಅಡಿಗಲ್ಲಾದರೆ, ಗೃಹಸ್ಥಾಶ್ರಮಕ್ಕೆ ವಿವಾಹವೇ ಅಡಿಗಲ್ಲು. ಆದ್ದರಿಂದ ಮನುಷ್ಯ ಸಮಾಜದ ವಿವಾಹ ಪದ್ಧತಿಯ ಅಧ್ಯಯನ ಕುತೂಹಲ ಮತ್ತು ಆಕರ್ಷಕವಾಗಿದೆ,"[3]

ಈ ಹಿನ್ನೆಲೆಯಲ್ಲಿ ಪ್ರಸ್ತುತ ಬಂಕಾಪುರ ಪರಿಸರದಲ್ಲಿ ವಿವಾಹ ಪದ್ದತಿಗಳು ಹಲವು ವೈಶಿಷ್ಟ್ಯ ಮತ್ತು ವೈವಿಧ್ಯಪೂರ್ಣವಾಗಿವೆ. ಆದ್ದರಿಂದ ಇದರ ಅಧ್ಯಯನ ವಿಶಿಷ್ಟವಾಗಿರುವುದಷ್ಟೇ ಅಲ್ಲ. ಸಾಂಸ್ಕೃತಿಕ ದೃಷ್ಟಿಯಿಂದ ಕೂಡ ಉಪಯುಕ್ತ.

ಬಂಕಾಪುರ ಗ್ರಾಮವು ಹಲವು ಸಮುದಾಯ, ಸಮುದಾಯಗಳಿಂದ ಸಮ್ಮಿಲನಗೊಂಡಿರುವ ಗ್ರಾಮವಾಗಿರುವುದರಿಂದ ಪ್ರೀತಿ ಸಮುದಾಯ, ಸಮುದಾಯಗಳ ಆಚರಣೆಗಳಲ್ಲಿ ವೈವಿಧ್ಯತೆಯಿಂದ ಕೂಡಿವೆ. ಮೇಲು ವರ್ಗದವರಿಂದ ಕೆಳವರ್ಗದವರೆಗೂ ಅವರ ಆಚಾರ, ವಿಚಾರ, ನೀತಿ, ನಿಯಮಾವಳಿಗಳಿಗನುಗುಣವಾಗಿ ವಿವಾಹಕ್ಕೆ ಸಂಬಂಧಪಟ್ಟ ಆಚರಣೆಗಳನ್ನು ಇಂದಿಗೂ ಮೈಗೂಡಿಸಿಕೊಂಡು ಬಂದಿದ್ದಾರೆ. ಈ ಎಲ್ಲಾ ಸಮುದಾಯಗಳಲ್ಲಿ ವಿವಾಹ ಸಂಬಂಧ ಆಚರಣೆಗಳು ಬಹುತೇಕ ಸಾಮ್ಯತೆಯಿಂದ ಕೂಡಿವೆ. ಶ್ರೀಮಂತರು ಅದ್ದೂರಿಯಾಗಿ ಮದುವೆಯಾದರೆ ಬಡವರು ತಮ್ಮ ಯೋಗ್ಯತೆಗೆ ಅನುಗುಣವಾಗಿ ಮದುವೆಯಾಗುವುದನ್ನು ಕಾಣಬಹುದು.

"ವಿವಾಹ ಪೂರ್ವದಲ್ಲಿ ನಡೆಸುವ ವಿವಾಹ ವಿಧಿ ಸಿದ್ಧತೆಗಳು, ವಿವಾಹಕ್ಕೆ ಬೇಕಾದ ಕೆಲವು ಅಗತ್ಯಗಳು ವಧುವರರ ವಯೋಮಾನ, ವಧುವರರ ಲಕ್ಷಣ ಮತ್ತು ಆಯ್ಕೆಯ ಕ್ರಮ, ಹೆಣ್ಣನ್ನು ಕೇಳುವ ಕ್ರಮ ಅಥವಾ ನಿಶ್ಚಿತಾರ್ಥ, ನಂತರ ವಿವಾಹದ ದಿನದ ಕಾರ್ಯಕ್ರಮಗಳನ್ನು ಮದುವೆ ಮಂಟಪ ಅದರ ಅಲಂಕಾರ ಹೆಣ್ಣು ಮತ್ತು ಗಂಡುಗಳನ್ನು ಕರೆತರುವುದು. ದೇವರನ್ನು ತರುವುದು, ಚಪ್ಪರ, ಧಾರಾಮುಹೂರ್ತ, ಆರತಕ್ಷತೆ ನಂತರ ನೆರವಿ, ಬೀಗರ ಊಟ ಇನ್ನೂ ಮುಂತಾದ ಆಚರಣೆಗಳು ಅತೀ ಮುಖ್ಯವಾಗಿ ಕಂಡುಬರುತ್ತವೆ.

ಸಾಮಾನ್ಯವಾಗಿ ಇಂದಿಗೂ ಇರುವ ಸಂಪ್ರದಾಯದಲ್ಲಿ ಹುಡುಗ ಹುಡುಗಿ ಒಪ್ಪಿದರೂ, ಕುಲ ಗೋತ್ರಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡುವುದು ಉಳಿದು ಬಂದಿದೆ. ವಧು ವರರ ಕುಲ ಒಂದೇ ಆಗಿದ್ದರೂ, ಆ ವಿವಾಹವೂ ನೆರವೇರವುದಿಲ್ಲ. ಇವರಿಬ್ಬರ ಕುಲ ಬೇರೆ ಬೇರೆಯಾಗಿದ್ದಾಗ ಮಾತ್ರ ವಿವಾಹ ಸಂಬಂಧ ಏರ್ಪಡುತ್ತದೆ. ಬಂಕಾಪುರ ಗ್ರಾಮ ಪರಿಸರದಲ್ಲಿ ಎಲ್ಲಾ ಸಮುದಾಯ ಗಳು ತಮ್ಮ ತಮ್ಮ ಸಮುದಾಯದ ಒಳಗೇ ವಿವಾಹವಾಗುವುದು ಸಾಮಾನ್ಯ ಸಂಗತಿಯಾಗಿದೆ. ಸಮುದಾಯ ಸಮುದಾಯಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದೆ.

ಅಂತರ ಸಮುದಾಯ ವಿವಾಹಕ್ಕೆ ವಿರೋಧವಿದೆ. ಬದುಕಿ ಬಾಳಬೇಕಾದ ಹೆಣ್ಣು ಗಂಡು ಸ್ಥಿರವಾಗಿ, ಶಾಶ್ವತವಾಗಿ ಜೊತೆಯಾಗಿರಲಿ ಎಂದು ವಿವಾಹ ಪದ್ಧತಿಯಲ್ಲಿ ಅವರ ಲಕ್ಷಣ, ಯೋಗ್ಯತೆ, ಅರ್ಹತೆ, ನಡತೆ, ಸಮುದಾಯ, ಕುಲ ಮುಂತಾದವುಗಳನ್ನು ಪರಿಗಣಿಸುತ್ತಾರೆ. ಉತ್ತಮ ಚಾರಿತ್ರ್ಯ. ಒಳ್ಳೆಯ ಜ್ಞಾನ, ಆರೋಗ್ಯ, ಐಶ್ವರ್ಯವುಳ್ಳವರಿಗೆ ಕನ್ಯೆಯನ್ನು ಕೊಟ್ಟು ಹಾಗೆಯೇ ಉತ್ತಮ ನಡತೆ, ಸೌಂದರ್ಯ, ಒಳ್ಳೆಯ ಚಾರಿತ್ರ್ಯ ಜನಬಾವಣಿಕೆಯನ್ನು ಉಳ್ಳ ವಧುವನ್ನು ಮನೆತುಂಬಿಸಿ ಕೊಳ್ಳಬೇಕೆಂಬುದು ಎಲ್ಲರ ಆಶಯವಾಗಿದೆ."[9]

ಬಂಕಾಪುರ ಗ್ರಾಮದಲ್ಲಿ ತಮ್ಮ ತಮ್ಮ ಸಂಪ್ರದಾಯದ ಪ್ರಕಾರ ಮೊದಲಿಗೆ ಎಲ್ಲರೂ ಕೂಡಿ ವಿಷಯ ಚರ್ಚೆ ಮಾಡಿ ನಂತರ ಮದುವೆಯ ವಿಚಾರ ಮಾಡುತ್ತಾರೆ. ನಂತರ ಸಾಮಾನ್ಯವಾಗಿ ಎಲ್ಲಾ ಸಂಪ್ರದಾಯಗಳ ಆಚರಣೆಯಂತೆ ಮದುವೆ ಮಾಡುತ್ತಾರೆ.

**ಸಂಬಂಧಗಳು**: ಈ ಗ್ರಾಮದಲ್ಲಿ ಸಂಬಂಧಿಕರಾದ ಅತ್ತೆ–ಮಾವ, ಸೋದರತ್ತೆಯ ಮಗಳು, ಸೋದರ ಮಾವನ ಮಗಳು, ಅಕ್ಕನ ಮಗಳು, ಮಾವನನ್ನು, ಸೋದರತ್ತೆಯ ಮಗ, ಸೋದರ ಮಾವನ ಮಗನನ್ನು, ಮದುವೆ ಮಾಡಿಕೊಳ್ಳುತ್ತೇವೆ ಎಂದು ಭರವಸೆಯ ಮಾತನ್ನು ಕೊಡುವುದು ಸಹಜವಾಗಿದೆ. ಹುಡುಗರು ಸೋದರತ್ತೆಯ ಮಗಳು, ಸೋದರ ಮಾವನ ಮಗಳು, ಅಕ್ಕನ ಮಗಳು, ಮಾವನ ಮಕ್ಕಳನ್ನು ಮದುವೆಯಾಗುವುದು ಸಾಮಾನ್ಯ. ಹುಡುಗಿಯು ಕೂಡ ಸೋದರತ್ತೆಯ ಮಗ, ಸೋದರ ಮಾವನ ಮಗ, ಅತ್ತೆಯ ಮಗ, ಮಾವನ ಮಗಳನ್ನು ಮದುವೆಯಾಗುತ್ತಾರೆ. ಇದನ್ನು ಸಾಮಾನ್ಯವಾಗಿ ವರಸೆ ಎಂದು ಕರೆಯುತ್ತಾರೆ. 'ಕಟ್ಟೆಯ ಕಲ್ಲು ಕಟ್ಟೆಗೆ ಹೊಂದಲಿ' ಎಂಬ ಗಾದೆ ಮಾತಿನಂತೆ, ನಮ್ಮ ಮನೆಯ ಮಗಳು ನಮ್ಮ ಮನೇಲೇ ಇರಲಿ ಎಂದು ಸಂಬಂಧಗಳಲ್ಲೇ ವಿವಾಹವಾಗುವ ಸಂದರ್ಭಗಳು ಅಲ್ಲಲ್ಲಿ ನಡೆಯುತ್ತವೆ. ಇದಲ್ಲದೇ ಹೊರಗಿನ ಸಂಬಂಧಗಳು ಕೂಡ ಬೆಳೆಯುವುದು. ಇಂದಿನ ದಿನಮಾನಗಳಲ್ಲಿ ಹೆಚ್ಚಾಗುತ್ತಿವೆ. ಹೀಗೆ ವಿವಾಹ ಸಂಬಂಧಗಳಲ್ಲಿ ಬದಲಾವಣೆಯಾಗುತ್ತಿರುವುದನ್ನು ಎಲ್ಲಾ ಸಮುದಾಯ ಗಳಲ್ಲಿಯೂ ಕಾಣಬಹುದು.

**ಅಳಿಯತನ:** ಹೆಸರೇ ಹೇಳುವಂತೆ ಮನೆಯ ಅಳಿಯನನ್ನಾಗಿ ಮಾಡಿಕೊಳ್ಳುವುದು. ವಧುವನ್ನು ತರುವಂತೆ ವರನ ಮನೆಯಲ್ಲಿಟ್ಟುಕೊಳ್ಳುವುದು. ಮನೆಯಲ್ಲಿ ಗಂಡು ಮಕ್ಕಳು ಇಲ್ಲ ಅಂದರೆ ಅವರು ಅವರ ಸಮಸ್ತ ಆಸ್ತಿಗೆಲ್ಲ ಆ ಅಳಿಯನೇ ವಾರಸುದಾರನಾಗುತ್ತಾನೆ. ಹಾಗೆಯೇ ಅವನಿಗೆ ಮದುವೆ ಮಾಡಿ ನಮ್ಮ ಹೊಲ ಮನೆ ಆಸ್ತಿಯನ್ನು ನೋಡಿಕೊಂಡು ಇರುವಂತೆ ಮಾಡುತ್ತಾರೆ. ಇದನ್ನೇ ಅಳಿಯತನ ಎಂದು ಕರೆಯುತ್ತಾರೆ.

**ಕನ್ಯೆ ನೋಡುವುದು:** ಮದುವೆಯ ಮೊದಲು ಹೆಜ್ಜೆ ಅಂದರೆ ಹೆಣ್ಣು ನೋಡುವಂತಹ ಶಾಸ್ತ್ರವಾಗಿದೆ. ಮದುವೆ ಜನುಮ-ಜನುಮದ ಋಣಾನುಬಂಧ. ಗಂಡು ಹೆಣ್ಣಿನ ಪವಿತ್ರ ಸಂಬಂಧವಾಗಿದೆ. ಅದರ ಪಾತ್ರವು ಪ್ರಮುಖವಾದಂತಹ ಕಾರ್ಯನಿರ್ವಸುತ್ತದೆ. ಒಂದು ಹೆಣ್ಣು ತರುವುದು ಅಷ್ಟು ಸುಲಭವಲ್ಲ, ಒಂದು ಒಳ್ಳೆ ಹೆಣ್ಣು ನೋಡಿ ತರಲು ಏಳು ಜೊತೆ ಜೋಡು ಸವಿಯಿತು ಎಂಬ ಮಾತು ಅವರು ಹೆಣ್ಣಿಗಾಗಿ ಹುಡುಕಾಟ ಮಾಡುವುದನ್ನು ಒತ್ತಿ ಹೇಳುತ್ತದೆ. "ಬೆಟ್ಟದ ಸಾಲಿನಲ್ಲಿ ದನ ತರಬೇಕು, ತುಂಬಿದ ಮನೆಯಲ್ಲಿ ಹೆಣ್ಣು ತರಬೇಕು." ಎಂಬ ಮಾತುಗಳು ಹೆಣ್ಣಿಗಿದ್ದ ಗುಣ ಶ್ರೇಷ್ಠತೆಯನ್ನು ತಿಳಿಸುತ್ತದೆ. ಹೆಣ್ಣು ನೋಡಲು ಐದು ಜನ ಒಂಬತ್ತು ಜನ ಹೀಗೆ ಬೆಸಸಂಖ್ಯೆಯಲ್ಲಿ ಹೋಗುತ್ತಾರೆ. ಮೊದಲು ನೇರವಾಗಿ ಹುಡುಗಿ ಮನೆಗೆ ಹೋಗದೆ, ಬೇರೆಯವರ ಮುಖಾಂತರ ಅಕ್ಕ ಪಕ್ಕದವರನ್ನು ಕೇಳಿ ತಿಳಿದು ಹುಡುಗಿಯನ್ನು ನೋಡುತ್ತಾರೆ. ಅವರ ಮನೆತನ ಹುಡುಗಿ ಮನಸ್ಸಿಗೆ ಬಂದ ಮೇಲೆ ಅವರ ತಂದೆ ತಾಯಿ ಮನೆತನ ಎಲ್ಲವನ್ನು ತಿಳಿದುಕೊಂಡು ಹೆಣ್ಣು ಮನಸ್ಸಿಗೆ ಬಂದ ಮೇಲೆ ನಿರ್ಣಯ ತಿಳಿಸುತ್ತಾರೆ. ತದನಂತರ ಮಾತುಕತೆಗೆ ಕುಳಿತುಕೊಳ್ಳುತ್ತಾರೆ.

**ಮಾತುಕತೆ:** ಹುಡುಗ ಮತ್ತು ಹುಡುಗಿಯ ಕಡೆಯ ಹಿರಿಯರು ತಂದೆ ತಾಯಿಗಳು ಮತ್ತು ಹತ್ತಿರದ ಸಂಬಂಧಿಕರು ಸೇರಿಕೊಂಡು ಮದುವೆಯ ಸಂಬಂಧ ಮಾತುಕತೆಗೆ ಕೂರುತ್ತಾರೆ. ವರದಕ್ಷಿಣೆ ವರೋಪಚಾರಕ್ಕೆ ಸಂಬಂಧಿಸಿದಂತೆ ಕೊಡುವುದು ತೆಗೆದುಕೊಳ್ಳುವುದು ಎಲ್ಲ ಒಪ್ಪಿಗೆಯಾದ ಮೇಲೆ ವೀಳ್ಯದ ಎಲೆಯನ್ನು ಅದಲು ಬದಲು ಮಾಡಿಕೊಳ್ಳುತ್ತಾರೆ. ಇದನ್ನು ಮಾತುಕತೆ ಎನ್ನುವರು. ಇದು ಅಂದರೆ ಈ ಮಾತುಕತೆ ಮುಗಿದ ನಂತರ ಹುಡುಗ ಹುಡುಗಿ ಇಬ್ಬರು ಸಮ್ಮತಿ ಸೂಚಿಸಿದಂತೆಯೇ.

**ನಿಶ್ಚಿತಾರ್ಥ:** ನಿಶ್ಚಿತಾರ್ಥವು ಮದುವೆಗೆ ಮುಂಚಿತವಾಗಿ ನಡೆಯುವಂತಹ ಶಾಸ್ತ್ರವಾಗಿದೆ. ಇತ್ತೀಚಿನ ಪರಿಭಾಷೆಯಲ್ಲಿ 'ಎಂಗೇಜಮೆಂಟ' ಎಂದು ಕರೆಯುತ್ತಾರೆ. ಈ ಪದವನ್ನು ಇತ್ತೀಚೆಗೆ ಹೆಚ್ಚಾಗಿ ಬಳಸಲಾಗುತ್ತಿದೆ. ಈ ಶಾಸ್ತ್ರ ಹೆಚ್ಚಾಗಿ ವಧುವಿನ ಮನೆಯಲ್ಲಿ ನಡೆಯುತ್ತದೆ. ಹುಡುಗನ ಕಡೆಯವರು ಹುಡುಗಿಯರ ಮನೆಗೆ ಬಂದು ಗುರು ಹಿರಿಯರು ಸಂಬಂಧಿಕರು ಊರಿನ ಹಿರಿಯರು ಶಾಸ್ತ್ರದಲ್ಲಿ ಪಾಲ್ಗೊಳ್ಳುತ್ತಾರೆ. ಈ ಶಾಸ್ತ್ರ ನಡೆದ ನಂತರ ಸಾಮಾನ್ಯವಾಗಿ ಯಾವುದೇ

ಸಂಬಂಧಗಳು ಮುರಿದು ಬೀಳುವುದಿಲ್ಲ. ಈ ಶಾಸ್ತ್ರ ಮದುವೆಗೆ ಮುಂಚೆ ಕೆಲ ದಿನಗಳು ಮೊದಲೇ ನಡೆಯುತ್ತದೆ. ಇತ್ತೀಚಿನ ದಿನಮಾನಗಳಲ್ಲಿ ಮದುವೆ ದಿನದ ಹಿಂದಿನ ರಾತ್ರಿ ಹೆಚ್ಚಾಗಿ ನಡೆಯುತ್ತವೆ. ಕಾರಣ ಸಮಯದ ಉಳಿತಾಯ ಮತ್ತು ಸಂಬಂಧಗಳು ಮುರಿದು ಬೀಳದಿರಲಿ ಎಂಬ ಎರಡೂ ದೃಷ್ಟಿಯಲ್ಲಿಟ್ಟುಕೊಂಡಿದ್ದಾರೆ. ಈ ಶಾಸ್ತ್ರ ಹೆಣ್ಣಿನ ಮನೆಯಲ್ಲಿ ನಡೆಯುವುದು ಸಂಪ್ರದಾಯ. ಗಂಡಿನ ಕಡೆಯವರು ಹೆಣ್ಣಿನ ಮನೆಗೆ ನಿಶ್ಚಿತಾರ್ಥಕ್ಕೆ ಬೇಕಾದಂತಹ ಎಲ್ಲಾ ವಸ್ತುಗಳನ್ನು ಕೊಂಡೊಯ್ಯಬೇಕು. ಹೆಣ್ಣಿಗೆ ಸೀರೆ, ಬಳೆ, ಅರಿಷಿನ–ಕುಂಕುಮ, ಹೂವು ಎಲ್ಲಾತರಹದ ಹಣ್ಣುಗಳು, ಬಾಳೆಹಣ್ಣು ತರುತ್ತಾರೆ. ಕೆಲವರು ಬಂಗಾರ ಬೆಳ್ಳಿ ತರುವುದು ಉಂಟು, ಏಕೆಂದರೆ ಹೆಣ್ಣನ್ನು ನಮ್ಮ ಕಡೆ ಮಾಡಿಕೊಳ್ಳುವುದಕ್ಕೆ ಎಲ್ಲವನ್ನು ಕೊಂಡೊಯ್ದು ಹೆಣ್ಣಿನ ಒಪ್ಪಿಗೆ ಮಾಡಿಕೊಂಡಂತೆ.

ಮದುವೆಗೆ ಮೊದಲು ಮಾಡುವ ಈ ಶಾಸ್ತ್ರಕ್ಕೆ ಗಂಡಿನ ಕಡೆಯವರು ಒಬ್ಬರಿಗೊಬ್ಬರು ಒಪ್ಪಿಗೆಯಾದ ನಂತರ ಅವರವರ ಸಂಬಂಧಿಕರನ್ನೆಲ್ಲಾ ಕರೆಸಿ ಇಳೇವು ಮಾಡುವುದರ ಮೂಲಕ ಇವರಿಬ್ಬರ ಕುಲವನ್ನು ಕೂಡಿಸುವುದು ಈ ಶಾಸ್ತ್ರದ ಮುಖ್ಯ ಘಟ್ಟ. ಇಡೀ ಸಮಾಜದ ಹಿರಿಯರ ಸಮ್ಮುಖದಲ್ಲಿ ವೀಳ್ಯವನ್ನು ಬದಲಾಯಿಸಿಕೊಳ್ಳಲಾಗುತ್ತದೆ. ಬದಲಾಯಿಸಿಕೊಂಡ ನಂತರ ಬಂದ ಎಲ್ಲ ಜನರಿಗೆ ಸಿಹಿ ಹಂಚಿ ವೀಳ್ಯವನ್ನು ನೀಡಲಾಗುತ್ತದೆ. ಹೀಗೆ ಈ ಕಾರ್ಯ ಮುಕ್ತಾಯವಾಗುತ್ತದೆ. ಆದರೆ ಇತ್ತೀಚಿನ ದಿನಗಳಲ್ಲಿ ಮದುವೆಗಳನ್ನು ಸಮುದಾಯ ಭವನ ಛತ್ರಗಳಲ್ಲಿ ಮಾಡುವುದರಿಂದ ವೀಳ್ಯಶಾಸ್ತ್ರವನ್ನು ಮದುವೆಯ ಹಿಂದಿನ ರಾತ್ರಿ ಮಾಡುತ್ತಾರೆ. ಆ ಕಾರಣದಿಂದ ಮನೆ ಮನೆಗೆ ವೀಳ್ಯ ಕೊಡುವ ಸಂಪ್ರದಾಯ ಕಡಿಮೆಯಾಗುತ್ತದೆ.

**ಒಳಕಲ್ಲು ಪೂಜೆ ಮಾಡುವುದು:** ಲಗ್ನಕ್ಕೆ ಬೇಕಾಗುವ ಹಿಟ್ಟಕ್ಕಿಯ ಸಾಹಿತ್ಯವನ್ನು ಸಿದ್ಧಮಾಡುವ ಕಾಲದಲ್ಲಿ ಮೊದಲಿಗೆ ಒರಳು ಬೀಸುಕಲ್ಲು ಮುಂತಾದವುಗಳ ಪೂಜೆ ಮಾಡಿ ಕೆಲಸವನ್ನು ಪ್ರಾರಂಭಿಸುತ್ತಾರೆ.

**ಅರಿಷಣ ಹಚ್ಚೂ ಹಾಡು:** ಅರಿಷಣ ಹಚ್ಚುವುದು ಲಗ್ನದ ಕಾಲದಲ್ಲಿ ಪ್ರಥಮ ದೀಕ್ಷೆಯಂತಿರುವುದು ವರನಿಗೆ ಅರಿಷಣ ಹಚ್ಚುವಾಗ ಇದನ್ನು ಹಾಡುತ್ತಾರೆ. ಆಗ ಮುತ್ತೈದೆಯರು ನೆರೆದು ಹಾಡುತ್ತ, ವರನ ತಲೆಗೆ ವೀಳ್ಯದ ಎಲೆಯಿಂದ ಎಣ್ಣೆಯನ್ನು ಹಚ್ಚಿ, ಮೈಗೆ ಅರಿಷಣವನ್ನು ಬಳಿದು ಸ್ನಾನ ಮಾಡಿಸುವರು.

**ಐರಾಣ ಖೇಲು ತರುವುದು:** ಲಗ್ನ ಸಮಾರಂಭದ ಎರಡನೆಯ ದಿನದ ಶಾಸ್ತ್ರವಿದು. ಐದು ಮಂದಿ ಮುತ್ತೈದೆಯರು. ಕುಂಬಾರನ ಮನೆಯಿಂದ ಹೊಸ ಕೊಡಗಳನ್ನು ತಂದು ನೀರು ತುಂಬಿಕೊಂಡು ಬರುವರು.

**ನೂಲು ಸುತ್ತುವ/ಅಥವಾ ಸೂರಗಿ ನಿಯಮ:** ಲಗ್ನದಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿಸುವ ಪ್ರಸಂಗಗಳು ಎರಡು ಸಾರೆ ಬರುತ್ತವೆ. ಒಮ್ಮೆ ಅರಿಷಣ ಹಚ್ಚುವಾಗ ಇನ್ನೊಮ್ಮೆ ಅಕ್ಷತೆಯ

ಕಾಲಕ್ಕೆ. ಆಗ ನಾಲ್ಕು ಮೂಲೆಗೆ ನಾಲ್ಕು ತಂಬಿಗೆಗಳನ್ನಿಟ್ಟು ಅವುಗಳ ಸುತ್ತು ಮುತ್ತು ಮೇರೆಯಂತೆ ನೂಲು ಸುತ್ತಿ. ನಟ್ಟನಡುವೆ ಮಣೆಯನ್ನಿಟ್ಟು ಮದುಮಕ್ಕಳಿಗೆ ಎರೆಯುತ್ತಾರೆ. ಆಗಿನ ಕಾಲಕ್ಕೆ ನೂಲು ಸುತ್ತುವಾಗ ಹೆಣ್ಣುಮಕ್ಕಳು ಹಾಡು ಹಾಡುವರು

**೩.೫. ಬಂಧುತ್ವ**

ವರ್ಣ ವ್ಯವಸ್ಥೆ ಶ್ರೇಣಿಕರಣ ಭಾರತದಲ್ಲಿ ಆದಿ ಅನಾದಿ ಕಾಲದಿಂದಲೂ ಉಳಿದುಕೊಂಡು ಬಂದಿರುವುದು. ಇದು ಸಾಮಾಜಿಕ ವ್ಯವಸ್ಥೆಯಲ್ಲಿ ಕೋಮುವಾದಿಗಳಿಂದ ಸಮಾಜದ ಸ್ವಾಸ್ಥ್ಯ ಕೆಡುತ್ತದೆ. ಆದರೂ ಆಗಾಗ ಅಲ್ಲಲ್ಲಿ ಅಂತಹ ಘಟನೆಗಳು ನಡೆಯುತ್ತಲೇ ಇರುತ್ತವೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಬಂಕಾಪುರ ಗ್ರಾಮ ಸಮುದಾಯ ಸಮುದಾಯಗಳ ನಡುವೆಯೂ ಉತ್ತಮ ಬಾಂಧವ್ಯವನ್ನು ಕಾಯ್ದುಕೊಂಡಿರುವುದನ್ನು ಕಾಣಬಹುದು. ಯಾವುದೇ ಸಮುದಾಯದ ಆಚರಣೆಗಳಿರಲಿ ಪ್ರತಿಯೊಂದು ಸಮುದಾಯದ ಜನರು ಭಾಗವಹಿಸುವುದು ವಿಶೇಷತೆ. ಹಾಗೂ ಗ್ರಾಮದಲ್ಲಿರುವ ಪ್ರತಿಯೊಂದು ಧರ್ಮ, ಸಮುದಾಯದವರು ತಮ್ಮ ತಮ್ಮ ಮತಧರ್ಮದ ಸಂಪ್ರದಾಯದ, ಆಚರಣೆ, ವಿಧಿ ವಿಧಾನಗಳನ್ನು ಕಟ್ಟು ನಿಟ್ಟಾಗಿ ಆಚರಿಸುತ್ತಾರೆ. ಬಸವಜಯಂತಿ, ವೀರ ವನಿತೆ ಕಿತ್ತೂರರಾಣಿ ಚನ್ನಮ್ಮನ ಜಯಂತಿ, ಕನಕದಾಸ ಜಯಂತಿ, ಮಹಾವೀರ ಜಯಂತಿ, ಅಂಬೇಡ್ಕರ್ ಜಯಂತಿ, ಹೀಗೆ ಗ್ರಾಮದಲ್ಲಿರುವ ಎಲ್ಲಾ ಸಮುದಾಯದವರು ತಮ್ಮ ತಮ್ಮ ಧರ್ಮದ ಜಯಂತಿಯನ್ನು ಅದ್ದೂರಿಯಾಗಿ ಆಚರಿಸುತ್ತಾರೆ. ಇದನ್ನು ಸಂಕುಚಿತ ಭಾವನೆಯಿಂದ ನೋಡಿದರೆ ಬೇರೆ ಅರ್ಥವನ್ನು ನೀಡಿದರು. ಆದರೆ ಅದರ ಒಳಹೊಕ್ಕು ನೋಡಿದರೆ ಎಲ್ಲ ಸಮುದಾಯದವರು ಸೇರಿ ಈ ಎಲ್ಲಾ ಹಬ್ಬಗಳನ್ನು ಆಚರಿಸುವುದು ವಿಶೇಷತೆ. ಎಲ್ಲಾ ಸಮುದಾಯ, ಧರ್ಮ ಆಚರಣೆಗಳಲ್ಲಿ ಭಾವೈಕ್ಯತೆ ಇದೆ. ಬಂಕಾಪುರದಲ್ಲಿರುವ ಅಲ್ಲಾವುದ್ದೀನ ಶಾ ಖಾದ್ರಿ ದರ್ಗಾಕ್ಕೆ ಹಿಂದೂ ಸಮುದಾಯದವರು ಹೆಚ್ಚು ನಡೆದುಕೊಳ್ಳುವುದನ್ನು ನಾವು ಕಾಣಬಹುದು. ಅದೇ ರೀತಿ ಹಿಂದು ಸಮುದಾಯದ ದುರ್ಗಾದೇವಿ ದೇವಸ್ಥಾನಕ್ಕೆ ಎಲ್ಲಾ ಸಮುದಾಯದವರು ನಡೆದುಕೊಳ್ಳುವದನ್ನು ಕಾಣಬಹುದು. ಬಂಕಾಪುರದ ಹೆಚ್ಚು ಜನರು ಸಂತ ಶಿಶುವಿನಹಾಳ ಶರೀಫರಿಗೆ ನಡೆದುಕೊಳ್ಳುವುದನ್ನು ಕಂಡಾಗ ಇಲ್ಲಿಯ ಜನರ ಸೌಹಾರ್ದತೆ ತಿಳಿಯತ್ತದೆ. ಮುಸ್ಲಿಂಮರು ತಮ್ಮ ಧರ್ಮದ ನಮಾಜ್ ಖುರಾನ್ ಓದುವುದರ ಜೊತೆಗೆ ದುರುಗಮ್ಮ, ದ್ಯಾಮವ್ವ, ಮುಂತಾದ ಹಿಂದೂ ಸಂಪ್ರದಾಯದ ದೇವತೆಗಳಿಗೆ ನಡೆದುಕೊಳ್ಳುವದನ್ನು ಹಾಗು ಹರಕೆ ತೀರಿಸುವುದನ್ನು ಹಾಗೂ ಅದೇ ರೀತಿ ರಂಜಾನ್ ತಿಂಗಳಲ್ಲಿ ರೋಜಾ ಮಾಡುತ್ತಿರುವ ಮುಸ್ಲಿಂ ಭಾಂಧವರಿಗೆ ಹಿಂದುಗಳು ಊಟದ ವ್ಯವಸ್ಥೆ ಮಾಡುವುದು ಅವರ ಬಾಂಧವ್ಯಕ್ಕೆ ಸಾಕ್ಷಿಯೆನ್ನಬಹುದು.

ಬಂಕಾಪುರ ಕಾಲದಿಂದ ಕಾಲಕ್ಕೆ ಭಾವೈಕ್ಯತೆಯನ್ನು ಸಾಧಿಸಿಕೊಂಡು ಬಂದಿದೆ. ಇದು ಸರ್ವಧರ್ಮಗಳಿಗೆ ಆಡುಂಬೊಲವೆಂಬಂತೆ ರೂಪಿತಗೊಂಡಿದೆ. ಒಂದು ಕಾಲಕ್ಕೆ ಬಂಕಾಪುರದ

ಮೇಲೆ ದಾಳಿ ಮಾಡಿ ಇದನ್ನು ಕೈವಶಮಾಡಿಕೊಂಡ ಮುಸ್ಲಿಂರು ಇಂದು ಬಂಕಾಪುರದವರೇ ಎಂಬಷ್ಟರ ಮಟ್ಟಿಗೆ ಈ ಪ್ರದೇಶದಲ್ಲಿ ಈ ಸಂಸ್ಕೃತಿಯಲ್ಲಿ ಒಂದಾಗಿ ಹೋದುದು ಈ ನಾಡಿನ ವೈಶಿಷ್ಟ್ಯ. ಅವರ ಬಹುಕಾಲದ ಆಳ್ವಿಕೆಯ ಅನುಪಮ ಕುರುಹುಗಳೆಂಬಂತೆ ಇಂದು ಬಂಕಾಪುರದ ಎಲ್ಲೆಡೆಯಲ್ಲಿ ಕಾಣುತ್ತಿರುವ ಮಸೀದಿಗಳು, ದರ್ಗಾಗಳು ಅಲ್ಲಲ್ಲಿ ಕೇಳಿ ಬರುತ್ತಿರುವ ಪವಿತ್ರ ಕುರಾನದ ಮಂತ್ರ ಪಠಣ, ಭಾವುಕರ ಮನಕ್ಕೆ ಶಾಂತಿಯನ್ನಿತ್ತಿವೆ.

ಪ್ರಾಚೀನ ಕಾಲದಿಂದ ಇಲ್ಲಿ ನೆಲೆನಿಂತ ಶರೀಫಶಾವಲಿ ದರಗಾ, ಹುಸೇನಶಾವಲಿ ದರಗಾ, ನೂರುಲ್ಲಾಶಾಖಾದ್ರಿ ದರಗಾ, ಹಜರತ್ ಸೈಯದ್ ಅಲ್ಲಾವುದ್ದೀನಶಾ ಖಾದ್ರಿದರಗಾಗಳು ಭಕ್ತಿಯ ಕೇಂದ್ರಗಳಾಗಿವೆ. ಇವಲ್ಲದೆ ಬಂಕಾಪುರದಲ್ಲಿ ಇನ್ನೂ ಹತ್ತು ದರ್ಗಾಗಳಿವೆ. ಸುಮಾರು ಏಳು ಮಕಾನಗಳು ಇಲ್ಲಿದ್ದು. ಅಲಿದೇವರ ಪೂಜಾ ಪುರಸ್ಕಾರಗಳು ವಿಜ್ರಂಭಣೆಯಿಂದ ಜರುಗುತ್ತಿವೆ. ಸುಮಾರು ೧೦ ಮಸೀದಿಗಳಿವೆ ಮಹಬೂಬಸುಬಾನಿ ಝುಂಡಕಟ್ಟೆಗಳು, ಅಡ್ಡೆಗುಮ್ಮಜಗಳು ಇಲ್ಲಿವೆ. ಸೈದಾನಬಿ, ಮಹಾಜನಬಿ, ಮಸಾಬಿ ಎಂಬ ಮೂವರು ಮುಸಲ್ಮಾನ ಶರಣೆಯರು ಇಲ್ಲಿ ಬಾಳಿ ಬೆಳಗಿದಂತೆ ಉಲ್ಲೇಖಗಳಿವೆ.

ಇಲ್ಲಿಯ ಹಜರತ್‌ಸೈಯದ ಅಲ್ಲಾವುದ್ದೀನ ಶಾ ಖಾದ್ರಿ ದರಗಾ ಪ್ರಾಚೀನ ಇತಿಹಾಸ ಹೊಂದಿದಂತೆ, ದರಗಾದ ಶಿಲ್ಪ ಸುಂದರವಾಗಿದೆ. ಈ ಪರಂಪರೆಯ ಹಜರತ್‌ಶಹಾ ಖಾದ್ರಿ ಇವರು ಸಿದ್ದಿಪುರುಷರು, ಶಿಶುನಾಳ ಶರೀಪರು ಇವರ ಕರುಣೆಯ ಕಂದನೆಂಬುದು ಮರೆಯಲಾಗದು ಹಯಾತಬಾಶಾವಲಿ, ಮಿಸ್ಕಿನ್ ಶಾವಲಿಯ ಮಹಿಮರು ಜೀವಂತ ಸಮಾಧಿ ಮಾಡಿಕೊಂಡಿರುವರು ಎಂಬುದು ಮುಸ್ಲಿಮ ಬಾಂಧವರ ಹೇಳಿಕೆ. ಪ್ರತಿವರ್ಷ ಇಲ್ಲಿ ಅಪಾರಸಂಖ್ಯೆಯಲ್ಲಿ ಜನ ಬಂದು ಉರುಸು ಆಚರಿಸುತ್ತಾರೆ. ಮೂರು ದಿನ ಜಂಗೀಬೈಲು ಕುಸ್ತಿಗಳು ಜರುಗುತ್ತವೆ. ಪ್ರತಿ ಗುರುವಾರ ದೂರದೂರದಿಂದ ಭಕ್ತರು ಬಂದು ಸೇವೆ ಸಲ್ಲಿಸಿ ತಮ್ಮ ಇಷ್ಟಾರ್ಥ ಪೂರೈಸಿ ಕೊಳ್ಳುತ್ತಿದ್ದಾರೆ.

ಹೀಗೆ ಬಂಕಾಪುರ ಸರ್ವಧರ್ಮದ ಅನುಪಮ ತತ್ವಗಳನ್ನು ಅರಗಿಸಿಕೊಂಡು ಇಂದು ಭಾವೈಕ್ಯತೆ ಸಾಧಿಸಿದೆ, ಎಲ್ಲರೂ ಒಂದೇ ತಾಯಿಯ ಮಕ್ಕಳೆಂಬ ಭಾವ ಇಲ್ಲಿ ನೆಲೆನಿಂತಿದೆ.

**ಜನಪದ ವೈದ್ಯ:** ಬಂಕಾಪುರದಲ್ಲಿ ಜನಪದ ವೈದ್ಯ ಪದ್ಧತಿ ಬಹಳ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಮನುಷ್ಯ ಮೂಲತಃ ಪಕೃತಿಯ ಕೂಸು. ನಿಸರ್ಗದಲ್ಲಿ ಆಗುವ ಏರುಪೇರುಗಳಿಂದ ಮನುಷ್ಯನ ಬದುಕಿನಲ್ಲಿ ವೈರುಧ್ಯಗಳು ಸಹಜವಾಗಿಯೇ ಕಾಣಿಸುತ್ತ ಬಂದವು. ಅವುಗಳಿಗೆ ಮುಖಾಮುಖಿಯಾಗುತ್ತಲೇ ತಾನು ಉಪಯೋಗಿಸುವ ಆಹಾರ, ಜೀವಿಸುವ ಕ್ರಮ ಎಲ್ಲವೂ ಪ್ರಕೃತಿಯಿಂದಲೇ ಪ್ರೇರೇಪಿಸಲ್ಪಟ್ಟಿರುತ್ತದೆ. ಹಾಗಾಗಿ ಮಾನವ ನಿಸರ್ಗದೊಂದಿಗೆ ಅವಿನಾಭಾವ ಸಂಬಂಧ ಸಾಧಿಸಿದ. ಸಾಧಿಸಿದ ಮೊದಲಿಗೆ ಅನಾಗರಿಕನಾಗಿದ್ದ. ಮಾನವ

ಕಾಡು-ಮೇಡುಗಳನ್ನು ಅಲೆಯುತ್ತ ಅಲ್ಲಿಯೇ ಸಿಗುತ್ತಿದ್ದ ಹಸಿ ಗಡ್ಡೆ ಗೆಣಸು, ಹಸಿ ಮಾಂಸ, ಹಣ್ಣು ಹಂಪಲು, ನೀರು, ಆಹಾರ ಪಾನೀಯಗಳನ್ನು ಸೇವಿಸಲು ಶುರುಮಾಡಿದ. ನಂತರದ ಕಾಲದಲ್ಲಿ ಆಹಾರವನ್ನು ಬೇಯಿಸಿ ತಿನ್ನುವುದನ್ನು ಕಲಿತ. ತಾನು ಸೇವಿಸುವ ಆಹಾರ ಪಾನೀಯಗಳು ಋತುಮಾನಕ್ಕೆ ಅನುಗುಣವಾಗಿ ಹೊಂದಿಕೆಯಾಗದೇ ಇದ್ದಾಗ ಮನುಷ್ಯ ಅನೇಕ ದೈಹಿಕ ತೊಂದರೆಗಳನ್ನು ಅನುಭವಿಸುವಂತಾಯಿತು. ಆದರೆ ತಾನು ಎದುರಿಸುವ ತೊಂದರೆಗಳಿಗೆ ಪ್ರಕೃತಿಯ ಮೂಲ ಸಂಪನ್ಮೂಲಗಳಿಂದಲೇ ಪರಿಹಾರ ಮಾರ್ಗಗಳನ್ನು ಕಂಡುಕೊಳ್ಳಲು ಪ್ರಯತ್ನ ಮಾಡಿದ.

ಮನುಷ್ಯನ ಜೀವನದಲ್ಲಿ ಇಷ್ಟೆಲ್ಲಾ ಬದಲಾವಣೆಗಳು ಘಟಿಸಿದವು. ಅದರ ಜೊತೆಗೆ ಅವನ ಬೆಳವಣಿಗೆ ಹಾಗೂ ವಿಕಾಸದ ಮೇಲೆ ತೀವ್ರ ಪರಿಣಾಮಗಳು ಉಂಟಾದವು. ಈ ಬದಲಾವಣೆಗಳು ದೈಹಿಕ ತೊಂದರೆಗಳಿಗೆ ಮೂಲವಾಯಿತು. ಇದಕ್ಕೆ ಕಾರಣ ಕಂಡುಹಿಡಿಯಲು ಮನುಷ್ಯ ಕುತೂಹಲಿಯಾದ. ಪ್ರಕೃತಿದತ್ತವಾಗಿ ಸಿಗುವ ವಿವಿಧ ರೀತಿಯ ತೊಪ್ಪಲು, ಸೊಪ್ಪು, ಕಾಯಿ, ಬೇರು, ಎಲೆ ಮುಂತಾದವನ್ನು ತನಗಾದ ದೈಹಿಕ ಖಾಯಿಲೆಗಳಿಗೆ ಹಚ್ಚುತ್ತಾ ಬಂದ. ಅವುಗಳಲ್ಲಿ ನೋವು ನಿವಾರಕ ಗುಣ ಇರುವುದನ್ನು ಕಂಡುಕೊಂಡ. ಆದರೂ ಖಾಯಿಲೆಗಳನ್ನು ನಿಯಂತ್ರಿಸಲು ಮತ್ತು ಬರದಂತೆ ತಡೆಗಟ್ಟಲು ಅಷ್ಟಾಗಿ ಸಾಧ್ಯವಾಗಲಿಲ್ಲ. ನಂತರ ನಾಗರಿಕನಾದಂತೆ ಅವನ ತಿಳುವಳಿಕೆ ಹೆಚ್ಚಿದಂತೆಲ್ಲಾ ಜೀವನ ಶೈಲಿಯಲ್ಲಿ ಅಗಾಧ ಬದಾಲಾವಣೆಗಳು ಕಂಡುಬಂದವು. ಹಿಂದೆ ಮನುಷ್ಯನಿಗೆ ದೈಹಿಕ ಕಾಯಿಲೆಗಳು ಅಷ್ಟಾಗಿ ಬಾಧಿಸಲಿಲ್ಲವಾದರೂ ಅವಕ್ಕೆ ಮದ್ದುಗಳನ್ನು ಕಂಡು ಹಿಡಿದುಕೊಂಡ. ಮುಂದೆ ಜೀವನದಲ್ಲಿ ಸೌಲಭ್ಯ-ಸೌಕರ್ಯಗಳು ಹೆಚ್ಚಾದಂತೆ ಔಷಧೋಪಚಾರ ಹಾಗೂ ಔಷಧಿಗಳನ್ನು ಕಂಡುಕೊಳ್ಳಲಾಯಿತು. ಆದರೆ ತೀವ್ರ ಖಾಯಿಲೆಗಳು ಎದುರಾದಾಗ ಧೃತಿಗೆಟ್ಟ ಮನುಷ್ಯ ಅವುಗಳಿಗೆ ಪರಿಹಾರವನ್ನು ಕಂಡು ಹಿಡಿಯಲು ಪ್ರಯತ್ನಿಸಿದ. ಆದರೆ ಸಣ್ಣ ಪುಟ್ಟ ಖಾಯಿಲೆಗಳಿಗೆ ಪರಿಹಾರದ ದಾರಿಗಳು ಮಾತ್ರ ತನ್ನದೆ ದೇಸಿ ಜ್ಞಾನದ ಫಲಗಳಾಗಿದ್ದವು. ವಯೋ ಸಹಜ ಖಾಯಿಲೆಗಳು, ಬಲಹೀನತೆಗಳಿಂದಾಗಿ ವಂಶವಾಹಿ ಮುಂತಾದ ಅಂಶಗಳ ಮೇಲೆ ತೀವ್ರ ಪರಿಣಾಮಗಳಾಗುತ್ತಾ ಬಂದವು. ಈ ವೈಪರಿತ್ಯಗಳಿಗೆ ಪರಿಹಾರ ಕಂಡುಕೊಳ್ಳುವ ಪ್ರಯತ್ನವಾಗಿ ದೇಸಿ ವೈದ್ಯ ಪದ್ಧತಿಗಳು ರೂಪುಗೊಂಡವು. ಆಯುರ್ವೇದ, ಯುನಾನಿ ಪದ್ದತಿಗಳಂತಹ ಪಾರಂಪರಿಕ ವೈದ್ಯ ಪದ್ಧತಿಗಳು ಇಂದು ಆಧುನಿಕ ವೈದ್ಯ ಪದ್ಧತಿಗೆ ಸವಾಲಾಗುವ ಖಾಯಿಲೆಗಳಿಗೆ ಔಷಧಿ ನೀಡಿ ಸೈ ಎನಿಸಿಕೊಂಡಿದೆ. ಪ್ರಕೃತಿದತ್ತವಾದ, ಯಾವುದೇ ರೀತಿಯ ಅಧಿಕ ಖರ್ಚುಗಳಿಲ್ಲದೆ ಹಾಗೂ ಅಡ್ಡ ಪರಿಣಾಮಗಳಿಲ್ಲದ ನಮ್ಮ ದೇಸಿ ವೈದ್ಯ ಪದ್ಧತಿಯನ್ನು ಬಿಟ್ಟು ನಾವು ಆಮದು ಪಾಶ್ಚಿಮಾತ್ಯ ಪ್ರಣೀತ ವೈದ್ಯ ಪದ್ಧತಿಗಳಿಗೆ ಮೊರೆ ಹೋಗುತ್ತಿರುವುದು ಅತ್ಯಂತ ವಿಷಾದದ ಸಂಗತಿಯಾಗಿದೆ. ಹಿಂದಿನ ಕಾಲದಲ್ಲಿ ಖಾಯಿಲೆಗಳು ಮನುಷ್ಯನಿಗೆ ಅಷ್ಟಾಗಿ ಕಾಡುತ್ತಿರಲಿಲ್ಲ. ಅದರೆ ಇಂದಿನ ಆಧುನಿಕ ಕಾಲದಲ್ಲಿನ ಮನುಷ್ಯನ

ಧಾವಂತದ ಬದುಕಿನಲ್ಲಿ ಅನೇಕ ತೆರನಾದ ದೈಹಿಕ ಹಾಗೂ ಮಾನಸಿಕ ಖಾಯಿಲೆಗಳು ಮುತ್ತಿಕೊಳ್ಳುತ್ತಿವೆ. 'ಕೂಸು ಬಗಲಲ್ಲಿಟ್ಟುಕೊಂಡು ಊರ ತುಂಬ ಹುಡುಕಿದರು' ಎಂಬಂತೆ ಮನೆ ಮದ್ದುಗಳನ್ನು ಬಳಸಿ ಇಲ್ಲವೇ ನಮ್ಮದೇ ದೇಸಿ ವೈದ್ಯ ಪದ್ಧತಿಗಳು ಹೆಚ್ಚು ಪರಿಣಾಮಕಾರಿ ಯಾಗಿದ್ದರು ಇಂಗ್ಲಿಷ ಔಷಧಿ ಮತ್ತು ವೈದ್ಯೋಪಚಾರಗಳತ್ತ ಮುಖಮಾಡಿರುವದು ವಿಪರ್ಯಾಸ.

ಬಂಕಾಪುರದಲ್ಲಿ ದೇಸಿ ವೈದ್ಯ ಪದ್ಧತಿಗಳು ಇನ್ನೂ ಜೀವಂತವಾಗಿದ್ದು, ಅನೇಕ ನಾಟಿ ವೈದ್ಯರು ತಮ್ಮ ವೃತ್ತಿಯನ್ನಾಗಿ ಮತ್ತು ಅವನ್ನು ಉಳಿಸಿಕೊಳ್ಳುವ ನಿಟ್ಟಿನಲ್ಲಿ ತಮ್ಮ ಮನೆಯಲ್ಲಿಯವರಿಗೆ ತಿಳಿಸಿಕೊಡುವ ಮೂಲಕ ನಾಟಿ ವೈದ್ಯ ಪರಂಪರೆ ನಿರಂತರವಾಗಿ ಮುಂದುವರೆದುಕೊಂಡು ಬಂದಿದೆ.

**ಸುಟ್ಟ ಗಾಯಕ್ಕೆ ಔಷಧಿ:** ಬಸನಗೌಡ್ರು ಮರಿಗೌಡ್ರು ಪಾಟೀಲ ಇವರು ಸುಟ್ಟ ಗಾಯಕ್ಕೆ ಔಷಧಿಯನ್ನು ಕೊಡುತ್ತಾರೆ. ತಮ್ಮ ತಂದೆಯಿಂದ ಇದನ್ನು ಕಲಿತಿರುತ್ತಾರೆ. ಒಂದು ಜಾತಿ ಎಲೆಯನ್ನು ರುಬ್ಬಿ ಪಾತ್ರೆಯಲ್ಲಿ ನೀರು ತೆಗೆದುಕೊಂಡು ಅದರಲ್ಲಿ ರುಬ್ಬಿದ ಎಲೆಯ ರಸವನ್ನು ಹಿಂಡಿ, ಹಸಿ ಒಳ್ಳೆಣ್ಣೆ, ಕೆನೆಸುಣ್ಣವನ್ನು ಚೆನ್ನಾಗಿ ಬೆರೆಸುತ್ತಾರೆ. ಆಗ ಅದರ ಮೇಲೆ ಕೆನೆ ತೇಲುವುದು ಅದನ್ನು ಸಂಗ್ರಹಿಸಿ ಸುಟ್ಟಗಾಯಕ್ಕೆ ಕೋಳಿ ಪುಚ್ಚದಿಂದ ಔಷಧಿಯನ್ನು ಹಚ್ಚುವರು.

**ಚೇಳು ಕಡಿದರೆ ಔಷಧಿ:** ಇವರು ಔಷಧಿಯಲ್ಲಿರುವ ಸಾಮಗ್ರಿಗಳ ಮಾಹಿತಿ ಕೊಡಲು ಇಷ್ಟಪಡುವುದಿಲ್ಲ ಆದರೆ ಚೇಳು ಕಡಿದರೆ ಈ ಊರಿನ ಜನ ಈ ಮನೆಯನ್ನು ಹುಡುಕಿಕೊಡು ಬರುವುದು ವಿಶೇಷ. ಚೇಳು ಕಡಿದ ಜಾಗಕ್ಕೆ ಕಪ್ಪನೆಯ ಪೌಡರನ್ನು ಹಾಕಿ ಅದರ ಮೇಲೆ ಒಂದು ಹನಿ ನೀರು ಹಾಕಿದರೆ ಕೆಲವೆ ಕ್ಷಣಗಳಲ್ಲಿ ನೋವು ಮಾಯವಾಗುವುದು. ಕೃಷ್ಣಾ ಕುಲಕರ್ಣಿ ಮಾಹಿತಿದಾರರು. ಈ ಔಷಧಿಯನ್ನು ತಮ್ಮ ಮನೆಯವರು ಹಿಂದಿನಿಂದ ಮಾಡಿಕೊಂಡು ಬಂದಿರುವುದಾಗಿ ಹೇಳುತ್ತಾರೆ.

**ಸರ್ಪಹುಣ್ಣಿಗೆ ಔಷಧಿ:** ಚನ್ನವೀರಪ್ಪ ಗೂಳಪ್ಪಾ ಹಡಪದ ಪ್ರತಿ ಗುರುವಾರ ಹಾಗು ರವಿವಾರ ಔಷಧ ಹಚ್ಚಲಾಗುತ್ತದೆ. ಸರ್ಪಹುಣ್ಣು ಆದವರು ಸೂರ್ಯೋದಯಕ್ಕೆ ಮುಂಚಿತವಾಗಿ ಅವರ ಮನೆಗೆ ಹೋಗಬೇಕು ಸೂರ್ಯ ದೇವನಿಗೆ ಮೊದಲು ಪೂಜೆ ಮಾಡಿ ಕಾಯಿ ಒಡೆದು ಕಾಯಿ ನೀರಲ್ಲಿ ಸನ್ನಿಕ್ಯಾವಿಯನ್ನು ತೇದು ಹುಣ್ಣು ಆದ ಜಾಗಕ್ಕೆ ಗರುಡನ ಚಿತ್ರವನ್ನು ಬರೆಯಲಾಗುತ್ತದೆ. ಈ ರೀತಿ ಮಾಡುವುದರಿಂದ ಗಾಯ ವಾಸಿಯಾಗುತ್ತದೆ, ಎಂದು ತಮ್ಮ ಮನೆಯ ಹಿರಿಯ ತಲೆಮಾರಿನವರಿಂದ ಇದನ್ನು ಕಲಿತಿರುವುದಾಗಿ ಹೇಳುತ್ತಾರೆ.

ಅಷ್ಟೇ ಅಲ್ಲದೆ ಬಂಕಾಪುರದಲ್ಲಿ ದನಕರುಗಳಿಗೆ ಔಷಧಿ ಕೊಡುವಂತಹವರು, ಎಲುಬು ಕೀಲು ಮುರಿದರೆ ಕಟ್ಟುವಂತವರು, ಮಕ್ಕಳಿಗೆ ಔಷಧಿ ಕೊಡುವಂತಹವರು ಮತ್ತು ನೆಗಡಿ ಕೆಮ್ಮಿನಂತಹ ಸಾಮಾನ್ಯ ಕಾಯಿಲೆಗೆ ಮತ್ತು ಕೆಲವು ವಿಶೇಷ ಕಾಯಿಲೆಗಳಿಗೆ ಹೆಚ್ಚಾಗಿ ಸರ್ಪಹುಣ್ಣು,

ಇಸಬು, ಹೊಟ್ಟೆನೋವು ಈ ತರದ ಹಾಗೂ ದನ ಕರುಗಳ ಕಾಯಿಲೆಗಳಿಗೆ ಔಷಧಿ ಕೊಡುವವರು ಕಂಡು ಬರುತ್ತಾರೆ.

**ನ್ಯಾಯ ವ್ಯವಸ್ಥೆ:** ಕರ್ನಾಟಕವು ಅನೇಕ ರಾಜ ಮನೆತನಗಳ ಆಳ್ವಿಕೆಯ ಭಾಗವಾಗಿತ್ತು. ಪ್ರತಿ ಗ್ರಾಮಗಳಲ್ಲಿ ಗ್ರಾಮಪಂಚಾಯತಿಗಳಿದ್ದು ಅವುಗಳಲ್ಲಿ ಗ್ರಾಮಗಳಿಗೆ ಸಂಬಂಧಿಸಿದ ನ್ಯಾಯ ತೀರ್ಮಾನ ನಡೆಯತ್ತಿತ್ತು. ಹಿಂದೂ ಧರ್ಮದ ಹಲವಾರು ಅಂಶಗಳಲ್ಲಿ ಜಾತಿ ವ್ಯವಸ್ಥೆ ಮುಖ್ಯ ವಾದುದು. ಬ್ರಾಹ್ಮಣ, ಕ್ಷತ್ರೀಯ, ವೈಶ್ಯ, ಶೂದ್ರ ಎಂಬ ನಾಲ್ಕು ಜಾತಿಗಳಿದ್ದು ಜಾತಿಯೊಳಗಿನ ಭಿನ್ನಾಭಿಪ್ರಾಯಗಳನ್ನು ಬಗೆಹರಿಸಲು ಜಾತಿಪಂಚಾಯತ ವ್ಯವಸ್ಥೆಯಿತ್ತು.(ಜಾತಿಯೊಳಗಿನ ಸಮಸ್ಯೆಗಳನ್ನು ಜಾತಿ ಪಂಚಾಯತದಲ್ಲಿ ಬಗೆಹರಿಸುತ್ತಿದ್ದರು.) ಪ್ರತಿಯೊಂದು ಗ್ರಾಮಕ್ಕೂ ಗ್ರಾಮ ದೇವಾಲಯಗಳಲ್ಲದೇ ಇವರ ಅನೇಕ ಧಾರ್ಮಿಕ ಸಂಸ್ಥೆಗಳಿದ್ದು ಗ್ರಾಮದ ದೇವಾಲಯದಲ್ಲಿ ಅಲ್ಲಿಯ ಎಲ್ಲಾ ಜಾತಿಯ ಜನರು ಒಟ್ಟು ಸೇರುತ್ತಿದ್ದರು. ಗ್ರಾಮದ ಸಮಸ್ಯೆಗಳನ್ನು ಗ್ರಾಮದಲ್ಲಿ ಚರ್ಚಿಸುತ್ತಿದ್ದರು.

ಪ್ರಸ್ತುತ ಈ ಗ್ರಾಮದಲ್ಲಿ ಬೇರೆ ಬೇರೆ ಧರ್ಮದ ಜನರು ವಾಸವಾಗಿದ್ದು ಅವರು ತಮ್ಮದೆಯಾದಂತಹ ನ್ಯಾಯ ಪದ್ಧತಿಗಳನ್ನು ಅನುಸರಣೆ ಮಾಡುತ್ತಾರೆ. ಹಿಂದು ಧರ್ಮದ ಜನರು ಅನಾದಿಕಾಲದಿಂದಲೂ ತಮ್ಮದೆ ನ್ಯಾಯ ನೀತಿ ಅಳವಡಿಸಿಕೊಂಡಿರುವುದು ವಿಶೇಷ. ಯಾವುದೇ ನ್ಯಾಯ ಪಂಚಾಯತಿಗಳಿದ್ದರೂ ಮೊದಲು ಮನೆಯ ಹಿರಿಯರಿಂದ ಅದನ್ನು ಬಗೆಹರಿಸಲು ಪ್ರಯತ್ನಿಸಲಾಗುತ್ತದೆ. ಅದು ಅಲ್ಲಿ ಬಗೆಹರಿಯದೆ ಇದ್ದಾಗ ಊರ ಹಿರಿಯರಾದ ಗೌಡರು, ಕುಲಕರ್ಣಿಗಳ. ಮಠ ಮಾನ್ಯ ಸ್ವಾಮೀಜಿಗಳ ಹತ್ತಿರ ಹೋಗಿ ಬಗೆಹರಿಸಲಾಗುತ್ತದೆ. ಇಂದು ಕಾಲ ಬದಲಾದಂತೆ ಕೊರ್ಟು ಕಛೇರಿಗಳಲ್ಲಿ ನ್ಯಾಯ ತೀರ್ಮಾನಗೊಳ್ಳುತ್ತಿರುವುದು ವಿಶೇಷ.

**ಅತಿಥಿ ಸತ್ಕಾರ:** ಈ ಗ್ರಾಮದಲ್ಲಿ ಮನೆಗೆ ಬಂದಂತಹ ಅತಿಥಿಗಳಿಗೆ 'ಅತಿಥಿ ದೇವೋಭವ' ಮಾತಿನಂತೆ ಇಲ್ಲಿಯ ಜನರು ನಡೆದುಕೊಳ್ಳುವುದು ವಿಶೇಷ. ಮೊದಲಿಗೆ ಊರಿನಿಂದ ಅಥವಾ ಹೊರಗಿನಿಂದ ಯಾರೇ ಬರಲಿ ಅವರಿಗೆ ನೀರು ಸಕ್ಕರೆಯನ್ನು ನೀಡಿ ತದನಂತರ ಅವರ ಯೋಗಕ್ಷೇಮ ವಿಚಾರಿಸಲಾಗುತ್ತದೆ. ಹೆಣ್ಣು ಮಕ್ಕಳು ಬಂದಿದ್ದರೆ, ಅವರಿಗೆ ಹೋಗುವಾಗ ಅರಿಷಿಣ ಕುಂಕುಮ ಹೂವು ಕೊಡಲಾಗುತ್ತದೆ.

**೩.೬. ಜನಪದ ಕಲೆಗಳು**

**ಹಿನ್ನೆಲೆ:** ಹಾಲುಮತ ಜನಾಂಗದ ಸಾಂಪ್ರದಾಯಿಕ ಮನರಂಜನೆ ಎಂದರೆ ಡೊಳ್ಳು ಕುಣಿತ, ಇದು ಕುರುಬರಿಗೆ ಮನರಂಜನೆ ಅಷ್ಟೇ ಅಲ್ಲದೆ ಧರ್ಮ ಶಿಖರಕ್ಕೇರಿಸುವ ಒಂದು

ಅನರ್ಘ್ಯ ರತ್ನವಾಗಿದೆ. ಡೊಳ್ಳು ಸರ್ವ ಸತ್ಕಾರ್ಯಗಳಿಗೆ ಬೇಕಾದ ಅಷ್ಟವಾದ್ಯಗಳಲ್ಲಿ ಶ್ರೇಷ್ಠವಾದ್ಯ ವಾಗಿದೆ. ಅಂದರೆ ಡೊಳ್ಳು ದುಷ್ಟರ ಸಂಹಾರವನ್ನು ಶಿಷ್ಟರ ವಿಜಯವನ್ನು ಸೂಚಿಸುತ್ತದೆ. ಶಿಷ್ಟರಾದವರು ಯಾವಾಗಲೂ ಧರ್ಮನಿರತರಾಗಿರುತ್ತಾರೆ. ಹೀಗಿದ್ದು, ಡೊಳ್ಳು ಒಂದು ರೀತಿಯಿಂದ ಧರ್ಮದ ವಿಜಯದ ಸಂಕೇತವನ್ನು ಸೂಚಿಸುತ್ತದೆ. ಅಷ್ಟೇ ಅಲ್ಲದೇ ಹಟ್ಟಿಕಾರರ ಜನಪದ ಸಂಸ್ಕೃತಿಯನ್ನು ಬಿಂಬಿಸುತ್ತದೆ. ಇಷ್ಟೆಲ್ಲ ವೈಶಿಷ್ಟತೆ ಹೊಂದಿದ ಡೊಳ್ಳು ಪ್ರಥಮದಲ್ಲಿ ಹೇಗೆ ನಿರ್ಮಾಣವಾಯಿತು? ಎಂಬುದನ್ನು ತಿಳಿಯುವುದು ಸೂಕ್ತ ವಿಷಯ. ಬಂಕಾಪುರದಲ್ಲಿ ಜನಪದ ಕಲೆಗಳು ಸ್ವಲ್ಪಮಟ್ಟಿಗೆ ಉಳಿದುಕೊಂಡು ಬಂದಿವೆ. ಒಂದು ನಿರ್ದಿಷ್ಟ ಸಂದರ್ಭದಲ್ಲಿ ಪ್ರಸ್ತುತ ಪಡಿಸಲಾಗುವ ಪರಂಪರಾಗತ ಗ್ರಾಮೀಣ ಕಲೆಗಳು. ತನ್ನಲ್ಲಿರುವ ಕಲಾನೈಪುಣ್ಯವನ್ನು ಪ್ರಸ್ತುತ ಪಡಿಸಲಿಚ್ಚಿಸುವ ವೃತ್ತಿಯ ತವಕ ಉತ್ಸಾಹಗಳೆ ಪ್ರದರ್ಶನ ಕಲೆಗಳ ಮೂಲ. ಇದಕ್ಕೆ ಸಂದರ್ಭ ಕೂಡಿ ಬರಬೇಕು. ಈ ಕಲೆಯು ಇಂದು ನಿನ್ನೆಯದಲ್ಲ. ಬಹುದಿನಗಳ ಹಳೆಯ ಕತೆ. ತಲೆ ತಲಾಂತರಗಳಿಂದ ಬಂದ ಕಲೆಯಾಗಿವೆಯೆಂದು ನಮಗೆ ಬಂಕಾಪುರದ ಗ್ರಾಮದ ಕಲೆಗಳಿಂದ ತಿಳಿದು ಬರುತ್ತದೆ. ಪ್ರತಿಯೊಂದು ಕಲೆಯ ಉದ್ದೇಶ ಸಂತೋಷಪಡಿಸುವುದಾಗಿರುತ್ತದೆ. ಪ್ರತಿಯೊಂದು ಕಲೆಯೂ ಆಯಾ ಸಂದರ್ಭಕ್ಕನುಗುಣವಾಗಿ ಪ್ರದರ್ಶನಗೊಳ್ಳುವುದು ವಿಶೇಷವಾಗಿರುತ್ತದೆ.

ಪ್ರಸ್ತುತ ಗ್ರಾಮದಲ್ಲಿ ಕಂಡು ಜನಪದ ಕಲೆಗಳು ಹಬ್ಬ ಹರಿದಿನ ಜಾತ್ರೆ ಉತ್ಸವ ಮುಂತಾದ ವಿಶೇಷ ದಿನಮಾನಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಇವು ಮುಖ್ಯವಾಗಿ ಧಾರ್ಮಿಕ ಹಿನ್ನೆಲೆ ಹಾಗೂ ಮನರಂಜನೆಗಾಗಿ ಪ್ರದರ್ಶನಗೊಳ್ಳುತ್ತಿವೆ. ಅಂತಹವುಗಳಲ್ಲಿ ದೊಡ್ಡಾಟ, ಸಣ್ಣಾಟ, ಡೊಳ್ಳುಕುಣಿತ, ಪುರವಂತಿಕೆ, ಚೌಡಿಕೆ, ಭಜನೆ, ಕೋಲಾಟ, ಅಲಾವಿಹೆಜ್ಜೆ, ಕಲೆಗಳ ಜೊತೆಗೆ ಸೋಬಾನೆ ಹಾಡುವ ಮಹಿಳೆಯರು ಸಾಕಷ್ಟು ಜನ ಈ ಊರಿನಲ್ಲಿದ್ದಾರೆ.

**ಡೊಳ್ಳು ಕುಣಿತ:** ಡೊಳ್ಳು ಪುರುಷರ ಕಲೆ, ಧಾರ್ಮಿಕ ಕಲೆ, ಹಾಲುಮತ ಸಮುದಾಯದ ಕಲೆ ಎನ್ನುವ ಅನನ್ಯತೆಗಳು ಇದ್ದವು. ಇವತ್ತು ಕೇವಲ ಇಂತಹ ಪಾರಂಪರಿಕ ಅಸ್ಮಿತೆಗಳಿಗೆ ಈ ಕಲೆ ಸೀಮಿತವಾಗಿಲ್ಲ. ಮಹಿಳೆಯರು ಮತ್ತು ಹಾಲುಮತದವರು ಡೊಳ್ಳನ್ನು ಬಾರಿಸುತ್ತಿದ್ದಾರೆ. ಧಾರ್ಮಿಕ ಮತ್ತು ಜನಪ್ರಿಯ ಕಾರ್ಯಕ್ರಮಗಳಲ್ಲೂ ಬಳಕೆಯಾಗುತ್ತಿದೆ ಸಾಮಾಜಿಕ ಕಲೆಯಾಗಿ, ಮಹಿಳಾ ಕಲೆಯಾಗಿ, ಜನಪ್ರಿಯ ಕಲೆಯಾಗಿ ರೂಪಾಂತರಗೊಂಡಿದೆ ಈ ಬಗೆಯ ಜೀವಂತಿಕೆ ಕಲೆಯನ್ನು ಬಂಕಾಪುರ ಗ್ರಾಮದಲ್ಲಿ ಹಾಲುಮತ ಸಮುದಾಯದ ಬೀರಲಿಂಗೇಶ್ವರ ಕಲಾ ತಂಡದವರು ಪ್ರತಿ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಪ್ರದರ್ಶನ ನೀಡುವುದು ಹಾಗೂ ಹಾಡು ಹಾಡುವುದನ್ನು ಇಂದಿಗೂ ಕಾಣಬಹುದು. ಈ ತಂಡದಲ್ಲಿ ಸುಮಾರು ಇಪ್ಪತ್ತು ಜನ ಕಲಾವಿದರಿದ್ದಾರೆ. ಹನ್ನೆರಡು ಚರ್ಮದ ಡೊಳ್ಳುಗಳಿವೆ.

ಸೃಷ್ಟಿಗೀಶ, ರೂಢೀಗೀಶ, ಬೊಲೆ ಶಂಕರ ಎಂಬ ನಾಮಗಳಿಂದ ಬಿರುದಾಕಿಂತನಾದ ಪಂಚಮುಖದ ಪರಮೇಶ್ವರನಿಗೂ ಒಮ್ಮೆ ಕಠಿಣ ಕಾಲವಾಗಿತ್ತು. ಇದಕ್ಕೆ ಕಾರಣನೇ ಡೊಳ್ಳಾಸುರ

ನೆಂಬ ದುಷ್ಟದೈತ್ಯ. ಈ ದೈತ್ಯನ ಹೊಟ್ಟೆ ಕೆಟ್ಟಗುಣಗಳ ಕೊಟ್ಟಿಗೆ ಆಗಿತ್ತು. ಇವನು ಭಗವಂತನನ್ನು ಕುರಿತು ಘೋರ ತಪಸ್ಸು ಮಾಡಿ ವರ ಪಡೆದು ಪರಂಪರಾಗತವಾಗಿ ಪಾರ್ವತಿ ದೇವಿಯನ್ನು ಆಳಬೇಕು, ಅಷ್ಟ ದೈತ್ಯರಲ್ಲಿ ಶ್ರೇಷ್ಠನಾಗಿ ಸೃಷ್ಟಿಗೀಶನಾಗಬೇಕೆಂದು ಯೋಚಿಸಿ ಉಪವಾಸ ಕುಳಿತು ತಪಸ್ಸನ್ನು ಆಚರಿಸಿದ. ದುಷ್ಟ ದೈತ್ಯನ ಘೋರ ತಪಸ್ಸಿನ ವಿಚಾರ ಬೊಳೆಶಂಕರನಿಗೆ ತಿಳಿದು ಬಂದಿತು. ತಟ್ಟನೆ ಕೈಲಾಸ ಬಿಟ್ಟು ಸೃಷ್ಟಿಗೀಶ ಡೊಳ್ಳಾಸುರನ ತಮೋ ಸ್ಥಳಕ್ಕೆ ಆಗಮಿಸಿ, "ವತ್ಸಾ ಡೊಳ್ಳಾಸುರ ನಿನ್ನ ತಪಸ್ಸು ನನಗೆ ತೃಪ್ತಿ ನೀಡಿದೆ ನಿನಗೆ ಏನು ಬೇಕು ವರವ ಬೇಡಿಕೊ" ಎಂದ. ತಪಸ್ಸಿನಿಂದ ಎದ್ದು ಡೊಳ್ಳಾಸುರ ತಕ್ಷಣ ಬೋಳೆ ಶಂಕರನ ಚರಣಕ್ಕೆರಗಿ "ಪರಮೇಶ್ವರ ನನಗೆ ಮೊದಲು ನೀನು ವಚನವನ್ನು ಕೊಡು ನಂತರ ನಾನು ನನಗೆ ಬೇಕಾದ ವರವನ್ನು ಬೇಡುವೆ ಎಂದ. "ಭಗವಂತ" ವತ್ಸಾ ನಾನು ಕೊಟ್ಟ ಮಾತಿಗೆ ತಪ್ಪಿ ಭ್ರಷ್ಟನಾಗುವವನಲ್ಲ. "ಏನು ಬೇಕು? ಕೇಳು ಎಂದಾಗ ದುಷ್ಟದೈತ್ಯನು "ತಂದೆ ನಾನು ಹೊನ್ನುವಲ್ಲೆ ಮಣ್ಣುವಲ್ಲೆ, ನಿನ್ನ ಮಾತ್ರ ನಾ ಅಂಗದೊಳಗೆ ನುಂಗುವೆನು ಎಂದ. ಶಂಕರನಿಗೆ ಸಂಖೆ ಎಣಸುವ ಕಾಲ ಬಂದಿತು. ಆಗಲಿ ವತ್ಸಾ ನಾನು ಬೇಡಿದವರಿಗೆ ಬೇಕಾದ್ದು ಕೊಡುವ ಬೊಳೆಶಂಕರ. ಆದರೆ ನೀನು ಬೇಡುವ ವಸ್ತು ಬೇಡಲಿಲ್ಲ, ನನ್ನ ನಿನ್ನ ಅಂಗದೊಳಗೆ ನುಂಗುವೆ ಎನ್ನುತ್ತಿರುವೆ. ಇದಕ್ಕೆ ನಾನು ಸಮ್ಮತ, ಆದರೆ, ನನ್ನ ಶರೀರ ಪೂರ್ಣ ನನ್ನ ಸ್ವತ್ತಿಲ್ಲ. ನನಗೆ ಅರ್ಧನಾರೇಶ್ವರ ಎಂಬ ಹೆಸರು ಬಂದಿದ್ದು ಸರ್ವರಿಗೂ ಗೊತ್ತಿರುವ ಸಂಗತಿ. ಪಾರ್ವತಿದೇವಿ ತಪಸ್ಸಿನ ಬಲದಿಂದ ನನ್ನ ಅರ್ಧಶರೀರವನ್ನು ಪಡೆದುಕೊಂಡಿದ್ದಾಳೆ. ಅನ್ಯರಿಗೆ ಕೊಟ್ಟ ಅರ್ಧ ಶರೀರ ಹೇಗೆ ಬಂದೀತು? ಆದರೂ ಆಗಲಿ ಪಾರ್ವತಿಯನ್ನು ಕೇಳಿ ಬರುವೆ ಎಂದು ಹೇಳಿ ಭೊಳೆ ಶಂಕರ ಕೈಲಾಸಕ್ಕೆ ತೆರಳಿದ. ಮರ್ತ್ಯ ಲೋಕದಲ್ಲಿ ನಡೆದ ಸತ್ಯ ಕಥೆಯನ್ನು ಪಾರ್ವತಿ ಮುಂದೆ ವಿವರಿಸಿದಾಗ ಪಾರ್ವತಿದೇವಿ ಅಯ್ಯೋ ತನಯ ನನ್ನ ಮುತ್ತೈದೆ ತನಕ್ಕೆ ಕುತ್ತು ತಂದಿರಲ್ಲ. ಎಂದು ಕೇಳಿದಾಗ ಪಾರ್ವತಿಯನ್ನು ಸಮಾಧಾನಗೊಳಿಸಿ, ಅವಳ ಅಪ್ಪಣೆ ಪಡೆದು ಕೈಲಾಸವಾಸ ದೈತ್ಯನಲ್ಲಿಗೆ ಬಂದು. "ವತ್ಸಾ ನೀನು ನನ್ನನ್ನು ನಿನ್ನ ಅಂಗದೊಳಗೆ ನುಂಗುವುದು ನಿಜ ಆದರೆ ಮತ್ತೆ ನಿನ್ನ ಅಂಗ ಬಂಧನದಿಂದ ನನ್ನ ಬಿಡುಗಡೆ ಯಾವಾಗ? ಎಂದು ಶಂಕರ ದೈತ್ಯನನ್ನು ಕೇಳಿದ. ಆಗ ದೈತ್ಯ ಕೈಲಾಸವಾಸ ಏಕಕಾಲಕ್ಕೆ ಪಂಚರಾತ್ರಿಗಳು ಯಾವಾಗ ಕೂಡುವವೋ ಅವತ್ತು ನಿನಗೆ ನನ್ನ ಅಂಗ ಬಂಧನದಿಂದ ಬಿಡುಗಡೆ" ಎಂದು ಹೇಳಿ ಬೊಳೆ ಶಂಕರನನ್ನ ದೈತ್ಯ ನುಂಗಿ ಬಿಟ್ಟ . ಸೃಷ್ಟಿಕರ್ತನನ್ನು ನುಂಗಿದ ದೈತ್ಯ ಮೂರು ಲೋಕಕ್ಕೆಲ್ಲ ಕಾರುಣ್ಯ ನಿಧಿ ನಾನು, ಧೀರ ಗಂಗಾದೇವಿಯನ್ನು ಆಳುವೆನು, ಹುಟ್ಟು ಸಾವು ನನಗಿಲ್ಲ. ದೇವನಿಗಿಂತ ದೇವನಾದೆ ಎಂಬ ಗರ್ವ ದೈತ್ಯನನ್ನ ಅವನತಿಯ ಅಂಚಿಗೆ ನೂಕಿತು. ಹರಿಯ ಮಾಯೆಯಿಂದ ದೈತ್ಯ ಹೇಳಿದಂತಹ ಪಂಚರಾತ್ರಿಗಳು ಏಕಕಾಲಕ್ಕೆ ಕೂಡಿದವು. ಆದರೂ ದುರುಳ ದೈತ್ಯ ಕೊಟ್ಟ ಬಾಷೆ ತಪ್ಪಿ ಶಿವನನ್ನು ಹೊರ ಬಿಡಲಿಲ್ಲ. ಇತ್ತ ಪಾರ್ವತಿ ಪತಿಯಿಲ್ಲದೆ ಚಿಂತಾಪರವಶಳಾಗಿ ವಿಷ್ಣುವಿನ ಹತ್ತಿರ ಹೇಳಿದಳು. ವಿಷ್ಣು ಆಕಳ ಪಾದದಷ್ಟು ಜಾಗ ಬಿಡದೆ ಜಗತ್ತನ್ನ ಸುತ್ತಿದ ಆದರೆ ಭಗವಂತ ಕಾಣಲಿಲ್ಲ. ಕೊನೆಗೆ ಡೊಳ್ಳಾಸುರನ ಹೊಟ್ಟೆಯೊಳಗಿದ್ದ ವಿಷಯ ಅರಿತ

ಹರಿ, ಶಿವನ ಸಹಸ್ರನಾಮಗಳ ಮೂಲಕ ಪ್ರಾರ್ಥಿಸಿ ಪಾರ್ವತಿಯ ಕಷ್ಟವನ್ನು ಜ್ಞಾನ ದೃಷ್ಟಿಯಿಂದ ತಿಳಿಸಿದ. ಈ ವಿಷಯ ತಿಳಿದ ಭಗವಂತ ಮೂರು ಕಣ್ಣುಗಳಾದ ಸೂರ್ಯಗಣ್ಣು, ಚಂದ್ರಗಣ್ಣು, ಉರಿಗಣ್ಣು, ತೆರೆದು ಕ್ಷಣದಿಂದ ಕ್ಷಣಕ್ಕೆ ಬೆಳೆಯತೊಡಗಿದ. ದೈತ್ಯನ ಹೊಟ್ಟೆ ಬೃಹತ್ ಗಾತ್ರವಾಗಿ ಕಂಡಿತು. ಬೆಳೆದು ಬೆಳೆದು ಹೊಟ್ಟೆ ಒಡೆದು ಸೃಷ್ಟಿಗೀಶ ಅಂಗದಿಂದ ಹೊರಗೆ ಬಂದ. ಬೊಳೆಶಂಕರನ ವಿರಾಟರೂಪ ಕಂಡ ಹರಿ ತಟ್ಟನೆ ದುಷ್ಟ ದೈತ್ಯನ ಡೊಕ್ಕಿಯಿಂದ "ಪಡಗವನ್ನು" ನಿರ್ಮಿಸಿ, ಕರಳಿನ "ಹಗ್ಗವನ್ನು" ಹಾಕಿ ಅವನ ಬಲಗೈ ಎಲುಬಿನಿಂದ "ಗುಣಿ" ಯನ್ನು ಮಾಡಿ. ಹರಿ ತಾನು ಹಾರ್‍ಯಾಡಿ ಡೊಳ್ಳು ಬಾರಿಸಿದ. ಈ ನಾದದ ಸುಖದಿಂದ ಶಿವನು ಶಾಂತ ಸ್ವರೂಪನಾದ. ಹರಿ ಡೊಳ್ಳು ಬಡಿದಂತೆ ಹರ ನಾಟ್ಯವಾಡಿದ. ಹರಿ ಡೊಳ್ಳು ಬಡಿದ ನಾದ ಕೈಲಾಸ ಕಂಡು. ಅಲ್ಲಿರುವ ದೇವಾನುದೇವತೆಯರು ಮತ್ತು ಪಾರ್ವತಿ ದೇವಿಗೆ "ದೇವಿ ನಮ್ಮ ದೇವಾರು ಬಂದಾರು ಬನ್ನಿರೋ" ಎಂಬ ಘೋಷಣೆ ಹೊರಡಿಸಿತ್ತಂತೆ. ಅದಕ್ಕಾಗಿ ನಮ್ಮ ಹಿರಿಯರು ಹಾಡುವ ಹಾಡಿನಲ್ಲಿ ಈ ರೀತಿ ಬರುತ್ತದೆ.

"ಡೊಳ್ಳಿನ ಬಡಿತಕ್ಕೆ ನೆರಳಿತ್ತು ಭೂಮಿ
ಸುಳ್ಳಲ್ಲ ಕೇಳರ್‍ರಿ ಹೇಳುವೆನು"

ಹೀಗೆ ಡೊಳ್ಳು ಹುಟ್ಟಿದ ನಂತರ ಕುರುಬರ ಕುಲವನ್ನು ನಿರ್ಮಿಸಿ ಅವರಿಗೆ ಡೊಳ್ಳುಕೊಟ್ಟು ಹೇಳಿದ್ದೇನೆಂದರೆ "ಹೇ ಕುರುಹು ಬಲ್ಲ ಮುಗ್ದಭಾವದ ಕುರುಬರ ಕಂಡ ದೇವರಿಗೆ ಕೆಟ್ಟಕಾರ್ಯಕ್ಕೆ ಡೊಳ್ಳು ಬಾರಿಸಬಾರದು ಮುಟ್ಟಬಾರದು. ಅಷ್ಟವಾದ್ಯಗಳಲ್ಲಿ ಇದು ಶ್ರೇಷ್ಟವಾದ್ಯ, ಡೊಳ್ಳು ಬಾರಿಸು ವುದರಿಂದ ನಿಮ್ಮ ಪಾಪ ಪರಿಹಾರವಾಗುವುದು ಎಂಬ ಕಟ್ಟಳೆ ನೀಡಿ ಕೈಲಾಸಕ್ಕೆ ತೆರಳಿದರು.

ಹೀಗೆ ಸಾಕ್ಷಾತ್ ಶಿವನಿಂದ ಹಾಲುಮತ ಜನಾಂಗಕ್ಕೆ ಬಂದ ಡೊಳ್ಳು ಇಂದಿಗೂ ಸಕಲ ವಾದ್ಯಗಳಲ್ಲಿ ಧಿಮೀ.. ಧಿಮೀ.. ನಾದ ಹಿಡಿಸಿದೆ ಹಾಲು ಮತದ ಡೊಳ್ಳು ಕಾಲಾಂತರದಲ್ಲಿ ಹೊನ್ನಿಕಟ್ಟಿಗೆ, ಮತ್ತಿಕಟ್ಟಿಗೆ, ರಕ್ತ ಹೊನ್ನಿ ಕಟ್ಟಿಗೆ, ಶಿ ಹೊನ್ನಿ ಕಟ್ಟಿಗೆ, ಹೆಬ್ಬೆವಿನ ಕಟ್ಟಿಗೆಗಳಿಂದ ಪಡಗವನ್ನು ನಿರ್ಮಿಸಿ, ಐದು ನೂಲಿನ ಹಗ್ಗಗಳಿಂದ , ಬಿದಿರಿನ ಬಂಕದಿಂದ, ಮೇಕೆ ಮತ್ತು ಆಡಿನ ಚರ್ಮಗಳಿಂದ ಡೊಳ್ಳನ್ನು ನಿರ್ಮಾಣ ಮಾಡುವ ಬಗೆ ಇಂದು ಸಹ ಬಳಕೆಯಲ್ಲಿದೆ.

## ದೇವ ಸ್ತುತಿ

ಹೇ ಮಹಾದೇವನೆ ಮಹಾಮಹಿಮನೆ
ನಮಃ ಶಿವಾಯ ಓಂ ಶಿವಾಯ

ನಮೋ ಶಿವಾಯ ಓಂ ನಮೋ ನಮೋ
ಓಂ ನಮಃ ಶಿವಾಯ ಓಂ ನಮೋ ನಮೋ

ಉರುಗಾಭರಣನೇ ಗಿರಿಜಾರಮಣನೆ
ನಮಃ ಶಿವಾಯ ಓಂ ನಮೋ ನಮೋ

ಇಂದು ಶೇಖರನೇ ಕಂದ ಗಣಪ
ಆನಂದ ಕಂದನಿಗೆ ನಮೋ ನಮೋ

**ಗುರು ಸ್ತುತಿ**

ಹೇ... ಶ್ರೀ ಗುರುದೇವಾ ನಿಮ್ಮಯ ಪಾದಕ
ರಾಗದಿಂದ ತಲೆ ಬಾಗುತ

ರಾಗದಿಂದ ತಲೆ ಬಾಗುತ
ನಾ ಬೇಗನೆ ಹೊಂದುವೆ ಸಂಪತ್ತ

**ಪುರವಂತಿಕೆ ಕಲೆ:** ಈ ಕಲೆಗೆ ಹಿನ್ನೆಲೆಯಾದ ಒಂದು ಪೌರಾಣಿಕ ಕಥೆಯಿದೆ. ದಕ್ಷಬ್ರಹ್ಮ ಆಚರಿಸಿದ ಯಾಗಕ್ಕೆ ಶಿವನೊಬ್ಬನನ್ನು ಬಿಟ್ಟರೆ ಉಳಿದೆಲ್ಲ ದೇವಾನುದೇವತೆಗಳನ್ನು ಆಹ್ವಾನಿಸುತ್ತಾನೆ, ತನ್ನ ತಂದೆ ಉದ್ದೇಶಪೂರ್ಕವಾಗಿ ಗಂಡನನ್ನು ಅವಮಾನಿಸಿದ್ದಾನೆಂದು ಭಾವಿಸಿದ ಪಾರ್ವತಿ ವ್ಯಗ್ರಳಾಗಿ ನ್ಯಾಯ ಕೇಳುವ ಸಲುವಾಗಿ ಗಂಡನ ತಡೆಯನ್ನು ಉಲ್ಲಂಘಿಸಿ ತಂದೆಯ ಬಳಿಗೆ ಬರುತ್ತಾಳೆ. ಅಳಿಯನ ಮೇಲಿನ ಕೋಪದಿಂದ ಮಗಳೆಂಬ ಮಮತೆಯನ್ನು ತೊರೆದು ದಕ್ಷಬ್ರಹ್ಮ ಪಾರ್ವತಿಯನ್ನು ತಿರಸ್ಕಾರದಿಂದ ನಡೆಸಿಕೊಂಡುದ್ದಲ್ಲದೆ ಅವಳೆದುರಿಗೆ ಶಿವನನ್ನು ನಿಂದಿಸುತ್ತಾನೆ. ಪತಿನಿಂದನೆಯನ್ನು ಸಹಿಸಲಾಗದ ಪಾರ್ವತಿ ಅಗ್ನಿಕುಂಡದಲ್ಲಿ ಬಿದ್ದು ಪ್ರಾಣಾರ್ಪಣೆ ಮಾಡಿಕೊಳ್ಳುತ್ತಾಳೆ. ಈ ದುರ್ಘಟನೆಯಿಂದ ಕುಪಿತನಾದ ಶಿವ ಉಗ್ರನಾಗಿ ತಾಂಡವ ನೃತ್ಯದಲ್ಲಿ ತೊಡಗುತ್ತಾನೆ. ಕೋಪದಿಂದ ಹಣೆಯ ಬೆವರನ್ನು ಬೆರಳುಗಳಿಂದ ಬಾಚಿ ನೆಲಕ್ಕೆ ಅಪ್ಪಳಿಸುತ್ತಾನೆ. ಆಗ ನೂರೊಂದು ಆಯುಧಗಳನ್ನು ಧರಿಸಿದ ವೀರಭದ್ರನ ಅವತಾರವಾಗುತ್ತದೆ. ಮುಂದೆ ವೀರಭದ್ರ ದಕ್ಷಬ್ರಹ್ಮನ ಯಾಗಶಾಲೆಗೆ ಬಂದು ಅದನ್ನು ಹಾಳುಗೈಯತ್ತಾನೆ. ಅಲ್ಲಿ ವೀರಭದ್ರ ತೋರಿದ ಪ್ರತಾಪದ ಪ್ರತೀಕವೇ ಪುರವಂತಿಕೆ ಕುಣಿತ.

**ಶ್ರೀ ವೀರಭದ್ರ ವಡಬುಗಳು:** ಅಹಹಾ ವೀರಾ, ಅಹಹಾ ಶರಭಾ, ಅಹಹಾ ರುದ್ರಾ, ಧರೆ ಯಾಕಾಶವಿಲ್ಲದಂದು, ತ್ರೈಮಮಡಲ ನೆಲೆಗೊಳ್ಳದಂದು ಹೋಮ, ನೇಮ, ಜಪ, ತಪವಿಲ್ಲ ದಂದು ನಿಮ್ಮನಾರು ಬಲ್ಲರು? ಹರಿಬ್ರಹ್ಮರಿಗೆ ಅಗೋಚರ, ನಿರ್ಲೇಪನಿರಂಜನನಾಗಿ ವೇದಂ ಗಳರಿಯವು ಶಾಸ್ತ್ರಶೃತಿಸ್ಮೃತಿಗಳು, ನಿಮ್ಮ ನರಿಯವು. ಗಗನ ಕಮಲ ಕುಸುಮ ಪರಿಮಳದಿಂದತ್ತಲು, ಗುಹೇಶ್ವರಾ ನಿಮ್ಮ ನಿಲುವನಾರು ಬಲ್ಲರು ಇಂತಿಯ ಪರಮಾತ್ಮನೆ ಪರಾತ್ಮನೆ ಸತ್ಯ ನೋಡಾ ಕಡಕ್ಕಡೆ.

**ಭಜನಾ ಸಂಘಗಳು:** ಬಂಕಾಪುರ ಹೋಬಳಿಯಲ್ಲಿ ಬರುವ ಗ್ರಾಮಗಳಲ್ಲಿ ಹಲವಾರು ಜನಪದ ಕಲಾವಿದರಿದ್ದಾರೆ. ಅವರಲ್ಲಿ ಬಂಕಾಪುರದ ಬಂಗಾರ ಬಸವೇಶ್ವರ ಭಜನಾ ಸಂಘ ಒಂದು. ಮಲ್ಲೇಶಪ್ಪಾ ಭಂಗಿ ಅವರು ತಮ್ಮ ಹಿರಿಯರಿಂದ ಕಲೆಯನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಈ ತಂಡದಲ್ಲಿ ಸುಮಾರು ೧೦ ರಿಂದ ೧೨ ಜನ ತಂಡವನ್ನು ಕಟ್ಟಿಕೊಂಡಿದ್ದಾರೆ. ಇವರು ಶ್ರಾವಣ ಮಾಸದಲ್ಲಿ ನಡೆದುಕೊಂಡು ಉಳವಿ ಚನ್ನಬಸವೇಶ್ವರನಿಗೆ ಭಜನೆ ಮಾಡುತ್ತಾ ಹೋಗಿ ಬರುವುದು ವಿಶೇಷ. ಹಾಗೂ ಶುಭ ಸಂದರ್ಭ ಹಾಗೂ ಊರಲ್ಲಿ ಯಾರಾದರು ತೀರಿಕೊಂಡರೆ ರಾತ್ರಿಯಿಡಿ ಭಜನೆಯನ್ನು ಮಾಡುತ್ತಾರೆ. ಭಜನೆಯ ಹಾಡುಗಾರರು ಸಾಮಾನ್ಯವಾಗಿ ಹಾರ್ಮೋನಿಯಂ ಬಳಸುತ್ತಾರೆ. ಅದರ ಜೊತೆಗೆ ತಬಲ, ಡಗ್ಗ, ದಮ್ಮಡಿ, ತಾಳ ಮುಂತಾದವುಗಳನ್ನು ಹಾಡುಗಾರರು ರಾಗ, ತಾಳ, ಲಯಕ್ಕೆ ಸಂಬಂಧಿಸಿದ ಹಾಗೆ ಈ ಮೇಲಿನ ವಸ್ತುಗಳನ್ನು ಬಳಸುವರು.

ಮುಮ್ಮೇಳದವರು ಹಾಡುವಾಗ ವಾದ್ಯ ಪರಿಕರಗಳನ್ನು ನಯವಾಗಿ ಬಳಸುತ್ತಾರೆ. ಹಿಮ್ಮೇಳ ಹಾಡುವಾಗ ವಾದ್ಯಗಳ ಶಬ್ದ ಹೆಚ್ಚಿಗೆ ಹೊರಡಿಸುವರು. ಹಾಡುಗಾರರು ತತ್ವಪದ, ಕೈವಲ್ಯ, ಸಂಗೀತ, ಶಾಸ್ತ್ರೀಯ, ಭಜನೆಗಳನ್ನು ಮಾಡುವರು. ಶಿಶುನಾಳ ಶರೀಫರ ಪದಗಳು, ಕಡಕೋಳ ಮಡಿವಾಳಪ್ಪ, ಬಬಲಾದಿ ಸದಾಶಿವಪ್ಪ, ಪುರಂದರ ದಾಸರ ಇತ್ಯಾದಿ ಕವಿಗಳ ಪದಗಳನ್ನು ಸಮಯಕ್ಕೆ ತಕ್ಕಂತೆ ಹಾಡುಗಳನ್ನು ಹಾಡುತ್ತಾರೆ.

**ಜಾತ್ರೆ:** ಉತ್ಸವಗಳಲ್ಲದೇ, ಮರಣದ ಸಂದರ್ಭದಲ್ಲಿ ಭಜನಾಪದಗಳನ್ನು ಹಾಡುವರು. ಹಾಡಿನ ಸಂಯೋಜನೆಗೆ ತಕ್ಕಂತೆ ವಾದ್ಯ ಪರಿಕರಗಳನ್ನು ಬಳಸುವುದರಿಂದ ಕೇಳುಗರಿಗೆ ಕುತೂಹಲ ಹುಟ್ಟಿಸುತ್ತದೆ.

ಶಿವ ಭಕ್ತನಾದವನು ಹೇಗಿರಬೇಕು
ಭಾವದ ಆಸೆಯನು ಬಿಟ್ಟಿರಬೇಕು

ಚಿತ್ತವು ಅಂಕಿತದಲ್ಲಿ ಉಳಿದಿರಬೇಕು
ಗುರುಧ್ಯಾನ ಪಾರಾಯಣ
ಶಿವಪ್ರಸಾದದಲ್ಲಿ ಮನ ಬೆರೆತಿರಬೇಕು
ಪ್ರಸಾದವೆ ಪರಬ್ರಹ್ಮವೆಂದು ತಿಳಿದಿರಬೇಕು
ಎಷ್ಟು ಹೇಳಬೇಕು ಕಳ್ಳನಾಗದು ನೀನು //ಪ//

ಹೆಜ್ಜೆ ಹೆಜ್ಜೆಗೆ ಗುರುಮಂತ್ರ ನುಡಿದಿರಬೇಕು
ಘನಗುರುವಿನ ಕಂಡು ಹಿಗ್ಗಿತಿರಬೇಕು
ಗುರುಹಿರಿಯನ ಕಂಡು ತಗ್ಗಿ ನುಡಿಬೇಕು
ಧರ್ಮ ಮಾಡದೆ ಕರ್ಮಕ್ಕೆ ಹೋಗಬೇಡ
ಎಷ್ಟು ನಿನಗೆ ಹೇಳಬೇಕು //ಪ//

ತ್ಯಾಗ ಭಾವನೆಗಳು ತುಂಬಿ ತುಳಕಬೇಕು
ಮೋಹ ಮಾಯಗಳು ಅಳದಿರಬೇಕು
ಮೋಸ ವಂಚನೆಗಳು ಬಿಟ್ಟಿರಬೇಕು
ಶಾನವಾಡ ಬಸ್ವಾವನಂದ ಶರಣಾಗಿರಬೇಕು
ನಿತ್ಯ ಭಜನೆನಾ ಮಾಡಿ ನೀ ಮುಕ್ತಿ ಪಡಿಸಬೇಕು //ಪ//

**ಬಾಸಿಂಗಗಳ ತಯಾರಿಕೆ:** ಸಾಮಾನ್ಯವಾಗಿ ಬಾಸಿಂಗಗಳನ್ನು ತಯಾರಿಸುವವರು ಇತ್ತೀಚೆಗೆ ವಿರಳವಾಗಿದ್ದಾರೆ. ಅಂತಹುದರಲ್ಲಿ ಶಿಗ್ಗಾಂವ ತಾಲ್ಲೂಕಿನ ಬಂಕಾಪುರದಲ್ಲಿ ಬಸಲಿಂಗಪ್ಪ ಸವಣೂರ ಎಂಬ ಕಲಾವಿದರು ಬಾಸಿಂಗ ಮತ್ತು ಹಾರಗಳನ್ನು ತಯಾರಿಸುವಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದಾರೆ. ಇವರು ದೇವರ ದಂಡೆ, ಮನೆಯ ಬಾಸಿಂಗ, ಲಗ್ನದ ಬಾಸಿಂಗ ಅಷ್ಟೇ ಅಲ್ಲದೇ ರುದ್ರಾಕ್ಷಿ ಮಾಲೆ ಗಂಧದ ಹಾರ, ಬೆಂಡಿನ ಹಾರಗಳನ್ನು ತಯಾರಿಸುತ್ತಾರೆ. ಹೀಗೆ ತಯಾರಿಸಿದ ವಸ್ತುಗಳನ್ನು ಬೇರೆ ಬೇರೆ ಪ್ರದೇಶಗಳಿಗೆ ಕಳುಹಿಸಿಕೊಟ್ಟಿರುವುದು ವಿಶೇಷ.

ಒಂದು ವಿಧದ ಕಟ್ಟಿಗೆ ಬೆಂಡನ್ನು ಸೀಳಿಕೊಂಡು, ಸೂಕ್ಷ್ಮ ಪದರುಗಳನ್ನಾಗಿ ಕೆತ್ತಿಕೊಂಡು ಬಾಸಿಂಗ ಮತ್ತು ಹಾರಗಳನ್ನು ತಯಾರಿಸುವರು

**ಕಸೂತಿ ಕಲೆ:** ಲಂಬಾಣಿ ಸಮುದಾಯಗಳಲ್ಲಿ ವಿಶೇಷವಾದ ಉಡುಗೆ- ತೊಡುಗೆ, ಆಭರಣಗಳು ಕಂಡು ಬರುತ್ತದೆ. ವಿಶೇಷವೆಂದರೆ ಈ ಜನಾಂಗದವರು ತಮಗೆ ಬೇಕಾದ ಉಡುಗೆ ತೊಡುಗೆ ಆಭರಣಗಳನ್ನು ತಾವೇ ಸ್ವತಃ ತಯಾರಿಸಿಕೊಳ್ಳುತ್ತಿದ್ದರು. ಅಂತವರಲ್ಲಿ ಬಂಕಾಪುರದ ಕೆಲವರು ಹೆಣ್ಣು ಮಕ್ಕಳು ಇದ್ದಾರೆ. ಇವರು ಗೊಂಗಟೊ, ಒಡಣಿ, ತೆಪೊ, ಪೆಟ್ಯಾ-ಲಂಗ, ಕಾಂಚಳಿ-ಕುಬಸ, ಪಾಂಟ್ಯಾ-ಒಡಣಿ ಇವು ಲಗ್ನ ಮತ್ತು ಹಬ್ಬ ಹರಿದಿನಗಳಲ್ಲಿ ತೊಡುವ ಬಟ್ಟೆಗಳಾಗಿವೆ. ಇಂತಹ ವಸ್ತುಗಳಿಗೆ 'ಪಡ್ರೆ' ಸಾಮಾನುಗಳೆಂದು ಕರೆಯುತ್ತಾರೆ. ೨೫ ಪೈಸೆಯ ನಾಣ್ಯವನ್ನು ಸಂಗ್ರಹಿಸಿ ಮನೆಯಲ್ಲಿಯೇ ತಮ್ಮ ಉಡುಗೆಗಳನ್ನು ಸುಂದರವಾಗಿ ಹೊಲಿಯುತ್ತಾರೆ.

ಇದನ್ನೆ ಆಧಾರವಾಗಿಟ್ಟುಕೊಂಡು ಇಂದಿನ ಕಸೂತಿ ಕಲೆ ಆಧುನಿಕರಣಗೊಂಡು ಬೇರೆ ಬೇರೆ ಬಟ್ಟೆಗಳಲ್ಲಿ ಕಸೂತಿ ಹಾಕುವವರು ಸಾಕಷ್ಟು ಜನ ಬಂಕಾಪುರದಲ್ಲಿ ಕಂಡುಬರುತ್ತಾರೆ. ಸೀರೆ ಹಾಗೂ ಕುಪ್ಪಸದ ಮೇಲೆ ಕಸೂತಿ ಹಾಕಲಾಗುತ್ತದೆ. ಇದಕ್ಕೆ ಆಧುನಿಕತೆಯ ಸ್ಪರ್ಶ ನೀಡಿ ಹೊಸ ಹೊಸ ರೀತಿಯ ಕಸೂತಿಯ ಕಲೆಗಳು ಹುಟ್ಟಿಕೊಂಡಿರುವುದು ವಿಶೇಷ.

**ಸೋಬಾನೆ ಕಲಾವಿದೆ:** ಪ್ರಸಿದ್ದ ಹಾಡುಗಾರ್ತಿ ಬಂಕಾಪುರದ ಗಿರಿಜವ್ವಾ ಹಡಪದ, ಹಾವೇರಿ ಜಿಲ್ಲೆ ಹಾನಗಲ್ಲ ತಾಲೂಕ ಹಾಳುಗಲ್ಲಾಪುರ ತವರು ಮನೆ. ತನ್ನ ತಾಯಿಯು ತನ್ನ ತಮ್ಮನಿಗೆ ಅಂದರೆ ಬಂಕಾಪುರದ ಸೊದರ ಮಾವನಿಗೆ ಮದುವೆ ಮಾಡಿ ಕೊಟ್ಟಿದ್ದರಿಂದ ತನ್ನ ಅಜ್ಜಿಯಿಂದ ಈ ಹಾಡುಗಳನ್ನು ಕಲಿತಿರುವುದಾಗಿ ಗಿರಿಜವ್ವಾ ಹೇಳುತ್ತಾರೆ. ಇವರ ಅಜ್ಜಿ

ಗದಿಗೆಮ್ಮ ಹಡಪದ ಸೋಬಾನೆ ಹಾಡುಗಾರ್ತಿ, ಸೂಲಗಿತ್ತಿ, ಕೌದಿ ಹೊಲೆಯುವ ಕಲೆ, ಕಸೂತಿ ಹೀಗೆ ಹಲವಾರು ಕ್ಷೇತ್ರಗಳಲ್ಲಿ ಕೆಲಸ ಮಾಡಿದ್ದರಿಂದ ಇದು ರಕ್ತಗತವಾಗಿ ತನ್ನ ಅಜ್ಜಿಯಿಂದ ಹರಿದು ಬಂದಿರುವುದಾಗಿ ಹೇಳುತ್ತಾರೆ. ಬಂಕಾಪುರದಲ್ಲಿ ಬಹಳಷ್ಟು ಪ್ರಸಿದ್ಧಿಯನ್ನು ಪಡೆದ ಕಲಾವಿದೆಯಾಗಿದ್ದು. ಯಾವದೇ ಕಾರ್ಯಕ್ರಮಗಳಿರಲಿ ಅಲ್ಲಿ ಗಿರಿಜವ್ವ ಇದ್ದರೆ ಆ ಕಾರ್ಯಕ್ರಮಕ್ಕೆ ಒಂದು ಕಳೆ. ಬರಿ ಸೋಬಾನೆ ಪದವಷ್ಟೇ ಅಲ್ಲ ಒಡಪು, ಒಗಟು, ಕಥೆ ಹೀಗೆ ಹಲವಾರು ಕಲೆಗಳನ್ನು ಕರಗತ ಮಾಡಿಕೊಂಡಿರುವ ಅಪರೂಪದ ಕಲಾವಿದೆ ಗಿರಿಜವ್ವಾ ಹಡಪದ.

ಹೆಣ್ಣುಮಕ್ಕಳು ಮೈನೆರೆದ ಸಂದರ್ಭವಾಗಲಿ, ಮದುವೆ ಇತ್ಯಾದಿ ಶುಭ ಸಂದರ್ಭಗಳಲ್ಲಿ ನಾಮಕರಣ, ಜವುಳ, ಮದುವೆಯ ಪ್ರತಿ ನಿಯಮಗಳಿಗೂ ಒಂದು ಹಾಡು ಹೇಳುವ ಈ ಅಪರೂಪದ ಕಲಾವಿದೆಯ ಬಗ್ಗೆ ಮಾಹಿತಿ ಸಂಗ್ರಹಿಸಬೇಕಾದ ಜವಾಬ್ದಾರಿ, ಹಾಗೂ ಸೂಕ್ತ ವೇದಿಕೆ ಕಲ್ಪಿಸಿಕೊಡಬೇಕಾದ ಅವಶ್ಯಕತೆ ಜನಪದ ಆಸಕ್ತರು ಹಾಗೂ ಅದಕ್ಕಾಗಿಯೇ ಸಿದ್ಧವಾಗಿರುವ ಜಾನಪದ ವಿಶ್ವವಿದ್ಯಾಲಯದಂತಹ ಸಂಸ್ಥೆಯ ಮೇಲಿದೆ.

ಅಟವಿ ಸೇರು ಬ್ಯಾಳಿಗಿನ ಹಾಕಿ
ಹದಂ ಸೇರು ಹಿಟ್ಟನು ತೂಗಿ
ಶಿಷ್ಟವೆಂಬ ಹಿಟ್ಟನು ನಾದಿ
ಶಿವಮಂತ್ರದ ಉರುಳಿಯ ಹರಿದು
ಸದ್ಗುರುವಿಗೊಂದು ಅಡಗಿಯ ಮಾಡಿದೇನು

ಬಯವೆಂಬ ಬಾಳಿಗೆಯನು ಇಟ್ಟು
ತನು ಎಂಬ ಎಣ್ಣೆಯ ಸುರುವಿ
ನಾ ಒಂದ ಕಡಬ ಬಿಟ್ಟು
ನೀ ಒಂದ ಕದರ ಚುಚ್ಚಿ
ಸದ್ಗುರುವಿಗೊಂದು ಅಡಗಿಯ ಮಾಡಿದೇನು

ಭಯವೆಂಬ ಬಾನವ ಬಸೇದು
ತನು ಎಂಬ ತಾಬಂಡಿ ತೊಳೆದು
ಚಿತ್ರ ಎಂದು ತುಪ್ಪವ ಕಾಸಿ
ಸಾರ ಮಾಡಿ ಸಾಷ್ಟಾಂಗ ಹಾಕಿ
ಸದ್ಗುರುವಿಗೊಂದು ಅಡಗಿಯ ಮಾಡಿದೇನು

**ಜನಪದ ಆಟಗಳು:** ಬಂಕಾಪುರದ ಭಾಗದಲ್ಲಿ ಜನಪದ ಕ್ರೀಡೆಗಳಿಗೆ ಕೊರತೆಯೇನಿಲ್ಲ. ಸಾಕಷ್ಟು ಆಟಗಳು ಕಂಡುಬರುತ್ತವೆ. ದಿನ ಪೂರ್ತಿ ದುಡಿದ ಜನರಿಗೆ ಈ ಆಟಗಳು ಸ್ವಲ್ಪ

ಮಟ್ಟಿಗೆ ವಿಶ್ರಾಂತಿ ದೊರೆತು ಮನಸ್ಸು ಹಾಗು ದೇಹ ಹಗುರವಾಗುತಿತ್ತು. ಹೀಗಾಗಿ ಅಂದು ಈ ಆಟಗಳು ಬಹಳ ಮಹತ್ವವನ್ನು ಪಡೆದಿದ್ದವು. ಜನಪದರ ಜೀವನದೊಂದಿಗೆ ಅವು ಬೆರೆತು ಹೋಗಿದ್ದವು.

**ಅಣ್ಣೇಕಲ್ಲು:** ಹೆಣ್ಣುಮಕ್ಕಳ ಆಟ. ಇದಕ್ಕೆ ಗಜ್ಜುಗದ ಗಾತ್ರದ ಕಲ್ಲುಗಳು ಬೇಕು. ಇಬ್ಬರು ಅಥವಾ ಹೆಚ್ಚು ಜನ ಆಡಬಹುದು. ಒಬ್ಬಬ್ಬೊರಿಗೆ ಐದೈದು ಕಲ್ಲುಗಳು. ಇದರಲ್ಲಿ ವ್ಯತ್ಯಾಸ ಮಾಡಿಕೊಳ್ಳಬಹುದು. ಎಲ್ಲರ ಕಲ್ಲುಗಳನ್ನೂ ಒಟ್ಟಿಗೆ ಇಟ್ಟು ಯಾರಾದರೊಬ್ಬರು ಆಟ ಪ್ರಾರಂಭಿಸ ಬೇಕು. ಆಮೇಲೆ ಕುಳಿತಿರುವವರಲ್ಲಿ. ಅಪ್ರದಕ್ಷಿಣವಾಗಿ ಆಟ ಮುಂದುವರಿಯುತ್ತದೆ. ಕಲ್ಲುಗಳನ್ನೆಲ್ಲಾ ಅನುಕುಲವಾದಷ್ಟು ಎತ್ತರಕ್ಕೆ ತೂರಿ ಕೆಳಗಿದ್ದ ಕಲ್ಲುಗಳನ್ನು ಒಂದೊಂದಾಗಿ ತೆಗೆದುಕೊಳ್ಳುತ್ತಾ ಹೋಗಬೇಕು. ಬಿಟ್ಟರೆ ಸೋತಂತೆ.

**ಕಣ್ಣಾಮುಚ್ಚಾಲೆ ಆಟ:** ಬೇರೆ ಬೇರೆ ಕಡೆ ಬೇರೆ ಬೇರೆ ಹೆಸರಿನಿಂದ ಇದನ್ನು ಕರೆಯುತ್ತಾರೆ. ಇದೊಂದು ಸಾಮೂಹಿಕ ಆಟ. ಒಬ್ಬರು ಹಿಡಿಯುವರು; ಉಳಿದವರು ಅವಿತುಕೊಳ್ಳುವವರು; ಒಬ್ಬರು ಕಣ್ಣು ಮುಚ್ಚಲು ಬೇಕು. ಕಣ್ಣು ಮುಚ್ಚಿದವರು ಕಣ್ಣಾಮುಚ್ಚೆ ಕಾಡೆಗೂಡೆ, ಉದ್ದಿನಮೂಟೆ ಉರಳೆ ಹೊಯ್ತು, ನಮ್ಮ ಹಕ್ಕಿ ಬಿಟ್ಟೆನೋ ಬಿಟ್ಟೆ, ನಿಮ್ಮ ಹಕ್ಕಿ ಮುಚ್ಚಿಕೊಳ್ಳಿರೋ ಮುಚ್ಚಿಕೊಳ್ಳಿ ಎಂದು ಜೋರಾಗಿ ಹೇಳಿ ತನ್ನ ಹಕ್ಕಿಯನ್ನು ಬಿಡುತ್ತಾರೆ. ಈ ಹಕ್ಕಿ ಬಚ್ಚಿಟ್ಟುಕೊಂಡ ಹಕ್ಕಿಯನ್ನು ಹಿಡಿಯುವುದು ಆಟದ ಉದ್ದೇಶ.

**ಉಪ್ಪು ಮನೆ ಆಟ:** ಹೆಣ್ಣು ಮತ್ತು ಗಂಡು ಮಕ್ಕಳು ಸೇರಿ ಆಡುವ ಆಟ ಇಲ್ಲವೆ ಪ್ರತ್ಯೇಕವಾಗಿ ಉಪ್ಪು ಮನೆ ಆಟ ಆಡಬಹುದು. ಇಲ್ಲಿ ಶಾಲೆಯಲ್ಲಿ ಇಲ್ಲವೆ ಮನೆಯಲ್ಲಿ ಒಟ್ಟಾರೆ ಕಂಬಗಳು ಇರುವ ಸ್ಥಳದಲ್ಲಿ ಈ ಆಟವನ್ನು ಆಡುತ್ತಾರೆ. ಸುಮಾರು ೫–೧೦ ಮಕ್ಕಳು ಆಟದಲ್ಲಿ ಭಾಗವಹಿಸುತ್ತಾರೆ. ಮೊದಲು ಪಾರು ಚೊರು ಹಾಕುತ್ತಾರೆ ಅದರಲ್ಲಿ ಚೊರ್ ಆದವರನ್ನು ಬಿಟ್ಟು ಉಳಿದವರು ಒಬ್ಬೊಬ್ಬರು ಒಂದೊಂದು ಕಂಬಕ್ಕೆ ನಿಂತುಕೊಳ್ಳುತ್ತಾರೆ. ಚೊರ್ ಆದವರು ಒಂದೊಂದು ಕಂಬದ ಪಕ್ಕ ನಿಂತವರಿಗೆ ಹೋಗಿ ಹೀಗೆ ಹೇಳುತ್ತಾರೆ, ಉಪ್ಪವ್ವಾ ಉಪ್ಪು ಆಗ ಅವರು ಮನಿ ಕಪ್ಪು ಎಂದು ಮುಂದಿನ ಕಂಬಕ್ಕೆ ಕಳಿಸುತ್ತಾರೆ. ಚೋರ್ ಮುಂದಿನ ಮನೆ ಕಂಬಕ್ಕೆ ಹೋಗುತ್ತಾನೆ. ಉಳಿದ ಕಂಬಕ್ಕೆ ನಿಂತುಕೊಂಡು ಆಟಗಾರರು ಅದಲೂ ಬದಲು ಆಗುತ್ತಿರುತ್ತಾರೆ. ಆ ಹೊತ್ತಿನಲ್ಲಿ ಖಾಲಿ ಇರುವ ಕಂಬಕ್ಕೆ ಚೋರ್ ಆಕ್ರಮಿಸಿ ಕೊಂಡರೆ, ಆ ಕಂಬದ ಆಟಗಾರ ಔಟ ಆದಂತೆ. ಹೀಗೆಯೆ ಉಪ್ಪು ಮನೆ ಆಟ ಮುಂದುವರೆದು ಮಕ್ಕಳಿಗೆ ಸಾಕು ಎನಿಸುವ ತನಕ ಆಟ ಆಡಿ ಕೊನೆಗೊಳಿಸುತ್ತಾರೆ.

**ಹತ್ತಿ ಕಟಗಿ ಬಿತ್ತಿ ಕಟಗಿ ಆಟ:** ಈ ಆಟ ಒಳಾಂಗಣ ಆಟವಾಗಿದೆ. ಇದನ್ನು ಹುಡುಗ ಹುಡುಗಿಯರು ಕೂಡಿ ಆಡುತ್ತಾರೆ. ಎಲ್ಲರ ತಮ್ಮ ತಮ್ಮ ಅಂಗೈಗಳನ್ನು ಕೆಳ ಮುಖವಾಗಿಟ್ಟು

ಕೊಂಡಿರುತ್ತಾರೆ. ಅವರಲ್ಲಿ ಒಬ್ಬರು ಒಂದು ಕೈಯನ್ನು ಒಂದು ತೊರ ಬೇರಳಿನಿಂದ ಮುಟ್ಟುತ್ತಾ ಈ ಹಾಡನ್ನು ಹೇಳುತ್ತಾರೆ.

ಹತ್ತಿ ಕಟಗಿ ಬಿತ್ತಿ ಕಟಗಿ
ಬಾವನೂರು ಬಸಪ್ಪ ನೂರು
ಕೈ ಕೈ ಧೂಳ್ ಗೈ ಪಂಚಂ ಪಗಡಂ
ನೆಲ ಕಟ್ಟ ಹನುಮ ದಾಸರ ಬೀಮಾ
ಸೂಜಿ ಬೇಕ್ ದಾರ್ ಬೇಕ್...

ಎಂದು ಹೇಳಿ ಕೈಯನ್ನು ಚೂಟುತ್ತಾ ಸೂಜಿ ಬೇಕ ದಾರ ಬೇಕ ಎಂದು ಕೇಳುತ್ತಾರೆ. ಸೂಜಿ ಎಂದರೆ ಜೋರಾಗಿ ಚೂಟುತ್ತಾರೆ, ದಾರ ಎಂದಾಗ ಕೈಯನ್ನು ಭುಜದವರೆಗೂ ಎಳೆಯುತ್ತಾ ಜ್ಞೂ ಜ್ಞೂ.. ಎನ್ನುತ್ತಾರೆ. ಆವರು ಆ ಕೈಯನ್ನು ಹಿಂದೆ ಇಡುತ್ತಾರೆ ಹೀಗೆ ಒಂದೊಂದಾಗಿ ಎಲ್ಲರ ಕೈಗಳನ್ನು ಹಿಂದೆ ಹೋದಾಗ ಹೀಗೆ ಹೇಳುತ್ತಾರೆ.

ಕೈ ಕೈ ಎಲ್ಲಿ ಹೋದವು, ಕದ್ದ ಸಂದ್ಯಾಗ ಹೋದವು
ಕದ ಏನ್ ಕೊಡತು, ಕಟ್ಟಗಿ ಕೊಡತು
ಕಟ್ಟಿಗಿ ಏನ ಮಾಡಿದಿ, ಒಲಿಗೆ ಹಾಕಿದೆ
ಒಲೊ ಏನ ಕೊಟ್ಟತು, ಬೂದಿ ಕೊಟ್ಟತು
ಬೂದಿ ಏನ್ ಮಾಡಿದಿ, ಹೊಲಕ್ ಹಾಕಿದೆ
ಹೊಲಾ ಏನ್ ಕೊಟ್ಟತು, ಜೋಳಾ ಕೊಟ್ಟತು
ಜೋಳಾ ಏನ್ ಮಾಡಿದಿ
ಚೊಲೋ ಚೊಲೋ ನಾ ತಗೊಂಡು, ಉಳಿದವನ್ನು ಕುಂಬಾರ ಕೊಟ್ಟೆ
ಕುಂಬಾರ ಏನ್ ಕೊಟ್ಟಾ, ಗಡಗಿ ಕೊಟ್ಟಾ
ಗಡಗಿ ಏನ್ ಮಾಡಿದಿ
ನಾನು ನನ್ನ ತಂಗಿ ನೀರು ತರತಿದ್ವಿ ಗಡಗಿ ಒಡೆದು ಹೋತು
ಒಡೆದ ಗಡಗಿ ಏನ್ ಮಾಡಿದಿ, ಬಾವಿ ಕಟ್ಟಿಸಿದೆ
ಬಾವಿ ಏನ್ ಕೊಟ್ಟತು, ನೀರು ಕೊಟ್ಟತು
ನೀರು ಏನ್ ಮಾಡಿದಿ, ಗಿಡಕ್ಕೆ ಹಾಕಿದೆ
ಗಿಡಾ ಏನ್ ಕೊಟ್ಟತು, ಹೂವು ಕೊಟ್ಟತು
ಹೂವು ಏನ್ ಮಾಡಿದಿ, ದೇವರಿಗೆ ಕೊಟ್ಟೆ
ದೇವರೆನ್ ಕೊಟ್ಟಾ, ವಿದ್ಯಾ ಬುದ್ದಿ ಕೊಟ್ಟಾ. ಎಂದು ಹೇಳಿ ಆಟವನ್ನು ಮುಗಿಸುತ್ತಾರೆ.

ದೈನಂದಿನ ಜೀವನದಲ್ಲಿ ನಡೆಯುವ ಒಂದೊಂದು ಘಟನೆಗಳನ್ನು ಜನಪದರು ಆಟದಲ್ಲಿ ಬಳಸಿಕೊಂಡಿದ್ದಾರೆ. ಮುದಕಿ, ಅತ್ತೆ, ಗೌಡ ಇವರೆಲ್ಲ ಆಟಕ್ಕೆ ವಸ್ತುವಾಗಿದ್ದಾರೆ. ಸಾಮಾಜಿಕ ಕಟ್ಟಳೆ, ರೀತಿ ನೀತಿ ನಿಯಮಗಳಿಗೆ ಅನ್ವಯಿಸಿ, ಆಡಳಿತ, ಆರ್ಥಿಕ ರೀತಿ ನೀತಿಗೆ ಸಂಬಂಧಿಸಿದ ಆಟಗಳು ಹುಟ್ಟಿ ಕೊಂಡಿವೆ.  ಆದರೆ ಅವು ಪ್ರತ್ಯೇಕವಾಗಿ ಬಿಡಿಸಿ ಹೇಳಲಾಗದಷ್ಟು ಹಾಸು ಹೊಕ್ಕಾಗಿ ಆಟಗಳಲ್ಲಿ ಮೂಡಿಬಂದಿವೆ. ಕೆಲವೊಂದು ಘಟನಾವಳಿಗಳನ್ನು ಸಂದರ್ಭಕ್ಕೆ ತಕ್ಕಂತೆ ಪ್ರಾಸಗಳನ್ನು ಹೆಣೆದು ಆಟಗಳಲ್ಲಿ ನಿರೂಪಿಸಿರುವುದು ಕಂಡುಬರುತ್ತದೆ.

ಊರಿನಲ್ಲಿ ಜಗಲಿ ಕಟ್ಟೆಯ ಮೇಲೆ ಜನ ಬಿಡುವಿರುವ ಸಮಯದಲ್ಲಿ ಆಡುವ ಆಟ ಚಕ್ಕಾವಚ್ಚಿಯಾಗಿದೆ. ಪುರಾಣದ ಸಮುದ್ರ ಮಂಥನದ ನೆನಪನ್ನು ತರಿಸುವ ಆಟ ಹಗ್ಗಜಗ್ಗಾಟವಾಗಿದೆ. ಯುದ್ಧದಲ್ಲಿ ಶತ್ರುಗಳಿಂದ ತಪ್ಪಿಸಿಕೊಳ್ಳಲು ಡಬ್ಬಾಡುಬ್ಬಿ ಎಂಬ ಆಟ ಪುರಾತನ ಕಾಲದಲ್ಲಿಯೇ ಇತ್ತು ಎನ್ನುವ ಸುಳಿವು ಇದರಿಂದ ಕಂಡು ಬರುತ್ತದೆ. ಪ್ರಾಣಿಗಳ ರಕ್ಷಣೆ ಮಾಡುವುದು ಹುಲಿ ಕುರಿ ಆಟ ಆಡುವದರಿಂದ ಕಂಡು ಬರುತ್ತದೆ.

**ಚಕ್ಕಾವಚ್ಚಿ ಆಟಗಳು/ಚೌಕಾಬಾರ ಆಟಗಳು:** ಈ ಆಟದಲ್ಲಿ ಎರಡು ವಿಧಾನಗಳಿವೆ ೫x೫=೨೫ ಮನೆಗಳ ಚಕ್ಕದಾಟ ಹಾಗೂ ೭x೭=೪೯ ಮನೆಗಳ ಚಕ್ಕದಾಟ ಆಟಲಾಗುತ್ತದೆ. ಈ ಎರಡು ಆಟಗಳಲ್ಲಿ ಎರಡರಿಂದ ನಾಲ್ಕು ಜನ ಆಟಗಾರರಿರುತ್ತಾರೆ. ಆಟವಾಡುವ ಸ್ಥಳ ನೆಲ ಅಥವಾ ಕಲ್ಲಿನ ಮೇಲೆ ಚಕ್ಕಾಆಟದ ನಕ್ಷೆಯನ್ನು ಬಿಡಿಸುತ್ತಾರೆ. ೪/೬/೮ ಅಥವಾ ೧೨ ಹಣಸೆ ಬೀಜಗಳನ್ನು ತೆಗೆದು ಕೊಳ್ಳಲಾಗುತ್ತದೆ. ಹುಣಸೆ ಬೀಜಗಳನ್ನು ಒಂದುಕಡೆ ಕಪ್ಪು ಮತ್ತೊಂದು ಕಡೆ ಬಿಳಿಯಾಗಿ ಕಾಣಲು ಉಜ್ಜುತ್ತಾರೆ/ತಿಕ್ಕುತ್ತಾರೆ, ಇಲ್ಲವೆ ಹುಣಸೆ ಬೀಜವನ್ನು ಒಡೆದು ಎರಡು ಹೋಳು ಮಾಡುತ್ತಾರೆ. ಹುಣಸೆ ಬೀಜದ ಬದಲಾಗಿ ಕವಡೆ, ಶೆಂಗಾ ಸಿಪ್ಪೆಯನ್ನು ಸಹ ಬಳಸಲಾಗುತ್ತದೆ.

ಇನ್ನು ಆಡುವ ವಿಧಾನ; ಎರಡು ಜನರಿಂದ ನಾಲ್ಕು ಜನರು ನಾಲ್ಕು ನಾಲ್ಕು ಕಾಯಿ ಗಳನ್ನು ತಮ್ಮ ತಮ್ಮ ಹತ್ತಿರವಿರುವ ಕಟ್ಟೆಯಲ್ಲಿಟ್ಟು ಆಟವನ್ನು ಪ್ರಾರಂಭಿಸುತ್ತಾರೆ. ೪/೬/೮/೧೨/ ಚಕ್ಕಾಗಳನ್ನು ಕಲುಕಿ ಕೆಳಗೆ ಹಾಕುತ್ತಾರೆ. ಬಿಳಿಯಾಗಿ ಅಂದರೆ ಮೇಲ್ ಮುಖವಾಗಿ ಬಿದ್ದಿರುವ ಬೀಜವನ್ನು ಲೆಕ್ಕಕ್ಕೆ ಹಿಡಿಯುತ್ತಾರೆ. ಹಾಗೆ ಕಾಯಿಗಳನ್ನು ಮುಂದುವರಿಸುತ್ತಾರೆ. ಅಲ್ಲಲ್ಲಿ ಕತ್ತರಿ ಗೆರೆ ಇರುವ ಮನೆ ಕಟ್ಟೆ ಮನೆಯಾಗಿರುತ್ತವೆ. ಅಲ್ಲಿ ಯಾವ ಕಾಯಿಗಳನ್ನು ಕಡೆಯಲಾಗುವುದಿಲ್ಲ ಉಳಿದ ಮನೆಯಲ್ಲಿ ಕಡೆಯಬಹುದು, ಅವರು ಆ ಕಾಯಿಯನ್ನು ಮತ್ತೆ ಬಿಡುತ್ತಾರೆ. ಆರು ಬೀಜಗಳ ಚಕ್ಕವನ್ನು ಕುಲುಕಿ ಹಾಕಿದಾಗ ನಾಲ್ಕು ಚಕ್ಕ ಮೇಲಮುಖವಾಗಿ ಬಿದ್ದರೆ ಚಕ್ಕ ಎಂದು, ಆರಕ್ಕೆ ಆರು ಮೇಲ ಮುಖವಾಗಿ ಬಿದ್ದರೆ ಆರು ಎಂದ ಹಾಗೆ, ಆರು ಚಕ್ಕಾ ಕೆಳಮುಖವಾಗಿ ಬಿದ್ದರೆ ಹನ್ನೆರಡು ಎಂದು ಹೇಳುತ್ತಾರೆ. ಸಮ ಬಿದ್ದರೆ ಮತ್ತೊಮ್ಮೆ ಅಡಲು

ಅವಕಾಶ ಇರುತ್ತದೆ. ಬೆಸ ಸಂಖ್ಯೆ ಬಿದ್ದರೆ ಮತ್ತೊಬ್ಬರಿಗೆ ಆಟ ಪಾಸ್ ಆಗುತ್ತದೆ. ಹೇಗೆ ಕಟ್ಟೆಗಳಿಂದ ಒಳಗೆ ಹೋಗುವಾಗ ಒಂದು ಒಳಗಿನ ಕಟ್ಟೆಯಲ್ಲಿ ಜಂಗ್/ಸ್ಪಾಕ್ ಮಾಡಬೇಕಾಗುತ್ತದೆ. ಅಲ್ಲಿಂದ ಎರಡು ಜೋಡಿಕಾಯಿಗಳ ಮೂಲಕ ಆಟ ಮುಂದುವರೆಯುತ್ತದೆ. ಯಾರು ಮೊದಲು ಕಾಯಿಗಳನ್ನು ಹಣ್ಣು ಮಾಡುತ್ತಾರೆಯೋ ಅವರು ವಿಜೇತರಾದಂತೆ.

### ೩.೭. ವ್ಯಾಪಾರ

ಕೃಷಿಕರು, ಕೂಲಿ ಕಾರ್ಮಿಕರು, ಇದ್ದಾರೆ. ಇವರಲ್ಲಿ ಸರ್ಕಾರದಿಂದ ನೆರವು ಪಡೆದು ಸಾಂಪ್ರದಾಯಿಕ ಕಸುಬುಗಳ ಫಲಾನುಭವಿಗಳಿದ್ದಾರೆ. ಆಧುನಿಕ ಉದ್ಯೋಗದಲ್ಲಿ ಹಿಟ್ಟಿನ ಗಿರಣಿಗಳು, ಬೀಡಿ ಉದ್ಯಮ, ಅಗರಬತ್ತಿ ತಯಾರಿಕೆ, ಕರಕುಶಲ, ಮರಕೆತ್ತನೆ, ಸಾಂಪ್ರದಾಯಿಕ ಹೈನುಗಾರಿಕೆ ಇದೆ. ಶಿಕ್ಷಕರು, ವಕೀಲರು, ವೈದ್ಯರು, ಇಂಜಿನಿಯರ್, ಸೇವಾನಿರತ ಸೈನಿಕರು, ಮಾಜಿ ಸೈನಿಕರು ಇದ್ದಾರೆ. ಆಧುನಿಕ ವಾಹನಗಳಾದ ದ್ವಿಚಕ್ರವಾಹನಗಳು ಕಾರು, ಲಾರಿ, ಆಟೋ, ಮಿನಿಬಸ್ಸು, ಟ್ಯಾಕ್ಟರಗಳ ಮೂಲಕ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಾಮಾನು ಸರಂಜಾಮುಗಳನ್ನು ಸಾಗಿಸಲಾಗುತ್ತದೆ.

### ೩.೮. ಸಾರಿಗೆ ವ್ಯವಸ್ಥೆ

ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ವಸ್ತುಗಳನ್ನು ಕೊಂಡೊಯ್ಯಲು ಪ್ರಾಚೀನ ಕಾಲದಲ್ಲಿ ಕುದುರೆಗಾಡಿ, ಎತ್ತಿನಗಾಡಿ ಬಳಸುತ್ತಿದ್ದರು, ಇಂದಿನ ಯಾಂತ್ರಿಕ ಯುಗದಲ್ಲಿ ವಿವಿಧ ವಾಹನಗಳನ್ನು ಬಳಸಿಕೊಂಡಿದ್ದಾನೆ. ಬಂಕಾಪುರ ಪಕ್ಕದಲ್ಲಿ ರಾಷ್ಟ್ರೀಯ ಹೆದ್ದಾರಿ ೪ ಹಾದು ಹೋಗಿರುವದರಿಂದ ಎಲ್ಲಾ ಪ್ರದೇಶಗಳೊಂದಿಗೆ ಸಂಪರ್ಕ ಸುಲಭ ಸಾದ್ಯವಾಗಿದೆ. ಗದಗನಿಂದ ಬೆಂಗಳೂರಿಗೆ ಸಂಚರಿಸುವ ಎಲ್ಲಾ ವಾಹನಗಳು ಬಂಕಾಪುರದ ಮೇಲೆ ಸಂಚರಿಸುತ್ತವೆ. ಹಾಗೂ ಹುಬ್ಬಳ್ಳಿಯಿಂದ ಹಾನಗಲ್‌ಗೆ ಹೋಗುವ ವಾಹನಗಳು ಬಂಕಾಪುರದಲ್ಲಿ ಹಾದು ಹೋಗುವದರಿಂದ, ಇಲ್ಲಿನ ಜನರು ಬೇರೆ ಬೇರೆ ಪ್ರದೇಶಗಳಿಗೆ ಕೆಲಸಕ್ಕೆ ತೆರಳಲು ಅನುಕೂಲವಿದೆ. ಆಧುನಿಕ ವಾಹಗಳಾದ ದ್ವಿಚಕ್ರವಾಹನಗಳು, ಕಾರು,ಲಾರಿ,ಆಟೋ, ಮಿನಿಬಸ್ಸು, ಟ್ಯಾಕ್ಟರಗಳಿವೆ, ಸಾಂಪ್ರದಾಯಿಕ ಎತ್ತಿನಗಾಡಿಗಳು ಇವೆ. ಬಂಕಾಪುರ ಐತಿಹಾಸಿಕ ನಗರವಾಗಿರುವದರಿಂದ ಕೋಟೆ ಹಾಗೂ ಹಲವಾರು ಪ್ರಸಿದ್ಧ ದೇವಸ್ಥಾನಗಳಿರುವುದರಿಂದ ಉದಾ: ಕೋಟೆ ಯಲ್ಲಮ್ಮನ ದೇವಸ್ಥಾನ ಹಾಗೂ ಪೇಟೆ ಯಲ್ಲಮ್ಮನ ದೇವಸ್ಥಾನ ಹಾಗೂ ದುರ್ಗಾದೇವಿ ದೇವಸ್ಥಾನ, ಪ್ರಸಿದ್ಧ ನಗರೇಶ್ವರ ದೇವಸ್ಥಾನ, ಬಾಡದ ಕನಕದಾಸರ ಅರಮನೆ ನೋಡಲು ದೂರದೂರದ ಪ್ರದೇಶಗಳಿಂದ ಜನರು ಬರುತ್ತಾರೆ. ಅಮವಾಸ್ಯ ಹುಣ್ಣಿಮೆಯ ದಿನ ತಮಗೆ ಇಷ್ಟವಾದ ದೇವರ ಆರಾಧನೆಯನ್ನು ಭಾವೈಕ್ಯತೆಯಿಂದ ಪೂಜೆ ಮಾಡುತ್ತಾರೆ. ಅಲ್ಲದೆ ಅನೇಕರು ಹರಕೆ ಹೊತ್ತುಕೊಂಡು ಹೋಗುತ್ತಾರೆ. ಪೇಟೆ ಯಲ್ಲಮ್ಮ ಹಾಗೂ ಕೋಟೆ ಯಲ್ಲಮ್ಮನ ದೇವಸ್ಥಾನಗಳಿಗೆ

ಬಂದ ಭಕ್ತಾದಿಗಳಿಗೆ ಉಳಿದುಕೊಳ್ಳಲು ಕೊಠಡಿಗಳ ವ್ಯವಸ್ಥೆ ಇದೆ. ಹೀಗಾಗಿ ಬೇರೆ ಬೇರೆ ಪ್ರದೇಶಗಳಿಂದ ಬಂದ ಜನರಿಗೆ ಸಹಾಯವಾಗಿದೆ.

### ೩.೯. ಸಂಘ-ಸಂಸ್ಥೆಗಳು

ಬಂಕಾಪುರ ಧಾರವಾಡ ಲೋಕಸಭಾ ಕ್ಷೇತ್ರ, ಹಾವೇರಿ ಜಿಲ್ಲಾ ಪಂಚಾಯತಿ, ಶಿಗ್ಗಾವಿ ತಾಲ್ಲೂಕು ಪಂಚಾಯತಿಯ ವ್ಯಾಪ್ತಿಯಲ್ಲಿದ್ದು. ಉಪತಹಶಿಲ್ದಾರ ಕಛೇರಿ, ಬಂಕಾಪುರ ನಾಡ ಕಛೇರಿ, ಬಂಕಾಪುರ ಪೋಲಿಸ ಠಾಣೆ ಹೊಂದಿದ್ದು. ಹುಬ್ಬಳ್ಳಿ ವಿದ್ಯುತ್ ನಿಗಮ ಮಂಡಳಿ ವ್ಯಾಪ್ತಿಗೆ ಬರುತ್ತದೆ. ಕೊಳವೆ ಬಾವಿಗಳ ಮೂಲಕ ಕಿರು ಜಲಸಂಗ್ರಹಗಾರ ಹಾಗೂ ಮೇಲ್ಮಟ್ಟದ ಜಲಸಂಗ್ರಹಗಾರಕ್ಕೆ ನೀರನ್ನು ಪೂರೈಸಿ, ನಳಗಳ ಮೂಲಕ ಕುಡಿಯುವ ನೀರನ್ನು ಒದಗಿಸಲಾಗುತ್ತದೆ. ಕಚ್ಚಾ ಹಾಗೂ ಡಾಂಬರ್ ರಸ್ತೆಗಳು ಇವೆ. ಕಾಂಕ್ರಿಟ್ ಚರಂಡಿಗಳು ಇವೆ. ರೈತ ಸಂಪರ್ಕ ಕೇಂದ್ರ ಇದೆ.

ಕೆನರಾ ಬ್ಯಾಂಕ, ಕರ್ನಾಟಕ ವಿಕಾಸ ಗ್ರಾಮೀಣ ಬ್ಯಾಂಕ, ಅರ್ಬನ್ ಕೋ ಅಪರೇಟಿವ ಬ್ಯಾಂಕ್, ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ, ಅಂಜುಮನ್ ಇಸ್ಲಾಂ ಸೊಸೈಟಿ, ಹಾಲು ಉತ್ಪಾದಕರ ಸಹಕಾರ ಸಂಘ, ಸ್ತ್ರೀ ಶಕ್ತಿ ಸಂಘಗಳು ಶ್ರೀ ಧರ್ಮಸ್ಥಳ ಗ್ರಾಮೀಣ ಉದ್ಯೋಗ ಸಂಸ್ಥೆಗಳು ಇವೆ. ಮಂಗಳವಾರದಂದು ಗ್ರಾಮದಲ್ಲಿ ಸಂತೆ ನಡೆಯುತ್ತದೆ.

**ಅಡಿಟಿಪ್ಪಣಿ**

೧. ರಮೇಶ ಸ.ಚಿ., ಕರ್ನಾಟಕ ಜನಪದ ಆಚರಣೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೨. ಹನುಮನಗೌಡ ಸಿ., ಕುಷ್ಟಗಿ ತಾಲೂಕು ದರ್ಶನ, ಕಾಂತಳ ಪ್ರಕಾಶನ ಕೊರಡಕೇರೆ, ಪುಟ ೯

೩. ಚಕ್ಕರೆ ಶಿವಶಂಕರ, ಜನಪದ ತಿಳುವಳಿಕೆ, ಸಾಗರ ಪ್ರಕಾಶನ ಬೆಂಗಳೂರು, ೨೦೦೮, ಪುಟ ೧೯೦-೧೯೨

೪. ನೇತ್ರಾವತಿ ಕೆ.ವಿ., ಕಮಲಾಪೂರದ ಕೊರವರ ಸಮುದಾಯ, ಪಿ.ಎಚ್ ಡಿ ಮಹಾಪ್ರಭಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೩, ಪುಟ ೯

## ಅಧ್ಯಾಯ : ನಾಲ್ಕು

# ಬಂಕಾಪುರ ಗ್ರಾಮದ ಆಚರಣೆಗಳು

೪.೧. ಜೀವನಾವರ್ತನ ಆಚರಣೆಗಳು

೪.೨. ವಾರ್ಷಿಕಾವರ್ತನ ಆಚರಣೆಗಳು

೪.೩. ನಂಬಿಕೆ ಮತ್ತು ವಿಧಿ–ನಿಷೇಧಗಳು

# ಅಧ್ಯಾಯ : ನಾಲ್ಕು

## ಬಂಕಾಪುರ ಗ್ರಾಮದ ಆಚರಣೆಗಳು

ಆಚರಣೆಗಳು ಮತ್ತು ಸಂಪ್ರದಾಯಗಳು ಸಮಾಜವನ್ನು ಒಂದುಗೂಡಿಸುವ ಶಕ್ತಿಯನ್ನು ನೀಡುತ್ತವೆ. ಸಂಸ್ಕೃತಿಯನ್ನು ಪೋಷಿಸಿ ನಾಗರಿಕತೆಯನ್ನು ಬೆಳೆಸುವಲ್ಲಿ ಮಹತ್ವದ ಪಾತ್ರವಹಿಸುತ್ತವೆ. ಇವು ವ್ಯಕ್ತಿಯ ಬಾಳಿನ ಅವಿಭಾಜ್ಯ ಸಂಗತಿಗಳಾಗಿ ಅವನ ಆಚರಣೆಯ ಬೆನ್ನೆಲುಬು ನಂಬಿಕೆಯ ಸಿದ್ಧಾಂತ ಆಚರಣೆಯನ್ನು ಮುಂದುವರೆಸಿಕೊಂಡು ಹೋಗುವಂತೆ ಮಾಡುತ್ತದೆ."ಜನಪದ ಸಂಸ್ಕೃತಿಗೆ ಆಚರಣೆಯೆ ಬೆನ್ನೆಲುಬು. ಆಚರಣೆಯಿಲ್ಲದೆ ಯಾವ ದೈವದ ಅಸ್ತಿತ್ವವೂ ಇಲ್ಲಿ ಸಾಧ್ಯವಿಲ್ಲ. ಜನಪದ ಧರ್ಮ ಒಂದು ಬಗೆಯಲ್ಲಿ ಆಚರಣೆಯ ಧರ್ಮ ಎನ್ನಬಹುದು. ಆ ಆಚರಣೆ ನಿರ್ದಿಷ್ಟ ಕಾಲದಲ್ಲಿ ನಿರ್ಧಿಷ್ಟ ವ್ಯಕ್ತಿಯಿಂದಲೇ ಆಗಬೇಕಾದುದು. ದೇವತೆಗೂ ಸಮಾಜಕ್ಕೂ ಇರುವ ಸಂಬಂಧ ಅಭಿನಯಗೊಳ್ಳುವ ಕ್ರಮದ ವಿವರಗಳೇ ಆಚರಣೆಗಳು"[1]. ಹೀಗೆ ಆಚರಣೆಗಳು ಮಾನವ ಮತ್ತು ದೇವತೆಗಳ ನಡುವೆ ನಡೆಯುವ ಕೊಡು ಕೊಳ್ಳುವಿಕೆಗಳೇ ಆಗಿವೆ. "ಮತಧರ್ಮಗಳಿಗೆ ಸಂಬಂಧಿಸಿದಂತೆ ಅಗೋಚರ ದೈವಶಕ್ತಿಗಳ ಪ್ರೀತ್ಯಾರ್ಥವಾಗಿ ಮಾನವ ನಡೆಸುತ್ತಾ ಬಂದಿರುವ ಮತಾಚಾರಗಳಿಗೆ ಕರ್ಮವಿಧಿಗಳಿಗೆ ಈ ಹೆಸರಿದೆ"[2] ಹೀಗೆ ವಿವಿಧ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಜೀವನಾವರ್ತನವು ಮನುಷ್ಯನ ಹುಟ್ಟಿನಿಂದ ತೊಡಗಿ ಸಾವಿನಲ್ಲಿ ಕೂಡಿಕೊಳ್ಳುತ್ತವೆ. ಇವುಗಳ ನಡುವೆ ಅನೇಕ ಸ್ಥಿತ್ಯಂತರದ ಹಂತಗಳಿರುತ್ತವೆ. ಇಂತಹ ಸಂದರ್ಭದಲ್ಲಿ ನಡೆಸುವ ಆಚರಣೆಗಳು ಸ್ಥಿತ್ಯಂತರದ ವಿಧಗಳು ಅಥವಾ ಪರಿವರ್ತನೆಯ ವಿಧಿಗಳೆಂದು ಕರೆಯಬಹುದು. ಇಂತಹ ವಿಧಿ ಆಚರಣೆಗಳು ಕಾಲದಿಂದ ಕಾಲಕ್ಕೆ ದೇಶದಿಂದ ದೇಶಕ್ಕೆ ವ್ಯತ್ಯಾಸವಾಗುತ್ತಾ ಹೋಗುತ್ತವೆ.

ಮನುಷ್ಯನ ಹುಟ್ಟು ಸಾವುಗಳ ನಡುವೆ ನಡೆಯುವ ಅನೇಕ ಚಟುವಟಿಕೆಗಳಿಗೆ ಧಾರ್ಮಿಕತೆಯೇ ಮೂಲ ಪ್ರೇರಕ ಶಕ್ತಿಯಾಗಿರುತ್ತದೆ. ಧಾರ್ಮಿಕತೆ ಇಲ್ಲದೆ ಯಾವ ಕಾರ್ಯಗಳು ನಡೆಯುವದಿಲ್ಲ. ಪ್ರತಿ ಸಾಂದರ್ಭಿಕ ಪರಿಸ್ಥಿತಿಯಲ್ಲಿ ಅವನು ಆಚರಿಸುವ ಆಚರಣೆಗಳು ಎಂದು ಕರೆಯಬಹುದು. ಅಂತವುಗಳಲ್ಲಿ ವೈಯಕ್ತಿಕವಾಗಿ. ಕೌಟುಂಬಿಕವಾಗಿ ಇಲ್ಲವೆ ಸಾಮೂಹಿಕವಾಗಿ

ಆಚರಣೆಗಳ ಒಳಪಡುತ್ತದೆ. ಗ್ರಾಮ ದೈವಗಳು ಅವರ ಆಚರಣೆಯ ಕೇಂದ್ರತ್ವ ಪಡೆದುಕೊಂಡಿರುವುದು ಸಾಮಾನ್ಯ.

ಬಂಕಾಪುರದ ಜನರು ಮಂಗಳಕಾರ್ಯ ನಡೆದರೆ ಮೊದಲಿಗೆ ತಮ್ಮ ಮನೆದೇವರಿಗೆ ಮೊರೆ ಹೋಗುವುದು ಸಾಮಾನ್ಯ ಸಂಗತಿಯಾಗಿದೆ. ತಮ್ಮ ಮನೆಯಲ್ಲಿ ನಡೆಯುವ ಶುಭ ಕಾರ್ಯಗಳಲ್ಲಿ ತಮ್ಮ ಮನೆ ದೇವರಿಗೆ ಮೊದಲ ಆದ್ಯತೆಯಾಗಿರುತ್ತದೆ. ನಂತರ ತನ್ನ ಊರಿನ ದೇವರುಗಳಿಗೆ ಹೊತ್ತ ಹರಕೆಯನ್ನು ತೀರಿಸುತ್ತಾರೆ. ಜನನ, ನಾಮಕರಣ, ಜವುಳ, ಹಬ್ಬ ಹರಿದಿನಗಳಲ್ಲಿ ಹರಕೆ ತೀರಿಸುವುದನ್ನು ಕಾಣಬಹುದು

ಬಂಕಾಪುರ ಗ್ರಾಮದಲ್ಲಿ ವಿವಿಧ ಸಮುದಾಯದ ಜನರು ವಾಸಿಸುತ್ತಾರೆ. ಅದರಲ್ಲಿ ಬಹುಸಂಖ್ಯಾತರಾಗಿ ಲಿಂಗಾಯತರು, ಕುರುಬರು, ಮುಸ್ಲಿಂ, ಅಷ್ಟೇ ಅಲ್ಲದೆ ಹಲವು ಅಲ್ಪಸಂಖ್ಯಾತ ಸಮುದಾಯಗಳಿವೆ. ಅವರು ತಮ್ಮ ತಮ್ಮ ಆಚರಣೆಗಳನ್ನು ಮಾಡಿಕೊಂಡರು, ಹೆಚ್ಚು ಲಿಂಗಾಯತ, ಮುಸ್ಲಿಂ ಸಮುದಾಯದ ಆಚರಣೆಗಳೇ ಕಂಡುಬರುತ್ತವೆ. ಹೀಗಾಗಿ ವಿವಿಧ ಸಮುದಾಯದ ಆಚರಣೆಗಳಲ್ಲಿ ಕಂಡುಬರುವ ವಿಭಿನ್ನತೆಯನ್ನು ಮಾತ್ರ ಇಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

ವ್ಯಕ್ತಿಯ ಹುಟ್ಟಿನಿಂದ ಸಾವಿನವರೆಗೆ ನಡೆಯುವ ಆಚರಣೆಗಳು ವೈವಿಧ್ಯಮಯದಿಂದಲೇ ಕೂಡಿರುತ್ತವೆ. ಒಂದು ಸಮುದಾಯದ ಜನ ಆಚರಿಸುವ ಆಚರಣೆಗಳು ಒಂದೇ ತೆರನಾಗಿರುತ್ತವೆ. ಕೆಲವು ವೇಳೆ ತಮ್ಮ ಸುತ್ತಮುತ್ತಲಿನ ಬಹುಸಂಖ್ಯಾತ ಸಮುದಾಯದ ಪ್ರಭಾವ ಪಡೆದು ಅಲ್ಪ ಸ್ವಲ್ಪ ವ್ಯತ್ಯಾಸವಾದರು ಅವುಗಳು ತಮ್ಮ ಮೂಲವನ್ನು ಹಾಗೆ ಉಳಿಸಿಕೊಂಡಿವೆ. ಪ್ರತಿ ಸಾಂದರ್ಭಿಕ ಪರಿಸ್ಥಿಯಲ್ಲಿಯು ವ್ಯಕ್ತಿಯ ಆಚರಿಸುವ ಆಚರಣೆಗಳಿಗೆ ಜೀವನಾವರ್ತನ ಆಚರಣೆ ಎಂದು ಕರೆಯುತ್ತಾರೆ. ಇಲ್ಲಿ ಗ್ರಾಮದ ದೈವದ ಆಚರಣೆಗಳು ಕೇಂದ್ರ ಬಿಂದುವಾಗಿರುವುದು ಸಾಮಾನ್ಯ.

ಆಚರಣೆಗಳು ಆಧುನಿಕತೆಯನ್ನು ತನ್ನೊಳಗೆ ಅವಿರ್ಭವಿಸಿಕೊಂಡು ಮಾರ್ಗಗಳು ಬದಲಾದರೂ ಉದ್ದೇಶ ಒಂದೇ ಆಗಿದ್ದು ಬದಲಾವಣೆಗೆ ಒಳಪಟ್ಟಿರುತ್ತವೆ. "ಎಲ್ಲಾ ಧರ್ಮ ಹಾಗೂ ಪಂಥಗಳಲ್ಲೂ ತತ್ವ ಹಾಗೂ ಆಚರಣೆಗಳ ಬಿರುಕು ಇದ್ದೇ ಇರುತ್ತದೆ. ಇದಕ್ಕೆ ಕಾರಣ ಮೂಲದರ್ಶನಕ್ಕೆ ಬೇರೆ ಬೇರೆ ಕಾಲಘಟ್ಟಗಳಲ್ಲಿ ಉಂಟಾಗುವ ಸೇರ್ಪಡೆಗಳು. ಹೊಸ ಚಾರಿತ್ರಿಕ ಸನ್ನಿವೇಶಗಳು ಮೂಲದರ್ಶನವನ್ನು ವರ್ತಮಾನದ ಅಗತ್ಯಕ್ಕೆ ತಕ್ಕಂತೆ ಬದಲಾಯಿಸಿಕೊಳ್ಳಲು ಒತ್ತಡ ಹಾಕುತ್ತವೆ. ಹೀಗೆ ಸೇರಿಸುವಿಕೆ ಬದಲಿಸುವಿಕೆಗಳು ನಿರಂತರ ನಡೆಯುತ್ತಾ ಪಂಥವೊಂದರ ದರ್ಶನವು ಪರಿವರ್ತನೆ ಪಡೆಯುತ್ತಾ ಹೋಗುತ್ತದೆ"[೩] ಹೀಗೆ ಪರಿವರ್ತನೆಗೊಂಡರು ಇಂದಿನ ಅತ್ಯಾಧುನಿಕವಾದ ವೈಜ್ಞಾನಿಕ ಯುಗದಲ್ಲೂ ಮನುಷ್ಯನ ಮನವನ್ನಾಧರಿಸಿದ ಅಂಧಶ್ರದ್ದೆ, ಅರ್ಥಹೀನ ಸಂಪ್ರದಾಯ, ಮೂಢನಂಬಿಕೆಗಳು ಧರ್ಮದ ಹೆಸರಿನಲ್ಲಿ ನಡೆಯುವ ಮಡೆ ಸ್ನಾನದಂತಹ

ಆಚರಣೆಗಳು ಇನ್ನೂ ಮರೆಯಾಗಿಲ್ಲ. ಇಂಥವುಗಳಿಂದ ವೈಜ್ಞಾನಿಕವಾಗಿ ಯಾವುದೇ ರೀತಿಯ ಉಪಯೋಗವಾಗುವುದಿಲ್ಲ. ಇವು ಸಾಮಾನ್ಯಜನರಲ್ಲಿ ಆಳವಾಗಿ ಬೇರುಬಿಟ್ಟಿವೆ. ಅವುಗಳು ಧಾರ್ಮಿಕ ಭಾವನೆಗಳನ್ನು ಉದ್ದೇಶಿಸಿ, ಭಕ್ತಿ ಭಾವನೆಯನ್ನು ಪೋಷಿಸುತ್ತಾ ಬಂದಿವೆ. ಭಾವನಾತ್ಮಕ ಸಂಬಂಧವನ್ನು ಗಟ್ಟಿಗೊಳಿಸುತ್ತಾ ಕೇಂದ್ರಿತ ನೆಲೆಗಳಲ್ಲಿ ಮನುಷ್ಯನನ್ನು ಕಟ್ಟಿಹಾಕುತ್ತವೆ. ಸಂಪ್ರದಾಯಬದ್ಧವಾದ ಜಾತಿ ಶೋಷಣೆ, ದೇವಾಲಯಗಳ ಪ್ರವೇಶ ನಿರಾಕರಣೆ ಹಾಗೂ ಸಾಮಾಜಿಕ ಅಸ್ತಿತ್ವದ ಅಲುಗಾಡುವಿಕೆಗೆ ನಾಂದಿಯಾಗಿ ಬಿಡುತ್ತವೆ. "ವ್ಯಕ್ತಿ ಮತ್ತು ಸಮಾಜಕ್ಕೂ ಇರುವ ಸಂಬಂಧಗಳೇ ಆಚರಣೆಗಳು ಎಂದು ಕರೆಯಬಹುದಾಗಿದೆ."[೪]

"ಭಾರತದ ಸಂಸ್ಕೃತಿಯಲ್ಲಿ ಆಚರಣೆ ಮತ್ತು ಸಂಪ್ರದಾಯಗಳು ಸಮಾಜವನ್ನು ಒಂದು ಗೂಡಿಸುವ ಶಕ್ತಿಯನ್ನು ನೀಡುತ್ತವೆ. ಸಂಸ್ಕೃತಿಯನ್ನು ಪೋಷಿಸಿ ನಾಗರೀಕತೆಯನ್ನು ಬಳಸುವಲ್ಲಿ ಮಹತ್ವದ ಪಾತ್ರ ವಹಿಸಿದೆ. ಇವು ವ್ಯಕ್ತಿಯ ಬಾಳಿನ ಅವಿಭಾಜ್ಯ ಸಂಗತಿಗಳಾಗಿ ಅವನ ಬೆನ್ನೆಲುಬಾಗಿವೆ. ನಂಬಿಕೆಯ ಸಿದ್ಧಾಂತ ಆಚರಣೆಯನ್ನು ಮುಂದುವರಿಸಿಕೊಂಡು ಹೋಗುವಂತೆ ಮಾಡುತ್ತದೆ. ಹೀಗೆ ವಿವಿಧ ಸಮುದಾಯಗಳಲ್ಲಿ ಗ್ರಾಮದೇವತೆಗಳ ಜಾತ್ರೆಗಳು ಆಚರಣೆಯ ರೂಪದಲ್ಲಿ ನಡೆಯುತ್ತವೆ. ಆಚರಣೆ ಎಲ್ಲರಿಗೂ ಕಡ್ಡಾಯವಾದರೆ, ಹರಕೆಯನ್ನು ಹರಸಿಕೊಂಡವರು ಮಾತ್ರ ನೆರವೇರಿಸುತ್ತಾರೆ. ಅಚರಣೆ ಸಾಮೂಹಿಕವಾದರೆ ಹರಕೆ ವೈಯಕ್ತಿಕವಾದದ್ದಾಗಿದೆ. ಕೊಂಡಹಾಯುವುದು, ಸಿಡಿಯಾಡುವುದು, ಕೊಂಡಕ್ಕೆ ಔಡಲ ಹಳ್ಳು ಹಾಕುವುದು, ಈಡುಗಾಯಿ ಒಡೆಯುವುದು ಇವೆಲ್ಲಾ ಹರಕೆರೂಪದ ಆಚರಣೆಗಳು ಇಂತಹ ಆಚರಣೆಗಳು. ಐತಿಹಾಸಿಕ ಅಂಶಗಳನ್ನು ಅಭಿನಯಿಸಿ ತೋರಿಸುತ್ತವೆ. ಕೆಲವು ಮಾರ್ಗಗಳು ಬದಲಾದರೂ, ಉದ್ದೇಶ ಒಂದೇ. ತತ್ವಗಳಲ್ಲಿ ಆಚರಣೆಗಳ ಬಿರುಕುಗಳು ಇದ್ದೇ ಇರುತ್ತವೆ. ಇದಕ್ಕೆ ಕಾರಣ ಬೇರೆ ಬೇರೆ ಕಾಲಘಟ್ಟಗಳಲ್ಲಿ ಉಂಟಾಗುವ ಸೇರ್ಪಡೆಗಳ ಹೊಸ ಚಾರಿತ್ರಿಕ ಸನ್ನಿವೇಶಗಳು ಮೂಲದರ್ಶನಕ್ಕೆ ಬದಲಾಯಿಸಿಕೊಳ್ಳಲು ಒತ್ತಡ ನೀಡುತ್ತವೆ."[೫]

ಅಚರಣೆಯಲ್ಲಿ ವೈಯಕ್ತಿಕ ಆಚರಣೆಗಳು, ಕೌಟುಂಬಿಕ ಆಚರಣೆಗಳು, ಸಾಮೂಹಿಕ ಆಚರಣೆಗಳು, ಸಾಮಾಜಿಕ ಆಚರಣೆಗಳು, ವ್ಯವಸಾಯಾತ್ಮಕ ಆಚರಣೆಗಳು, ಧಾರ್ಮಿಕ ಆಚರಣೆಗಳು ಹೀಗೆ ವಿವಿಧ ಆಚರಣಾ ಪದ್ಧತಿಗಳು ಇಂಡಿಯಾದ ಸಂಸ್ಕೃತಿಯೊಳಗೆ ಸೇರಿಕೊಂಡಿವೆ. ವೈಯಕ್ತಿಕ ಕಾರಣದಿಂದ ಅಂದರೆ ವ್ಯಕ್ತಿಗತ ನಂಬಿಕೆಯಿಂದ ನಡೆಯುವ ಆಚರಣೆಗಳು ಮುಡಿಕೊಡುವುದು, ಕೊಂಡಹಾಯುವುದು ಇತ್ಯಾದಿಗಳು, ಕುಟುಂಬದ ಸಮುದಾಯದ ಯೋಗಕ್ಷೇಮಕ್ಕಾಗಿ ಮಾಡುವುದು ಸಾಮೂಹಿಕ ಆಚರಣೆಗಳು. ಪರವು ಮಾಡುವುದು, ಜಾತ್ರೆ, ಹಬ್ಬಗಳು ಇತ್ಯಾದಿಗಳು. ಜನರು ನಂಬಿಕೆಯ ಆಧಾರದ ಮೇಲೆ ಹರಕೆಯನ್ನು ಕಟ್ಟುತ್ತಾರೆ. ನಿತ್ಯಜೀವನದಲ್ಲಿ ವ್ಯಕ್ತಿಗತ ಬದುಕು ಅನೇಕ ಸಂಕ್ರಮಣಗಳಿಗೆ ಒಳಗಾಗುತ್ತವೆ. ಇಂತಹ ಸಂಕ್ರಮಣಗಳು ಜೀವನದಲ್ಲಿ ನಡೆಯದಿರುವಂತೆ

ಮಾನವ ಎಚ್ಚರ ವಹಿಸುತ್ತಾನೆ. ಇಂತಹ ಎಚ್ಚರಗಳು, ಕಾಳಜಿಗಳೇ ಅನೇಕ ಆಚರಣೆಗಳ ಹುಟ್ಟಿಗೆ ಕಾರಣವಾಗಿವೆ. ಜನಪದರ ಬದುಕು ಈಡೇರಿಸುತ್ತಾ ಸಾಗುತ್ತಾರೆ.

ಹೀಗೆ ಸಾಗುವ ಆಚರಣೆಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನವಾಗಿ ಕಂಡರೂ ಹೆಚ್ಚಾಗಿ ಸಾಮ್ಯತೆಗಳಿಂದ ಕೂಡಿರುತ್ತವೆ. ಬಂಕಾಪುರ ಪರಿಸರದಲ್ಲಿ ಮುಖ್ಯವಾಗಿ ಕೃಷಿಗೆ ಸಂಬಂಧಿಸಿದ ಹಬ್ಬ, ಜಾತ್ರೆ, ಉತ್ಸವಗಳು, ರೋಗ-ರುಜಿನಗಳು ನಿವಾರಣೆಗೆ ಸಂಬಂಧಿಸಿದ ಆಚರಣೆಗಳು ಕಂಡುಬರುತ್ತವೆ. ಇವುಗಳನ್ನು ವಾರ್ಷಿಕ ಆಚರಣೆ ಮತ್ತು ಜೀವನಾವರ್ತನ ಆಚರಣೆಗೆ ಸಂಬಂಧಿಸಿದವುಗಳು ಎಂದು ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದೆ.

**೪.೧. ಜೀವನಾವರ್ತನ ಆಚರಣೆಗಳು**

**ಹುಟ್ಟು:** ಬಂಕಾಪುರದ ಗ್ರಾಮದಲ್ಲಿ ಮೊದಲು ಹೆರಿಗೆಯನ್ನು ಸೂಲಗಿತ್ತಿಯರು ಮಾಡಿಸುತ್ತಿದ್ದರು. ಒಂದು ಕಾಲದಲ್ಲಿ ಇಲ್ಲಿ ಸಾವಿರಾರು ಹೆರಿಗೆಯನ್ನು ಮಾಡಿಸಿದ ಪ್ರಸಿದ್ದ ಮಹಿಳೆಯರಿದ್ದರು ಅವರೆ ಗದಿಗೆಮ್ಮ ಹಡಪದ ಹಾಗೂ ಇಂದ್ರಾಬಾಯಿ ಅರ್ಕಸಾಲಿ. ಇಂದು ಬಂಕಾಪುರದ ಪರಿಸರದಲ್ಲಿ ಹೆರಿಗೆಗೆಂದು ಆಸ್ಪತ್ರೆಗೆ ಹೊಗುವುದು ಸಾಮಾನ್ಯವಾಗಿದೆ. ಹೆಣ್ಣಾಗಲಿ, ಗಂಡಾಗಲಿ ಮಗು ಹುಟ್ಟಿದ ತಕ್ಷಣ ಎಲ್ಲರಿಗೂ ವಿಷಯ ತಿಳಿಸಲಾಗುತ್ತದೆ. ಹೆರಿಗೆಯಾದ ನಂತರ ತಾಯಿ ಮತ್ತು ಮಗುವಿನ ಕರುಳುಬಳ್ಳಿ ಅಥವಾ ಹೊಕ್ಕುಳಬಳ್ಳಿಯನ್ನು ಶುದ್ದ ಬ್ಲೇಡಿನಿಂದ ಕತ್ತರಿಸುತ್ತಾರೆ.

ಮಗುವನ್ನು ಶುದ್ಧ ನೀರಿನಿಂದ ತೊಳೆದು ತಾಯಿ ಮೊಲೆ ಹಾಲು ಕುಡಿಸಲಾಗುತ್ತದೆ ಏಕೆಂದರೆ ತಾಯಿ ಮೊಲೆ ಹಾಲು ಅಮೃತ ಸಮಾನ ಎಂಬ ನಂಬಿಕೆ ಜನಪದರಲ್ಲಿ ಇದೆ. ನಂತರ ಅಕ್ಕಪಕ್ಕದ ಜನರಿಗೆ ಸಿಹಿ ಹಂಚಿ, ಮಗು ಹುಟ್ಟಿದ ಸುದ್ದಿಯನ್ನು ಮಗುವಿನ ತಂದೆಯ ಮನೆಯವರಿಗೆ ತಿಳಿಸಲಾಗುತ್ತದೆ.

**ಋತುಮತಿ ಆಚರಣೆ:** ಹೆಣ್ಣುಮಕ್ಕಳು ಮೈನೆರೆದಾಗ ಅಥವಾ ಋತುಮತಿಯಾದಾಗ ಮಾಡುವ ಶಾಸ್ತ್ರವೇ ಋತುಮತಿ ಆಚರಣೆ. ಅಂದು ತಾಯಿಯು ಅಕ್ಕಪಕ್ಕದ ಮನೆಯ ಐದು ಜನ ಮುತ್ತೈದೆಯರನ್ನು ಕರೆದು ಅವರಿಗೆ ಉಡಿ ತುಂಬಿ ಮೈನೆರೆದ ಹೆಣ್ಣುಮಗಳಿಗೆ ಐದು ತರಹದ ಫಲಗಳನ್ನು ಕೈಯಲ್ಲಿ ಕೊಟ್ಟು, ಆ ನಂತರ ಅವಳನ್ನು ಹಸಿರು ಗಿಡ ಮುಟ್ಟಿಸಿಕೊಂಡು ಬಂದ ನಂತರ ಹಾಲು ತುಪ್ಪ ಹಾಕಿ ಎರೆಯಲಾಗುತ್ತುದೆ. ಆ ನಂತರ ಮೈನೆರೆದ ಹೆಣ್ಣುಮಗಳಗೆ ಉಡಿ ತುಂಬಿ ಆರತಿ ಮಾಡಲಾಗುತ್ತದೆ. ಆ ಸಂದರ್ಭದಲ್ಲಿ ವಿಶೇಷ ಆಹಾರ ಪದ್ದತಿಯನ್ನು ಅನುಸರಿಸಲಾಗುತ್ತದೆ. ಕೊಬ್ಬರಿ, ಉತ್ತತ್ತಿ, ಗೊಡಂಬಿ, ದ್ರಾಕ್ಷಿಯಿಂದ ತಯಾರಿಸಿದ ಉಂಡಿ ಕೊಡಲಾಗುತ್ತದೆ. ಅಷ್ಟೆ ಅಲ್ಲದೆ ಅಕ್ಕಪಕ್ಕದ ಮನೆಯವರು ಹೆಡಿಗೆ ಎಂದು ವಿವಿಧ ರೀತಿಯ ಅಡುಗೆ ಮಾಡಿಕೊಂಡು ಬಂದು ಕೊಡುತ್ತಾರೆ. ಐದನೆ ದಿನ ಅತ್ತೆಯಂದಿರ ಕೈಯಿಂದ

ಎರಸಲಾಗುತ್ತದೆ. ಆ ನಂತರ ಕೆಲವರು ಐದು, ಒಂಭತ್ತು, ಹನ್ನೊಂದು, ಹದಿನಾರು ದಿನಗಳ ಕಾಲ ಆರತಿಮಾಡಿ ಕಾರ್ಯಕ್ರಮ ಮುಗಿಸಲಾಗುತ್ತದೆ. ಕೊನೆಯ ದಿನ ಜಂಗಮರನ್ನು ಕರೆಸಿ ಕರಣ ಪ್ರಸಾದ ಕೊಡಿಸಲಾಗುತ್ತದೆ. ತಮಗೆ ಬೇಕಾದವರಿಗೆ, ಸಂಬಂಧಿಕರಿಗೆ ಊಟದ ವ್ಯವಸ್ಥೆ ಮಾಡಲಾಗುತ್ತದೆ. ಆ ಸಂದರ್ಭದಲ್ಲಿ ಹೆಣ್ಣುಮಕ್ಕಳು ಸೋಬಾನೆ ಹಾಡುಗಳನ್ನು ಹಾಡುತ್ತಾರೆ.

ಏನುಂಡು ಮೈನೆರೆತೆ ಏನುಟ್ಟು ಮೈನೆರೆತೆ
ಏನ ಕೈಯೊಳಗೆ ಹಿಡಿದಿದ್ದಳು
ಯಾಲಕ್ಕಿ ಗೊನೆಯ ಹಿಡಿದ್ದಳು ಶಿವನಲ್ಲಿ
ಮುತ್ತೈದಿ ಬಾಣಂತಿತನವ ಪಡೆದಿದ್ದಳು
ತುಪ್ಪ ಬಾನವ ಉಂಡಿದ್ದಳು
ಒಪ್ಪ ವೀಳ್ಯವ ಹಿಡಿದಿದ್ದಳು
ಮುತ್ಯೆದಿತನವ ಪಡೆದಿದ್ದಳು ಶಿವನಲ್ಲಿ
ಏರಿ ರನ್ನದ ಏರಿ ಚಿನ್ನದ ಏರಿ
ಏರಿಂದ ಕೆಳಗೆ ಎಲಿತೋಟ
ಏರಿಂದ ಕೆಳಗೆ ಎಲಿತೋಟದೊಳಗಿರುವ
ಅವರತ್ತಿ ಕೇಳ್ಯಾಳ ಹೊಸಸುದ್ದಿ
ಹೊಸಸುದ್ದಿ ಕೇಳ್ಯಾಳ ಖುಷಿ ನಗಿಯ ನಕ್ಕಾಳ
ಎಸಳಮಲ್ಲಿಗೆ ಕೊಯಿಸ್ಯಾಳ
ಎಸಳಮಲ್ಲಿಗೆ ಕೊಯಿಸಿ ಬುಟ್ಟಿತುಂಬಿ
ಸೊಸೆಯಿದ್ದ ಮನೆಗೆ ಕಳುಹ್ಯಾಳ
ಏರಿ ರನ್ನದ ಏರಿ ಏರಿ ಚಿನ್ನದ ಏರಿ
ಏರಿಂದ ಕೆಳಗೆ ಎಲಿ ತೋಟದೊಳಗಿರುವ
ಮಾವ ಕೇಳ್ಯಾನ ಹೊಸ ಸುದ್ದಿ
ಕೇಳ್ಯಾನ ಖುಷಿನಗೆಯ ನಕ್ಕಾನ
ಎಸಳ ಕ್ಯಾದಿಗೆ ಕೊಯಿಸ್ಯಾನ
ಎಸಳ ಕ್ಯಾದಿಗೆ ಕೊಯಿಸಿ ಬುಟ್ಟಿ ತುಂಬಿ
ಸೊಸೆ ಇದ್ದ ಮನೆಗೆ ಕಳುಸ್ಯಾನ

**ಜವುಳ:** ಗಂಡು ಮಕ್ಕಳಿಗೆ ಬಾಲ್ಯದಲ್ಲಿ ನಡೆಸುವ ಆಚರಣೆಯಾಗಿದೆ. ಬಂಕಾಪುರದಲ್ಲಿ ಗಂಡು ಮಕ್ಕಳಿಗೆ ೫,೯,೧೧.ನೇ ತಿಂಗಳುಗಳಲ್ಲಿ ತಲೆ ಕೂದಲು ತೆಗೆಯುವ ಶಾಸ್ತ್ರವನ್ನು ಮಾಡುತ್ತಾರೆ. ತಮ್ಮ ಅನುಕೂಲಕ್ಕೆ ತಕ್ಕಂತೆ ಈ ಕಾರ್ಯಕ್ರಮವನ್ನು ಕೆಲವರು ಮನೆಯಲ್ಲಿ ಮಾಡಿದರೆ ಕೆಲವರು ತಮ್ಮ ಮನೆ ದೇವರ ಸಾನಿಧ್ಯದಲ್ಲಿ ಮಾಡುವುದು ಸಾಮಾನ್ಯ. ಬ್ರಾಹ್ಮಣ

ಸಮುದಾಯದಲ್ಲಿ ಇದನ್ನು ಮುಂಜಿವಿ ಅಥವಾ ಉಪನಯನ ಎಂದು ಕರೆಯುತ್ತಾರೆ. ಇದು ಇವರಿಗೆ ಉಪನಯನ ವಿಧಿಯಾಗಿದೆ. ಇದನ್ನು ಹೆಚ್ಚಾಗಿ ೮ ರಿಂದ ೧೦ ವರ್ಷದ ನಂತರ ಮಾಡುತ್ತಾರೆ.

ಜವುಳ ಕಾರ್ಯವನ್ನು ಸೋದರ ಮಾವನು ಮಾಡುವುದು ವಾಡಿಕೆ. ತಂದೆ ತಾಯಿಯ ತೊಡೆಯ ಮೇಲೆ ಮಗುವನ್ನು ಕೂಡಿಸಿ ಜಂಗಮರು ಹೇಳಿದ ಹಾಗೆ ಸೀಳಿದ ವೀಳ್ಯದ ಎಲೆಯಿಂದ ತಲೆಯ ಕೂದಲನ್ನು ಕತ್ತರಿಸಿದ ಹಾಗೆ ನಿಯಮವನ್ನು ಮಾಡಲಾಗುತ್ತದೆ. ಇದಕ್ಕೆ ಆಡು ಭಾಷೆಯಲ್ಲಿ ಎಲಗತ್ತರಿ ಹಚ್ಚುವುದು ಎಂದು ಕರೆಯುತ್ತಾರೆ. ನಂತರ ಕ್ಷೌರಿಕರು ತಲೆಯನ್ನು ಬೋಳಿಸುತ್ತಾರೆ. ನಂತರ ಮಗುವಿಗೆ ಸ್ನಾನ ಮಾಡಿಸಿ ಬಂಧು ಬಾಂಧವರೆಲ್ಲರು ತಂದೆ ತಾಯಿಯ ಜೊತೆಗೆ ಮಗುವನ್ನು ಕೂಡಿಸಿ ಆರತಿ ಮಾಡಲಾಗುತ್ತದೆ. ಬಂದಂತಹ ಬಂಧು ಬಳಗದವರು ತಾವು ತಂದ ಉಡುಗೊರೆ ನೀಡಿ, ಸಿಹಿ ಊಟ ಮಾಡಿ ಹೊಗುವುದು ಹಿಂದಿನಿಂದ ನಡೆದುಕೊಂಡ ಬಂದ ಸಂಪ್ರದಾಯವಾಗಿದೆ.

**ಮದುವೆ ಸಂಪ್ರದಾಯ:** ಜಗತ್ತಿನ ಎಲ್ಲೆಡೆ ಒಂದಲ್ಲ ಒಂದು ವಿಧದಲ್ಲಿ ಕಂಡು ಬರುವ ಸಾಮಾಜಿಕ ವ್ಯವಸ್ಥೆ. ಪ್ರತಿಯೊಂದು ಸಮಾಜದಲ್ಲಿಯೂ ಇರುವ, ಸಮಾಜಮಾನ್ಯ ಸುವ್ಯವಸ್ಥಿತ ಗಂಡು ಹೆಣ್ಣುಗಳ ಲೈಂಗಿಕ ಸಂಯೋಗವೇ ವಿವಾಹ(ಮ್ಯಾರೇಜ). ಹಿಂದು ಸಂಸ್ಕೃತಿಯಲ್ಲಿ ಮದುವೆ ಗಳಲ್ಲಿ ಅನೇಕ ಸಂಪ್ರದಾಯಗಳನ್ನು ವೈಜ್ಞಾನಿಕ ಆಧಾರದಿಂದ ರಚಿಸಲಾಗಿದೆ. ಹಿಂದು ಸಂಸ್ಕೃತಿಯಲ್ಲಿ ಮದುಮಗಳನ್ನು ಕನ್ಯಾದಾನವೆಂದು ಕೊಡುಗೆಯ ರೂಪದಲ್ಲಿ ಮದುವೆ ಮಾಡಿ ಕೊಡುವ ಸಮಪ್ರದಾಯವಿದೆ. ಮದುವೆಯನ್ನು ಸಾಮಾನ್ಯವಾಗಿ ಹೆಣ್ಣಿನ ಮನೆಯಲ್ಲಿ ನಿಶ್ಚಯಿಸುವ ಸಂಪ್ರದಾಯವಿದೆ. ಇತ್ತೀಚಿನ ದಿನಗಳಲ್ಲಿ ದೇವಸ್ಥಾನಗಳಲ್ಲಿ ಮಠ ಮಂದಿರಗಳಲ್ಲಿ ಇಲ್ಲವೇ ಛತ್ರಗಳಲ್ಲಿ ಸಹ ಬಹುತೇಕವಾಗಿ ಮದುವೆಯು ನಡೆಯುತ್ತದೆ. ನಿಶ್ಚಿತಾರ್ಥಗಳಲ್ಲಿ ಮದುವೆಯ ಪ್ರಸ್ಥಾಪ ನಿಶ್ಚಿತ ರೂಪ ತಾಳುತ್ತದೆ.

ಮದುವೆ ಸಂಪ್ರದಾಯಗಳಲ್ಲಿ ಅತ್ಯಂತ ಮುಖ್ಯವಾಗಿ ಗೋತ್ರ, ಜಾತಕ, ಕೌಟುಂಬಿಕ ಹಿನ್ನೆಲೆ, ಮುಹೂರ್ತ, ಕನ್ಯಾದಾನ, ಕಂಕಣಧಾರಣೆ, ಅಕ್ಷತೆಧಾರಣೆ, ಮಾಂಗಲ್ಯಧಾರಣೆ, ಕಾಲುಂಗುರಧಾರಣೆ, ಅರುಂಧತಿ ನಕ್ಷತ ವೀಕ್ಷಣೆ ಮುಂತಾದವು ಅತ್ಯಂತ ಪ್ರಮುಖವಾದವು.

ಇವು ವಿವಾಹದ ಧಾರ್ಮಿಕ ವಿಧಿಗಳಲ್ಲಿ ಮುಖ್ಯವಾದವು. ಲಿಂಗಾಯತರು ನೆರವೇರಿಸು ವಂತಹ ಮದುವೆಗಳಲ್ಲಿ ಹೋಮಕ್ಕೆ ಅವಕಾಶವಿರುವುದಿಲ್ಲ. ಇದಕ್ಕೆ ಬದಲಾಗಿ ಪಂಚಕಲಸ ಅಂದರೆ ಪವಿತ್ರ ಬಿಂದಿಗೆಗಳ ಪ್ರತಿಷ್ಠಾಪನೆಯಾಗಿರುತ್ತದೆ. ವೀರಭದ್ರ ಕುಲದೇವತೆಯನ್ನು ಆರಾಧಿಸುವ ಕೆಲವು ಕುಟುಂಬಗಳು ಮದುವೆಯ ಮೊದಲು ಗುಗ್ಗಳ ಸೇವೆಯನ್ನು ಕೈಗೊಳ್ಳುವರು, ಸೂತ್ರವನ್ನು ಕಟ್ಟುವರು, ಮತ್ತಿತರ ವಿವಾಹ ವಿಧಿಗಳು ಬೇರೆ ಹಿಂದೂಗಳ ವಿಧಿಗಳಂತೆಯೇ ಇರುತ್ತವೆ.

**ಹಂದರ ಹಾಕುವುದು:** ಸಾಮಾನ್ಯವಾಗಿ ಇವರ ವಿವಾಹ ವಿಧಿಯನ್ನು ಜಂಗಮರು ನಡೆಸಿಕೊಡುತ್ತಾರೆ. ಲಿಂಗಾಯತ ಎಲ್ಲ ಒಳಪಂಗಡಗಳಲ್ಲಿ ಮದುವೆಯ ಮೊದಲು ಹಂದರವನ್ನು ಆ ದೈವದ ಜನರು ಸೇರಿ ಮದುವೆಯ ಮುನ್ನಾ ದಿನ ಹಾಕುತ್ತಾರೆ. ಆ ನಂತರ ಮದುಮಗ, ಮತ್ತು ಮದುಮಗಳು ಇದಕ್ಕೆ ಪೂಜೆಯನ್ನು ಮಾಡುತ್ತಾರೆ, ಪೂಜೆ ಮಾಡುವಾಗ ಆ ಕಂಬಕ್ಕೆ ಹಾಲು ತುಪ್ಪ ಹಾಕಿ ಆರತಿ ಮಾಡಲಾಗುತ್ತದೆ. ಐದು ಮಂದಿ ಹೆಣ್ಣುಮಕ್ಕಳು ಆರತಿ ಮಾಡಿ ಸಂಪೂರ್ಣ ಹಂದರ ಹಾಕಲಾಗುತ್ತದೆ. ಸೋದರ ಮಾವನಾದವವನು ಹಾಲುಗಂಬ ಹಸಿರುಕಂಬ ವನ್ನು ತಂದು ಅದಕ್ಕೆ ಕಟ್ಟುತ್ತಾನೆ. ಕಂಬವನ್ನು ತಂದ ಮಾವನಿಗೆ ಬಣ್ಣವನ್ನು ಉಗ್ಗುವ ಸಂಪ್ರದಾಯವಿದೆ. ಆ ನಂತರದಲ್ಲಿ ಮಾವನಿಗೆ ಹೊಸ ವಸ್ತ್ರಗಳನ್ನು ನೀಡಿ ಆರತಿ ಮಾಡಲಾಗುತ್ತದೆ. ಹೀಗೆ ಮದುವೆ ಶಾಸ್ತ್ರಗಳನ್ನು ಪ್ರಾರಂಭಮಾಡಲಾಗುತ್ತದೆ.

ಬ್ರಾಹ್ಮಣರಲ್ಲಿ ಗಂಡು ಹೆಣ್ಣಿನ ಜಾತಕ ಕೂಡಿ ಬಂದರೆ ವಿವಾಹ ನಿಷ್ಕರ್ಷೆಯಾಗುತ್ತದೆ. ಕೆಲವರಲ್ಲಿ ಎದುರು ಬದುರು ಕೊಡುವ ಪದ್ಧತಿಯೂ ಇದೆ. ಹಿಂದೆ ರಕ್ತಸಂಬಂಧಿಕರಲ್ಲಿ ಮದುವೆ ಮಾಡಿಕೊಳ್ಳುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಅಂತರ್ ಸಮುದಾಯ ವಿವಾಹಗಳು ನಡೆಯುತ್ತವೆ.

ಅನೇಕ ಸಂಪ್ರದಾಯಗಳಲ್ಲಿ ಮದುವೆಯ ಸಂಪ್ರದಾಯವೂ ಒಂದಾಗಿದೆ. ಕುಂಟುಂಬ ರಚನೆಯ ಚಲನ ಶಕ್ತಿಯೇ ಈ ಮದುವೆ. ಹೊಸ ಸಂಬಂಧವಾದಲ್ಲಿ ವಿಭಿನ್ನ ಗೋತ್ರದಲ್ಲಿ ಮದುವೆ ನಡೆಯುತ್ತದೆ. ಅಕ್ಕನ ಮಗಳು ಸೋದರ ಮಾವ ಸೋದರತ್ತೆಯ ಮಗಳು ಮದುವೆಗೆ ಸಮಾಜದಲ್ಲಿ ಒಪ್ಪಿಗೆ. ಅಣ್ಣ ತಂಗಿಯರ ಮದುವೆ ನಿಷೇಧ. ಗಂಡು ಹೆಣ್ಣುಗಳ ಜಾತಕ ಸರಿ ಬಂದರೆ ಮದುವೆಗೆ ಒಪ್ಪಿಗೆ ಸಿಗುತ್ತದೆ. ಅವರಿಬ್ಬರ ಗೋತ್ರ ಒಂದೇ ಆಗಿರಬಾರದು. ಬೇರೆ ಬೇರೆಯಾಗಿರಬೇಕು. ರಕ್ತ ಸಂಬಂಧದಲ್ಲಿ ಹೆಚ್ಚಾಗಿ ಮದುವೆಗಳು ನಡೆಯುತ್ತಿದ್ದವು. ಇದರಿಂದ ಸಂಬಂಧ ಗಟ್ಟಿಗೊಳ್ಳುತ್ತದೆ. ಆದರೆ ಇತ್ತೀಚೆಗೆ ರಕ್ತ ಸಂಬಂಧದಲ್ಲಿ ಮದುವೆಯಾದರೆ ಹುಟ್ಟಿದ ಮಕ್ಕಳು ಅಂಗವಿಕಲರಾಗಿ ಹುಟ್ಟುತ್ತಾರೆ. ಈ ಸಂಬಂಧವು ಕಡಿಮೆಯಾಗಿದೆ. ಹಿಂದೆ ಇದ್ದ ಬಾಲ್ಯವಿವಾಹ ಪದ್ಧತಿ ಈಗಿಲ್ಲ. ವಿಧುರರಿಗೆ ಮರು ಮದುವೆ ಇದೆ. ಇತ್ತೀಚೆಗೆ ವಿಧವೆಯರು ಮರುಮದುವೆಯಾಗುತ್ತಿದ್ದಾರೆ. ಅದು ವಿರಳವಾಗಿ ಕಂಡುಬರುತ್ತದೆ. ಹಿಂದೆ ಮದುವೆಗಳು ಶಾಸ್ತ್ರ ಸಂಪ್ರದಾಯದಂತೆ ಹಳ್ಳಿಯಲ್ಲಿಯೇ ಮನೆಯ ಮುಂದೆ ಚಪ್ಪರ ಹಾಕಿ ಹೆಣ್ಣು–ಗಂಡನ್ನು ಗಾಡಿಗಳಲ್ಲಿ ಮೆರವಣಿಗೆ ಮಾಡುತ್ತಿದ್ದರು. ಇತ್ತೀಚೆಗೆ ಕಲ್ಯಾಣ ಮಂಟಪದಲ್ಲಿ ಮದುವೆ ಮಾಡುವುದು ಒಂದು ಪ್ರತಿಷ್ಠೆಯ ಪ್ರಶ್ನೆಯಾಗಿದೆ. ಹಿಂದೆ ಎರಡು ಮೂರು ದಿನಗಳ ಕಾಲ ಮದುವೆ. ಇಂದು ಒಂದು ದಿನಕ್ಕೆ ಸೀಮಿತವಾಗಿದೆ. ತುಂಬಾನೆ ಸರಳವಾಗುತ್ತಿವೆ. ಮದುವೆಗಳಲ್ಲಿನ ಕೆಲವು ಸಂಪ್ರದಾಯಗಳು ಮೌಲ್ಯ ಕಳೆದುಕೊಳ್ಳುತ್ತಾ ಸಾಗಿವೆ.

**ಕನ್ಯಾ ನೋಡುವ ಶಾಸ್ತ್ರ:** ಈ ಶಾಸ್ತ್ರ ಪ್ರತಿಯೊಬ್ಬ ಹೆಣ್ಣಿನ ಮನೆಯಲ್ಲಿ ನಡೆಯುವ ಶಾಸ್ತ್ರ. ವಧುವನ್ನು ನೋಡಲು ಹೋಗುವಾಗ ಹೆಣ್ಣಿಗೆ ಹಣ್ಣು, ಹೂವುಗಳನ್ನು ತೆಗೆದುಕೊಂಡು ಹೋಗುತ್ತಾರೆ. ವಿವಾಹ ಮಾಡುವಾಗ ಬೆಡಗು, ಗೋತ್ರ ನೋಡಿ ಮಾಡುತ್ತಾರೆ. ಕನ್ಯಾ ವರನ ಮನಸ್ಸಿಗೆ ಬಂದ ಮೇಲೆ ಗಂಡಿನವರ ಮನೆತನ ನೋಡಲು ಹೋಗುತ್ತಾರೆ. ಮನೆತನ ಒಪ್ಪಿಗೆಯಾದಲ್ಲಿ ಅವರವರ ಅನುಕೂಲದ ಮೇಲೆ ಮಾತುಕತೆ, ಕೊಡುಕೊಳ್ಳುವ ವಿಚಾರವನ್ನು ಹಿರಿಯರ ಸಮ್ಮುಖದಲ್ಲಿ ಗೊತ್ತುಪಡಿಸುವರು.

**ನಿಶ್ಚಿತಾರ್ಥ:** ನಿಶ್ಚಿತಾರ್ಥ ವಧುವಿನ ಹಾಗೂ ವರನ ಕಡೆಯವರಿಗೆ ವರ, ಕನ್ಯೆಗೆ ಒಪ್ಪಿಗೆ ಕೊಡುಕೊಳ್ಳುವಿಕೆ ಒಪ್ಪಿಗೆಯಾದ ಮೇಲೆ ಹೆಣ್ಣಿನವರ ಮನೆಯಲ್ಲಿ ಒಂದು ಗೊತ್ತಾದ ದಿನದಂದು ನಡೆಯುವ ಕಾರ್ಯ ಇದಾಗಿದೆ. ಬಹುತೇಕ ಎಲ್ಲಾ ಸಮುದಾಯದಲ್ಲೂ ಕಂಡುಬರುತ್ತದೆ. ಆಯಾ ಪ್ರದೇಶ ಸಮುದಾಯದ ಹೆಣ್ಣಿನ–ಗಂಡಿನ ಕಡೆಯ ಹಿರಿಯರು ಸೇರಿ ಸಂಬಂಧ ಒಪ್ಪಿಗೆ ಯಾದ ಸಂಕೇತವಾಗಿ 'ತಾಂಬೂಲ'ವನ್ನು ಬದಲಾಯಿಸಿಕೊಳ್ಳುವಿಕೆಯನ್ನು ಕಾಣುತ್ತೇವೆ. ಅವಾಗ ಬೀಗರಿಗೆ ವಿಶೇಷವಾಗಿ ಸಿಹಿ ಶ್ಯಾವಿಗೆ ಪಾಯಸ ಮಾಡಿ ಊಟಕ್ಕೆ ಬಡಿಸುತ್ತಾರೆ. ಶ್ಯಾವಿಗೆ ವಿಶೇಷ ಅಂದರೆ ಆ ಶ್ಯಾವಿಗೆ ಬಳ್ಳಿಯ ಹಾಗೆ ಸಂಬಂಧ ಇರಲಿ ಎಂಬುದು ಇಲ್ಲಿಯವರ ಅಭಿಮತವಾಗಿದೆ.

ನಿಶ್ಚಿತಾರ್ಥ ದಿನ ವಧು ವರರನ್ನು ಜೊತೆಗೆ ಕೂಡಿಸಿ ಹಾರಹಾಕಿ ಆರತಿ ಮಾಡುತ್ತಾರೆ. ಗಂಡಿನ ಕಡೆಯವರು ಹುಡುಗಿಗೆ ಸೀರೆ, ಕುಪ್ಪಸ, ಬೆಳ್ಳಿ, ಬಂಗಾರ ಹಾಕುತ್ತಾರೆ. ನಿಶ್ಚಿತಾರ್ಥವಾದರೆ "ಅರ್ಧ ಮದುವೆ" ಆದಂತೆ. ಯಾವುದೇ ಸಣ್ಣ ಕಾರಣಕ್ಕೆ ಮದುವೆ ಮುರಿದುಕೊಳ್ಳುವ ಸಾಧ್ಯತೆ ಕಡಿಮೆ.

**ಲಗ್ನ ಪತ್ರಿಕೆ ಹೊರಡಿಸುವುದು:** ನಮ್ಮ ಸಂಸ್ಕೃತಿಯಲ್ಲಿ ಮದುವೆ ಮುಂಚೆಗೆ ಈ ಲಗ್ನ ಪತ್ರಿಕೆ ಪ್ರಮುಖವಾಗಿದೆ. ಈ ಮದುವೆಗೆ ಎರಡು ದಿನ ಇರುವಾಗಲೇ ಹಿರಿಯರು ಬಂಧು–ಬಳಗದವರ ಸಮಕ್ಷಮದಲ್ಲಿ ಲಗ್ನ ಪತ್ರಿಕೆಗಳನ್ನು ಪೂಜೆ ಮಾಡುತ್ತಾರೆ. ಆಯಾ ಸಂಪ್ರದಾಯ, ಆಚರಣೆಗೆ ತಕ್ಕಂತೆ, ಈ ಕಾರ್ಯವನ್ನು ಪುರೋಹಿತರು, ಐನೋರು ಮಾಡಿಸುತ್ತಾರೆ. ಕೆಲವರು ಮನೆಯ ದೇವರಿಗೆ ಮೊದಲು ಲಗ್ನ ಪತ್ರಿಕೆಯನ್ನು ಕೊಡುತ್ತಾರೆ. ಕೆಲವರು ದೇವಸ್ಥಾನಕ್ಕೆ ನೀಡುತ್ತಾರೆ.

ಕೆಲವರು ಲಗ್ನದಲಕ್ಕಿ ಎಂದು ಐದುಸೇರು ಅಕ್ಕಿ, ಬೆಲ್ಲ, ಲಗ್ನಪತ್ರಿಕೆ, ಎಲೆ, ಅಡಕೆ, ದಕ್ಷಿಣೆ ತೆಗೆದುಕೊಂಡು ಹೆಣ್ಣಿನ ಮನೆಗೆ ಹೋಗುತ್ತಾರೆ. ಬೀಗರಾದವರು ಲಗ್ನದಕ್ಕಿ ತಂದವರಿಗೆ ಸಿಹಿ ಊಟ ಮಾಡಿಸಿ ಕಳುಹಿಸುತ್ತಾರೆ.

**ಬಳೆ ಇಡುವ ಶಾಸ್ತ್ರ:** ಮದುವೆಯ ಮನ್ನಾ ದಿನ ಅಥವಾ ಎರಡು ದಿನ ಮುಂಚಿತವಾಗಿ ಈ ನಿಯಮವನ್ನು ಮಾಡಲಾಗುತ್ತದೆ. ಈ ನಿಯಮವನ್ನು ಹೆಣ್ಣಿನ ಮನೆಯವರು ಅವರ

ಮನೆಯಲ್ಲಿ ಮಾಡುವುದು ವಾಡಿಕೆ. ಮದುಮಗಳು ಮದುವೆಗೆ ಬಳೆಯನ್ನು ಹಾಕಲು ಬಂದ ಬಳೆಗಾರನಿಗೆ ಮನೆಯವರು ಉಲ್ಪಿ ಎಂದು ಅಕ್ಕಿ, ಬೆಳೆ, ಬೆಲ್ಲ, ಹಾಗೇ ದಕ್ಷಿಣೆಯನ್ನು ಕೊಟ್ಟು ಕಳುಹಿಸುವಂತಹ ಆಚರಣೆಯನ್ನು ಕಾಣಬಹುದು. ಆ ದಿನ ಮನೆಯ ಅಕ್ಕ ಪಕ್ಕದ ಮನೆಯ ಮುತ್ತೈದೆಯರಿಗೆ ಬಳೆ ಇಡಿಸಲಾಗುತ್ತದೆ.

**ಸುರಗಿ ನೀರು:** ಎಲ್ಲಾ ವರ್ಗದ ಎಲ್ಲಾ ಸಮುದಾಯದವರು ಸುರಗಿ ನೀರಿನ ಪದ್ಧತಿಯನ್ನು ಕಾಣುತ್ತೇವೆ. ಮದುವೆ ದಿನ ಬೆಳಿಗ್ಗೆ ಅರಿಷಿಣ ಶಾಸ್ತ್ರವಾದ ಮೇಲೆ ಮನೆಯ ಹೊರಗಡೆ ಈ ಶಾಸ್ತ್ರವನ್ನು ಮಾಡಲಾಗುತ್ತದೆ. ಇಂದು ಮದುವೆ ಹೆಚ್ಚಾಗಿ ಕಲ್ಯಾಣ ಮಂಟಪದಲ್ಲಿ ನಡೆಯುವುದರಿಂದ ಇಂತಹ ಅಪರೂಪದ ಶಾಸ್ತ್ರಗಳನ್ನು ಹೆಸರಿಗೆ ಮಾತ್ರ ಮಾಡಲಾಗುತ್ತದೆ. ವಧು-ವರರ ಜೊತೆಯಲ್ಲಿ ತಂದೆ ತಾಯಿ ಹಾಗೂ ಅಕ್ಕ-ತಂಗಿ ಅತ್ತೆ ಆಗುವವರು ಸುರಗಿ ನೀರಿಗೆ ಕುಳಿತುಕೊಳ್ಳುತ್ತಾರೆ. ಸುರಗಿ ಕುಳಿತುಕೊಂಡವರಿಗೆ, ತಲೆಗೆ ಎಣ್ಣೆ ಹಚ್ಚಿ ಮುಖಕ್ಕೆ ಮೈಗೆ ಅರಿಷಣ ಹಚ್ಚಿ ಬಿಸಿನೀರು ಮತ್ತು ತಣ್ಣೀರಿನಿಂದ ಸ್ನಾನ ಮಾಡಿಸಿ ಕೊನೆಗೆ ಐದು ಮಂದಿ ಆರತಿ ಮಾಡಿ ಅವರೆಲ್ಲರಿಗೆ ಹೊಸ ಬಟ್ಟೆಯನ್ನು ಕೊಡುತ್ತಾರೆ. ಸುರಗಿಗೆ ಮೊದಲು ಅವರ ಸುತ್ತಲೂ ಐದು ತಂಬಿಗೆ ಇರುತ್ತವೆ. ಇದನ್ನು ಕುಂಬಾರ ಮನೆಯಿಂದ ತಂದಿರುತ್ತಾರೆ. ಇವುಗಳನ್ನು ಐದು ಮಂದಿ ಮುತ್ತೈದಿಯರು ಹಿಡಿದುಕೊಂಡು ಕುಳಿತಿರುತ್ತಾರೆ. ಆ ತಂಬಿಗೆಯ ಮೇಲೆ ಎಣ್ಣಿ ಹೋಳಿಗೆ ಇಟ್ಟಿರುತ್ತಾರೆ. ಅವು ಗಳಿಗೆ ಐದು ಸುತ್ತು ದಾರ ಸುತ್ತಿರುತ್ತಾರೆ. ಇದರ ಒಳಗಡೆ ನಿಂತು ಸುರಗಿಯ ನೀರು ಹಾಕಬೇಕು. ಈ ಸುರಗಿಯ ನೀರು ವಧು ವರರ ಮೈ ಮೇಲೆ ಬಿದ್ದರೆ ಸುಂದರವಾಗಿ ಚೆನ್ನಾಗಿ ದಷ್ಟ-ಪುಷ್ಟವಾಗಿ ಬೆಳೆಯುತ್ತಾರೆ ಎಂಬುದು ಇಲ್ಲಿಯ ಹಿರಿಯರ ಹೇಳಿಕೆ.

**ಐರಾಣಿ ತರುವುದು:** ಮುಸ್ಲಿಂ ಸಮುದಾಯ ಒಂದನ್ನು ಹೊರತುಪಡಿಸಿ ಉಳಿದ ಎಲ್ಲಾ ಸಮುದಾಯಗಳಲ್ಲಿ ಈ ಐರಾಣಿ ತರುವ ಶಾಸ್ತ್ರವು ಕಂಡು ಬರುತ್ತದೆ. ಐರಾಣಿ ತರುವಾಗ ಕುಂಬಾರರ ಮನೆಯಿಂದ, ಅಕ್ಕಿ, ಬೆಲ್ಲ, ಕೊಟ್ಟು ಸುಣ್ಣದಿಂದ ಚಿತ್ರಗಳನ್ನು ಬಿಡಿಸಿರುತ್ತಾರೆ. ಹಾಗೆಯೇ ಚಿಕ್ಕ ಕುಂಬಗಳನ್ನು ಹಿಡಿದು ದೊಡ್ಡ ಕುಂಬಗಳವರೆಗೆ ಎರಡೆರಡರಂತೆ ತಂದು ಅವುಗಳನ್ನು ಪೂಜೆ ಮಾಡಿ, ಅವುಗಳಲ್ಲಿ ಗಂಗೆ ಪೂಜೆಯನ್ನು ಮಾಡಿ ನೀರು ತುಂಬಿಕೊಂಡು ಬಂದು ಅದನ್ನು ಸುರಗಿ ಎರೆಯುವಾಗ ಆ ನೀರನ್ನು ಉಪಯೋಗಿಸುತ್ತಾರೆ.

**ಮದುಮಕ್ಕಳನ್ನು ಮಾಡುವುದು:** "ಮದುವೆಯಲ್ಲಿ ಮದುಮಗನನ್ನೇ ಬಿಟ್ಟು ಹೋದ್ರಂತೆ" ಅನ್ನುವ ಹಾಗೆ. ಮದುವೆಯಲ್ಲಿ ಮದುಮಗನ ಪಾತ್ರ ಮಹತ್ವದ್ದಾಗಿರುತ್ತದೆ. ಒಂದೊಂದು ಕಡೆ ಒಂದೊಂದು ರೀತಿಯಲ್ಲಿ ಈ ಆಚರಣೆ ಮಾಡಲಾಗುತ್ತದೆ. ಬಂಕಾಪುರ ಗ್ರಾಮದಲ್ಲಿ ಮದುಮಕ್ಕಳನ್ನು ಕರೆದುಕೊಂಡು ಜಂಗಮರ ಮನೆಗೆ ಹೋಗಿ ಅಲ್ಲಿ ಅರಿಷಣ ಹಚ್ಚುವ ಮೂಲಕ ಮದು-ಮಕ್ಕಳನ್ನು ಮಾಡಲಾಗುತ್ತದೆ. ಆ ನಂತರ ಜಂಗಮರ ಮನೆಯಲ್ಲಿ ಶ್ಯಾವಿಗೆ ಹುಗ್ಗಿಯ ಊಟ ಮಾಡಿಸಿ, ಐದು ಮಂದಿ ಮುತ್ತೈದೆಯರು ಆರತಿ ಮಾಡಿ ಕಳುಹಿಸುತ್ತಾರೆ.

**ಒಳಕಲ್ಲು ಪೂಜೆ:** ಮದುವೆಯ ಮನೆಯಲ್ಲಿ ಒಳಕಲ್ಲು ಮತ್ತು ಬೀಸುವ ಕಲ್ಲಿಗೆ ವಿಶೇಷ ಪೂಜೆನ್ನು ಮಾಡಲಾಗುತ್ತದೆ. ಒಳಕಲ್ಲು ಮತ್ತು ಬೀಸುವ ಕಲ್ಲಗಳನ್ನು ತೊಳೆದು ಸುಣ್ಣ ಬಣ್ಣಗಳಿಂದ ಅಲಂಕಾರ ಮಾಡುತ್ತಾರೆ. ಐದು ಜನ ಮುತ್ತೈದೆಯರು ಸೇರುತ್ತಾರೆ ಅರಿಷಣ ಕುಟ್ಟುತ್ತಾ ಹಾಡು ಹೇಳುತ್ತಾರೆ. ಒಳಕಲ್ಲು ಪೂಜೆಯ ನಂತರ ಮುತ್ತೈದೆಯರು ಹಾಡು ಹೇಳುತ್ತಾ ಶ್ಯಾವಿಗೆಯನ್ನು ಹೊಸೆಯುತ್ತಾರೆ. ಅವುಗಳನ್ನು ಪೂಜೆ ಮಾಡಿ ಇಡುತ್ತಾರೆ.

**ಎದುರುಗೊಳ್ಳುವುದು:** ಹೆಸರೇ ಹೇಳುವಂತೆ ಮದುವೆ ಗಂಡಿನ ಮನೆಯಲ್ಲಿ ನಡೆದರೆ ಮದುಮಗಳನ್ನು ಹಾಗೂ ಜೊತೆಗೆ ಬಂದವರನ್ನು, ಹೆಣ್ಣಿನ ಮನೆಯಲ್ಲಿ ನಡೆದರೆ ಮದುಮಗನನ್ನು ಹಾಗೂ ಜೊತೆಗೆ ಬಂದವರನ್ನು ಆಹ್ವಾನಿಸುವ ಕಾರ್ಯಕ್ಕೆ ಎದುರುಗೊಳ್ಳುವುದು ಎಂದು ಕರೆಯ ಲಾಗುತ್ತದೆ. ಮದುಮಗ ಅಥವಾ ಮದುಮಗಳನ್ನು ಎದುರುಗೊಳ್ಳಲು ಬಾಜಾ ಭಜಂತ್ರಿಯೊಂದಿಗೆ ಬಂದಿರುತ್ತಾರೆ. ಒಂದು ದೇವಸ್ಥಾನದಿಂದ ಅವರನ್ನು ಮದುವೆಯ ಸ್ಥಳಕ್ಕೆ ಕರೆತರಲಾಗುತ್ತದೆ ಈ ನಿಯಮಕ್ಕೆ ಎದರುಗೊಳ್ಳುವ ಶಾಸ್ತ್ರ ಎಂದು ಕರೆಯುತ್ತಾರೆ. ಅಲ್ಲಿಂದ ಎಲ್ಲಾ ಕಾರ್ಯಕ್ರಮಗಳು ಪ್ರಾರಂಭವಾಗುತ್ತವೆ.

**ಬಾಸಿಂಗ ಕಟ್ಟುವುದು:** ಮದುಮಕ್ಕಳಿಗೆ ಸರ್ವೇಸಾಮಾನ್ಯವಾಗಿ ಬಾಸಿಂಗ ಕಟ್ಟುವುದು ನಮ್ಮ ಸಂಪ್ರದಾಯವಿದೆ. ಮದುಮಗನನ್ನು ದೇವಸ್ಥಾನವೊಂದಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಬಾಸಿಂಗಗಳನ್ನು ಕಟ್ಟಿ ಸೋದರ ಮಾವನಾದವನು ಹೊತ್ತುಕೊಂಡು ಬರುವ ಶಾಸ್ತ್ರ ಇಲ್ಲಿ ಹಲವು ಸಮುದಾಯಗಳಲ್ಲಿ ಕಾಣಬಹುದು. ಹಂದರದವರೆಗೆ ಹೊತ್ತುಕೊಂಡು ಬಂದ ಸೋದರ ಮಾವನಿಗೆ ಮದುವೆ ಮನೆಯವರು ಉಡುಗೊರೆ ಕೊಡಬೇಕೆಂಬ ನಿಯಮವಿದೆ. ಉಡುಗೊರೆ ಕೊಟ್ಟ ಮೇಲೆ ಮದುಮಗನನ್ನು ಕೆಳಗೆ ಸೋದರ ಮಾವ ಇಳಿಸುತ್ತಾನೆ.

**ಮುಹೂರ್ತ/ಮಾಂಗಲ್ಯ ಕಟ್ಟುವುದು:** ಧಾರೆ ಮುಹೂರ್ತ: ಮನುಷ್ಯನಿಗೆ ಮದುವೆ ಎಂಬುದು ಮುಖ್ಯವಾದ ಘಟ್ಟವಾಗಿದೆ. ಅದರಲ್ಲೂ ಹೆಣ್ಣು ಮಕ್ಕಳಿಗೆ ತಾಳಿಯ ಬಗ್ಗೆ ಅಗಾಧವಾದ ಗೌರವ. ವರನಿಗೆ ಮಡಿ ಉಡಿಸಿ, ಮೈಮೇಲೆ ಶಲ್ಯ ಹೊದಿಸಿ, ಬಾಸಿಂಗ ಕಟ್ಟಿ ಮೊದಲು ಮನೆಯಲ್ಲಿಯ ತಾಳಿ ಕಟ್ಟುವ ಶಾಸ್ತ್ರ ಮಾಡಲಾಗುತ್ತದೆ. ಆ ನಂತರ ಕೇವಲ ಶಾಸ್ತ್ರಕ್ಕಾಗಿ ಹೊರಗಡೆ ಎಲ್ಲರ ಎದರು ಮತ್ತೊಮ್ಮೆ ಅಕ್ಕಿಕಾಳುಗಳನ್ನು ಹಾಕಲಾಗುತ್ತದೆ. ಆದರೆ ಸಮಯಕ್ಕೆ ಸರಿಯಾಗಿ ಮನೆಯ ಒಳಗಡೆ ಈ ಕಾರ್ಯವನ್ನು ಮಾಡಿ ಮುಗಿಸಲಾಗುತ್ತದೆ. ಏಕೆಂದರೆ ಸರಿಯಾದ ಸಮಯಕ್ಕೆ ಅಥವಾ ಮುಹೂರ್ತಕ್ಕೆ ಸರಿಯಾಗಿ ಈ ನಿಯಮವನ್ನು ಮಾಡಬೇಕೆಂಬುದು ನಡೆದುಕೊಂಡು ಬಂದ ಪದ್ಧತಿಯಾಗಿರುತ್ತದೆ. ಆದ್ದರಿಂದ ಆ ಸಮಯಕ್ಕೆ ಮುಗಿಸಲಾಗುತ್ತದೆ.

ನಂತರ ಬೇರೆ ಬೇರೆ ಸಮುದಾಯಗಳಲ್ಲಿ ಬೇರೆ ಬೇರೆ ರೀತಿಯ ನಿಯಮಗಳನ್ನು ಮಾಡುವುದನ್ನು ಕಾಣಬಹುದು. ವಧುವಿನ ಗೌರಿ ಪೂಜೆ, ವರನ ಕಾಶಿಯಾತ್ರೆ ವಿಶಿಷ್ಟ ಆಚರಣೆಗಳಾಗಿವೆ. ಹುಡುಗಿಯ ತಂದೆ ತಾಯಿಯರು ಕಾಶಿಗೆ ವಿರಕ್ತನಾಗಿ ಹೋದ ಅಳಿಯನನ್ನು

ವಾಪಸ್ಸು ಕರೆತಂದು. "ಕನ್ಯಾದಾನ" ಮಾಡು ಸಂಕೇತವಾಗಿದೆ. ಮಾಂಗಲ್ಯದ ನಂತರ ಅರುಂಧತಿ ನಕ್ಷತ್ರ ದರ್ಶನ ಬಹುತೇಕ ವರ್ಗಗಳಲ್ಲಿ ಕಂಡುಬರುತ್ತದೆ. ಮತ್ತೆ ಕೆಲವರು ನೀರಿನಲ್ಲಿ ಉಂಗುರ ಹಾಕಿ ಹುಡುಕಲು ಹೇಳುವರು. ಯಾರು ಹುಡುಕುತ್ತಾರೆಯೋ ಅವರು ಅವರೇ ಜೀವನದಲ್ಲಿ ಮುಂದೆ ಅಧಿಕಾರವನ್ನು ಚಲಾಯಿಸುತ್ತಾರೆ ಎಂಬ ನಂಬಿಕೆ ಇದೆ.

**ಮನೆ ತುಂಬಿಸಿಕೊಳ್ಳುವ ಶಾಸ್ತ್ರ:** ಮದುವೆಯಾದ ನಂತರದಲ್ಲಿ ಅವರವರ ಅನುಕೂಲಕ್ಕೆ ತಕ್ಕಂತೆಯೇ ಗಂಡಿನವರು ಹೇಳಿದ ದಿವಸ ಮನೆ ತುಂಬಿಸಿಕೊಳ್ಳಲಾಗುತ್ತದೆ. ಅಂದು ನಾನಾ ರೀತಿಯ ಅಡುಗೆ ಮಾಡಿಕೊಂಡು ಹೆಣ್ಣಿನ ಕಡೆಯವರು ಗಂಡಿನ ಮನೆಗೆ ಬರುತ್ತಾರೆ. ಆ ಅಡುಗೆಯನ್ನು ಊರಿಗೆಲ್ಲಾ ಹಂಚಲಾಗುತ್ತದೆ. ಮತ್ತೆ ಬೇಕಾದವರಿಗೆ ಊಟದ ವ್ಯವಸ್ಥೆ ಕೂಡಾ ಮಾಡಲಾಗಿರುತ್ತದೆ. ಅಂದು ಮನೆ ತುಂಬಿಸಿಕೊಳ್ಳುವುದು ಎಂದರೆ "ಸೋಬಾನ ಪ್ರಸ್ಥ" ಎಂತಲೂ ಕರೆಯುತ್ತಾರೆ. ಕೆಲವು ಕಡೆ ಬೇರೆ ಬೇರೆ ಪದ್ಧತಿಗಳನ್ನು ಮಾಡುತ್ತಾರೆ. ಮದು ಮಕ್ಕಳನ್ನು ಮಂಚದ ಮೇಲೆ ಕೂಡಿಸಿ ಆರತಿ ಮಾಡಲಾಗುತ್ತದೆ. ಜೊತೆಗೆ ಹಾಲು ಹಣ್ಣು ಹಂಪಲಗಳನ್ನು ಇಟ್ಟಿರುತ್ತಾರೆ. ಮಂಚಕ್ಕೆ ಹೂವಿನಿಂದ ಅಲಂಕಾರ ಮಾಡಲಾಗಿರುತ್ತದೆ.

ಮದುವೆಯಾದ ೯ನೇ ದಿನ ನಾಗೋಲಿ ಶಾಸ್ತ್ರ ಮಾಡಿ ಹಂದ್ರವನ್ನು ತಿರುವಿ ಹಾಕುತ್ತಾರೆ. ನಂತರದಲ್ಲಿ ಬಾಸಿಂಗ, ಹೂವಿನ ಹಾರವನ್ನು ತೆಗೆದುಕೊಂಡು ಹೋಗಿ ಗಂಗೆ ಪೂಜೆ ಮಾಡು ವಂತ ಆಚರಣೆಯೂ ಹಿಂದೂ ಸಂಪ್ರದಾಯದಲ್ಲಿ ವಿಶಿಷ್ಟವಾಗಿದೆ.

**ಜನನ ಮತ್ತು ಬಾಣಂತನ:** ಎಲ್ಲಾ ಸಮುದಾಯದ ಜೀವನಾವರ್ತನ ಆಚರಣೆಗಳಲ್ಲಿ ಪ್ರಮುಖವಾದುದು ಬಾಣಂತನ. ಗರ್ಭಿಣಿಯಾದ ಹೆಣ್ಣುಮಗಳನ್ನು ಗಂಡನ ಮನೆಯಿಂದ ತವರು ಮನೆಯವರು ಆರು ಅಥವಾ ಎಂಟು ತಿಂಗಳಲ್ಲಿ ಸೀಮಂತ ಕಾರ್ಯ ಮಾಡಿ ಕರೆದುಕೊಂಡು ಬರುತ್ತಾರೆ. ತವರುಮನೆಗೆ ಬಂದ ನಂತರ ಅಕ್ಕಪಕ್ಕದ ಮನೆಯವರು ಸಂಬಂಧಿಕರು ಬಸುರಿ ಹೆಂಗಸನ್ನು ಊಟಕ್ಕೆ ಕರೆಯುವ ನಿಯಮವಿದೆ. ಊಟವಾದ ಮೇಲೆ ಅವರಿಗೆ ಆರತಿ ಮಾಡಿ ಸೀರೆ ಅಥವಾ ಕುಪ್ಪಸವನ್ನು ಕೊಟ್ಟು ಕಳುಹಿಸುವುದು ಈ ಊರಿನ ಆಚರಣೆಗಳಲ್ಲಿ ಒಂದಾಗಿದೆ.

**ನಾಮಕರಣ:** ಮಗು ಹುಟ್ಟಿದ ಐದನೇ ದಿನಕ್ಕೆ 'ಐದೇಸಿ' ಅಥವಾ ಚಟಿಗೆವ್ವನ ಪೂಜೆ ಮಾಡಲಾಗುತ್ತದೆ. ಆದಿನ ಇದಿಯಮ್ಮ ಅಥವಾ ಇದಿಮುಂಡಿ ಆ ಮಗುವಿನ ಹಣೆಬರೆಹವನ್ನು ಬರೆಯುತ್ತಾಳೆ ಎಂಬ ನಂಬಿಕೆ ಇದೆ. ಕಡ್ಲಿ, ಬೇಳೆ, ಬೆಲ್ಲ, ಅಕ್ಕಿ, ಒಣಕೊಬ್ಬರಿ, ಉತ್ತತ್ತಿ ಇವೆಲ್ಲವನ್ನು ಮೊರದಲ್ಲಿ ಇಟ್ಟು ಮತ್ತು ದುಂಡಿಕಲ್ಲಿಗೆ ಖುಲಾವಿಯನ್ನು ತೊಡಿಸಿ ಪೂಜೆ ಮಾಡಲಾಗುತ್ತದೆ. ಮೊರದ ಪಕ್ಕದಲ್ಲಿ ದೀಪವನ್ನು ಹಚ್ಚಿ ಇಡಲಾಗುತ್ತದೆ, ಹಾಗೆಯೇ ಇದು ಆರದ ಹಾಗೆ ರಾತ್ರಿಯಿಡಿ ಇದ್ದರೆ ಒಳ್ಳೆಯದೆಂಬ ನಂಬಿಕೆ ಇದೆ. ಹಾಗೂ ಅಂದು ಮನೆಯವರೆಲ್ಲರೂ ಇದಿಮುಂಡಿಗೆ ಹುಟ್ಟಿದ ಮಗುವಿಗೆ ಒಳ್ಳೆಯದಾಗಲಿ ಎಂದು ಎಲ್ಲರೂ

ಬೇಡಿಕೊಳ್ಳುತ್ತಾರೆ. ಹಾಗೂ ಮರುದಿನ ಮುಂಜಾನೆ ಸೂಲಗಿತ್ತಿಗೆ ಮೊರ ಹಾಗೂ ಮೊರದಲ್ಲಿರುವ ಎಲ್ಲಾ ಸಾಮಗ್ರಿಗಳನ್ನು ಕೊಟ್ಟು ಕಳುಹಿಸಲಾಗುತ್ತದೆ.

ಬಂಕಾಪುರ ಗ್ರಾಮದ ಜನರು ಹುಟ್ಟಿದಂತಹ ಮಗುವಿಗೆ ಹೆಸರಿಡುವುದನ್ನು ನಾಮಕರಣ ಎಂದು ಕರೆಯುತ್ತಾರೆ. ಈ ಹೆಸರಿಡುವ ಶಾಸ್ತ್ರವನ್ನು ಐದು, ಹದಿಮೂರು, ತಿಂಗಳಿಗೆ ಹುಟ್ಟಿದ ಮನೆಯಲ್ಲಿ ಶುಭ ಮುಹೂರ್ತ ನೋಡಿ ಬಂಧು ಮಿತ್ರರಿಗೆ ತಿಳಿಸಿ ನಾಮಕರಣ ಶಾಸ್ತ್ರವನ್ನು ಮಾಡುತ್ತಾರೆ.

ಮಗು ಹುಟ್ಟಿ ಹದಿಮೂರನೇ ದಿವಸ ನಾಮಕರಣವನ್ನು ವಿಜೃಂಭಣೆಯಿಂದ ಮಾಡಲಾಗುತ್ತದೆ. ಅಂದು ಮಗುವಿನ ತಂದೆ ಮನೆಯವರು ಅತ್ತೆಯಂದಿರು ಬಂದಿರುತ್ತಾರೆ. ಅತ್ತೆಯ ಕಡೆಯಿಂದಲೇ ಮಗುವಿಗೆ ನಾಮಕರಣ ಮಾಡಿಸುವ ಕಾರ್ಯ ಮಾಡಲಾಗುತ್ತದೆ. ಅತ್ತೆಯು ಹೆಸರಿಡುವಾಗ ಸೇರಿದ ಎಲ್ಲ ಮಹಿಳೆಯರು ಅವಳ ಬೆನ್ನಿಗೆ ಗುದ್ದುತ್ತಾರೆ. ಹೀಗೆ ಹೆಸರಿಡುವ ಕಾರ್ಯ ನಡೆಯುತ್ತಿರುವಾಗ ಹೆಣ್ಣುಮಕ್ಕಳು ಜೋಗುಳ ಪದಗಳನ್ನು ಹಾಡುತ್ತಾರೆ.

"ನೀರಾಗ ನೆರಳಾಡಿ
ಸೂರ್ಯ ಚಂದ್ರಮ ಮೂಡಿ
ಆದರಂತೆ ತಾಬೇಡಿ
ಬೋರ್ಯಾಡಿ ಆಳತಾನ ಜೋ ಜೋ

ಗೋದಿ ಪಾಯಸ ಮಾಡಿ
ಬಳಿದು ಬಟ್ಟಲು ತುಂಬಿ
ತುತ್ತಮಾಡಿ ಉಣ್ಣಿಸಿದರ
ಹಟಮಾಡಿ ಅಳತಾನ ಜೋ ಜೋ

ಅಕ್ಕಿ ಪಾಯಸ ಮಾಡಿ
ಬಳಿದು ಬಟ್ಟಲು ತುಂಬಿ
ತುತ್ತಮಾಡಿ ಉಣಿಸಿದರ
ಹಟಮಾಡಿ ಅಳತಾನ ಜೋ ಜೋ

ಬಂಗಾರದ ತೊಟ್ಟಿಲು
ಬೆಳ್ಳಿ ನಾಗಮಣಿ
ಸಿಂಗಾರಿ ಶ್ರೀ ಕೃಷ್ಣನ
ಚಂದಾಗಿ ತೂಗಿರಿ ಜೋ ಜೋ

ಕರೆದು ಬಂದೆನು ತಾಯಿ
ನೆರೆದು ಬಂದಿತು ಮಂದಿ

ಸಿಂಗಾರಿ ಶ್ರೀ ಕೃಷ್ಣನಿಗೆ
ಚಂದಾಗಿ ಹೆಸರಿಡಿರಿ ಜೋ ಜೋ

**ಸಾವು-ಸಂಸ್ಕಾರ:** ಲಿಂಗಾಯತ ಸಮಾಜದಲ್ಲಿ ಸಮಾಧಿ ಶವ ಸಂಸ್ಕಾರ ಕ್ರಿಯೆಯೂ ತುಂಬಾ ಸರಳಗೊಂಡಿದೆ. ಜೀವ ಹೋದಮೇಲೆ ಮುಖತೊಳೆದು ವಿಭೂತಿ ಧಾರಣ ಮಾಡಿ ಕೂರಿಸಿ ಪಕ್ಕದಲ್ಲಿ ಒಂದು ದೀಪವನ್ನು ಇಡುತ್ತಾರೆ. ಊದಬತ್ತಿಯನ್ನು ಸಹ ಹಚ್ಚಿ ಇಡುತ್ತಾರೆ. ಜೀವ ಹೋಗುತ್ತದೆ ಎನ್ನುವಾಗ ಕಿವಿಯಲ್ಲಿ ಪಂಚಾಕ್ಷರಿ ಮಂತ್ರವನ್ನು ಹೇಳುತ್ತಾರೆ. ರಾತ್ರಿಯಾಗಿದ್ದರೆ ರಾತ್ರಿಯಲ್ಲಿ ಶಿವಭಜನೆ ಮಾಡುತ್ತಾ ಬೆಳಕು ಹರಿಸುತ್ತಾರೆ. ಬೆಳಕು ಹರಿದ ಮೇಲೆ ಜಂಗಮರನ್ನು ಕರೆಸಿ, ಶವಕ್ಕೆ ಪಂಚಾಮೃತ ಮತ್ತು ಪಾದೋದಕದಿಂದ ಮಿಶ್ರವಾದ ನೀರಿನಿಂದ ಸ್ನಾನ ಮಾಡಿಸಿ, ಹೊಸಬಟ್ಟೆ ಉಡಿಸಿ ಮನೆಯ ಪಡಸಾಲೆಯಲ್ಲಿ ಅಥವಾ ಮುಂದಿನ ಜಗಲಿ ಮೇಲೆ ಪೂರ್ವ ಮುಖವಾಗಿ ದಂಪತಿ ಸಮೇತ ಕುಳ್ಳರಿಸುತ್ತಾರೆ. ತಲೆಯು ಅಲ್ಲಾಡದಂತೆ ಬಿದಿರಿನ ಕವೆಯಿಂದ ಬಿಗಿಯಾಗಿ ಕಟ್ಟುತ್ತಾರೆ. ತಲೆಯ ಮೇಲೆ ಕಳಸಗಿಂಡಿಯನ್ನ ಇಡುತ್ತಾರೆ. ಜಂಗಮರ ಪಕ್ಕದಲ್ಲಿ ಕುರ್ಚಿಯ ಮೇಲೆ ಕುಳಿತು ಅವರ ಪಾದವನ್ನು ಶವದ ತೊಡೆಯ ಮೇಲೆ ಇಡುತ್ತಾರೆ. ಜಂಗಮರ ಪಕ್ಕದಲ್ಲಿ ಕುರ್ಚಿಯ ಮೇಲೆ ಕುಳಿತು ಅವರ ಪಾದವೊಂದನ್ನು ಶವದ ತೊಡೆಯ ಮೇಲೆ ಇಡುತ್ತಾರೆ. ಕರಡಗೆಯಲ್ಲಿರುವ ಇಷ್ಟಲಿಂಗವನ್ನು ಒಂದು ಕೆಂಪು ವಸ್ತ್ರದಲ್ಲಿ ಕಟ್ಟಿ ಎಡಗಡೆಯ ತೋಳಿಗೆ ಕಟ್ಟುತ್ತಾರೆ. ಪೂಜೆಯನ್ನು ಮನೆಯವರೆಲ್ಲಾ, ನೆಂಟರು, ಇಷ್ಟರು ಎಲ್ಲಾ ಮಾಡಿದ ಮೇಲೆ ಕ್ರಿಯಾ ಸಮಾಧಿಯ ವೇಳೆ ಹಾಡಿದ ಹಾಡುಗಳನ್ನು ಇಲ್ಲೂ ಹಾಡಿ ಮಂಗಳಾರತಿ ಕಾರ್ಯ ಮುಗಿಸುತ್ತಾರೆ, ವಸ್ತು-ವಡವೆ, ದವಸ-ಧಾನ್ಯ ಮೊದಲಾದವುಗಳನ್ನು ಜಂಗಮರಿಗೆ ಮತ್ತು ಇತರರಿಗೆ ದಾನ ಮಾಡುತ್ತಾರೆ.

ನಂತರ ಕೈವಲ್ಯದಲ್ಲಿ ಶವವನ್ನು ಕುಳ್ಳಿರಿಸಿಕೊಂಡು ವಾದ್ಯ ಸಮೇತ ಮೆರವಣಿಗೆಯಲ್ಲಿ ರುದ್ರಭೂಮಿಗೆ ಬರುತ್ತಾರೆ. ನಂತರ ಸಮಾಧಿಯ ಬಳಿಗೆ ಬಂದು ಕೈವಲ್ಯವನ್ನು ಇಳಿಸಿ ಶವವನ್ನು ಉತ್ತರಮುಖವಾಗಿ ಪದ್ಮಾಸನದಲ್ಲಿ ಕೂರಿಸಿ ಜಂಗಮರ ಪಾದವನ್ನು ತಲೆಯ ಮೇಲಿರಿಸಿ ಪುನಃ ಪೂಜೆಯನ್ನು ಮಾಡಿ ಮಂಗಳಾರತಿ ಪುಷ್ಪಾಂಜಲಿ ಮಾಡಿ ಎಲ್ಲರಿಗೂ ಮುಖ ತೋರಿಸಿ ಕೆಲವರು-ಬಿಳಿ ಬಟ್ಟೆಯಿಂದ ಮಾಡಿದ ಚೀಲದಲ್ಲಿ ಶವವನ್ನಿಟ್ಟು ಕಟ್ಟುತ್ತಾರೆ. ತದನಂತರ ಶವವನ್ನು ಉತ್ತರಮುಖವಾಗಿ ಕುಣಿಯಲ್ಲಿ ಕುಳ್ಳಿರಿಸಿ ಆನಂತರ ಮಣ್ಣನ್ನು ಹಾಕುತ್ತಾರೆ. ಆದಾದ ಬಳಿಕ ಸಮಾಧಿಯನ್ನು ಮುಚ್ಚಿಸುತ್ತಾರೆ. ಇಲ್ಲಿಗೆ ಸಮಾಧಿ ಕಾರ್ಯ ಮುಗಿಯುತ್ತದೆ.

ಹೀಗೆ ಹುಟ್ಟಿದಾಗ, ವಯಸ್ಸಿಗೆ ಬಂದ ಹೆಣ್ಣು ಮೈನೆರೆದಾಗ ಅಥವಾ ಋತುಸ್ರಾವವಾದಾಗ ಮರಣವನ್ನಪ್ಪಿದಾಗ ಸೂತಕ-ಮುಟ್ಟು-ಚಟ್ಟು ಹೊಲಿ ಇತ್ಯಾದಿ ಆಚರಣೆಗಳು ಇವತ್ತು ಅಪೂರ್ವ ವಾಗಿವೆ. ಜಂಗಮರನ್ನು ಕರೆಸಿ ಕರುಣ ಪ್ರಸಾದ ಸ್ವೀಕರಸಿದರೆ ಇವಾವುಗಳೂ ದೋಷವಲ್ಲ,

ಸ್ನಾನಮಾಡಿ ಲಿಂಗಪೂಜೆ ಮಾಡಿಕೊಂಡರೆ ಸಾಕು. ಈ ಸಮಾಜದಲ್ಲಿ ತಂದ ಇದೊಂದು ಅದ್ಭುತ ಆಚರಣೆ ಎನ್ನಬಹುದು.

ಇವೆಲ್ಲವನ್ನು ಪರಿಭಾವಿಸಿದರೆ ಹೂವಿನ ಜೊತೆ ನಾರು ಸ್ವರ್ಗವನ್ನು ಸೇರುವಂತೆ ಆತ್ಮದ ಜೊತೆ ದೇಹವೂ ಸ್ವರ್ಗವನ್ನು ಸೇರಲಿ ಎಂಬ ವಿಶಾಲ ಮನೋಭಾವ ಈ ಕ್ರಿಯೆಯಲ್ಲಿ ಕಂಡುಬರುತ್ತದೆ. "ಅಪುತ್ರಸ್ಯಗತಿರ್ನಾಸ್ತಿ" ಎಂಬ ಮಾತು ಈ ಸಮುದಾಯದಲ್ಲಿ ಕಂಡೂ ಇಲ್ಲ, ಕೇಳಿಯೂ ಇಲ್ಲ" ಗುರುಮುಟ್ಟಿದುದು ಗುಡ್ಡ" ಎನ್ನುವಂತೆ ಸ್ವಾಮಿಯ ಪಾದ ಸ್ಪರ್ಶವಾದರೆ ಸಾಕು ಆ ವ್ಯಕ್ತಿಗೆ ಸದ್ಗತಿ ದೊರಕುತ್ತದೆ ಎಂಬ ನಂಬಿಕೆ ಈ ಧರ್ಮದಲ್ಲಿ ಇದೆ. ಮಕ್ಕಳಿಲ್ಲದಿದ್ದರೆ ಏನಂತೆ ವಂಶದಲ್ಲಿ ಉಳಿದ ಇತರರಲ್ಲಿ ಯಾರಾದರೂ ಒಬ್ಬರು ಅಂತ್ಯಕ್ರಿಯೆಗಳನ್ನು ಹಾಗೂ ಇತರ ಕ್ರಿಯೆಗಳನ್ನು ಮಾಡಿದರೆ ಸಾಕು ಎಂಬ ಭಾವನೆ ಈ ಧರ್ಮದಲ್ಲಿ ಕಂಡುಬರುತ್ತದೆ. ಮಕ್ಕಳಿಲ್ಲ, ಮಕ್ಕಳಿಲ್ಲದಿದ್ದರೆ ಸದ್ಗತಿ ಇಲ್ಲ ಎಂಬ ಚಿಂತೆ ಜೀವನದುದ್ದಕ್ಕೂ ಜೀವಿಯನ್ನು ಕಾಡಿ ಕೊರಗಿ ಕೊರಗಿ ಸಾಯುವಂತೆ ಮಾಡುವ ಪರಿಸ್ಥಿತಿಯಿಂದ ಸಾಮಾನ್ಯ ಜನರನ್ನು ಪಾರುಮಾಡಿದೆ ಎಂದು ಹೇಳಬಹುದು. ಬದುಕಿ ಉಳಿದವರು ಯಾರಾದರೂ ಧಾರ್ಮಿಕ ಕ್ರಿಯೆಗಳನ್ನು ಮಾಡಿ ಮೃತರ ಆತ್ಮಕ್ಕೆ ಶಾಂತಿ ಕೋರಬಹುದಾಗಿದೆ. ಇದು ಈ ಸಮುದಾಯದ ವಿಶೇಷ ಸಂಸ್ಕೃತಿಗಳಲ್ಲಿ ಒಂದು. ಈ ಆಚರಣೆ ಸಮುದಾಯದ ಕೆಲವು ಧಾರ್ಮಿಕ ಕಟ್ಟಳೆಗಳನ್ನು ಹೊಡೆದು ಹಾಕಿದೆ. ಸೌಹಾರ್ದತೆಯನ್ನು ಪ್ರತಿಪಾದಿಸಿದೆ. ಇವತ್ತು ಇಂತಹ ಪರಿಕಲ್ಪನೆ ಬೇಕಾಗಿದೆ.

**ಭಜನೆ ಪದ:**

ಎಲ್ಲಿಂದ ನೀ ಬಂದಿ
"ಎಲ್ಲಿಂದ ನೀಬಂದಿ ಬರುವಾನ ಎನ ತಂದಿ ।
ಬೆತ್ತಲೆ ಬಂದು ಬೆತ್ತಲ ಹೋಗುವಾಗ । ಎಲ್ಲೈತಿ
ನಿನ್ನಮಂದಿ ॥ಪ॥

ಗಳಿಸಿ ಇಟ್ಟ ದೌಸದಾಣ್ಯ ಎಲ್ಲಾ ನಂದ ಅಂದಿ।
ಮಾಡಿ ಮನಿ ಕಟ್ಟಿ ಮಲಗಿದಿ। ಮಡದಿ ಮಕ್ಕಳು
ನನ್ನವರೆಂದು ಕೈಮಾಡಿ ಹೇಳಿದಿ । ಹಗಲು ರಾತ್ರಿ
ದುಡಿದು ದುಡಿದು ಗಂಟಿಕಟ್ಟಿದಿ । ಹೊಂಟಿ ಎದ್ದ ಹೊದಿ ।
ಇದೆಲ್ಲಾ ಹೆಂಗ ಬಿಟ್ಟಹೊದಿ । ನಾಚಿಗೇಡಿ ಕರ್ಮಕ ಗುರಿಯಾದಿ ॥ಪ॥
ನರಜನ್ಮ ಸ್ಥಿರವೆಂದಿ । ನಂಬಿದಿ ಎಂಬುದು ಕಳಕೊಂಡಿ ।
ಪುಂಡನಾಗಿ ನೀ ಮೆರೆದಿ । ಮೂರುದಿನದ ಸಂತಿ ಇದು
ನೀನು ಮರತಿದಿ। ದೇವರು ಆಡಿಸೋ ಆಟವಿದು
ಪಾತ್ರಮಾಡಿದ। ಹೊಂಟಿ ಎದ್ದ ಹೊದಿ । ಇದೆಲ್ಲಾ ಹೆಂಗ
ಬಿಟ್ಟುಹೋದಿ । ಎಲ್ಲಿತ ನಿನ್ನ ಮಂದಿ ॥ಪ॥

ಹುಟ್ಟಿ ಬರಲಾಕ ಹುಲ್ಲು ಜನ್ಮವಲ್ಲಾ । ಶಿರಬಾಗೂ ಶರಣರ
ನೀತಿ ನೀನು ತಪ್ಪಿದರೆ ಹುಟ್ಟತಿದಿ ಹಂದಿಯಾಗಿ ।
ಇದನ ನೀನು ತಿಳಿಕೊರು ತಮ್ಮ ಬಂದಿದಿ ಧರಿಗಿ ।
ಕೊರಗಿ ಹೊಗಬ್ಯಾಡ ಕಾಗಿ । ಧರಿಯೊಳೊ ಶಾನವಾಡ
ಈ ಧರಿಗಿ । ಶಿರಬಾಗೂ ಬಸ್ವಾನಂದರಗಿರಿ ॥ಪ॥

**೪.೨. ವಾರ್ಷಿಕಾವರ್ತನ ಆಚರಣೆಗಳು**

ಎಲ್ಲ ಧರ್ಮೀಯರಲ್ಲಿಯೂ ಧರ್ಮಕ್ಕೆ ಹೊಂದಿಕೊಂಡಂತೆಯೇ ಕಂಡುಬರುವ ಆಚರಣೆ ಧರ್ಮದ ಹೊದಿಕೆಯನ್ನು ಹೊತ್ತು ಸಂಭ್ರಮ ಸಡಗರ, ಉತ್ಸಾಹ, ಉಲ್ಲಾಸ, ಭಕ್ತಿ, ಗೌರವ ಹೀಗೆ ಎಲ್ಲವನ್ನು ಅದು ಪ್ರದರ್ಶಿಸುತ್ತದೆ. ಹಬ್ಬ ಎಲ್ಲ ಧರ್ಮಗಳಲ್ಲಿಯೂ ಕಂಡುಬರುವಂತೆಯೇ ಎಲ್ಲ ದೇಶಗಳಲ್ಲಿಯೂ ಆಯಾ ಪ್ರದೇಶದ ನಂಬಿಕೆ ಸಂಪ್ರದಾಯಗಳಿಗನುಗುಣವಾಗಿ ಪ್ರದರ್ಶನ ಗೊಳ್ಳುತ್ತದೆ. ಅದರಂತೆ ಬಂಕಾಪುರದ ಎಲ್ಲ ಸಮುದಾಯಗಳಲ್ಲಿ ವಿವಿಧ ಹಬ್ಬಗಳ ಮಜಲುಗಳನ್ನು ಗುರುತಿಸಬಹುದು. ಕಾಲಮಾನಕ್ಕೆ ಅನುಗುಣವಾಗಿಯೂ ಈ ಹಬ್ಬಗಳು ತಮ್ಮ ರೂಪ-ಸ್ವರೂಪಗಳನ್ನು ಹೊಂದಿರುತ್ತವೆ. ಹಬ್ಬಗಳು ಕೇವಲ ಧಾರ್ಮಿಕ ಭಾವನೆಗಳನ್ನು ಹೊಂದಿರುವುದಷ್ಟೇ ಅಲ್ಲದೆ ಸಾಂಸ್ಕೃತಿಕ ಅಂಶಗಳನ್ನು ಮೈಗೂಡಿಸಿಕೊಂಡ ಒಂದು ವಿಶಿಷ್ಟ ಆಚರಣೆಗಳಾಗಿವೆ.

"ವರ್ಷಕ್ಕೊಮ್ಮೆ ಬರುವ ಹಬ್ಬಗಳ ಆಚರಣೆಗಳನ್ನು ವಾರ್ಷಿಕಾವರ್ತನದ ಆಚರಣೆಗಳೆಂದು ಕರೆಯುವರು" ಹಿಂದೂಗಳು ವರ್ಷ ತುಂಬಾ ಹಬ್ಬಗಳನ್ನಾಚರಿಸುವ, ವ್ರತ, ಉಪವಾಸ ಕೈಗೊಳ್ಳುವ, ಅನೇಕ ಪವಿತ್ರ ದಿನಗಳಿವೆ. ಸಾಮಾನ್ಯವಾಗಿರುವ ಹಬ್ಬಗಳಲ್ಲದೇ ಬೇರೆ-ಬೇರೆ ಪಂಥಗಳಿಗೆ ಪ್ರತ್ಯೇಕ ಹಬ್ಬಗಳೂ ಇವೆ.

ಹಬ್ಬ ಎಂಬ ಪದವು ಸಂಸ್ಕೃತದ 'ಪರ್ವ' ಶಬ್ದದ ತದ್ಭವ ರೂಪ. ಪರ್ವ ಎಂದರೆ ಒಂದು ಮತ್ತೊಂದರ ಜೊತೆಗೆ ಸಂಭವಿಸುವುದು ಎಂದರ್ಥ. ಸೂರ್ಯಚಂದ್ರರ ದಿಕ್ಕು ಬದಲಾಗುವುದೇ ಪರ್ವ. ಅದನ್ನೇ ನಮ್ಮ ಪೂರ್ವಜರು ಅಮವಾಸ್ಯೆ, ಹುಣ್ಣಿಮೆಗಳೆಂದು ಹೆಸರಿಸಿದಂತೆ ಕಾಣುತ್ತದೆ. ಮಾನವ ತನ್ನ ಬಯಕೆ ಇಲ್ಲವೇ ಸಂಕಲ್ಪ, ವ್ರತ, ಇಚ್ಛೆಯ ಈಡೇರಿಕೆಗಾಗಿ, ಒಂದು ಸೀಮಿತವಾದ ಅವಧಿಯಲ್ಲಿ ಕೈಗೊಳ್ಳುವ ಹರಕೆ, ರೂಢಿ ಸಂಪ್ರದಾಯ, ಆಚರಣೆ ಉತ್ಸವಗಳೇ ಹಬ್ಬಗಳಾಗಿ ಬಂದಿವೆ. ಮಾನವನು ಐಹಿಕ ಸುಖ, ಸಂತೋಷ ಹಾಗೂ ಮುಕ್ತಿ ಸಾಧನೆಗಾಗಿ ಹಬ್ಬ ಆಚರಣೆಗಳಲ್ಲಿತೊಡಗಿದಂತೆ ತೋರುತ್ತದೆ. ಸೃಷ್ಟಿಕರ್ತನಾದ ಶಿವನು ಪ್ರಪಂಚದಲ್ಲಿ ನಾನಾ ರೂಪಗಳಿಂದ ಅವತರಿಸಿ ಜಗತ್ತನ್ನು ಕಾಪಾಡುವನೆಂದು ಹೇಳುತ್ತಾರೆ. ಈ ತೆರನಾದ ಸಮಾರಂಭದ ದಿನಗಳನ್ನು ಜನಪದರು ಹಬ್ಬ ಹರಿದಿನಗಳೆಂದು ಕರೆಯುತ್ತಾ ಬಂದಿರಬೇಕು. ಮಾನವ ತನ್ನ ನಿತ್ಯ ಲೌಕಿಕ ಜೀವನದಿಂದ ಅಲೌಕಿಕ ಜೀವನದತ್ತ ಮುನ್ನಡೆಯಲು ಸನಾತನವಾಗಿ

ಆಚರಿಸುತ್ತಾ ಬಂದ ಈ ಹಬ್ಬಗಳು ಸಹಾಯಕವಾಗಿವೆ. ಹೀಗಾಗಿ ಹಬ್ಬದ ದಿನವೆಂದರೆ ಪವಿತ್ರ ದಿನವಾಗಿದೆ. ಅದನ್ನು ಬಡವಬಲ್ಲಿದವರೆಲ್ಲರೂ ಹರುಷದಿಂದ ಆಚರಿಸುತ್ತಾ ಬಂದಿದ್ದಾರೆ.

ಹಬ್ಬಗಳು ಪ್ರತಿವರ್ಷ ವಿಶೇಷ ಸಂದರ್ಭಗಳಲ್ಲಿ ಸಾಮಾಜಿಕ ಕ್ಷೇಮಕ್ಕಾಗಿ ಆಚರಿಸಲ್ಪಡುತ್ತವೆ. ಬಂಧು ಬಳಗವು ಸೇರುವ ರಕ್ತಸಂಬಂಧಿಗಳನ್ನು ಒಟ್ಟುಗೂಡಿಸುವ ಸಂದರ್ಭ, ಊರು ಕೇರಿಗಳನ್ನು ಹತ್ತಿರ ತರುವ ಸಂದರ್ಭ, ಸಂತೋಷದ ಸಂದರ್ಭ ಎಂದು ನಿರ್ದಿಷ್ಟಪಡಿಸಿದ ದಿನಗಳಲ್ಲಿ ಆಚರಿಸುವ ಶುಭಕಾರ್ಯದ ಸಂಕೇತವಾಗಿ ಹಬ್ಬಗಳು ನಡೆದು ಬಂದಿವೆ ಹಾಗೂ ನಡೆಯುತ್ತಲೇ ಇವೆ. ಊರಿನ ಜನರೆಲ್ಲರಿಗೂ ಬಂಧು ಮಿತ್ರರಿಗೂ ಶುಭಕೋರುವ ಹಬ್ಬಗಳು ಮನೆಯೊಳಗೆ ಆಚರಿಸುವಂತಹವು. ಕೆಲವು ಹಬ್ಬಗಳು ಊರಿನ ಪ್ರತಿಯೊಂದು ಕೋಮಿನವರನ್ನು ಆಚರಿಸುವಂತೆ ಮಾಡುತ್ತವೆ. ಹಬ್ಬದಲ್ಲಿ ಊಟವೇ ಮುಖ್ಯ. ಅದಕ್ಕೆಂದೇ ಪ್ರಾಶಸ್ತ್ಯವಾದ ಊಟವನ್ನು ಹಬ್ಬದೂಟ ಎಂದು ಕರೆಯುವುದು ವಾಡಿಕೆಯಾಗಿದೆ. "ಕೇವಲ ಉಂಡು, ಉಟ್ಟು, ತೇಗಿ ನಲಿದಾಡುವುದಷ್ಟೇ ಹಬ್ಬಗಳಲ್ಲ. ಪ್ರತಿ ನಿಯಮಗಳನ್ನು ಎಲ್ಲಾ ದಿನಗಳಲ್ಲಿ ಅಲ್ಲದಿದ್ದರೂ ಕೆಲವೊಂದು ವಿಶೇಷ ದಿನಗಳಲ್ಲಿಯಾದರೂ ಪಾಲಿಸಿ ಕಡ್ಡಾಯವಾಗಿ ದೇಹದಂಡನೆಯ ಮೂಲಕ ಅಥವಾ ಹಬ್ಬಕ್ಕೆ ಕಾರಣವಾದ ಸಂಗತಿಯ ಬಗ್ಗೆ ಗೌರವ ಭಾವನೆಯನ್ನು ವ್ಯಕ್ತಪಡಿಸುವ ತನಗೆ ತಾನೇ ಆತ್ಮಸಂಗಾತಿಯಾಗುವ ನಿಯಮಗಳನ್ನು ಕಲ್ಪಿಸಿಕೊಡುವಂತಹ ಆಚರಣೆಗಳೇ ಹಬ್ಬಗಳು. ಸ್ನಾನ, ವಂದನೆ, ಜಪ, ತಪ, ಪೂಜೆ ಇತ್ಯಾದಿಗಳೊಂದಿಗೆ ಬಾಹ್ಯ ಹಾಗೂ ಅಂತಃಶುದ್ಧಿಗೊಳ್ಳುವ ಕ್ರಮಗಳನ್ನು ಹಬ್ಬಗಳು ಅಭ್ಯಸಿಸಿಕೊಡುತ್ತವೆ". ಹಾಗೂ ಮನಸ್ಸಿಗೆ ಶಾಂತಿ ಹಾಗೂ ನೆಮ್ಮದಿಯನ್ನು ನೀಡುತ್ತವೆ.

ಜನಪದರು ತಮ್ಮ ಮನೆಗಳನ್ನು ಆ ಸಂದರ್ಭದಲ್ಲಿ ದೇವಸ್ಥಾನಗಳೆಂದೇ ಭಾವಿಸಿ ಮನೆಯನ್ನು ಸ್ವಚ್ಛಗೊಳಿಸಿ ಶುಚಿಯಾಗಿಡುತ್ತಾರೆ. ಮನೆಯ ಪ್ರತಿಯೊಬ್ಬ ಸದಸ್ಯರೂ ಸ್ನಾನ ಮಾಡಿ ಹೊಸ ಬಟ್ಟೆ ಧರಿಸುತ್ತಾರೆ. ಬಂಧು-ಮಿತ್ರರೊಂದಿಗೆ ಸಂತೋಷವನ್ನು ಹಂಚಿಕೊಂಡು ದೇವಸ್ಥಾನಗಳಿಗೆ ಹೋಗಿ ಹಣ್ಣುಕಾಯಿ ಅರ್ಪಿಸಿ ಭಗವಂತನ ಅನುಗ್ರಹಕ್ಕೆ ಪಾತ್ರರಾಗುತ್ತಾರೆ. "ಬಹುಶಃ ಹಬ್ಬಗಳು ಮೂಲತಃ ವಿಜಯೋತ್ಸವಗಳಾಗಿರಬೇಕು. ದುಷ್ಟಶಕ್ತಿಯನ್ನು ದಮನಮಾಡಿದುದರ ಜ್ಞಾಪಕಾರ್ತವಾಗಿ ಇವು ಆಚರಣೆಯಲ್ಲಿ ಬಂದಿರಬೇಕು. ಮಾನವ ತನ್ನ ಬದುಕಿನ ಏಕತಾನತೆಯನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ, ಆತ್ಮೀಯರನ್ನು ಕೂಡಿಕೊಳ್ಳುವುದಕ್ಕಾಗಿ ಸುಖ ಸಂತೋಷವನ್ನು ಹೊಂದುವುದಕ್ಕಾಗಿ, ಕೆಲವು ದಿನಗಳನ್ನು ಗೊತ್ತು ಮಾಡಿಕೊಂಡು ಅದನ್ನು ಹಬ್ಬ-ಹರಿದಿನಗಳೆಂದು ಕರೆದುಕೊಂಡಿರಬೇಕು. ಗದ್ದೆ, ಮನೆ, ತೋಟ, ಕ್ಷೇಮ ಸಾಧನೆಗೆ ಅಡ್ಡಿ ಆತಂಕಗಳನ್ನೊಡ್ಡುವ ದುಷ್ಟಶಕ್ತಿಗಳನ್ನು ನಿವಾರಿಸಿ, ತನ್ನನ್ನು ರಕ್ಷಿಸುವ ದೈವವನ್ನು ಸಂಪ್ರೀತಗೊಳಿಸುವ ಉದ್ದೇಶಕ್ಕಾಗಿ ಪ್ರಾರ್ಥನೆ ಸಂಪ್ರದಾಯ ಆಚರಣೆಗಳಿಂದ ಫಲವತ್ತತೆಯನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಮಾನವ

ಹಬ್ಬಗಳನ್ನು ಆಚರಣೆಯಲ್ಲಿ ತಂದುಕೊಂಡಿರಬಹುದು. ಹಬ್ಬಗಳು ಸಾಮಾನ್ಯವಾಗಿ ಜೀವನದ ಏಕತಾನತೆಯನ್ನು ತಡೆದು ಸಂಭ್ರಮವನ್ನು ತರುತ್ತದೆ. ಹಬ್ಬದ ದಿನಗಳಲ್ಲಿ ಮಾಮೂಲು ಜೀವನದಿಂದ ಬೇರೆ ರೀತಿಯ ದಿನವನ್ನು ಕಳೆಯುತ್ತೇವೆ". ಹೀಗೆ ಹಬ್ಬಗಳು ಜನಪದರ ಬದುಕಿನ ಕಷ್ಟಕಾರ್ಪಣ್ಯಗಳನ್ನು ತೊಡೆದು ಸಂತೊಷ ವನ್ನುಂಟು ಮಾಡುತ್ತವೆ.

ಹಬ್ಬಗಳು ಜನರ ಧಾರ್ಮಿಕ ಮನೋಭಾವನೆಯನ್ನು ಮಾಡಿ ತನ್ಮೂಲಕ ಪ್ರಚೋದಿತಗೊಂಡು ಭಕ್ತಿಯ ಭಾವಾವೇಶಗಳು ಪ್ರಕಟಗೊಳ್ಳುವ ವೇದಿಕೆಗಳಾಗಿವೆ. ಇದರ ಜೊತೆಗೆ ಜಾತ್ರೆಗಳು ಹಬ್ಬ ಗಳಿಗೆ ಹೊಸ ಮೆರಗನ್ನು ತಂದುಕೊಟ್ಟಿವೆ. ಕೆಲವು ಹಬ್ಬಗಳು ಜಾತ್ರೆಗಳಾಗಿ ಪರಿವರ್ತನೆಗೊಳ್ಳುವ ಪ್ರಕ್ರಿಯೆಯೂ ಇದೆ. ಆದ್ದರಿಂದ ಹಬ್ಬ ಜಾತ್ರೆಗಳೆರಡು ಕೆಲವೊಂದು ಸಂದರ್ಭಗಳಲ್ಲಿ ಬೆಸೆದುಕೊಂಡು ಒಂದೇ ಧ್ಯೆಯೋದ್ಧೇಶವನ್ನು ವ್ಯಕ್ತಪಡಿಸುತ್ತವೆ. ಹಬ್ಬಗಳು ಧಾರ್ಮಿಕ ಮತ್ತು ಸಾಂಸ್ಕೃತಿಕ ಕಾರಣಗಳಿಗಾಗಿ ಜರುಗತ್ತವಾದರೂ ಅದರಲ್ಲಿ ಅನೇಕ ರೀತಿಯ ಉದ್ದೇಶಗಳಿವೆ. ಕೃಷಿನಿರತ ಜನರು ವರ್ಷಕ್ಕೊಮ್ಮೆ ಅಥವಾ ನಿರ್ದಿಷ್ಟ ದಿನದಂದು ಹಬ್ಬ ಆಚರಣೆ ಮಾಡಿ ಅವರ ಪ್ರಾಥಮಿಕ ಅಗತ್ಯತೆಯನ್ನು ಪುನರುಜ್ಜೀವನಗೊಳಿಸಿಕೊಳ್ಳುತ್ತಾರೆ. ವರ್ಷವಿಡೀ ಧೂಳು ತುಂಬಿದ ಅವರ ಮನೆ ಹಾಗೂ ಸುತ್ತಮುತ್ತಲ ಪ್ರದೇಶಗಳನ್ನು ಸ್ವಚ್ಚಗೊಳಿಸಿ ಉಪವಾಸ ಸ್ನಾನಾದಿಗಳೊಂದಿಗೆ ಹೊಸ ಜೀವನಕ್ಕೆ ಅಣಿಯಾಗುತ್ತಾರೆ. ಇಂತಹ ಗ್ರಾಮೀಣ ಜನರ ಹಬ್ಬಗಳಲ್ಲಿ ನಿರ್ದಿಷ್ಟ ಕುಲ, ಜನಸಮೂಹ ಪ್ರಾದೇಶಿಕ ವಿಭಾಗಕ್ಕೆ ಸಂಬಂಧಿಸಿದ ಹಬ್ಬಗಳೂ ಇವೆ. ಆದರೂ ಪರಸ್ಪರ ಸಹಕಾರ ಹೊಂದಾಣಿಕೆ ನೆಲೆಯನ್ನು ರೂಪಿಸಿಕೊಂಡು ಅವರು ಇತರ ಜನಾಂಗದ ಜನರ ಹಬ್ಬಗಳಲ್ಲಿಯೂ ಸಕ್ರಿಯವಾಗಿ ಪಾಲ್ಗೊಳ್ಳುತ್ತಾರೆ. ಜಾತಿ ಮತಗಳ ತಾರತಮ್ಯವನ್ನು ತೋರಿಸಿದ ಅನ್ಯರ ದೈವವನ್ನು ತಮ್ಮದೆಂದೇ ಭಾವಿಸಿ ಭಕ್ತಿಯಿಂದ ನಮಿಸುವ ಗ್ರಾಮೀಣರಲ್ಲಿ ಐಕ್ಯತೆಯನ್ನು ಮೂಡಿಸುವ ಮಹತ್ವವಾದ ಬೆಳವಣಿಗೆ ಕಂಡುಬರುತ್ತದೆ.

ಬಹಳ ಹಿಂದಿನಿಂದಲೂ ಜನಪದರು ತಮ್ಮ ಬದುಕಿನ ಏಕತಾನತೆಯನ್ನು ಹೋಗಾಲಾಡಿಸಿ ಕೊಳ್ಳಲು ಹಬ್ಬ ಜಾತ್ರೆಗಳನ್ನು ನಡೆಸಿಕೊಂಡು ಬರುತ್ತಾರೆ. ಹಬ್ಬಗಳು ಅವರ ದುಡಿಮೆಯ ಶ್ರಮವನ್ನು ಮರೆಸಿ ಅವರ ಮನಸ್ಸಿಗೆ ನೆಮ್ಮದಿ, ಶಾಂತಿ ಸಮಾಧಾನಗಳನ್ನು ತಂದುಕೊಟ್ಟಿವೆ. ನೇಮ-ನಿಷ್ಟಗಳನ್ನು ಜೀವಂತಗೊಳಿಸುವುದರ ಮೂಲಕ ಸನ್ನಡತೆಗಳನ್ನು ಕುಟುಂಬಗಳ ನಡುವೆ ಸೌಹಾರ್ದ ಸಂಬಂಧವನ್ನುಗಳಿಸಿಕೊಳ್ಳಲು ಸಮಾಜದಲ್ಲಿ ಭಾವೈಕ್ಯತಾ ಭಾವನೆಯನ್ನು ಮೂಡಿಸಿ ಕೊಳ್ಳಲು ಹಬ್ಬಗಳು ಸಹಾಯಕವಾಗಿವೆ.

ಹಬ್ಬಗಳ ಸಂದರ್ಭದಲ್ಲಿ ಜಾತಿಯ ಚೌಕಟ್ಟನ್ನು ಮೀರಿ ಅದರ ಕಟ್ಟಳೆಗಳನ್ನು ಸಡಿಲಗೊಳಿಸು ವಂತಹ ಅನೇಕ ಅಂಶಗಳನ್ನು ಗ್ರಾಮಸಮುದಾಯದ ಚಟುವಟಿಕೆಗಳಿಂದ ಕಂಡುಕೊಳ್ಳಬಹುದು. ಪರಸ್ಥಳದಿಂದ ಬಂದಂತಹ ವ್ಯಕ್ತಿಗಳನ್ನು ಕರೆದು ಹಬ್ಬಗಳ ಸಂದರ್ಭದಲ್ಲಿ ಹಬ್ಬದೂಟವನ್ನು

ಉಣಬಡಿಸಿ ಅವರನ್ನು ಸಂತೋಷಪಡಿಸುತ್ತಾರೆ. ಆ ಮೂಲಕ ಪರಸ್ಪರ ವಿಶ್ವಾಸ ಸಂಬಂಧಗಳು ಬೆಳೆಯುತ್ತವೆ.

ಹಬ್ಬಗಳು ಆರೋಗ್ಯ ದೃಷ್ಟಿಯಿಂದಲೂ ಬಹುಮುಖ್ಯವಾಗುತ್ತವೆ. ಹಬ್ಬದ ಸಂದರ್ಭಗಳಲ್ಲಿ ಇಡೀ ಗ್ರಾಮಸಮುದಾಯದ ಜನರೆಲ್ಲರೂ ತಮ್ಮ ತಮ್ಮ ಮನೆಗಳನ್ನು ದುರಸ್ತಿ ಮಾಡಿ, ಸಾರಿಸಿ, ಗುಡಿಸಿ, ಬೀದಿಗಳನ್ನು ಶುಚಿಗೊಳಿಸುತ್ತಾರೆ. ಮನೆ, ಗುಡಿಗೋಪುರಗಳಿಗೆ ಸುಣ್ಣ ಬಣ್ಣವನ್ನು ಬಳಿಯುತ್ತಾರೆ. ಇಂತಹ ಸಾಮೂಹಿಕ ಶುಚಿತ್ವದ ಹಿಂದೆ ವೈಜ್ಞಾನಿಕ ಅರ್ಥವು ಕೂಡಿಕೊಂಡಿದೆ. ಇಲಿ, ಹೆಗ್ಗಣ, ಕ್ರಿಮಿಕೀಟ, ತಿಗಣೆ, ಹುಳು, ಹುಪ್ಪಟೆಗಳು ಮೊದಲಾದ ಕೆಡಕು ನೀಡುವ ಪ್ರಾಣಿಗಳಿಂದ ರಕ್ಷಣೆ ದೊರೆಯುತ್ತದೆ. ಹಬ್ಬ-ಹರಿದಿನಗಳಲ್ಲಿ ಹಳೆಯ ಬಟ್ಟೆಗಳಿಗೆ ಬದಲಾಗಿ ಹೊಸ ಬಟ್ಟೆ ಉಡುವುದು, ಮಡಿ ಮಾಡುವುದು ಕಂಡುಬರುತ್ತದೆ. ಇಂತಹ ಕಾರ್ಯಗಳಿಂದ ಜನಪದರು ತಮ್ಮ ಮೈಮೇಲಿನ ಕೊಳೆಯನ್ನು ತೊಳೆದು ಶುದ್ಧವಾಗುತ್ತಾರೆ. ಗ್ರಾಮೀಣರು ತಮ್ಮ ಜೀವನವಿಡೀ ಹೊಟ್ಟೆಯನ್ನು, ಬಟ್ಟೆಯನ್ನು ಸುಧಾರಿಸುವ ಮತ್ತು ಪರದಾಡುವ ಸನ್ನಿವೇಶಗಳೇ ಹೆಚ್ಚಾಗಿರುವ ಕಾರಣ ಹಬ್ಬಗಳಿಂದ ಅವರ ದುಡಿಮೆಗೆ ಕೆಲ ಕಾಲದ ಬಿಡುವು ಸಿಗುತ್ತದೆ.

ಪ್ರಾಚೀನ ಕಾಲದ ಜನರ ಬದುಕಿನಲ್ಲಿ ಅನೇಕ ಅಂಟು ಜಾಡ್ಯಗಳು ಕಾಣಿಸಿಕೊಂಡು ಬಹುತೇಕ ಜನರು ಸಾಮೂಹಿಕ ಮರಣಗಳಿಗೆ ತುತ್ತಾಗುತ್ತಿದ್ದರು. ಇದಕ್ಕೆ ಪ್ರಾಕೃತಿಕ ಕಾರಣಗಳನ್ನು ಅರಿಯಲು ವಿಫಲವಾಗಿದ್ದ ಮುಗ್ಧ ಜನರು ಮಾರಿದೇವಿಯ ಕೋಪ, ಕಾಲರಾ ಅಮ್ಮನ ಕೂಡ ಕಾರಣ ಎಂದು ಮೂಢನಂಬಿಕೆಯಲ್ಲಿ ಮುಳುಗಿದ್ದರು. ಅವರಲ್ಲಿನ ಕೆಲವರು ಬುದ್ಧಿವಂತರು ಈ ಸಾಂಕ್ರಾಮಿಕ ರೋಗಗಳಿಗೆ ಕಾರಣಗಳನ್ನು ಕಂಡುಹಿಡಿದು ಸಾಮೂಹಿಕ ಶುಚಿತ್ವವನ್ನು ರೂಢಿಸಿಕೊಳ್ಳಲು ದೇವರ ಹೆಸರಿನಲ್ಲಿ ಹರಕೆಹೊತ್ತು ಹಬ್ಬ ಮಾಡುವುದರ ಮೂಲಕ ಗ್ರಾಮದ ಶುಚಿತ್ವವನ್ನು ಕಾಪಾಡಿಕೊಂಡರು. ಮನುಷ್ಯನ ಶಕ್ತಿಗಿಂತ ದೇವರು ಬಲಾಢ್ಯನೆಂದು ನಂಬುವ ಜನರು ಶ್ರದ್ಧೆಯಿಂದ ದೈವಕಾರ್ಯ ನೆಪದಲ್ಲಿ ಹಬ್ಬಗಳನ್ನು ಆಚರಿಸುತ್ತಿದ್ದರು. ಜನಪದ ಸಂಸ್ಕೃತಿಯಲ್ಲಿ ಈ ಹಬ್ಬಗಳು ವೈಜ್ಞಾನಿಕ ಆಚರಣೆಗಳೂ ಹೌದು.

ಜನಪದರು ತಮ್ಮ ಜೀವನಕ್ಕೆ ಬೇಕಾದ ಅವಶ್ಯಕವಾದವುಗಳನ್ನು ಪೂರೈಸಿಕೊಂಡು ತಮ್ಮ ಜೀವನಕ್ಕೆ ಶುಭಾಷಯಗಳನ್ನು ವಿನಿಮಯಮಾಡಿಕೊಳ್ಳುತ್ತಾರೆ. ಪೌಷ್ಟಿಕಾಂಶದಿಂದ ಕೂಡಿರುವ ಪದಾರ್ಥಗಳನ್ನು ಬಳಸಿ ಸೇವಿಸುತ್ತಾ ರುಚಿ, ಶುಚಿ ಮತ್ತು ಶಕ್ತಿದಾಯಕ ಆರೋಗ್ಯವನ್ನು ಪಡೆಯುತ್ತಾರೆ. ಹಬ್ಬಗಳು ಧಾರ್ಮಿಕದೃಷ್ಟಿಯಿಂದ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದಿವೆ. ಪೂಜೆ, ಪ್ರಾರ್ಥನೆ, ಧ್ಯಾನಗಳಿಂದ ಮಾನಸಿಕ ನೆಮ್ಮದಿಯನ್ನು ಕಾಯ್ದುಕೊಳ್ಳಲು ಇವು ಸಹಕಾರಿಯಾಗುತ್ತವೆ. ದೈಹಿಕ ಆರೋಗ್ಯ ಇರುವಂತೆಯೇ ಮಾನಸಿಕ ಆರೋಗ್ಯ ಇರುವಂತಹದು ಮನುಷ್ಯನಿಗೆ ಬಹಳ ಮುಖ್ಯ. ಜೀವನದ ನೆಲೆಗಳಲ್ಲಿ ಅವನ ಮನಸ್ಸು ನಿಶ್ಚೇತನಗೊಂಡಾಗ ಹಬ್ಬಗಳು

ಅದಕ್ಕೆ ಪುಷ್ಟಿಯನ್ನು ನೀಡುವುದರಲ್ಲಿ ಸಂದೇಹವೇ ಇಲ್ಲ. ಬಂಕಾಪುರ ಗ್ರಾಮ ಮತ್ತು ಸುತ್ತ ಮುತ್ತಲಿನ ಹಳ್ಳಿಗಳಲ್ಲಿ ಆಚರಿಸುವಂತಹ ಮಾಳಪಕ್ಷ (ಪಿತೃಪಕ್ಷ), ಸಂಕ್ರಾಂತಿ, ನಾಗರಪಂಚಮಿ, ಆಯುಧಪೂಜೆ, ಯುಗಾದಿ ಮುಂತಾದ ಹಬ್ಬಗಳಲ್ಲಿ ಇದನ್ನು ಕಾಣಬಹುದು.

ಸಾಮಾನ್ಯವಾಗಿ ಎಲ್ಲ ಕಡೆಗಳಲ್ಲೂ ಸಾರ್ವತ್ರಿಕವಾಗಿ ಆಚರಿಸುವ ಹಬ್ಬಗಳನ್ನು ಬಂಕಾಪುರದಲ್ಲಿಯೂ ಆಚರಿಸುತ್ತಾರೆ. ಆ ಹಬ್ಬಗಳೆಂದರೆ ಯುಗಾದಿ, ಪಂಚಮಿ, ಬನ್ನಿ, ದೀಪಾವಳಿ, ಸೀಗೆ ಹುಣ್ಣಿಮೆ, ಗೌರಿ ಹುಣ್ಣಿಮೆ, ಸಂಕ್ರಮಣ, ಶಿವರಾತ್ರಿ, ರಕ್ಷಾಬಂಧನ ಇನ್ನೂ ಅನೇಕ ಹಬ್ಬಗಳನ್ನು ಆಚರಿಸುತ್ತಾ ಬರುತ್ತಿದ್ದಾರೆ.

**ಯುಗಾದಿ:** ಯುಗಾದಿಯು ಹಿಂದೂ ಧರ್ಮದ ಪ್ರಕಾರ ವರ್ಷಾರಂಭವಾಗಿದೆ. ಅಂದು ಮುಂಜಾನೆ ಎಲ್ಲರೂ ಎದ್ದು ತಲೆ ಸ್ನಾನ ಮಾಡಿ, ಹೊಸಬಟ್ಟೆ ಧರಿಸಿ ದೇವರಿಗೆ ಪೂಜೆ ಸಲ್ಲಿಸಿ ಮನೆಯ ಬಾಗಿಲಿಗೆ ಬೇವಿನ ಹಾಗೂ ಮಾವಿನ ತಳಿರು ತೋರಣಗಳಿಂದ ಅಲಂಕಾರ ಮಾಡುತ್ತಾರೆ. ಆ ನಂತರ ದೇವರ ಪೂಜೆ ದೇವರಿಗೆ, ಬೇವು-ಬೆಲ್ಲದ ನೈವೇದ್ಯ ಮಾಡುತ್ತಾರೆ. ಬೇವು-ಬೆಲ್ಲ ಎಂಬುದು ಜನಪದರಲ್ಲಿ ಮುಂದಿನ ದಿನಗಳಲ್ಲಿ ಬರುವ ಕಷ್ಟ-ಸುಖಗಳನ್ನು ಸಮನಾಗಿ ಸ್ವೀಕರಿಸು ಎಂಬ ಸಂಕೇತವಾಗಿ ಕಂಡುಬರುತ್ತದೆ. ಹೀಗೆ ಆ ದಿನ ಶ್ಯಾವಿಗೆ ಪಾಯಸವನ್ನು ಮಾಡಿ ಬೇವು ಬೆಲ್ಲವನ್ನು ಅದರ ಮೇಲೆ ಹಾಕಿಕೊಂಡು ತಿನ್ನುವ ವಾಡಿಕೆ ಇದೆ. ಬೇವು-ಬೆಲ್ಲ, ಪುಠಾಣಿ ಹಿಟ್ಟು ಚನ್ನಾಗಿ ಅರೆದು ಅದಕ್ಕೆ ಬೆಲ್ಲ, ಏಲಕ್ಕಿ, ಒಣಕೊಬ್ಬರಿ ಸೇರಿಸುತ್ತಾರೆ. ಇದೇ ಬೇವು-ಬೆಲ್ಲ ಸಿದ್ಧಪಡಿಸುವ ಕ್ರಮ ಮತ್ತು ಹಬ್ಬದ ಆಚರಣೆಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತವೆ ಹಾಗೂ ಆ ಸಂದರ್ಭದಲ್ಲಿ ತಯಾರಿಸುವ ಆಹಾರ ಪದಾರ್ಥಗಳು ಸಹ ಭಿನ್ನವಾಗಿರುತ್ತವೆ.

ಯುಗಾದಿ ಹಬ್ಬದಿಂದ ರೈತನ ವ್ಯವಸಾಯ ಚಕ್ರ ಆರಂಭವಾಗುವುದು. ಈ ದಿನ ರೈತನು ಹೊಲ ಹದಗೊಳಿಸಲು ಚಾಲನೆ ನೀಡಲು ಶುಭ ದಿನವಾಗಿರುತ್ತದೆ. ಅಂದು ಹೊಲದಲ್ಲಿರುವ ಬನ್ನಿ ದೇವರಿಗೆ ಪೂಜೆ ಸಲ್ಲಿಸಿ ಪೂರ್ವಾಭಿಮುಖವಾಗಿ ಗಳವನ್ನು ನಿಲ್ಲಿಸಿ ಎತ್ತುಗಳನ್ನು ಕಟ್ಟಿ ಗಳೆ ಎತ್ತುಗಳಿಗೆ ಪೂಜೆ ಮಾಡಿ ಹೊಲ ಹದಗೊಳಿಸುವರು

ಯುಗಾದಿಯಿಂದಲೆ ಕೃಷಿ ಚಟುವಟಿಕೆಗಳು ಆರಂಭವಾಗುವುದು. ಈ ದಿನದಂದು ಹೊಲಕ್ಕೆ ಹೋಗಿ ರೈತ ಭೂಮಿಯನ್ನು ಪೂಜೆ ಮಾಡಿ ಹರಗಿ ಬರುವರು. ಹೆಚ್ಚಲ್ಲದಿದ್ದರೂ ನೇಮಕ್ಕೆ ೫ ಸಾಲಾದರೂ ಆ ದಿನದಂದು ಹೊಲ ಹರಗಿ ಬರುವ ಪದ್ಧತಿ. ಯುಗಾದಿಯಿಂದಲೆ ಕೃಷಿ ಚಟುವಟಿಕೆಗಳಿಗೆ ಚಾಲನೆ ದೊರೆಯುವುದು. ಕೃಷಿಕರ ಕ್ಯಾಲೆಂಡರ್ ಆರಂಭವಾಗುವುದು ಈ ಯುಗಾದಿಯಿಂದಲೆ. ಯುಗಾದಿ ಪಾಡ್ಯದ ದಿನ ಒಳ್ಳೆಯ ದಿನವಾಗಿದ್ದರಿಂದ ಆ ಒಳ್ಳೆಯ ದಿನದಲ್ಲಿಯೇ ಕೃಷಿ ಕೆಲಸ ಪ್ರಾರಂಭಿಸಿದರೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆಯ ಹಿನ್ನೆಯಲ್ಲಿ

ಯುಗಾದಿಯಂದು ಆ ಸಾಲಾದರೂ ಪ್ರತಿ ರೈತರು ತಮ್ಮ ಹೊಲ ಪೂಜಿಸಿ ಹೊಡೆಯುವುದನ್ನು ಕಾಣುತ್ತೇವೆ.

ಸೋಮವಾರದಂದು ರೈತನು ಎತ್ತುಗಳಿಗೆ ಕೃಷಿ ಕೆಲಸಕ್ಕೆ ಬಳಸಿಕೊಳ್ಳುವುದಿಲ್ಲ. ಸೋಮವಾರ ಶಿವನ ವಾರವಾಗಿರುವುದರಿಂದ ಆತನ ವಾಹನವಾದ ಬಸವಣ್ಣನಿಗೆ ಅಂದು ವಿಶ್ರಾಂತಿ. ವಾರವಿಡಿ ದುಡಿದ ಎತ್ತುಗಳಿಗೆ ಒಂದು ದಿನವಾದರೂ ವಿಶ್ರಾಂತಿ ಸಿಗಲೆಂದು ರೈತನು ಈ ನಿಯಮವನ್ನು ರೂಢಿಸಿರಬಹುದು. ಮನುಷ್ಯನಾದವನು ತನ್ನ ಸ್ವಾರ್ಥಕ್ಕಾಗಿ ಪ್ರಾಣಿಗಳನ್ನು ದುರುಪಯೋಗಪಡಿಸಿ ಕೊಳ್ಳಬಾರದೆನ್ನುವುದೇ ಇದರ ಒಳ ಅರ್ಥವಾಗಿದೆ.

ಯುಗಾದಿ ಹಬ್ಬ ಇಲ್ಲಿನ ಜನರಿಗೆ ಬಲು ಪ್ರಿಯವಾದ ಹಬ್ಬವಾಗಿದೆ. ಸುದೀರ್ಘವಾದ ಅಂಧಕಾರ ಮತ್ತು ಶೀತಕಾಲ ಕಳೆದು ಸಂತೋಷಪ್ರದವಾದ, ಎಲ್ಲೆಲ್ಲೂ ವಸಂತ ಋತುವಿನ ಚಿಗುರಿನಿಂದ ಮರಗಿಡಗಳು ಹೊಸತನ ಬೀರುವ ಕಾಲವೇ ಯುಗಾದಿ ಹಬ್ಬದ ಸಂಕೇತ. ಇದು ನಿದ್ರಿಸುತ್ತಿರುವ ಭೂಮಿತಾಯಿಯನ್ನು ಎಬ್ಬಿಸುವ ಹಬ್ಬವಾಗಿದೆ. ಋತುಗಳ ರಾಜನೆಂದೇ ಕರೆಯುವ ವಸಂತನಿಗೆ ಸ್ವಾಗತವನ್ನು ಹೇಳುವ ಸುದಿನವಾಗಿದೆ.

ಯುಗಾದಿ ಎಂದಕೂಡಲೇ ನಮಗೆ ನೆನಪಾಗುವುದು ಬೇವು-ಬೆಲ್ಲ. ಇವುಗಳು ಬದುಕಿನ ಪ್ರತಿಬಿಂಬಗಳಂತಿವೆ. ಬೇವಿನ ಚಿಗುರಿನ ಕಹಿ ಬೆಲ್ಲದ ಸಿಹಿ ಇವೆರಡು ಬದುಕಿನ ನೋವು-ನಲಿವಿನ ಸಂಕೇತಗಳು. ದೃಷ್ಟ-ಅದೃಷ್ಟಗಳ ಪ್ರತಿಬಿಂಬ. ಹಿಂದೆ ನಡೆದ ದುಃಖದ ಘಟನೆಗಳನ್ನು ಅರಗಿಸಿಕೊಂಡು ಇಂದಿನ ಸುಖದ ಸವಿಯನ್ನು ಸವಿಯಲು ಯೋಗಬೇಕು. ನಾಲಿಗೆ ಸಿಹಿ ಬೇಕು ಕಹಿಬೇಡ ಎನ್ನುತ್ತದೆ, ಆದರೆ ನಾಲಿಗೆಗೆ ಸಿಹಿಯಾದುದು ಹೊಟ್ಟೆಸೇರಿ ಜೀರ್ಣವಾಗುವ ಹೊತ್ತಿಗೆ ಶರೀರಕ್ಕೆ ಕಹಿಯಾದೀತು ಹಾಗೆಯೇ ನಾಲಿಗೆಯ ತುದಿಗೆ ಕಹಿಯಾದ ವಸ್ತು ಮುಂದೆ ಪರಿಣಾಮದಲ್ಲಿ ಸಿಹಿಯನ್ನು ಹಿತವನ್ನು ಉಂಟುಮಾಡುವುದು ಈ ದೃಷ್ಟಿಯನ್ನು ಇಟ್ಟುಕೊಂಡು ಸಿಹಿ ಕಹಿಗಳೆರಡನ್ನು ಯುಕ್ತ ಪ್ರಮಾಣದಲ್ಲಿ ಉಚಿತ ಕಾಲಗಳಲ್ಲಿ ಸೇವಿಸುವುದು ಜಾಣತನ. ಆದ್ದರಿಂದ ಬೇವು-ಬೆಲ್ಲ ಎರಡನ್ನು ಜೊತೆಗೆ ತಿನ್ನುತ್ತಾರೆ.

**ಪಂಚಮಿ ಹಬ್ಬ:** ಜನಪದರು ಹಿಂದಿನಿಂದಲೂ ಹಲವಾರು ಹಬ್ಬಗಳನ್ನು ಆಚರಣೆ ಮಾಡಿ ಕೊಂಡು ಬಂದಿದ್ದಾರೆ. ಅವರು ಮಾಡಿಕೊಂಡು ಬಂದ ಪ್ರತಿಯೊಂದು ಹಬ್ಬಗಳಿಗೂ ಒಂದೊಂದು ವೈಜ್ಞಾನಿಕ ಕಾರಣವು ಇಲ್ಲದಿಲ್ಲ. ಪರಿಸರ ಸಮತೋಲನ ಭಾವನೆ ಅವರಲ್ಲಿ ನಾವು ಕಾಣಬಹುದು. ಅಂತಹ ಹಬ್ಬಗಳಲ್ಲಿ ಪಂಚಮಿ ಹಬ್ಬ ಅಥವಾ ನಾಗರ ಪಂಚಮಿ ಹಬ್ಬವೂ ಒಂದು.

ಭಾರತೀಯರ ಅದರಲ್ಲೂ ಹಿಂದುಗಳ ಪಾಲಿಗೆ ಹಬ್ಬಗಳೆಲ್ಲ ಒಂದರ್ಥದಲ್ಲಿ ಧಾರ್ಮಿಕ ಉತ್ಸವಗಳೇ. ಧಾರ್ಮಿಕ ಶ್ರದ್ಧೆ ಮತ್ತು ಭಾವನೆಗಳಿಗೆ ಇಲ್ಲಿ ಪ್ರಾಧಾನ್ಯತೆ. ಜೊತೆಗೆ ಸಾಮಾಜಿಕ,

ಸಾಂಸ್ಕೃತಿಕ ಅಂಶಗಳು ಅಲ್ಲಿ ಸೇರಿಕೊಂಡಿವೆ. ನಮ್ಮ ಕೆಲವು ಹಬ್ಬಗಳು ಋತುಗಳ ಸಂವತ್ಸರ ಚಕ್ರದ ಮಾರ್ಗದ ಬದಲಾವಣೆಗೆ ಸಂಬಂಧಿಸಿವೆ. ಮಕರ ಸಂಕ್ರಾಂತಿಯೇ ಇದಕ್ಕೆ ಉದಾಹರಣೆ. ಸಂವತ್ಸರ ಚಕ್ರದ ಋತುಗಳ ಬದಲಾವಣೆಗೆ ಸಂಬಂಧಪಟ್ಟ ಹಬ್ಬಗಳು ಮತ್ತೆ ಕೆಲವು ಮಹಾಶಿವರಾತ್ರಿ ದುರ್ಗಾಷ್ಟಮಿಯಂತಹ ಹಬ್ಬಗಳು ದೇವಾನುದೇವತೆಗಳ ಪೂಜೆಗೆ ಮೀಸಲು. ಮಹಾಪುರುಷರ ಅವತಾರವನ್ನು ಸೂಚಿಸುವ ವ್ಯಾಸಪೂರ್ಣಿಮೆ ಬುದ್ಧಜಯಂತಿಯಂತಹ ಹಬ್ಬಗಳು ನಮ್ಮಲ್ಲಿವೆ. ಇಂತಹ ಹಬ್ಬಗಳ ಸಾಲಿನಲ್ಲಿ ನಾಡಿಗೆ ಹಬ್ಬವಾದ ನಾಗರಪಂಚಮಿ ನಾಗನ ಆರಾಧನೆಗೆ ಮೀಸಲಾದ ಹಬ್ಬವಾಗಿದೆ.

ನಾಗಾರಾಧಾನೆ ಭಾರತದ ಮೂಲನಿವಾಸಿಗಳಾದ ನಾಗಾ ಮತ್ತು ದ್ರಾವಿಡರ ಕುರುಹಾಗಿದೆ. ಪ್ರಪಂಚದಲ್ಲೇ ಶ್ರೇಷ್ಠ ಸಂಸ್ಕೃತಿಯಾದ ಸಿಂದೂ ಬಯಲಿನ ನಾಗರಿಕತೆಯ ಉದಯ ನಾಗಾ ಜನಾಂಗದಿಂದ "ಸಿಂದೂ ಸಂಸ್ಕೃತಿಯ ಅವಶೇಷಗಳಲ್ಲಿ ಸರ್ಪ ಮಿಥುನ ಸಿಕ್ಕಿದ್ದನ್ನು ಗಮನಿಸಿದಾಗ ಮಾನವ ಜನಾಂಗದ ಆದಿ ಕಾಲದಿಂದಲೂ ಈ ನಾಗಾರಾಧಾನೆ ನಡೆದು ಬಂದಿದ್ದು ತಿಳಿಯುತ್ತದೆ. ನಮ್ಮ ದೇಶದಲ್ಲಿ ಶೈವ, ಶಾಕ್ತ, ವೈಷ್ಣವ, ಬೌದ್ದ, ಜೈನ ಮುಂತಾದ ಎಲ್ಲಾ ಸಂಪ್ರದಾಯಗಳಲ್ಲೂ ನಾಗಾಪೂಜೆ ಬಳಕೆಯಲ್ಲಿದೆ".[೬]

ಪ್ರಾಚೀನ ಕಾಲದಲ್ಲಿ ಹಾವಿನ ಭಯಂಕರವಾದ ಪ್ರಾಣಾಂತಿಕ ವಿಷಯವನ್ನು ಅರಿತು ಅವುಗಳ ಬಾಧೆಯಿಂದ ತಪ್ಪಿಸಿಕೊಳ್ಳುವ ಮತ್ತು ಆ ಬಾಧೆ ಬರದಿರಲೆಂಬ ಉದ್ದೇಶದಿಂದ ಈ ಹಬ್ಬ ಆಚರಣೆಗೆ ಬಂದಿತೆಂದು ಊಹಿಸಲಾಗಿದೆ. ಎಲ್ಲೆಲ್ಲೂ ಹಸಿರು ತುಂಬಿ ಕಂಗೊಳಿಸುವ ಮಳೆಗಾಲದಲ್ಲಿ ಬರುವ ಶ್ರಾವಣ ಮಾಸದಲ್ಲಿ ಹಾವುಗಳ ಕಾಟ ಹೆಚ್ಚು. ಈ ವಿಷ ಜಂತುಗಳ ಬಾಧೆ ತಮಗೆ ತಟ್ಟದಿರಲಿ ಎಂಬ ಉದ್ದೇಶ ಪೂಜಾ ರೂಪದಲ್ಲಿ ಪರಿಣಮಿಸಿರಬಹುದು. ಹಾವುಗಳಿದ್ದ ಹೊಲದಲ್ಲಿ ಬೇರೆ ಕ್ರಿಮಿ ಕೀಟಗಳ ಬಾಧೆಯಿಲ್ಲ, ಆದ್ದರಿಂದ ಕ್ಷೇತ್ರಪಾಲಕನ ರೂಪದಲ್ಲಿ ಧನ-ಧಾನ್ಯ ರಕ್ಷಕನಾದ ನಿಧಿಪಾಲಕನ ರೂಪದಲ್ಲೋ ನಾಗರ ಪ್ರತಿಮೆನ್ನಿಟ್ಟು ಅದನ್ನು ಪೂಜಿಸುವ ಪದ್ಧತಿ ಬಳಕೆಗೆ ಬಂದಿರಬಹುದು. ಅದು ಇಂದಿಗೂ ಪ್ರತಿಹಳ್ಳಿ ಪಟ್ಟಣ ನಗರ ಪ್ರದೇಶಗಳಲ್ಲೂ ನಾಗರಕಟ್ಟೆಗಳಾಗಿ ನಿರ್ಮಿತವಾಗಿ ಪೂಜಿಸುತ್ತಾರೆ.

ನಾಗರ ಪಂಚಮಿ ಹಬ್ಬದ ದಿನ ಹಳ್ಳಿಗಳಲ್ಲಿ ಮರಗಳಿಗೆ ಉಯ್ಯಾಲೆ ಕಟ್ಟಿ ಆಡುತ್ತಾರೆ. ಇದು ಈಗ ಮನರಂಜನೆಯಾದರೂ ಹಿಂದೆ ಅದು ಬೆಳೆಗೆ ಸಂಬಂಧಿಸಿದ ಒಂದು ಆಚರಣೆ ಆಗಿದ್ದಿರಬಹುದು. 'ರಷಿಯನ್ ಲೇಟ್ಸ್' ಜನ ಬೆಳೆಗಳ ಮೇಲೆ ಪ್ರಭಾವ ಬೀರಲು ಉಯ್ಯಾಲೆ ಆಡುತ್ತಾರೆ. ಸಯಾಮಿನಲ್ಲಿ ಪುರೋಹಿತರು ಉಯ್ಯಾಲೆ ಆಡುತ್ತಾ ಮೇಲೆ ಹೋದಷ್ಟು ಇನ್ನು ಎತ್ತರವಾಗಿ ಬೆಳೆಗಳು ಬೆಳೆಯುತ್ತದೆ ಎನ್ನುವ ನಂಬಿಕೆಯಿದೆ. Homeopathic ಅಥವಾ Imitative ಮಾಟದ ತಂತ್ರಾನು ಸರಣಿಯಂದು ವ್ಯಾಖ್ಯಾನಿಸುತ್ತಾರೆ.

ನಾಗರ ಪಂಚಮಿ ಮುನ್ನಾದಿನ ರೊಟ್ಟಿ ಪಂಚಮಿ ಎಂದು ಆಚರಿಸುತ್ತಾರೆ. ಅಂದರೆ ಹಬ್ಬದ ಎರಡು ದಿನ ರೊಟ್ಟಿಯನ್ನು ಸುಡುವುದಿಲ್ಲ. ನಾಗರ ಪಂಚಮಿಯ ಮೊದಲನೇ ದಿನ ಕಲ್ಲನಾಗನಿಗೆ ಹಾಲು ಎರೆಯಲಾಗುತ್ತದೆ. ಅಂದು ಅರಳಿಹಿಟ್ಟು ತಂಬಿಟ್ಟು ವಿಧವಿಧವಾದ ಉಂಡೆ ತಯಾರಿಸುತ್ತಾರೆ. ಹಾಗೂ ಮನೆಯವರೆಲ್ಲರೂ ಬೆಳಿಗ್ಗೆ ಎದ್ದು ಸ್ನಾನ ಮಾಡಿ ಈ ಮನೆಯವರೆಲ್ಲರೂ ನಾಗಪ್ಪನಿಗೆ ಹಾಲು ಎರೆಯುತ್ತಾರೆ.

ನಾಗರಪಂಚಮಿ ನಾಡಿಗೆ ಹಬ್ಬ
ನಾಗಪ್ಪಗ್ಹಾಲ ಎರೆಯೋಣ। ನನಗೆಳತಿ
ನಾಗರ ಹೆಡೆಯಾಂಗ ಹಾಡೋಣ

ಎಂದು ಹಾಡಿ ಹೆಣ್ಣುಮಕ್ಕಳೆಲ್ಲ ಸಂತೋಷದಿಂದ ನಕ್ಕು ನಲಿದಾಡಿ ತಮ್ಮಲ್ಲಿನ ನೋವುಗಳನ್ನು ಮರೆತು ಸಂತೋಷಪಡುವ ದಿನ ನಾಗರಪಂಚಮಿ.

ನಾಗರ ಪಂಚಮಿ ನಾ ಹ್ಯಾಂಗೆ ಮರೆಯಲಿ
ನನ್ನ ತವರು ಮನೆಯಾ। ತವರಿನ
ಬಂಕಾಪುರದ ಬಳೆಯಾ

ಶಿರಡಿ ಸೀರೆ ಕುಸುಗಲ್ಲು ಕುಬುಸ
ಬಂಕಾಪುರದ ಬಳೆಯಾ। ಕೊರಳಿಗೆ
ಹಂಗನೂಲಿನ ಎಳೆಯಾ

ನೆನೆಯಕ್ಕಿ ನೆನೆಗಡಲಿ ಗೊನೆಯ ಬಾಳೆಹಣ್ಣು
ಬಿಳಿಯ ಬಾಳೆಎಲೆಯಾ। ತವರಲಿ
ನಗೆಯಾ ಹಾಲಿನ ಹೊಳೆಯ

ಹಾಲು ಎರೆಯುವಾಗ ಎಲ್ಲರ ಪಾಲಿನ ಹಾಲನ್ನು ಹಾಕುತ್ತಾರೆ. ಅಜ್ಜನ ಪಾಲು, ಅಮ್ಮನ ಪಾಲು, ಅಕ್ಕನ ಪಾಲು, ಅಣ್ಣನ ಪಾಲು, ತಂಗಿ ಪಾಲು, ಅಮ್ಮನ ಪಾಲು, ತಮ್ಮನ ಪಾಲು ಕೊನೆಗೆ ಎಲ್ಲರ ಪಾಲು ಎಂದು ಹಾಲನ್ನು ಎರೆಯುತ್ತಾರೆ. ಮರುದಿನ ಹುತ್ತದ ಮನೆಯಿಂದ ಮಣ್ಣಿನ ನಾಗಪ್ಪನನ್ನು ಮಾಡಿ ಇದೇ ರೀತಿ ಅರಳಿಟ್ಟು, ತಂಬಿಟ್ಟು ವಿಧವಿಧವಾದ ಉಂಡಿಯ ನೈವೇದ್ಯ ಮಾಡಿ ಪ್ರತಿಯೊಬ್ಬರು ಮಣ್ಣಿನ ನಾಗಪ್ಪನಿಗೆ ಹಾಲು ಎರೆಯುತ್ತಾರೆ. ನಾಗರ ಪಂಚಮಿ ಹಬ್ಬದಂದು ಮದುವೆಯಾದ ಹೆಣ್ಣುಮಕ್ಕಳನ್ನು ತವರಿಗೆ ಕರೆಯಿಸಲಾಗುತ್ತದೆ. ಹೊಸದಾಗಿ ಮದುವೆಯಾದವರಂತು ಈ ಹಬ್ಬಕ್ಕೆ ತಪ್ಪದೇ ಬಂದಿರುತ್ತಾರೆ. ಹೊಸದಾಗಿ ಮದುವೆಯಾದ ಹೆಣ್ಣುಮಕ್ಕಳಂತೂ ತಮ್ಮ ಅಣ್ಣ ತಮ್ಮರ ಬರುವಿಕೆಗಾಗಿ ಕಾದು ಕುಳಿತಿರುತ್ತಾರೆ ಎಂಬುದಕ್ಕೆ ಆಗಾಗ ಎಲ್ಲರ ಕಿವಿಯಲ್ಲಿ ಗುನುಗುವ ಈ ಹಾಡೇ ಸಾಕ್ಷಿ.

"ಪಂಚಮಿ ಹಬ್ಬ ಉಳದ್ಹವದಿನಾಕ
ಅಣ್ಣ ಬರಲಿಲ್ಲಾ ಯಾಕೆ ಕರಿಯಾಕೆ॥
ನಮ್ಮ ತವರೂರು ಗೋಕುಲನಗರ
ಮನೆಯಂಥಾ ರಾಜಮಂದಿರ
ನಮ್ಮ ಅಣ್ಣಯ್ಯ ಭಾರಿ ಸಾಹುಕಾರ
ಅಣ್ಣ ಬರಲಿಲ್ಲ ಯಾಕಾ ಕರಿಯಾಕಾ ॥ಪಂಚಮಿ॥

ನಮ್ಮ ತವರಲ್ಲಿ ಪಂಚಮಿ ಭಾರಿ
ಹರಳು ಅವಲಕ್ಕಿ ತಂಬಿಟ್ಟು ಸೂರಿ
ಇನ್ನು ತಿನ್ನೋಕೆ ನನಗೆಬಾಕ
ಎಂಗಾದೀತು ತಂಗಿ ಮರೆಯಾಕ ॥ಪಂಚಮಿ॥

ನನ್ನ ಗೆಳತೀರು ಮಾಡ್ತಾರೆ ಗೇಲಿ
ಅವರು ಆಡೋದು ಅಲ್ಲಿ ಜೋಕಾಲಿ
ಹಬ್ಬ ಬಂದು ಬರಲಿಲ್ಲ ಅಣ್ಣ ಯಾಕ
ಮನಸು ಹರಿತೈತೆ ತವರಿಗೋಗಾಕ ॥ಪಂಚಮಿ॥

**ಬನ್ನಿ ಹಬ್ಬ:** ಅತ್ಯಂತ ಪ್ರಮುಖವಾದ ಪವಿತ್ರವಾದದ್ದು ಎನ್ನುವುದು ಇಲ್ಲಿಯ ಜನರ ನಂಬಿಕೆ. ಬನ್ನಿಹಬ್ಬವನ್ನು ಹಲವಾರು ಹೆಸರುಗಳಿಂದ ಕರೆಯುತ್ತಾರೆ. ನವರಾತ್ರಿ, ಮಹಾನವಮಿ, ದಸರಾ, ವಿಜಯದಶಮಿ ಹೀಗೆ ಬಿನ್ನ ನಾಮಗಳಿಂದ ಬನ್ನಿ ಹಬ್ಬವನ್ನು ಕರೆಯುತ್ತಾರೆ.

ದಸರಾ ಹಬ್ಬದ ಆಯುಧ ಪೂಜೆಯ ದಿನ ಕೃಷಿಗೆ ಸಂಬಂಧಿಸಿದ ಸಲಕರಣೆಗಳನ್ನು ತೊಳೆದು ಪೂಜೆ ಮಾಡಿ ಹೋಳಿಗೆ, ಹುಗ್ಗಿ, ಶಂಡಿಗೆ, ಕರಿಗಡಬಿನಿಂದ ನೈವೇದ್ಯವನ್ನು ಮಾಡುವರು. ರೈತನು ಕೃಷಿ ಸಲಕರಣೆಗಳನ್ನು ಅಂದು ಉಪಯೋಗಿಸದೆ ಅವುಗಳಿಗೆ ಕೃತಜ್ಞನಾಗಿ ಪೂಜೆ ಸಲ್ಲಿಸುವರು.

**ಪೌರಾಣಿಕ ಹಿನ್ನೆಲೆ:** ಪಾಂಡವರು ಪಗಡೆಯಾಡಿ ಸೋತು ವನವಾಸಕ್ಕೆ ಹೋಗಬೇಕಾಗುವುದು. ಹೋಗುವ ಪೂರ್ವದಲ್ಲಿ ತಮ್ಮ ಶಸ್ತ್ರಾಸ್ತ್ರಗಳನ್ನು ಬನ್ನಿಗಿಡಕ್ಕೆ ತೂಗುಹಾಕಿ ಹೋಗುತ್ತಾರೆ. ಆ ಬನ್ನಿಗಿಡದಲ್ಲಿ ಮಹಾಕಾಳಿ ವಾಸವಾಗಿದ್ದು ಆಕೆ ಅವುಗಳ ರಕ್ಷಕಳಾಗಿರುವಳು. ಎನ್ನುವ ಕಥನಗಳು ಸಿಗುತ್ತವೆ. ಈ ಕಥನಗಳನ್ನು ಜನಪದರು ಪದ್ಯರೂಪದಲ್ಲೂ ಹಾಡುತ್ತಾರೆ ಆ ಹಾಡು ಇಂತಿದೆ.

"ಬನ್ನಿಯ ಗಿಡದಾಗ ಬಾಣ ಇಟೇವಿ ತಾಯಿ
ಯಾರು ಬಂದರೂ ಕೊಡಬೇಡ ಹಡದಮ್ಮ
ಅರ್ಜುನ ಬಂದರೂ ಕೊಡಬೇಡ"

ಹೀಗೆ ಬನ್ನಿ ಮಹಾಕಾಳಿಯನ್ನು ಪಾಂಡವರು ಪ್ರಾರ್ಥಿಸಿದರು. ಅವರು ವನವಾಸದಲ್ಲಿ ಕಷ್ಟವನ್ನು ಅನುಭವಿಸಿದರೆಂಬುದಕ್ಕೆ ಈ ಕೆಳಗಿನ ತ್ರಿಪದಿಯೇ ಸಾಕು.

"ಕಲ್ಲ ಕಡಬ ಮಾಡಿ ಮುಳ್ಳ ಶ್ಯಾವಿಗೆ ಮಾಡಿ
ಬನ್ನಿಯ ಎಲಿಯ ಎಡಿಮಾಡಿ। ಪಾಂಡವರು
ಉಂಡು ಹೋಗ್ಯಾರೋ ವನವಾಸ"

ಕೇವಲ ಮೂರು ಶಬ್ದಗಳಲ್ಲಿ ಅವರ ವನವಾಸದ ತಾಪತ್ರಯ ಅರ್ಥಪೂರ್ಣವಾಗಿ ಚಿತ್ರಿತಗೊಂಡಿದೆ. ಹಾಗೆ ಊಟ ಮಾಡಿದ ಪಾಂಡವರು ಊಟದ ನಂತರ ತಾಂಬೂಲವನ್ನು ತಿನ್ನಲು ಮರೆಯಲಿಲ್ಲ.

ಬನ್ನಿಯ ಗಿಡದಾಗ ಬೆಳ್ಳಿಯ ಗುಡಗುಡಿ
ಬಂಗಾರ ಚಿಲುಮಿ ನವರತನೋ । ಪಾಂಡವರು
ಸೇದಿ ಹೋಗ್ಯಾರೋ ವನವಾಸೋ

ಜನಪದ ಕವಿ ತಾನು ಅನುಭವಿಸುವ ನೈಜ ಬದುಕಿನಲ್ಲಿಯೇ ಪಾಂಡವರನ್ನು ಕಂಡದ್ದು ಸಮರ್ಥನೀಯವಾಗಿದೆ. ಮುಂದೆ ಪಾಂಡವರು ತಮ್ಮ ವನವಾಸ ಕಳೆದರಂತೆ. ಅಂದಿನ ವಿರಾಟ ನಗರವೇ ಇಂದಿನ ನಮ್ಮ "ಹಾನಗಲ್ಲು" ಎನ್ನುವುದು ಜನಪದರ ಅಭಿಪ್ರಾಯ. ಅವರು ಇದ್ದು ಹೋದ ಗುಹೆಗಳು ಮಿಂದುಹೋದ ಕೊಳಗಳು ಕರ್ನಾಟಕದಲ್ಲೇ ಹೆಚ್ಚಾಗಿವೆ. ಆದುದರಿಂದ ಪಾಂಡವರು ಕನ್ನಡಿಗರಿಗೆ ಅಪರಿಚಿತರಲ್ಲಿ ಅಪರಿಚಿತರಾಗಿದ್ದು ಈಗಲೂ ಅವರ ಮೇಲಿನ ಅಭಿಮಾನ ಕಡಿಮೆಯಾಗಿಲ್ಲ. ಮುಂದೆ ಪಾಂಡವರು ತಮ್ಮ ವನವಾಸ ಮುಗಿಸಿ ಮರಳಿ ತಾವು ತಮ್ಮ ಶಸ್ತ್ರಾವಿಟ್ಟಿದ್ದ ಬನ್ನಿಗಿಡಕ್ಕೆ ಬಂದು ಮಹಾಕಾಳಿಯನ್ನು ಪೂಜಿಸಿ ತಮ್ಮ ವಸ್ತುಗಳನ್ನು ಪಡೆದು ದಿಗ್ವಿಜಯ ಸಾಧಿಸಿದ ದಿನವೇ ವಿಜಯದಶಮಿ ದಿನ ಎಂದು ಕೆರೆಯಲಾಗಿದೆ. ಅಂದಿನಿಂದಲೂ ಇಂದಿನತನಕ ಪಾಂಡವರ ವನವಾಸದ ಹಿನ್ನೆಲೆಯಲ್ಲಿ 'ವಿಜಯದಶಮಿ' ಆಚರಣೆಗೊಳುತ್ತ ಬಂದಿದೆ.

ಶಿಗ್ಗಾಂವ ತಾಲೂಕಿನಲ್ಲಿ ಬನ್ನಿಯ ಹಬ್ಬವನ್ನು ವಿಶೇಷವಾಗಿ ಆಚರಿಸುತ್ತಾರೆ. ಅಂದು ಸಂಜೆ ಇಡಿ ಸಮಾಜದ ಜನರು ಸೇರಿಕೊಂಡು ನಂದಿಕೋಲನ್ನು ತೆಗೆದುಕೊಂಡು ಊರ ಹೊರಗಿನ ಬನ್ನಿಗಿಡಕ್ಕೆ ಹೋಗಿ ಮೊದಲು ಬನ್ನಿಮಹಾಕಾಳಿಯನ್ನು ಪೂಜೆಮಾಡಿ ಮನೆತನದ ಗುರುವಿಗೆ, ದೇವಸ್ಥಾನಗಳಿಗೆ ಬನ್ನಿಯನ್ನು ನೀಡಿ ಮನೆಗೆ ಬರುತ್ತಾರೆ. ಬನ್ನಿ ತಂದವರನ್ನು ಬಾಗಿಲಿಗೆ ಬಂದಾಗ ಅವರಿಗೆ ಆರತಿ ಮಾಡಿ ನಂತರ ಮೊದಲು ತಮ್ಮ ಮನೆದೇವರಿಗೆ ಬನ್ನಿಯನ್ನು ಕೊಟ್ಟು ಆ ನಂತರ ಸಮಾಜದ ಹಿರಿಯರೆಲ್ಲರಿಗೂ ಬನ್ನಿಯನ್ನು ವಿನಿಮಯ ಮಾಡಿಕೊಳ್ಳಲಾಗುತ್ತದೆ.

ಆಗ ಬನ್ನಿ ಕೊಟ್ಟು ಬಂಗಾರದಂಗ ಇರೋಣ
ಬನ್ನಿ ತಗೊಂಡು ಬಂಗಾರದಂಗ ಇರೋಣ

ಎನ್ನುವ ನಾಣ್ನುಡಿಗಳನ್ನು ಉಚ್ಚರಿಸುತ್ತಾರೆ.

ಬನ್ನಿಯ ಹಬ್ಬದಂದು ತಮ್ಮ ತಮ್ಮಲ್ಲಿದ್ದ ಮುನಿಸನ್ನು ಮರೆತು ಒಂದಾಗಿ ಈ ಹಬ್ಬವನ್ನು ಆಚರಿಸುತ್ತಾರೆ. ಬನ್ನಿಯ ಎಲೆಗಳನ್ನು ಬಂಗಾರವೆಂದು, 'ಬಂಗಾರ ಕೊಟ್ಟು, ಬಂಗಾರ ತೆಗೆದು ಕೊಂಡು, ಬಂಗಾರದಂತೆ ಜೀವನ ನಡೆಸು' ಎಂದು ಒಬ್ಬರನ್ನೊಬ್ಬರು ತಬ್ಬಿಕೊಂಡು ಸಂತೋಷ ಪಡುತ್ತಾರೆ. ಅಂದಿನ ದಿನ ಬನ್ನಿಗಿಡವು ಬಂಗಾರದ ಸಂಕೇತವಾಗಿರುತ್ತದೆ.

**ಕಾರ ಹುಣ್ಣಿಮೆ:** ಕಾರ ಹುಣ್ಣಿಮೆ ಅದರ ಹೆಸರೆ ಹೇಳುವಂತೆ ಮಳೆಗಾಲದ ಮೊದಲ ಹುಣ್ಣಿಮೆ; ಕನ್ನಡ ನಾಡಿನ ಮೊದಲ ಹುಣ್ಣಿಮೆಯನ್ನು ಸಂತೋಷದಿಂದ ಆಚರಿಸುತ್ತಾರೆ. ಕಾರುಹುಣ್ಣಿಮೆಗೆ ಸಂಬಂಧಿಸಿದ ಕಾರ್ಯ ಕಲಾಪಗಳು ಎರಡು ದಿನ ನಡೆಯುವುವು. ಜ್ಯೇಷ್ಠ-ಶುದ್ಧ ಚತುರ್ದಶಿ ಕಾರುಹಬ್ಬದ ಪೂರ್ವಾಂಗ ದಿನವಾಗಿರುವುದು. ಉತ್ತರಾಂಗ ದಿನ ಹುಣ್ಣಿಮೆ. ಈ ಚತುರ್ದಶಿಗೆ ಹೊನಹುಗ್ಗೆ, ಹೊನ್ನುಗ್ಗಿ ಎಂದು ಹೆಸರು. ಹೊನ್ನುಗ್ಗೆ ದಿನ ಹಳ್ಳಿಗರೆಲ್ಲರು ತಮ್ಮ ತಮ್ಮ ಮನೆಯ ಎತ್ತು, ಹೋರಿಗಳನ್ನು ಮೈ ತೊಳೆದುಮಿಯಿಸುವರು. ಕೊಂಬುಗಳಿಗೆ ಬಣ್ಣಗಳನ್ನು ಬಳಿಯುವರು. ಮೈಮೇಲೆ ಅಂದ ಕಾಣುವಂತೆ ಕುಂಟೆಯ ಬಳೆಗಳಿಂದ, ಬೇರೆ ಬೇರೆ ಬಣ್ಣಗಳ ಮುದ್ರೆಗಳನ್ನು ಒತ್ತುವರು. ತುದಿಗೊಂಬುಗಳಿಗೆ ಮಿರುಗುವ ಕೊಂಬಣಸುಗಳನ್ನು ತೊಡಿಸುವರು. ಕೊರಳಿಗೆ ಹುರಿಗೆಜ್ಜೆ, ಕಿರುಗಂಟೆ ಸರಗಳನ್ನು ಹಾಕುವರು. ಹಣೆಗೆ ಕನ್ನಡಿ ಇರುವ ಹಣೆಪಟ್ಟಿಗಳನ್ನು ಕಟ್ಟುವರು.

ಇದರ ಮರುದಿನೇ ಕಾರುಹುಣ್ಣಿಮೆ. ದನಗಳೆಲ್ಲಾ ಪೂಜೆಗೊಳ್ಳುವುವು. ಹುಣ್ಣಿಮೆಯ ಸಂಜೆ ಕರಿ ಹರಿಯುವ ಸಂಪ್ರದಾಯ ಕಾರು ಹುಣ್ಣಿಮೆಯೆಂದೆ ನಡೆಯುತ್ತದೆ. ಅಂದು ಎತ್ತು ಗಳಿಗೆ ಕೊಬ್ಬರಿ, ಕೋಡಬಳೆ. ಅಲಂಕಾರಿಕ ಸಾಮಗ್ರಿಗಳನ್ನು ಕಟ್ಟಿರುತ್ತಾರೆ. ಆ ಹೋರಿಯ ಮನೆಯವರು ಓಡಿಸುತ್ತಾ ಬರುತ್ತಾರೆ. ಅದನ್ನು ಅಲ್ಲಿ ನಿಂತವರು ಹಿಡಿಯುವುದು. ಯಾವ ಹೋರಿ ತಪ್ಪಿಸಿಕೊಂಡು ಹೋಗುತ್ತದೆ. ಅದು ಗೆದ್ದಂತೆ ಬಲಿಷ್ಠ ಹೋರಿ ಎಂದು ಬಹುಮಾನವನ್ನು ಪಡೆಯುತ್ತದೆ. ಕೆಲವು ಕಡೆ ಈ ಓಟದ ಮೇಲಾಟದಲ್ಲಿ ಕರಿ ಅಥವಾ ಕೆಂದು ಎತ್ತು ಮುಂದಾದರೆ ಆ ವರ್ಷ ಮುಂಗಾರು ಧಾನ್ಯಗಳು ಹೆಚ್ಚಾಗಿ ಬೆಳೆಯುವದೆಂದೂ ಬಿಳಿಯ ಎತ್ತು ಮುಂದಾದರೆ ಹಿಂಗಾರು ಧಾನ್ಯಗಳ ಸಮೃದ್ಧಿಯೆಂದು ನಂಬುವ ಭಾವನಾತ್ಮಕ ನಂಬಿಕೆ ಹಳ್ಳಿಗರಲ್ಲಿದೆ. ಇದೆಲ್ಲಾ ಕಾರ್ಯಕ್ರಮ ಮುಗಿದ ಮೇಲೆ, ಅದರಲ್ಲಿ ಭಾಗವಹಿಸಿದ ಎತ್ತುಗಳನ್ನು ಮೆರವಣಿಗೆ ಮಾಡಿ ಮನೆಗೆ ತರಲಾಗುವುದು. ಮನೆಯ ಹೆಣ್ಣುಮಕ್ಕಳು ಆರತಿ ಮಾಡಿ ಬರಮಾಡಿಕೊಳ್ಳುವರು ಹೀಗೆ ಕಾರುಹುಣ್ಣಿಮೆ ಸಂಪ್ರದಾಯ ಮುಗಿಯುತ್ತದೆ.

**ಮಣ್ಣೆತ್ತಿನ ಅಮವಾಸ್ಯೆ:** ರೈತರು ಎತ್ತಿನ ಬಗೆಗಿರುವ ಕೃತಜ್ಞತಾ ಭಾವದಿಂದ ಆಚರಿಸಲ್ಪಡುವ ಆಚರಣೆಯಾಗಿದೆ. ರೈತ ಬಿತ್ತನೆ ಮುಗಿಸಿ ಬೀಜಗಳು ಸಸಿಗಳಾಗಿ ತಲೆಯತ್ತಿ ನಿಂತಿರುತ್ತವೆ ನೋಡಿದಲ್ಲೆಲ್ಲ ಭೂಮಿ ಹಸಿರಿನಿಂದ ಕಂಗೊಳಿಸುತ್ತಿರುವ ಈ ಸಮಯದಲ್ಲಿ ರೈತರಿಗೆ ಹೊಲದಲ್ಲಿ

ಯಾವುದೇ ಬಗೆಯ ಕೆಲಸಗಳಿರುವುದಿಲ್ಲ. ಭೂಮಿಯು ಹಸಿರಿನಿಂದ ಕಂಗೊಳಿಸಲು ಬಸವಣ್ಣನೆ ಕಾರಣವೆಂದು ಭಾವಿಸಿ ಮಣ್ಣಿಗೂ ಬಸವಣ್ಣನಿಗೂ ಕೃತಜ್ಞತೆಯನ್ನು ಸಲ್ಲಿಸಲು ಮಣ್ಣೆತ್ತಿನ ಅಮವಾಸ್ಯೆ ಯಂದು ಮಣ್ಣನ್ನು ತಂದು ಅದರಿಂದ ಎರಡು ಎತ್ತುಗಳನ್ನು ಮಾಡಿ ಅವುಗಳನ್ನು ದೇವರ ಜಗುಲಿಯ ಮೇಲಿಟ್ಟು ಪೂಜೆಮಾಡಿ. ಕರಿಗಡಬು, ಹೋಳಿಗೆಯಿಂದ ನೈವೇದ್ಯ ಮಾಡುವರು. ಮೂರು ದಿನಗಳ ನಂತರ ಹೊಳೆ ಅಥವಾ ಬಾವಿಗೆ ಬಿಡುವರು. ಈ ಆಚರಣೆಯ ಮೂಲಕ ತಮ್ಮ ಹೊಲದಲ್ಲಿರುವ ಮಣ್ಣಿನ ಗುಣ ಧರ್ಮ ತಿಳಿಯಲು ಅನುಕೂಲವಾಗುತ್ತದೆ.

ರೈತ ದೇಶದ ಬೆನ್ನಲುಬಾದರೆ ಎತ್ತುಗಳು ಆತನ ಬೆನ್ನಲುಬುಗಳು. ಕೃಷಿಯ ಬಹುಪಾಲು ಕೆಲಸಗಳಲ್ಲಿ ಎತ್ತುಗಳನ್ನು ರೈತನೊಂದಿಗೆ ದುಡಿದು ದಣಿದ ಎತ್ತುಗಳಿಗೆ ಕೃತಜ್ಞತೆಯನ್ನು ತೋರುವ ನೆಪದಲ್ಲಿ ಈ ಮಣ್ಣೆತ್ತುಗಳ್ಳನ್ನು ಮಾಡಿ ಪೂಜೆ ಸಲ್ಲಿಸುವರು. ರೈತರಿಗೆ ಎತ್ತುಗಳ ಮೇಲೆ ಇರುವ ಪೂಜನಿಯ ಮನೋಭಾವ ಇದರಿಂದ ತಿಳಿದು ಬರುವುದು.

**ಬಸವ ಜಯಂತಿ:** ಬಸವ ಜಯಂತಿ ಹಬ್ಬದಂದು ಮನೆ ಸ್ವಚ್ಛಗೊಳಿಸಿ, ಹಟ್ಟಿ ಸ್ವಚ್ಛಗೊಳಿಸಿ ಎತ್ತುಗಳಿಗೆ ಮೈತೊಳೆದು ಪೂಜೆಮಾಡಿ. ಹುಗ್ಗಿ, ಹೋಳಿಗೆ ಶಂಡಿಗೆ, ಹಪ್ಪಳ, ಅನ್ನ ವಿವಿಧ ಬಗೆಯ ಪಲ್ಲೆಗಳನ್ನು ಮಾಡಿ ಎಡೆ ಮಾಡಿ ಬಸವಣ್ಣನಿಗೆ ತಿನ್ನಿಸುವರು. ಈ ಹಬ್ಬದಲ್ಲಿ ಶ್ಯಾವಿಗೆ ಪಾಯಸ ಮಾಡುವುದಿಲ್ಲ. ಕಾರಣ ಪಾಯಸ ಎತ್ತುಗಳು ತಿಂದರೆ ಅವುಗಳ ಕಾಲಲ್ಲಿ ಹುಳು ಬಿಳುತ್ತವೆ ಯೆಂಬ ನಂಬಿಕೆಯಿದೆ. ಎತ್ತುಗಳಿಗೆ ಮೈ ತೊಳೆದ ನಂತರ ಕೊಂಬುಗಳಿಗೆ ಬಣ್ಣ ಹಚ್ಚುತ್ತಾರೆ. ಗೆಜ್ಜೆಸರ, ಜೂಲಾ ಹಾಕುತ್ತಾರೆ. ಊರಿನಲ್ಲಿರುವ ದೇವಸ್ಥಾನಕ್ಕೆ ಎತ್ತುಗಳನ್ನು ಕರೆದುಕೊಂಡು ಹೋಗಿ ಹಣ್ಣುಕಾಯಿ ಮಾಡಿಸಿಕೊಂಡು ಬರುವರು.

**ಸಂಕ್ರಾಂತಿ ಹಬ್ಬ:** ಈ ಹಬ್ಬವು ಬೇಸಾಯದ ಮದ್ಯಂತರ ಕಾಲಘಟ್ಟದಲ್ಲಿ ಬರುತ್ತದೆ. ಈ ಸಂದರ್ಭದಲ್ಲಿ ದನಗಳಿಗೆ ಹಸಿರು ಮೇವು ಯಥೇಚ್ಛವಾಗಿ ದೊರೆಯುತ್ತದೆ. ಸಂಕ್ರಾಂತಿ ಹಬ್ಬವು ಮನುಷ್ಯನ ಜೊತೆ ಪ್ರಾಣಿಗಳಿಗೂ ಕಷ್ಟದಿಂದ ದೂರ ಮಾಡುತ್ತಾರೆಯೆಂಬ ನಂಬಿಕೆ ರೈತರಲ್ಲಿದೆ. ಈ ಹಬ್ಬದಂದು ದನಗಳಿಗೆ ಕೆರೆ ಹೊಳೆಗಳಿಗೆ ತೆಗೆದುಕೊಂಡು ಹೋಗಿ ಅವುಗಳ ಮೈತೊಳೆದು ಮನೆಗೆ ಕರೆತಂದು ಪೂಜೆ ಮಾಡುವರು ಮತ್ತು ಹೋಳಿಗೆ, ಕರಿಗಡಬು, ಹುಗ್ಗಿಯ ಎಡೆ ಮಾಡಿ ದನಗಳಿಗೆ ತಿನ್ನಿಸುವರು. ದನಗಳಿಗೆ ಕಾಲುಬಾಯಿ ಮುಂತಾದ ಯಾವುದೇ ರೋಗ ಬರುವುದಿಲ್ಲ ಎಂಬ ನಂಬಿಕೆಯದೆ.

**ದೀಪಾವಳಿ/ಹಟ್ಟಿಹಬ್ಬ:** ದೀಪಾವಳಿಗೆ ಆಡು ಮಾತಿನಲ್ಲಿ ನಮ್ಮ ಜನಪದರು ಹಟ್ಟಿಹಬ್ಬ ಎನ್ನುತ್ತಾರೆ. ಮನೆಯಲ್ಲಿ ಹಟ್ಟೆವ್ವ ಎಂದು ಸಗಣಿಯಿಂದ ಉಂಡೆ ಇಟ್ಟು ಅದರ ಸುತ್ತ ಕೆಮ್ಮಣ್ಣಿನ ಬಟ್ಟು ಮತ್ತು ಸುಣ್ಣದ ಬಟ್ಟು ಇಟ್ಟು ಹಟ್ಟೆವ್ವನನ್ನ ಪೂಜಿಸುವರು.

ಮನೆಯಲ್ಲಿ ಒಲೆ, ಬೀಸುವ ಕಲ್ಲು, ಒರಳು, ಹೊಸ್ತಿಲು, ಚಕ್ಕಡಿ ಎಲ್ಲವುಗಳ ಮೇಲೂ ಒಂದೊಂದು ಹಟ್ಟೆವ್ವನನ್ನು ಇಡುವರು. ನಡುಮನೆ ಇಲ್ಲವೆ ಹಟ್ಟಿಯಲ್ಲಿ ದೊಡ್ಡ ಹಟ್ಟಿಯನ್ನು ಇಡುವರು. ಅದರೊಂದಿಗೆ ಕೃಷಿ ಸಾಮಾನುಗಳನ್ನು ಇಟ್ಟು ಪೂಜೆ ಮಾಡುವರು. ಹಟ್ಟೆವ್ವನ ತಲೆಯ ಮೇಲೆ ಚಟಿಗೆ ಮಾಡಿ ಅದರಲ್ಲಿ ಮೊಸರು ಕೂಡಾ ಹಾಕುವರು. ಒಡೆ ಮೇಲೆ ದೀಪ ಹಚ್ಚಿ ಹಟ್ಟೆವ್ವನಿಗೆ ಬೆಳಗುವರು. ಸಂಜೆ ದನಗಳಿಂದ ಹಟ್ಟಿ ತುಳಸಿ ಮನೆಯ ಮಾಳಿಗೆ ಮೇಲೆ ಹಟ್ಟಿಯನ್ನು ಇಡುವರು

ಕೃಷಿಗೂ, ಪಶುಪಾಲನೆಗೂ, ಹೈನುಗಾರಿಕೆಗೂ ಇರುವ ಸಂಬಂಧವನ್ನು ಈ ಆಚರಣೆ ಪ್ರತಿ ಬಿಂಬಿಸುತ್ತದೆ. ರೈತರಿಗೆ ತಮ್ಮ ಕೃಷಿ ಚಟುವಟಿಕೆಯ ಪ್ರತಿ ವಸ್ತುಗಳ ಬಗೆಗೂ ಇರುವ ಸಂಬಂಧವನ್ನು ಈ ಆಚರಣೆ ಪ್ರತಿಬಿಂಬಿಸುತ್ತದೆ. ರೈತರಿಗೆ ತಮ್ಮ ಕೃಷಿ ಚಟುವಟಿಕೆಯ ಪ್ರತಿ ವಸ್ತುಗಳ ಬಗೆಗೂ ಗೌರವ ಭಾವನೆ ಇರುವಂತೆ ಸಗಣಿಯ ಬಗೆಗೂ ಗೌರವದಿಂದ ಮತ್ತು ಪೂಜ್ಯನೀಯ ಭಾವ ಇರುವುದು. ಅದನ್ನು ಪೂಜಿಸುವ ಈ ಆಚರಣೆಯಿಂದ ವ್ಯಕ್ತವಾಗುತ್ತದೆ. ಸಗಣಿಯ ಬಗೆಗೂ ದೈವತ್ವದ ಮನೋಭಾವವಿರುವುದು ಕಂಡುಬರುತ್ತದೆ.

ದೀಪಾವಳಿ ಹಬ್ಬದ ದಿನಗಳಲ್ಲಿ ಎಲ್ಲೆಲ್ಲಿ ನೋಡಿದರೂ ದೀಪಗಳ ಸಾಲು ಕಾಣುತ್ತವೆ. ಏಕೆಂದರೆ ಕತ್ತಲೆಯ ಬೆಳಕಿಗೆ ಯುಗ-ಯುಗಗಳ ಸಂಘರ್ಷ ನಂತರದಲ್ಲಿ ಹೋರಾಟ ನಡೆದು, ಹೊತ್ತು ಕತ್ತಲಾದರೂ ಜಗಳವಾಡಿ ಬೆಳಗು ಗೆಲ್ಲುವುದರ ಸಂಕೇತವಾಗಿದೆ ಎನ್ನಲಾಗಿದೆ. ಮಳೆಗಾಲ ರೈತರೇ ದುಡಿದು ದಣಿವಾರಿಸಿಕೊಳ್ಳುವಂತಹ ಸಮಯವಾಗಿದೆ. ಮನೆಯಲ್ಲಿ ಕೂಡ ಮನೆ ಮನೆಯ ಮನಸ್ಸುಗಳ ಕತ್ತಲೆಯನ್ನು ಹೋಗಲಾಡಿಸುವ ಈ ಹಬ್ಬದಲ್ಲಿ ಕುಟುಂಬದಲ್ಲಿ ಇರುವ ಚಿಕ್ಕವರು-ದೊಡ್ಡವರು ಸೇರಿ ಹೊಸ ಬಟ್ಟೆ ಧರಿಸಿ ಸಿಹಿ ತಿನಿಸುಗಳನ್ನು ತಯಾರಿಸಿ ಬಾರಿ ಭೋಜನವನ್ನು ಮಾಡುತ್ತಾರೆ. ದೀಪಾವಳಿಯಲ್ಲಿ ನರಕಚತುರ್ಥಿ ಬಲಿಪಾಡ್ಯವನ್ನು ವಿಶೇಷವಾಗಿ ಆಚರಣೆಯನ್ನು ಮಾಡುತ್ತಾರೆ.

ಈ ದಿನ ಯಾರು ದೀಪ ಬೆಳಗುತ್ತಾರೆ ಅವರ ಮನೆಯಲ್ಲಿ ಸದಾ ಧರ್ಮ ಸ್ಥಿರವಾಗಿ ನೆಲೆಸಲಿ ಹಾಗೇ ನನ್ನ ಮನೆಯ ಬಾಗಿಲು ಸದಾ ನಿನ್ನ ಸಾನಿಧ್ಯದಲ್ಲಿರಲಿ ಎಂದು ವಿಷ್ಣುವನ್ನು ಕೇಳಿಕೊಂಡು ಪ್ರಜಾಹಿತ ಬಯಸಿದ ಮಹಾ ವ್ಯಕ್ತಿತ್ವದ ಬಲಿಚಕ್ರವರ್ತಿಯನ್ನು ನೆನಪಿಸಿಕೊಂಡು ಬಲಿಯ ಕಲ್ಪನೆಯಲ್ಲಿ ದೀಪ ಹಚ್ಚಿ ಪೂಜೆ ಪುನಸ್ಕಾರಗಳನ್ನು ಮಾಡುತ್ತಾರೆ. ಹಬ್ಬದ ದಿನ ಎಲ್ಲರೂ ಮನೆಯಲ್ಲಿ ಸಂತಸ ಸಂಭ್ರಮದಿಂದಲೇ ಪಟಾಕಿ ಸಿಡಿಸಿ ಸಿಹಿ ತಿಂಡಿ ತಂದು ಸಂತೋಷ ಪಡುತ್ತಾರೆ. ದೀಪಾವಳಿಯೆಂದರೆ ಅಲ್ಲಿನ ಜನರಲ್ಲಿ ಹುಡುಕಾಟ ಮಕ್ಕಳಲ್ಲಿ ಪಟಾಕಿ ಹಬ್ಬ ಎಂದೇ ಇಲ್ಲಿನ ಯುವಕ ಯುವತಿಯರ ಅಭಿಪ್ರಾಯವಾಗಿದೆ.

ದೀಪಾವಳಿ ಹಬ್ಬದ ದಿನಗಳಲ್ಲಿ ಎಲ್ಲೆಲ್ಲಿ ನೋಡಿದರೂ ದೀಪಗಳ ಸಾಲು ಕಣ್ಣುಂಬುತ್ತವೆ. ಏಕೆಂದರೆ ಕತ್ತಲೆಗೂ ಬೆಳಕಿಗೂ ಯುಗಯುಗಗಳ ಸಂಘರ್ಷ ನಿರಂತರವಾದ ಹೋರಾಟ ನಡೆದೇ ಇರುತ್ತದೆ. ಕತ್ತಲೊಡನೆ ಜಗಳವಾಡಿ ಬೆಳಕು ಗೆಲ್ಲುವುದರ ಸಂಕೇತ ದೀಪಾವಳಿ. ಬೆಳಕು ಎಲ್ಲ ಚೇತನಗಳ ಆಧಾರ ಕ್ರಿಯಾಶಕ್ತಿಯಾಗಿದೆ. ಬೆಳಕೆ ಬದುಕಾಗಿರುವ ಆ ಕರುಣಾಳು ಬೆಳಕಿನ ಆರಾಧನೆಯ ಹಬ್ಬವೇ ಈ ದೀಪಾವಳಿ.

ಜ್ಞಾನದ ಪ್ರತೀಕವಾಗಿರುವ ದೀಪ ಅಜ್ಞಾನದ ಸಂಕೇತವಾಗಿರುವ ಕತ್ತಲನ್ನು ಬಡಿದೊಡಿಸುವ ಸಾಮರ್ಥ್ಯ ಹೊಂದಿದೆ. "ಅಜ್ಞಾನದ ನಿವಾರಣೆಗಾಗಿ ಭಾರತೀಯರ ದಿನನಿತ್ಯದ ಪ್ರಾರ್ಥನೆಯೇ ತಮಸೋಮ ಜ್ಯೋತಿರ್ಗಮಯ' ಓ ದೇವಾ ನನ್ನನ್ನು ಕತ್ತಲಿನಿಂದ ಬೆಳಕಿನೆಡೆಗೆ ಕೊಂಡೊಯ್ಯು"- ಎಂದು ಆದ್ದರಿಂದ ಬೆಳಕಿನ ಆರಾಧಕರಾದ ಭಾರತೀಯರಿಗೆ ದೀಪಗಳ ಈ ಹಬ್ಬ ಬಹುಮುಖ್ಯ ವಾದುದಾಗಿದೆ.

ಶರದ್ರುತುವಿನ ಮಧ್ಯಭಾಗದಲ್ಲಿ ಬರುವ ಈ ಹಬ್ಬದ ಸಮಯ ಅನ್ನದೇವರ ಅವತಾರಕಾಲ. ಈ ಹಬ್ಬದ ವೇಳೆಗೆ ಮುಂಗಾರು ಬೆಳೆ ದವಸ ಧಾನ್ಯದ ಲಕ್ಷ್ಮೀರೂಪದಲ್ಲಿ ರೈತನ ಕೈಸೇರುತ್ತದೆ. ಆ ವೇಳೆಗಾಗಲೇ ರೈತರೆಲ್ಲರು ದುಡಿದು ಧಣಿವಾರಿಸಿಕೊಳ್ಳುವ ಸಮಯವಾಗಿರುತ್ತದೆ. ಮನೆಯವರೆಲ್ಲರೂ ಕೂಡಿ ಮನೆ-ಮನೆಯ ಮನಸ್ಸು-ಮನಸ್ಸುಗಳ ಕತ್ತಲೆಯನ್ನು ಹೋಗಲಾಡಿಸುವ ಈ ಹಬ್ಬದಲ್ಲಿ ಕುಟುಂಬದವರೆಲ್ಲ ಕೂಡಿ ಅಣ್ಣ ತಮ್ಮಂದಿರು ಅಕ್ಕ ತಂಗಿಯರೆಲ್ಲರೂ ಸೇರಿದ ಸುಮಧುರವಾದ ಮಿಲನವಾಗಿರುತ್ತದೆ. ಮನೆಮಂದಿ ಎಲ್ಲರೂ ಹೊಸ ಹೊಸ ಉಡುಪು ಧರಿಸಿ ಸಿಹಿ ತಿನಿಸುಗಳನ್ನು ತಯಾರಿಸಿ ಭಾರಿ ಬೋಜನವನ್ನು ಮಾಡುತ್ತಾರೆ.

ದೀಪಾವಳಿಯಲ್ಲಿ ಪ್ರಮುಖವಾಗಿ ನರಕಚತುರ್ದಶಿ ಮತ್ತು ಬಲಿಪಾಡ್ಯಮಿಯನ್ನು ವಿಶೇಷವಾಗಿ ಆಚರಿಸುತ್ತಾರೆ. ಬಲಿಚಕ್ರವರ್ತಿ ಮಹಾದಾನ ವೀರ. ಭಕ್ತ ಪ್ರಹ್ಲಾದನ ಮೊಮ್ಮಗನಾದ ಅವನು ಶೋಣಿತಪುರದಲ್ಲಿ ರಾಜ್ಯವಾಳುತ್ತಿದ್ದ ಅವನಲ್ಲಿರುವ ಸದ್ಗುಣಗಳನ್ನು ವಿಷ್ಣುವು ಮೆಚ್ಚಿದ್ದ. ಅಶ್ವಮೇಧಯಾಗದಲ್ಲಿ ಯಜ್ಞ ದೀಕ್ಷಿತನಾದ ಬಲಿಚಕ್ರವರ್ತಿ ಕೇಳಿದವರಿಗೆ ಕೇಳಿದ್ದನ್ನು ಕೊಟ್ಟು ಮತ್ತೆ ಕೊಡುವ ಸಂಕಲ್ಪ ಮಾಡಿದ್ದು ಮಹಾನ್‌ದಾನವ ಎನಿಸಿಕೊಂಡಿದ್ದ. ವಾಮನ ರೂಪದಲ್ಲಿ ಅಲ್ಲಿಗೆ ಬಂದ ಭಗವಂತ ಅವನಲ್ಲಿ ಮೂರು ಹೆಜ್ಜೆ ಭೂಮಿ ಬೇಡಿದ ಬಲಿಚಕ್ರವರ್ತಿ ಆಗಲಿ ಎಂದಾಗ ಭಗವಂತ ತನ್ನ ಒಂದು ಹೆಜ್ಜೆಗೆ ಇಡೀ ಆಕಾಶವನ್ನು ಮತ್ತೊಂದು ಹೆಜ್ಜೆಗೆ ಇಡೀ ಭೂಮಿಯನ್ನು ಆವರಿಸಿಕೊಂಡ. ಮೂರನೆ ಹೆಜ್ಜೆಯನ್ನು ಎಲ್ಲಿಡಲಿ ಎಂದು ಕೇಳಿದಾಗ ಎಲ್ಲೂ ಜಾಗವಿಲ್ಲದೆ ತನ್ನ ತಲೆಯ ಮೇಲಿಡು ಎಂದು ಹೇಳುತ್ತಾನೆ. ಆಗ ನರಕಾಸುರ ತಲೆಯ ಮೇಲೆ ಮೂರನೆ ಪಾದವನ್ನಿಟ್ಟು ಬಲಿತೆಗೆದುಕೊಳ್ಳುತ್ತಾನೆ. ಅವನ ದಾನಶೂರತ್ವವನ್ನು ಮೆಚ್ಚಿದ ಮಹಾವಿಷ್ಣು ಬೇಕಾದ ವರವನ್ನು ಬೇಡು ಎಂದ. ಆಗ ವರ್ಷದಲ್ಲಿ ಮೂರು ದಿನ ನನ್ನ

ರಾಜ್ಯವನ್ನು ನೋಡುವ ಅವಕಾಶ ಕೊಡು ಎಂದ. ಈ ಮೂರು ದಿನ ಯಾರು ದೀಪ ಬೆಳುಗುತ್ತಾರೋ ಅವರ ಮನೆಯಲ್ಲಿ ನಿನ್ನ ಸಹಧರ್ಮಿಣಿ ಸ್ಥಿರವಾಗಿ ನೆಲೆಸಲಿ. ಹಾಗೇ ನನ್ನ ಮನೆಯ ಬಾಗಿಲಲ್ಲಿ ಸದಾ ನಿನ್ನ ಸಾನಿಧ್ಯವಿರಲಿ ಎಂದು ಬೇಡಿಕೊಂಡ. ಮಹಾವಿಷ್ಣು ತಥಾಸ್ತು ಎಂದ. ಹೀಗೆ ದೀಪಾವಳಿ ಹಬ್ಬದ ಕುರಿತು ಜನರಲ್ಲಿ ಇಂದಿಗೂ ನಂಬಿಕೆ ಇದೆ.

ಹೀಗೆ ನಿಸ್ವಾರ್ಥತನದ ಮನಸ್ಸಿನ ಆಡಿದ ಮಾತಿಗೆ ತಪ್ಪದ ನುಡಿದಂತೆ ನಡೆವ ಬಲಿಚಕ್ರವರ್ತಿ ಇತರರ ಮೋಸದಿಂದ ತನ್ನ ಅಧಿಕಾರ ಕಳೆದುಕೊಂಡರು, ಆಸ್ತಿಕರ ಮನೆಗಳಲ್ಲಿ ಸದಾ ಲಕ್ಷ್ಮೀ ಸಾನಿಧ್ಯವಿರುವಂತೆ ಕೇಳಿಕೊಂಡು ಪ್ರಜಾಹಿತ ಬಯಸಿದ ಮಹಾ ವ್ಯಕ್ತಿತ್ವ ಬಲಿಯದು. ಬಲಿಚಕ್ರವರ್ತಿಯನ್ನು ಕೊಂದು ಅಲ್ಪದಲ್ಲಿ ಕಲ್ಪವನ್ನು ತೋರಿದ ದಿನವೇ ಬಲಿಪಾಡ್ಯಮಿ. ಈ ದಿನ ಯಾರು ಯಾವ ಮನಸ್ಸಿನಿಂದ ಇರುತ್ತಾರೋ ಅವರು ಇಡೀ ವರ್ಷಪೂರ್ತಿ ಅದೇ ರೀತಿ ಸುಖ ಅಥವಾ ದುಃಖದಿಂದ ಇರಬೇಕಾಗುತ್ತದೆ. ಎಂದು ಕೆಲವರ ನಂಬಿಕೆಯಾಗಿದೆ.

**ರಕ್ಷಾ ಬಂಧನ/ನೂಲು ಹುಣ್ಣಿಮೆ:** ಶ್ರಾವಣ ಮಾಸದಲ್ಲಿ ಬರುವ ಹುಣ್ಣಿಮೆ ದಿನದಂದು ರಕ್ಷಾ ಬಂಧನವನ್ನು ಆಚರಿಸಲಾಗುತ್ತದೆ. ಹೆಸರೆ ಸೂಚಿಸುವಂತೆ ಇದು ರಕ್ಷಾಬಂಧನ. ಇದು ಪವಿತ್ರತೆಯ ಸಂಕೇತದ ಹಬ್ಬವಾಗಿದೆ. ಅಣ್ಣ-ತಂಗಿ ಅಕ್ಕ-ತಮ್ಮಂದಿರಿಗೆ ಅಥವಾ ಅಣ್ಣಂದಿರಿಗೆ ಪವಿತ್ರ ಬಾಂಧವ್ಯದ ಪ್ರತಿಫಲವಾಗಿ ನೂಲನ್ನು ಬಲಗೈಗೆ ಕಟ್ಟುವ ಮೂಲಕ ಈ ಆಚರಣೆಯನ್ನು ಆಚರಿಸಲಾಗುತ್ತದೆ. ಎಷ್ಟೋ ದೂರದಲ್ಲಿದ್ದ ಹೆಣ್ಣುಮಕ್ಕಳು ತಪ್ಪದೆ ತಮ್ಮ ಅಣ್ಣ, ತಮ್ಮಂದಿರತ್ತ ಅಂದು ಬಂದು ಬೆಳಿಗ್ಗೆ ಎಣ್ಣೆ ಸ್ನಾನ ಮಾಡಿಸಿ, ದೇವರ ಮುಂದೆ ಕೂಡ್ರಿಸಿ ರಾಖಿಯನ್ನು ಕಟ್ಟಿ ಆರತಿ ಮಾಡಲಾಗುತ್ತದೆ.

**ಸೀಗೆ ಹುಣ್ಣಿಮೆ:** ಭಾದ್ರಪದ ಆಶ್ವವಿಜ್ ಮಾಸದಲ್ಲಿ ಬರುವ ಈ ಹಬ್ಬವು ರೈತರ ಪಾಲಿಗೆ ಮುಖ್ಯವಾದ ಹಬ್ಬ ಏಕೆಂದರೆ ಆ ಸಮಯದಲ್ಲಿ ಫಸಲುಗಳೆಲ್ಲಾ ಬೆಳೆದು ನಿಂತಿರುತ್ತವೆ. ಅಂತಹ ಸಮಯದಲ್ಲಿ ತಮ್ಮ ಬೆಳೆ ಹುಲುಸಾಗಿ ಬರಲಿ ಎಂಬ ಉದ್ದೇಶದಿಂದ ಚರಗ ಚೆಲ್ಲುತ್ತಾರೆ. ಆ ಹಬ್ಬದಂದು ರೈತರು ನಾನಾ ರೀತಿಯ ಅಡುಗೆ ಮಾಡಿಕೊಂಡು ಕುಟುಂಬ ಸಮೇತ ಬಂಡಿ ಕಟ್ಟಿಕೊಂಡು ಹೊಲಗಳಿಗೆ ಹೋಗುತ್ತಾರೆ. ಸೀಗೆ ಹುಣ್ಣಿಮೆಯಂದು ನಾನಾ ರೀತಿಯ ಅಡುಗೆಯನ್ನು ಮಾಡಿಕೊಂಡಿರುತ್ತಾರೆ. ಪುಂಡಿಪಲ್ಯ, ಎಣ್ಣಿಹೋಳಿಗೆ. ಎಳ್ಳು ಹೋಳಿಗೆ, ಕರ್ಚಿಕಾಯಿ, ತುಂಬಿದ ಮೆಣಸಿನಕಾಯಿ, ಕುಚ್ಚಿದ ಮೆಣಸಿನಕಾಯಿ, ಉಂಡಗಡಬು, ಕುಂಬಳಕಾಯಿ ಪಲ್ಯ, ಕಾಳಿನ ಪಲ್ಯ, ಮೊಸರಿನಬುತ್ತಿ, ಚಿತ್ರಾನ್ನ, ಹೀಗೆ ಬಗೆ ಬಗೆಯ ಅಡುಗೆ ಕಟ್ಟಿಕೊಂಡು ಭುಮಿತಾಯಿಗೆ ಮೊದಲು ಎಡಿ ಮಾಡುತ್ತಾರೆ. ಹೊಲದಲ್ಲಿ ಐದು ಕಲ್ಲುಗಳನ್ನಿಟ್ಟು, ಪಾಂಡವರನ್ನಾಗಿ ಮಾಡಿ ಒಂದು ಕಲ್ಲು ಹಿಂದೆ ಇಟ್ಟು ಕರ್ಣನನ್ನಾಗಿ ಮಾಡಿ ಪಾಂಡವರಿಗೆ ಮತ್ತು ಕರ್ಣನಿಗೆ ಬೇರೆ, ಬೇರೆ ಎಡೆ ಮಾಡಿ ಹರ್ಷದಿಂದ ಪೂಜೆ ಪುನಸ್ಕಾರ ಮಾಡಿ ಸಂತೋಷ ಪಡುತ್ತಾರೆ. ನಂತರ ಹೊಲದ ಸುತ್ತಲೂ ಮೃಷ್ಟಾನ್ನ ಪದಾರ್ಥಗಳನ್ನು ಚೂರು ಚೂರಾಗಿ ಹುಲಲಗೊ

ಹುಲಲಗೊ.......ಎಂದು ಚರಗ ಚೆಲ್ಲುವರು. ಚೆಲ್ಲಿದ ಪದಾರ್ಥ ಭೂತಾಯಿ ಸೇರಲಿ ಹಾಗೂ ಹಕ್ಕಿ ಪಕ್ಷಿಗಳಿಗೆ ಆಹಾರವಾಗಲಿ ಎಂಬ ಉದ್ದೇಶದಿಂದ ಈ ಪದ್ಧತಿಯನ್ನು ಅನುಸರಿಸುತ್ತಾರೆ.

ಶಿಶುನಾಳ ಶರೀಫರು ಸೀಗೆ ಹುಣ್ಣಿಮೆಯ ಬಗ್ಗೆ ಹಾಡಿರುವ ಹಾಡು ಇಂತಿದೆ

ಸೀಗೆ ಹುಣ್ಣಿಮೆ ದಿನ ಉಣಲಿಕ್ಕೆ
ಕರೆಯುವರೇನಲ್ಲಾ ಕರೆದರೆ ಹೋಗದು ಬಿಡಲಿಲ್ಲ //ಪ//

ಹುರಕ್ಕಿ ಹೋಳಿಗೆ ಹೂರಣಗಡಬು
ಕಡಲೆ ಪಚ್ಚಡಿ ಕಟ್ಟಿ ನಾಂಬರಾ //೧//

ಉಂಡಗಡಬು ಪುಂಡಿಯ ಪಲ್ಲೆ/
ಬುಟ್ಟಿಯೊಲೆ ಇಟ್ಟೆಲ್ಲಾ //೨//

ಬುಟ್ಟಿಗೆ ಕೆಮ್ಮಂಣ್ಣಾ ಬಡದೆಲ್ಲಾ/
ಅದರ ಅನುಭವ ತಿಳಿದಿಲ್ಲ //೩//

ಇಂದು ಅಂದುಬಂದು ಬಹುದಿನ
ಹೊಲದೊಳು ಕುಂತೆಲ್ಲ //೪//

ಮನಸ್ಸಿನ ಮೈಲಿಗೆ ತೊಳಲಿಲ್ಲ/
ಗಂಧದ ಬಟ್ಟು ಗಮಕಿಲೆ ಇಟ್ಟು //೫//

ಹಂಗನೂಲು ಹಾಕಿಯಷ್ಟು/
ಬಟ್ಟನ ಕಲ್ಲಿಗೆ ಸುಣ್ಣಾ ತೊಟ್ಟು //೬//

ಕಣ್ಣಲೇ ಕಂಡೆಲ್ಲಾ ಆ ಕಲ್ಲನು ಊಣಲಿಲ್ಲ/
ಎಡೆ ಮಾಡಿ ನೀನೆ ಉಂಡೆಲ್ಲ //೭//

ಮಂಗಳಾತ್ಮ ಶಿಶುನಾಳ ದೀಶನಲ್ಲೆ/
ಬಡವರು ಕೂಡಿರೆಲ್ಲ ಶೃಂಗಾರವಾದ ನಾರೇರೆಲ್ಲಾ //೮//

**ಗೌರಿ ಹುಣ್ಣಿಮೆ:** ಹುಣ್ಣಿಮೆಯ ದಿನ ಗೌರಿ ಕೂರಿಸಿ ಪೂಜಿಸುವ ಸಂಪ್ರದಾಯವಿದೆ. ಇದು ಇಲ್ಲಿಯ ಪ್ರಮುಖ ಹಬ್ಬಗಳಲ್ಲಿ ಒಂದು. ದೀಪಾವಳಿಯ ಪಾಡ್ಯಮಿ ದಿನದಂದು ಗೌರಿಯನ್ನು ಕೂರಿಸುತ್ತಾರೆ. ಬರುವ ಹುಣ್ಣಿಮೆಯವರೆಗೆ ಹದಿನೈದು ದಿನಗಳು ಪೂಜೆ ಸಲ್ಲಿಸುತ್ತಾರೆ. ಈಹಬ್ಬ ಮಳೆಗಾಲದ ಕೊನೆಯಲ್ಲಿ ಚಳಿಗಾಲದಲ್ಲಿ ಆರಂಭವಾಗುವುದು. ಹಿಮಾಲಯದಲ್ಲಿ ತಪೋನಿರತ ಶಿವನನ್ನು ಪೂಜಿಸಿ ಸುಮಂಗಲಿಯರಿಗೆ ಸೌಮಂಗಲ್ಯ ಕರುಣಿಸು ಎಂದು ಪಾರ್ವತಿ ಪ್ರಾರ್ಥಿಸುತ್ತಾಳೆ. ಇದರ ಕುರುಹಾಗಿ ಮಹಿಳೆಯರು ಗೌರಿವ್ರತವನ್ನು ಆಚರಿಸುತ್ತಾರೆ. ಗೌರಮ್ಮನ ಮೂರ್ತಿಯನ್ನು ಮರ ಅಥವಾ ಮಣ್ಣಿನಿಂದ ಸಿದ್ಧಪಡಿಸುವರು. ಕೊನೆಯ ದಿನ

ಅಂದರೆ ಹುಣ್ಣಿಮೆ ದಿನ ಗೌರಿ ಪೂಜೆ ಮಾಡಿ ಹಾಡು ಹಾಡುತ್ತಾರೆ. ಮದುವೆ ಗೊತ್ತಾದ ಹುಡುಗಿಯ ಮನೆಗೆ ಬಂದು ಸಕ್ಕರೆ ಆರತಿ ಕೊಟ್ಟು ಆರತಿ ಮಾಡಿ ಹೊಗುವ ಸಂಪ್ರದಾಯವಿದೆ.

**ಕೋಲಾಟದ ಹಾಡು:**

ಒಂದ ಪಾಠಣಗಿ ಹತ್ತುತ್ತ
ಒಂದ ಮುತ್ತು ಚೆಲ್ಲುತ್ತ
ಕೋಲಗೌರಿ ಕೋಲ ಕಂಚಿನ ಗೌರಿ ಮೇಲ

ಎರಡ ಪಾಠಣಗಿ ಹತ್ತುತ್ತ
ಎರಡ ಮುತ್ತು ಚಲ್ಲುತ್ತ
ಕೋಲಗೌರಿ ಕೋಲ ಕಂಚಿನ ಗೌರಿ ಮೇಲ

ಮೂರ ಪಾಠಣಗಿ ಹತ್ತುತ್ತ
ಮೂರ ಮುತ್ತು ಚೆಲ್ಲುತ
ಕೋಲಗೌರಿ ಕೋಲ ಕಂಚಿನ ಗೌರಿ ಮೇಲ

ನಾಲ್ಕ ಪಾಠಣಗಿ ಹತ್ತುತ್ತ
ನಾಲ್ಕ ಮುತ್ತು ಚೆಲ್ಲುತ್ತ
ಕೋಲಗೌರಿ ಕೋಲ ಕಂಚಿನ ಗೌರಿಮೇಲ

**ಶಿವರಾತ್ರಿ:** ಮಾಘ ಮಾಸದ ಅಮವಾಸ್ಯಯ ಒಂದು ದಿನ ಪೂರ್ವದಲ್ಲಿ ಮಹಾಶಿವರಾತ್ರಿ ಆಚರಿಸಲಾಗುತ್ತದೆ. ಅಂದು ಎಲ್ಲರೂ ಉಪವಾಸ ಮಾಡುತ್ತಾರೆ. ಅದಕ್ಕೆ ಇಲ್ಲಿಯ ಜನರು ಕತೆಯೊಂದನ್ನು ಈ ರೀತಿ ಹೇಳುತ್ತಾರೆ. ಬೇಟೆಯಾಡುವ ಬೇಟೆಗಾರನು ದಿನಾಲು ಬೇಟೆಯಾಡಿ ದಿನಾಲು ಆಹಾರ ತರುತ್ತಿದ್ದ. ಶಿವರಾತ್ರಿ ಎರಡು ದಿನ ಮುಂಚಿತವಾಗಿ ಯಾವುದೇ ಬೇಟೆ ಸಿಗಲಿಲ್ಲ. ಮನೆಯಲ್ಲಿ ಬೇಟೆಗಾರನ ಹೆಂಡತಿ ಮಕ್ಕಳು ಉಪವಾಸವಾದರು. ಮಕ್ಕಳು ಹೆಂಡತಿ ಬೇಟೆಗಾರನಿಗೆ ಏನಾದರೂ ಮಾಡಿ ಬೇಟೆ ಆಡಿ ಆಹಾರ ತರಲೇಬೇಕೆಂದು ತಿಳಿಸಿದರು. ಎಲ್ಲಿ ಬೇಟೆಯಾಡಬೇಕೆಂದು ಯೋಚನೆ ಮಾಡುತ್ತಾ ಇರುವಾಗ ಕೆರೆಯ ನೀರನ್ನು ಕುಡಿಯಲು ಬರುವ ಪ್ರಾಣಿಗಳನ್ನು ಬೇಟೆಯಾಡಿದರಾಯಿತು. ಎಂದು ಆಲೋಚನೆ ಮಾಡಿ, ಕೆರೆಯ ಮೇಲಿನ ಬಿಲ್ವ ಪತ್ರಿಯ ಗಿಡವನ್ನು ಏರಿ ಕುಳಿತ. ಎಷ್ಟೇ ಪಯತ್ನ ಪಟ್ಟರು ಬೇಟೆ ಸಿಗಲಿಲ್ಲ ರಾತ್ರಿಯಾಯಿತು. ಆ ಸಮಯದಲ್ಲಿ ಚಿಗುರೆಗಳು ನೀರು ಕುಡಿಯಲು ಬಂದವು ಅವುಗಳನ್ನು ಬೇಟೆಯಾಡುವುದಾಗಿ ಚಿಗುರೆಗಳಿಗೆ ತಿಳಿಸಿದ. ಅವು ಮನೆಯಲ್ಲಿ ಮರಿ ಚಿಗುರೆಗಳನ್ನು ಬಿಟ್ಟು ಬಂದಿರುವುದಾಗಿ, ಅವುಗಳನ್ನು ಬೇರೆ ಚಿಗುರೆಗಳಿಗೆ ಒಪ್ಪಿಸಿ ಬರುವುದಾಗಿ ಹೇಳಿದವು. ಆಯಿತು ಎಂದು ಬೇಟೆಗಾರ ಹೇಳಿದ. ಆಗ ಚಿಗುರೆಗಳು ಮನೆಗೆ ತೆರಳಿದವು, ಆ ರಾತ್ರಿ ಪೂರ್ತಿ ಏನು ಮಾಡಬೇಕೆಂದು ತೋಚದ ಬೇಟೆಗಾರ ಕೆಳಗಿದ್ದ ಶಿವನ ಮೂರ್ತಿಯ ಮೇಲೆ ಬಿಲ್ವ ಪತ್ರಿಗಳನ್ನು

ಹರಿದು ಹಾಕುತ್ತಾ ಕುಳಿತ. ಶಿವನು ಇವನನ್ನು ಮೆಚ್ಚಿ ಮರುದಿನ ಬಂದ ಚಿಗುರೆಗಳನ್ನು ಬೇಟೆಯಾಡದಂತೆ ತಡೆದ. ಹಾಗೂ ಶಿವ ಬೇಟೆಗಾರನನ್ನು ಪುಷ್ಪಕ ಪಿಮಾನದಲ್ಲಿ ಕರೆದುಕೊಂಡು ಹೋದ. ಆದ್ದರಿಂದ ಆ ನೆನಪಿಗಾಗಿ ಅಂದು ಎಲ್ಲರೂ ಉಪವಾಸ ಮಾಡುತ್ತಾರೆ.

ಶಿವರಾತ್ರಿ ದಿನ ಶಿವನ ಪೂಜೆಗೆ ಹಣ್ಣಿನ ನೈವೇದ್ಯ ಮಾಡಿ ಶಿವಪಠಣ, ರಾತ್ರಿಯೆಲ್ಲಾ ಜಾಗರಣೆ ಮಾಡಿ ಶಿವನನ್ನು ಆರಾಧಿಸಲಾಗುತ್ತದೆ. ಮರುದಿನ ಅಮವಾಸ್ಯೆಯಂದು ಉಪವಾಸವಿದ್ದು ಎಲ್ಲರು ಸಿಹಿ ಅಡುಗೆ ಮಾಡಿ ಅಂದರೆ ವಿಶೇಷವಾಗಿ ಈ ಭಾಗದಲ್ಲಿ ಗೋದಿ ಹುಗ್ಗಿಯನ್ನು ಮಾಡಿ ಎಡೆ ಹಿಡಿದು ಊಟ ಮಾಡಲಾಗುತ್ತದೆ. ಈ ಹಬ್ಬದ ತಾತ್ವಿಕತೆ ಎಂದರೆ ಯಾರಿಗೂ ಯಾವತ್ತು ಯಾರು ಹಿಂಸೆ ಮಾಡಬಾರದು ಎಂಬ ಅಂಶವನ್ನು ತಿಳಿಸಿಕೊಡುವುದಾಗಿದೆ.

**ಗಣೇಶ ಚತುರ್ಥಿ:** ಭಾದ್ರಪದ ಶುಕ್ಲದ ಚೌತಿಯಂದು ಶುದ್ಧ ಚತುರ್ಥಿ. ಗಣಪತಿಯ ಹಬ್ಬದ ದಿನ. ಅಂದು ಈ ದೇವರಿಗೆ ವಿಶೇಷವಾಗಿ ಪೂಜೆ ನಡೆಯುತ್ತದೆ. ಬಂಕಾಪುರ ಗ್ರಾಮ ಇದಕ್ಕೆ ಹೊರತಾಗಿಲ್ಲ. ಗಣೇಶನ ಬಗ್ಗೆ ಇಲ್ಲಿಯ ಸ್ಥಳಿಯ ಕಥೆಗಳು ಹೀಗಿವೆ. ಒಮ್ಮೆ ಪಾರ್ವತಿಯು ಸ್ನಾನ ಮಾಡಲು ಇಚ್ಚಿಸುತ್ತಾಳೆ. ಅವಳು ಸ್ನಾನದ ಮನೆಗೆ ಹೋದಾಗ ಯಾರಾದರೂ ಒಳನುಗ್ಗಿದರೆ ಗತಿಯೇನೆಂದು ಒಳನುಗ್ಗದಂತೆ, ತನ್ನ ಮೈತಿಕ್ಕಿನಿಂದ ಉಂಟಾದ ಮಣ್ಣಿನ ಕೊಳೆಯಿಂದ ಬಾಲಕನ ಮೂರ್ತಿ ಮಾಡಿ ಅದಕ್ಕೆ ಜೀವ ತುಂಬಿ ಕಾವಲು ನಿಲ್ಲಿಸಿದಳು. ಯಾರನ್ನು ಒಳಗೆ ಬಿಡಕೂಡದೆಂದು ಆ ಹುಡುಗನಿಗೆ ಕಟ್ಟಪ್ಪಣೆ ಮಾಡಿ ಸ್ನಾನಗೃಹಕ್ಕೆ ತೆರಳಿದಳು. ಇತ್ತ ದೇಶ ಸಂಚಾರಕ್ಕೆ ಹೋದ ಶಿವ ಮರಳಿ ಮನೆಗೆ ಬಂದ. ಹುಡುಗ ಒಳಬಿಡದೆ ತಡೆದ. ಸಿಟ್ಟಿಗೆದ್ದ ಶಿವ ಆ ಹುಡುಗನ ತಲೆಯನ್ನು ಕತ್ತರಿಸಿದ. ತನ್ನ ಮಗನಿಗಾದ ಗತಿಗೆ ಪಾರ್ವತಿ ಸಂಕಟಪಟ್ಟಳು. ಅತ್ತಳು, ಕರೆದಳು. ಶಿವನಿಗೆ ಕರುಣೆ ಬಂದು ಅವಳನ್ನು ಸಮಾಧಾನ ಪಡಿಸಲು ಹುಡುಗನು ತಲೆ ಬರಿಸುವುದಾಗಿ ಭರವಸೆ ಕೊಡುತ್ತಾನೆ. ಉತ್ತರ ದಿಕ್ಕಿಗೆ ತಲೆಮಾಡಿ ಮಲಗಿದವರ ತಲೆ ಕತ್ತರಿಸಿ ತನ್ನಿ ಎಂದು ತನ್ನ ಸೇವಕರಿಗೆ ಶಿವ ಆಜ್ಞಾಪಿಸುತ್ತಾನೆ. ಉತ್ತರ ದಿಕ್ಕಿಗೆ ಮಲಗಿದ ಜನಗಳಾರೂ ಸಿಕ್ಕದೆ, ಮಲಗಿದ ಆನೆಯ ತಲೆಯನ್ನೇ ಕಡಿದು ತಂದು ಸೇವಕರು ಶಿವನಿಗೆ ಒಪ್ಪಿಸಿದರು. ಶಿವ ಹುಡುಗನ ಮುಂಡಕ್ಕೆ ರುಂಡವನ್ನು ಕಸಿಮಾಡಿ, ಜೀವ ತುಂಬಿದ. ಆನೆಯ ತಲೆಯನ್ನು ಧರಿಸಿದ ಆ ಹುಡುಗನೇ ಗಜವದನನಾದ.

ಗಣೇಶನಿಗೆ ಆಹಾರ ಖಾದ್ಯಗಳಾದ ರುಚಿರುಚಿಯಾದ ಕಡುಬು, ಕರಿಗಡುಬು, ಕಾಯಿಗಡುಬು, ಉದ್ದಿನಕಡುಬುಗಳೆಂದರೆ ಪಂಚಪ್ರಾಣ. ಬೋಜನಪ್ರಿಯನಾದ ಈತ ಒಂದು ದಿನ ಭಕ್ತರ ಮನೆಮನೆ ತಿರುಗಾಡಿ ಹೊಟ್ಟೆ ಬಿಗಿಯುವವರೆಗೆ ಈ ಸಿಹಿ ಸೇವಿಸಿ, ಇಲಿಯ ಮೇಲೆ ಹತ್ತಿ ನಡೆದಿದ್ದನಂತೆ. ಈತನ ಭಾರವನ್ನು ತಾಳಲಾರದೆ ಮೂಷಿಕ ಕಲ್ಲಿಗೆ ಎಡವಿ ಬಿದ್ದಿತು. ಗಣೇಶ ಕೆಳಗೆಬಿದ್ದ. ಹೊಟ್ಟೆ ಹರಿದು, ತಿಂದ ತಿಂಡಿಯೆಲ್ಲ ನೆಲದ ಪಾಲಾಯಿತು. ಯಾರಾದರೂ

ನೋಡಿಯಾರೆಂದು ಅತ್ತ ಇತ್ತ ನೋಡುತ್ತಾ, ಬಿದ್ದುದನ್ನು ಲಗುಬಗೆಯಿಂದ ಎತ್ತಿಕೊಂಡು ಮತ್ತೆ ಹೊಟ್ಟೆಯಲ್ಲಿ ತುರುಕಿಕೊಂಡು, ಅಲ್ಲಿಯೇ ಹರಿದು ಹೋಗುತ್ತಿದ್ದ ಹಾವನ್ನು ಹೊಟ್ಟೆಗೆ ಗಟ್ಟಿಯಾಗಿ ಕಟ್ಟಿಕೊಂಡನಂತೆ. ಇವನ ನಗೆಪಾಟಲ ದೃಶ್ಯವನ್ನು ಕಂಡು ಆಕಾಶದಲ್ಲಿ ಚಂದ್ರ ಗಹಗಹಿಸಿ ನಕ್ಕ ಬಿದ್ದವನ ಬಗೆಗೆ ಅಯ್ಯೋ ಪಾಪ ಎಂದು ಕರುಣೆದೋರಲಿಲ್ಲ. ಬಿದ್ದಪೆಟ್ಟಿಗಿಂತ ನಕ್ಕ ಪೆಟ್ಟುಹೆಚ್ಚು ಗಣೇಶನಿಗೆ ಅಸಹ್ಯವೆನಿಸಿ, ಕೋಪವುಂಟಾಗಿ ಪ್ರತಿ ಭಾದ್ರಪದ ಚೌತಿಯ ದಿನ ನನ್ನನ್ನು ನೋಡದೆ ಯಾರು ನಿನ್ನನ್ನು ನೋಡಬಾರದು. ಹಾಗೇನಾದರೂ ತಪ್ಪಿ ನಿನ್ನನ್ನು ಮೊದಲು ನೋಡಿದರೆ, ಅವರ ಮೇಲೆ ಕಳುವಿನ ಅಪವಾದ ಬರಲಿ ಎಂದು ಚಂದ್ರನಿಗೆ ಶಾಪವಿತ್ತ. ಅಷ್ಟಲ್ಲದೆ ತನ್ನನ್ನು ನೋಯಿಸಿ ಗೇಲಿ ಮಾಡಿದ ಚಂದ್ರನಿಗೆ ತನ್ನ ಒಂದು ದಂತವನ್ನು ಸಿಟ್ಟಿನಿಂದ ಭರದಲ್ಲಿ ಎಸೆದನಂತೆ. ಆಗಿನಿಂದ ಏಕದಂತನಾದ. ಹೀಗಾಗಿ, ಚೌತಿಯ ದಿನ ಗಣೇಶನ ದರ್ಶನವಿಲ್ಲದೆ ಯಾರೂ ಚಂದ್ರನನ್ನು ನೋಡುವುದಿಲ್ಲ. ಮರೆತು ಚಂದ್ರದರ್ಶನ ಮಾಡಿದರೆ ಪಕ್ಕದ ಮನೆಗೆ ಕಲ್ಲು ಹೊಡೆಯಬೇಕು ಎಂಬ ಜನಪದ ನಂಬಿಕೆಯಿದೆ.

ಗಣೇಶ ಬಂದ
ಕಾಯಿ ಕಡಬ ತಿಂದ
ಚಿಕ್ಕೆರೆಲಿ ಬಿದ್ದ
ದೊಡ್ಡ ಕೆರೇಲಿ ಎದ್ದ

ಭಾದ್ರಪದ ಶುದ್ಧ ಚತುರ್ಥಿ ಹಿಂದುಗಳಿಗೆ ಗಣಪತಿಯ ಹಬ್ಬದ ದಿನ. ಅಂದು ಈ ದೇವರಿಗೆ ವರ್ಷದಲ್ಲೇ ವಿಶೇಷವಾದ ವಾರ್ಷಿಕ ಪೂಜೆ ಇಡೀ ದೇಶಾದ್ಯಂತ ನಡೆಯುತ್ತಿರುತ್ತದೆ. ಅಂದು ಹಿರಿಯ ಕಿರಿಯರಿಂದ ಎಲ್ಲರೂ ಕೂಡಿ ಮಣ್ಣಿನಿಂದ ಮಾಡಿದ ಬಣ್ಣ ಬಣ್ಣದ ಗಣಪತಿ ಮೂರ್ತಿಯನ್ನಿಟ್ಟು ಪೂಜಿಸುತ್ತಾರೆ. ಭಾರತದಲ್ಲಿ ಎಲ್ಲಾ ಹಿಂದೂಗಳಿಗೆ ಈ ಮಣ್ಣಿನ ಮಗನಾದ ಗಣಪ ಆಧರಣೀಯ.

ಗಣೇಶ ಚತುರ್ಥಿ ಭಾದ್ರಪದ ಮಾಸದ ಅಂದರೆ ಆಗಸ್ಟ್ ಸೆಪ್ಟಂಬರ ತಿಂಗಳಲ್ಲಿ ಬರುತ್ತದೆ. ಈ ವೇಳೆಗಾಗಲೇ ಮಳೆಗಾಲ ಮುಗಿದು ಬಹುತೇಕ ಕಡೆ ನಾಟಿ, ಬಿತ್ತನೆಯಂತಹ ಕೆಲಸಗಳು ಮುಗಿದಿರುತ್ತವೆ. ಆ ಪೈರು-ಪಚ್ಚೆ ಸಮೃದ್ಧವಾಗಿ ಬೆಳೆಯಲಿ ಎಂಬ ಹರಕೆಯೊಂದಿಗೆ ಪೃಥ್ವೀ ಸ್ವರೂಪದ ಗಣಪತಿಗೆ ಪೂಜೆ ಸಲ್ಲಿಸುತ್ತಾರೆ. ಶ್ರಾವಣ ಕಳೆದ ಅನಂತರ ಬರುವ ಭಾದ್ರಪದ ಮಾಸದ ಚತುರ್ಥಿಯ ದಿನವೇ ಗಣೇಶನನ್ನೇ ಪೂಜಿಸುವ ಪರಿಪಾಟ ಬೆಳೆದುಬಂದಿದೆ.

ಭಾರತದ ಸ್ವಾತಂತ್ರ್ಯ ಪೂರ್ವದಲ್ಲಿ ಪೇಶ್ವೆಗಳ ಕಾಲದಲ್ಲಿ ಗಣೇಶನ ಉತ್ಸವ ಮಾಡಲಾಗುತ್ತಿತ್ತು. ನಂತರ ಕೆಲ ದಶಕಗಳ ಕಾಲ ನಿಂತುಹೋಗಿತ್ತು. ಅದನ್ನು ಮತ್ತೆ ಚಾಲನೆಗೆ ತಂದದ್ದು ಬಾಲಗಂಗಾಧರ ತಿಲಕರು. "ತಿಲಕರು ರಾಷ್ಟ್ರೀಯ ಸಂಘಟನೆಗಾಗಿ ಗಣಪತಿ ಹಬ್ಬವನ್ನು ಬಳಸಿ ಕೊಂಡು ಸಾರ್ವಜನಿಕವಾಗಿ ಗಣೇಶೋತ್ಸವವನ್ನು ಜಾರಿಗೆ ತಂದರು. ಗಣಪತಿ ಹಬ್ಬಕ್ಕೆ ಸಾರ್ವತ್ರಿಕ

ಸಮಾರಂಭದ ರೂಪಕೊಟ್ಟು ಸಾರ್ವಜನಿಕ ಸ್ಥಳದಲ್ಲಿ ಪ್ರತಿಷ್ಠಾಪಿಸಿದ ಗಣಪತಿಯ ಸನ್ನಿಧಿಯಲ್ಲಿ ಹತ್ತು ಹಲವು ದಿನಗಳ ಕಾಲ ಉಪನ್ಯಾಸ, ಸಂಗೀತ, ನೃತ್ಯ, ನಾಟಕ, ಹರಿಕಥೆ ಮುಂತಾದವುಗಳು ಜರುಗುವಂತೆ ಮಾಡಿ ಆ ಮೂಲಕ ರಾಷ್ಟ್ರಪ್ರಜ್ಞೆ ಜಾಗೃತಗೊಳಿಸಿದರು. ಸ್ವಾಮಿ ವಿವೇಕಾನಂದರು ಇದೇ ರೀತಿ ಬಂಗಾಳದಲ್ಲಿ ರಾಷ್ಟ್ರಪ್ರಜ್ಞೆ ಜಗೃತಗೊಳಿಸಿದರು. ಜೊತೆಗೆ ಹಿಂದೂ ಸಮಾಜದ ಸಂಘಟನೆಗೆ ಗಣಪತಿ ಉತ್ಸವವನ್ನು ಬಳಸಿಕೊಂಡರು.”[೮]

ಒಮ್ಮೆ ಗಣೇಶನಿಗೂ ಆತನ ಸೋದರ ಷಣ್ಮುಖಗೂ ತಮ್ಮಿಬ್ಬರಲ್ಲಿ ಯಾರು ಶ್ರೇಷ್ಠರು ಎಂದು ಈರ್ಷ್ಯೆ ಉಂಟಾಯಿತು. ಇವರ ಶ್ರೇಷ್ಠಾಶ್ರೇಷ್ಠತೆಯನ್ನು ಪರೀಕ್ಷಿಸಲು ಶಿವಪಾರ್ವತಿಯರು ಇವರ ಮಧ್ಯ ಒಂದು ಸ್ಪರ್ಧೆ ಏರ್ಪಡಿಸಿದರು. ಅದು ಈರ್ವರಲ್ಲಿ ಯಾರು ಮೊದಲು ಭೂಪ್ರದಕ್ಷಣೆ ಮುಗಿಸಿ ಬರುತ್ತಾರೆಂಬುದು. ಷಣ್ಮುಖನಂತೂ ಹಿಗ್ಗಿನಿಂದ ನವಿಲೇರಿ ಭೂಪ್ರದಕ್ಷಿಣೆಗೆ ಹೊರಟೆಬಿಟ್ಟ. ಅದೇ ಕಾಲಕ್ಕೆ, ಭೂಪ್ರದಕ್ಷಿಣೆ ಹೊರಡಬೇಕಾದ ಗಣೇಶ ಹೊರಡಲೇ ಇಲ್ಲ. ತನ್ನ ತಂದೆ ತಾಯಿಗಳ ತೊಡೆಯೇರಿ ಕುಳಿತಿದ್ದ ಗಣೇಶ ಇಳಿದುಬಂದು, ಒಂದು ಸುತ್ತು ಅವರಿಗೇ(ಶಿವಪಾರ್ವತಿ) ಪ್ರದಕ್ಷಿಣೆ ಹಾಕಿ ಸಂತೋಷದಿಂದ ಕುಳಿತುಕೊಂಡ. ಅಷ್ಟರಲ್ಲಿ ಇಡೀ ಭೂಮಿಯನ್ನು ಸುತ್ತುಹೊಡೆದು ಸುಸ್ತಾಗಿ ನವಿಲಿನಿಂದ ಬಂದಿಳಿದ ಷಣ್ಮುಖ, ತನಗಿಂತಲೂ ಮೊದಲು ಭೂಪ್ರದಕ್ಷಿಣೆ ಮುಗಿಸಲು ಗಣೇಶನಿಗೆ ಹೇಗೆ ಸಾಧ್ಯವಾಯಿತೆಂದು ಆಶ್ಚರ್ಯಭರಿತನಾದ. ಶಿವಪಾರ್ವತಿಯರು ಗಣೇಶನಿಗೆ ನೀನು ಗೆದ್ದುದ್ದು ಹೇಗೆ ಎಂದು ವಿಚಾರಿಸಲು, ವಿಶ್ವವೆಲ್ಲ ನಿಮ್ಮಲ್ಲಿ ಅಡಗಿದೆ, ನೀವೇ ವಿಶ್ವದ ತಂದೆ ತಾಯಿ, ನಿಮ್ಮ ಸುತ್ತ ಒಂದು ಪ್ರದಕ್ಷಿಣೆ ಹಾಕಿದೆ, ಇದು ಭೂಪ್ರದಕ್ಷಿಣೆಯಲ್ಲದೆ ಮತ್ತೇನು? ಎಂದು ಉತ್ತರಿಸಿದ. ಮಗನ ಚಮತ್ಕಾರಿಕವಾದ ಬುದ್ಧಿಚಾತುರ್ಯಕ್ಕೆ ಮೆಚ್ಚುತ್ತಾರೆ. ಷಣ್ಮುಖ ಇಂಥ ಆಲೋಚನೆ ತನಗೆ ಹೊಳೆಯಲಿಲ್ಲವಲ್ಲ ಎಂದು ಪೆಚ್ಚುಮೋರೆ ಮಾಡಿದ.

**ಮೊಹರಂ ಹಬ್ಬ:** ಈ ಹಬ್ಬದ ಆಚರಣೆಯ ಹಿಂದೆ ಒಂದು ಐತಿಹಾಸಿಕ ಘಟನೆ ಇದೆ. ಇರಾಕ್ ದೇಶದ ಫರಾತ್ ನದಿಯ ದಡದ ಮೇಲಿರುವ ಕರ್ಬಲ ನಗರ ಬಾಗ್ದಾದ್ ನಗರದಿಂದ ಕೇವಲ ಎಂಬತ್ತು ಕಿ.ಮೀ ಅಂತರದಲ್ಲಿದೆ. ಕರ್ಬಲ ಎಂಬುದು ಕರ್ಬ ಮತ್ತು ಬಲಾ ಎಂಬೆರಡು ಪದಗಳನ್ನೊಳಗೊಂಡ ಸಂಯುಕ್ತ ಪದ. ಕರ್ಬ ಎಂದರೆ ದುಃಖ, ಬಲಾ ಎಂದರೆ ವಿಪತ್ತು. ವಿಪತ್ತಿನಿಂದ ಒದಗಿಬಂದ ದುಃಖದಿಂದಾಗಿ ಈ ನಗರಕ್ಕೆ ಐತಿಹಾಸಿಕ ಮಹತ್ವ ಲಬಿಸಿದೆ. ಅರಬಸ್ಥಾನದಲ್ಲಿದ್ದ 'ಖುರೇಶ' ಎಂಬ ವಂಶದಲ್ಲಿ 'ಹಾಶಿಮ್' ಮತ್ತು 'ಉಮ್ಮೆಯಾ' ಎಂಬ ವೀರಪುರುಷರು ಹುಟ್ಟಿ ಅಲ್ಲಿ ಬನೀಹಾಶಿಮ್ ಮತ್ತು ಬನೀಉಮ್ಮೆಯಾ ಎಂಬ ಎರಡು ವಂಶಗಳು ಪ್ರಸಿದ್ಧವಾಗಲು ಕಾರಣರಾದರು. ಪ್ರವಾದಿ ಮಹಮ್ಮದ್ ರವರು ಬನೀ ಹಾಶಿಮಗೆ ಸೇರಿದವರಾಗಿದ್ದು ಅವರ ಅನಂತರ ಖಲೀಫ ಪದವಿಯು ಅವರ ವಂಶಕ್ಕೆ

ಸೇರಿದವರಿಗೇ ಸಿಗುತ್ತಿತ್ತು. ಇದು ಬನೀ ಉಮೈಯಾ ವಂಶಸ್ಥರಿಗೆ ನುಂಗಲಾರದ ತುತ್ತಾಗಿತ್ತು. ಒಳಗೊಳಗೇ ಲಾವವಾಗಿದ್ದ ಅವರ ಮತ್ಸರ ಯಜೀದನ ಕಾಲಕ್ಕೆ ಸ್ಫೋಟಗೊಂಡಿತು. ಅದರ ಪರಿಣಾಮವಾಗಿ ನಡೆದ ಕಾಳಗವೇ ಕರ್ಬಲ ಕದನ. ಹೀಗೆ ಖಲೀಫರಾಗಿದ್ದ ಇಮಾಮ್ ಹಸನರ್ ನಂತರ ಬನೀ ಉಮೈಯಾ ವಂಶದ ಯಜೀದನು ಜನರ ಮೇಲೆ ಒತ್ತಡ ಹೇರಿ ಖಲೀಫನಾದ. ತನ್ನ ಅಧಿಕಾರಾವಧಿಯಲ್ಲಿ ಪ್ರಜಾತಂತ್ರದ ಅನುಸಾರ ಖಲೀಫರ ಚುನಾವಣೆ ನಡೆಯುವ ಪದ್ಧತಿಯನ್ನು ಬದಲಾಯಿಸಿ ಅದನ್ನು ಪರಂಪರಾಗತ ಪದವಿಯನ್ನಾಗಿ ಮಾಡಿದನು. ಇದನ್ನು ಜನರು ಒಪ್ಪಲಿಲ್ಲ.

ಆ ಸ್ಥಳದಲ್ಲಿ ಶತ್ರುವಿನ ಸೈನ್ಯಕ್ಕೆ ಸಿಕ್ಕಿ ಹಜರತ್ ಇಮಾಮ್ ಹುಸೇನರ ಮಕ್ಕಳು ಅನುಭವಿಸಿದ ಕಷ್ಟ ಹಾಗೂ ಕರ್ಬಲ ಕಾಳಗದ ಚಿತ್ರಣಗಳನ್ನು ಜನಪದರು ಕರ್ಬಲ ಪದಗಳಲ್ಲಿ ಬಿಂಬಿಸಿದ್ದಾರೆ. ಮೊಹರಂ ಮಾಹೆಯ ಒಂದನೆಯ ತಾರೀಖಿನಿಂದ ಹತ್ತನೆಯ ತಾರೀಖಿನವರೆಗೆ ನಡೆದ ಘಟನೆಯು ಶಿಯಾ ಮುಸ್ಲಿಮರಿಗೆ ಶೋಕಾಚರಣೆಯ ಹಬ್ಬಕ್ಕೆ ಕಾರಣವಾಯಿತು. ಜನಪದರು ಆ ಘಟನೆಯ ದೃಶ್ಯಗಳು ಕಣ್ಣಿಗೆ ಕಟ್ಟುವಂತೆ ಕರ್ಬಲ ಪದಗಳಲ್ಲಿ ವರ್ಣಿಸಿದ್ದಾರೆ.

ಅವರು ಮಹಮ್ಮದ ಪೈಗಂಬರರ ಮಗನ ಅರ್ಥಾತ್ ಹಜರತ್‌ಅಲಿಯವರ ಹಿರಿಯ ಮಗನಾದ ಇಮಾಮ ಹಸನರನ್ನು ಖಲೀಫರನ್ನಾಗಿಸಲು ಯತ್ನಿಸಹತ್ತಿದರು. ಆದರೆ ಧರ್ಮದ ಹೆಸರಿನಲ್ಲಿ ಇಲ್ಲ ವಿರಸ ಸಂಘರ್ಷ ಸಲ್ಲದೆನ್ನುವ ಸಾಧುಸ್ವಭಾವದ ಇಮಾಮ ಹಸನರು ಖಲೀಫ ರಾಗಲು ನಿರಾಕರಿಸಿದರು. ಮುಂದೆ ಧೂರ್ತ ಯಜೀದನ ಕುತಂತ್ರದ ಪಲವಾಗಿ ವಿಶಪ್ರಾಶನದ ಮೂಲಕ ಮರಣಕ್ಕೀಡಾದರು. ಆಗ ಜನರು ಅವರ ತಮ್ಮಂದಿರಾದ ಮಾಮ ಹುಸೇನರಿಗೆ ಪಟ್ಟ ಕಟ್ಟಬಯಸಿದರು. ಯಜೀದನ ಧರ್ಮದ್ರೋಹ, ದಬ್ಬಾಳಿಕೆಗಳನ್ನು ಪ್ರತಿಭಟಿಸಲು ಇಮಾಮ ಹುಸೇನರೂ ಕಟಿಬದ್ಧರಾದರು. ಹೀಗೆ ಇಸ್ಲಾಮದ ಇತಿಹಾಸದಲ್ಲಿ ಅಂತಃಕಲಹ ಆರಂಭವಾಯಿತು! ನ್ಯಾಯ ಅನ್ಯಾಯಗಳ ನಡುವೆ, ಧರ್ಮ-ದಬ್ಬಾಳಿಕೆಗಳ ಮಧ್ಯ ಸಂಘರ್ಷ ಉಂಟಾಯಿತು.

ಹಜರತ ಇಮಾಮ ಹುಸೇನರು ತಮ್ಮ ನಂಬಿಗಸ್ಥರಾದ ಕೇವಲ ೭೨ ಅನುಯಾಯಿಗಳೊಡನೆ ದುಷ್ಟ ಯಜೀದನ ಬಲಿಷ್ಠ ಸೈನ್ಯವನ್ನು 'ಕರ್ಬಲ' ಮೈದಾನದಲ್ಲಿ ಎದುರಿಸಿದರು. ನ್ಯಾಯನಿಷ್ಠುರರಾಗಿ ಹೋರಾಡಿ, ಪ್ರಾಣಾರ್ಪಣೆ ಮಾಡಿದರು. ಅವರ 'ಆತ್ಮಬಲಿದಾನ' ಮೊಹರಂ ತಿಂಗಳ ಹತ್ತನೆಯ ದಿನ ನಡೆದಿತ್ತು.

ಇಂಥ 'ಧರ್ಮದುರಂತ'ದ ಕಥೆ, ಹುತಾತ್ಮ ಇಮಾಮ ಹುಸೇನರ ಆತ್ಮ ಬಲಿದಾನದ ಆದರ್ಶ-ಜನಮನದಲ್ಲಿ ಹಸಿರಾಗಿ ಉಳಿಯುವಂತೆ ಮಾಡಿದ ಒಂದು ಪ್ರಯತ್ನವೇ 'ಮೊಹರಂ' ಆಚರಣೆ, ಆದರೆ ಕಾಲಾಂತರದಲ್ಲಿ ಈ ಆಚರಣೆ ನಮ್ಮ ಹಳ್ಳಿ, ನಗರಗಳಲ್ಲಿ ತನ್ನ ದುರಂತದ

ಛಾಯೆಯನ್ನು ಕಳೆದುಕೊಂಡು ಹಬ್ಬವಾಗಿ ಮಾರ್ಪಟ್ಟಿದೆ. ಮಾತ್ರವಲ್ಲ ಮತ-ಪಂಥದ ಕಟ್ಟುಮೀರಿ, ಹಿಂದೂ ಮುಸ್ಲಿಮ ಮಧುರ ಬಾಂಧವ್ಯದ ಭದ್ರಬುನಾದಿಯಾಗಿ ಪರಿಣಮಿಸಿದೆ.

ಈ ಮೊಹರಂ ಹಬ್ಬದ ಕಾಲದಲ್ಲಿ ವಿಶೇಷವಾಗಿ ಹಳ್ಳಿಯ ಉತ್ಸಾಹೀ ಯುವಕರು ಹುತಾತ್ಮರಾದ ಇಮಾಮ ಹುಸೇನರೊಡನೆ 'ಕರ್ಬಲಾ' ಕದನದಲ್ಲಿ ಆತ್ಮಾರ್ಪಣೆ ಮಾಡಿದ ವೀರತಂಡದ ಸಂಕೇತವಾಗಿ 'ಕರ್ಬಲ' ಮೇಳಗಳನ್ನು ಕಟ್ಟುವರು, ಮುಸ್ಲಿಮರು ಮಾತ್ರವಲ್ಲ, ಹಿಂದೂ ಸಮಾಜದವರೂ ಕೂಡ ಇವುಗಳಲ್ಲಿ ಪಾಲುಗೊಳ್ಳುವರು. ಶಿಸ್ತಿನ ಸಿಪಾಯಿಗಳಂತೆ ಸಮವಸ್ತ್ರಧಾರಿಗಳಾಗಿ, ರಣಹಲಗೆಯ ಧ್ವನಿಯೊಡನೆ ಲೋಕ ನೃತ್ಯದ ಗತಿಯಲ್ಲಿ ಹೆಜ್ಜೆ ಹಾಕುತ್ತ, ಹಾಡುತ್ತ, ಕುಣಿಯುತ್ತ ಮನೆಯಿಂದ ಮನೆಗೆ ಊರೆಲ್ಲ ಸುತ್ತವರು. 'ಮೊಹರಂ' ಪವಿತ್ರ ಸಂದೇಶವನ್ನು ಮನಮನಕ್ಕೂ ಮುಟ್ಟಿಸುವರು. ಮೊಹರಂ ತಿಂಗಳ ಒಂಬತ್ತನೆಯ ರಾತ್ರಿ-ಖತ್ತಲರಾತ್ರಿ-ಹುತಾತ್ಮ ಹಜರತ್ ಇಮಾಮ ಹುಸೇನ ಮೊದಲಾದವರ ಸ್ಮಾರಕವೆನಿಸಿದ ಡೋಲಿ ಅಥವಾ ತಾಭಿಯಾಗಳು ಒಂದೆಡೆ ಸೇರಿದಲ್ಲಿ, ವಿವಿಧ ಕರ್ಬಲಮೇಳದವರು 'ಮೊಹರಂ' ಅಥವಾ 'ಕರ್ಬಲ' ಸಂಬಂಧದ ಪದಗಳನ್ನು ಬೆಳ್ಳಬೆಳತನಕ ಹಾಡುವರು.

**ಬಂಕಾಪುರದಲ್ಲಿ ಮೊಹರಂ ಹಾಡುಗಳ ಪ್ರಕಾರಗಳು:** ಬಂಕಾಪುರ ಪಟ್ಟಣದಲ್ಲಿ ಈ ಕರ್ಬಲ ಪದಗಳನ್ನು ಅಲಾವಿ ಪದಗಳೆಂದು ಕರೆಯುತ್ತಾರೆ. ಮೊಹರಂ ಹಬ್ಬದಲ್ಲಿ ವಿವಿಧ ಸುತ್ತಮುತ್ತಲಿನ ಶಾಯಿರರು ಬಂದು ಈ ಅಲಾವಿ ಹಾಡುಗಳನ್ನು ಹೇಳುತ್ತಾರೆ. ಇಲ್ಲಿನ ಹಾಡುಗಳನ್ನು ಅಭಿವ್ಯಕ್ತಿ ವಸ್ತುವನ್ನು ಅಥವಾ ಕಥನದ ವಸ್ತಿವನ್ನು ಆಧರಿಸಿ ಪ್ರಮುಖವಾಗಿ ಮೂರು ಪ್ರಕಾರದಲ್ಲಿ ವಿಂಗಡಿಸಿಕೊಳ್ಳಬಹುದಾಗಿದೆ.

೧. ಸಲಾಮ ಪದಗಳು

೨. ಎವಾಯತ್ (ಬಯಾನ) ಪದಗಳು

೩. ಸವಾಲ್-ಜವಾಬ್ ಅಥವಾ ತೋಡಿ ಪದಗಳು

೧. **ಸಲಾಂ ಪದಗಳು:** ಸಲಾಂ ಪದಗಳು ಮೊಟ್ಟಮೊದಲು ಎಲ್ಲರಿಗೂ ಶರಣು, ನಮಸ್ಕಾರವನ್ನು ಹೇಳುವ ಪದಗಳಾಗಿವೆ. ಎಲ್ಲ ಶಾಯಿರರು ಹಾಡುಗಳನ್ನು ಹೇಳುವ ಪೂರ್ವದಲ್ಲಿ ಮೊದಲು ಈ ಸಲಾಂ ಪದಗಳಲ್ಲಿ ದೇವರನ್ನು ಗುರುಹಿರಿಯರನ್ನು, ತಂದೆ- ತಾಯಿಯರನ್ನು, ನೆರೆದ ಜನ ಸಮೂಹವನ್ನು ಕುರಿತು ಸಲಾಮನ್ನು ಸಲಾಂ ಪದಗಳ ಮೂಲಕ ಹೇಳುತ್ತಾರೆ.

ಮೊದಲೇ ಮಾಡುವೇ ಸಲಾಮು, ಅಲ್ಲಾ ಮಹಾಪ್ರಭುವರಿಗೆ
ನಬಿಯೋಂಕೆ ಸರದಾರ ಮಹ್ಮದ ಪೈಗಂಬರರಿಗೆ
ಅರಸೇ ಕುರಸಿ ಲಾಹೋ ಕಲಮ್‌ಸೇ ಸೂರ್ಯರಿಗೆ
ಹಜರತ್ ಅಲಿ ಬೀಬಿಫಾತಿಮಾ ಹಸೇನ್ ಹುಸೇನರಿಗೆ

ಮೊದಲೇ ಮಾಡುವೇ ಸಲಾಮ, ಅಲ್ಲಾ ಮಹಾಪ್ರಭುವರಿಗೆ
ನಬಿಯೋಂಕೆ ಸರದಾರ ಮಹ್ಮದ ಪೈಗಂಬರರಿಗೆ

೨. **ರಿವಾಯತ್ ಪದಗಳು:** ಈ ರಿವಾಯತ ಪದಗಳಲ್ಲಿ ದೇವರ, ಹಸನ್-ಹುಸೇನರ, ಇಮಾಮ ಖಾಸೀಮರ ಹೀಗೆ ಎಲ್ಲ ದೇವರ ಪವಾಡಗಳನ್ನು ಕುರಿತು ಹೇಳುವ ಪದಗಳಾಗಿವೆ. ಈ ಹಾಡುಗಳಲ್ಲಿ ಇಸ್ಲಾಂ ಧರ್ಮತತ್ವಗಳ ರಕ್ಷಣೆ, ನಂಬುಗೆ ಇವುಗಳನ್ನು ಕಥೆಯೊಂದರ ಮೂಲಕ ಇಲ್ಲಿ ಪವಾಡಗಳ ನಿರೂಪಣೆಯನ್ನು ಕಾಣಬಹುದು. ಈ ಬಗೆಯ ನಿರೂಪಣೆಯೇ ಎರಡು ಧರ್ಮಗಳಲ್ಲಿ, ಹಾಡುಗಳು ಜೀವಂತಿಕೆ ತಾಳುವುದಕ್ಕೆ ಕಾರಣಗಳಾಗಿವೆ. ಬಂಕಾಪುರ ನಗರದಲ್ಲಿ ಎರಡು ಸಮುದಾಯಗಳ ಸಮಬಲ ಜನಸಂಖ್ಯೆಯನ್ನು ಹೊಂದಿವೆ. ಈ ಬಗೆಯ ಅಸ್ಮಿತೆಯನ್ನು ಹೊಂದಿದ್ದರೂ. ಅಷ್ಟೆ ಸೌಹಾರ್ದತೆ ನೆಲೆಯಲ್ಲಿ ಈ ಆಚರಣೆಯನ್ನು ಮಾಡುತ್ತಾರೆ.

ಕುಂತ ಕೇಳರಿ ಹೇಳುವೇ ಬಯ್ಯಾನ
ಎಮ್ಮನಾಬಾದಿ ಪಟ್ಟನದೊಳಗೆ ಕೊಟ್ಟಾರೊ ಮಂತ್ಯಾನ
ಉತ್ತರಿದ್ದರೊ ದೈವನಾ ನೆನಸ್ತಾರೋ ಹಸೇನ ಹುಸೇನರವಾ
ಕುಂತ ಕೇಲರಿ ಜನ ಹೇಳುವೇ ಬಯ್ಯಾನ

೩. **ಸವಾಲ್-ಜವಾಬ್ ಪದಗಳು:** ಬಂಕಾಪುರ ಪಟ್ಟಣದ ಸುತ್ತಮುತ್ತಲ ಹಳ್ಳಿಗಳಲ್ಲಿ ರಿವಾಯತ್ ಪದಗಳನ್ನು, ಸವಾಲ್-ಜವಾಬ್ ಪದಗಳನ್ನು ಹಾಡುವ ಮೇಳಗಳು ಇವೆ. ಈ ಮೇಳಗಳು ಮೊಹರಂ ಹಬ್ಬಕ್ಕಿಂತ ಮೊದಲೇ ತಾಲೀಮು ಮಾಡಲು ಪ್ರಾರಂಭಿಸುತ್ತವೆ. ಉತ್ತಮವಾಗಿ ಹಾಡುವ ತಂಡದವರನ್ನು ವೀಳೆಯ ಕೊಟ್ಟು ಆಮಂತ್ರಿಸಿ ಹಾಡಿಸುವರು. ಒಮ್ಮೊಮ್ಮೆ ಒಂದಕ್ಕಿಂತ ಹೆಚ್ಚು ತಂಡದವರನ್ನು ಕರೆಯಿಸಿ, ಹಾಡಿಸಿ ಗೆದ್ದ ಮೇಳಕ್ಕೆ ಬಹುಮಾನ ಕೊಡುವರು

ದೈವಾ ಎಲ್ಲಾ ಕೂಡಿರಿ ನೀವು ಮಾಡಬ್ಯಾಡರಿ ಗುಲ್ಲಾ
ಏ ಯವನ ಶಾರದೊಳಹಾಗ ಕೇಳರಿ ಒಬ್ಬ ಯಹೂದಿ ಇದ್ದನಲ್ಲ
ಮುತ್ತಿನ ವ್ಯಾಪಾರ ಮಾಡ್ತಾನಲ್ಲ ಚಲುವಿ ಬಾಲಕಿ ಕಂಡಾನಲ್ಲ
ಆಕಿಮ್ಯಾಲ ಮನಸು ಇಟ್ಟನಲ್ಲಾ ಅವನ ಶಕ್ತಿ ನಡೆಯಲಿಲ್ಲ
ದೈವ ಎಲ್ಲಾ ಕೂಡಿರಿ ನೀವು ಮಾಡಬ್ಯಾಡರಿ ಗುಲ್ಲಾ

**ರಂಜಾನ್:** ಮುಸ್ಲಿಮರ ಪವಿತ್ರವಾದ ಒಂದು ಹಬ್ಬ. ಮೂಲಭೂತ ತತ್ವಗಳಲ್ಲಿ ರಂಜಾನ್ ತಿಂಗಳ ರೋಜಾ ಅಥವಾ ಉಪವಾಸ ವ್ರತವೂ ಒಂದು. ಮುಸ್ಲಿಮರು ಈ ತಿಂಗಳ ಮೂವತ್ತು ದಿವಸಗಳಲ್ಲಿ ಪ್ರಾತಃಕಾಲದಿಂದ ಸೂರ್ಯಾಸ್ತದ ತನಕ ನಿಯುಕ್ತಿನೊಡನೆ ಅಥವಾ ಮಂತ್ರಗಳೊಡನೆ ಆಹಾರ ಪಾನೀಯಗಳನ್ನು ತ್ಯಜಿಸಿ, ಕಾಮಲಾಲಸೆಗಳಿಂದ ಮುಕ್ತರಾಗಿ, ಉಪವಾಸವನ್ನು ಆಚರಿಸುವುದಕ್ಕೆ ರೋಜಾ ಎನ್ನುವರು. ಈ ವ್ರತವನ್ನು ದಿನದ ಸುಮಾರು ೧೪ ಗಂಟೆಗಳ ಕಾಲ ಆಚರಿಸುವರು. ಈ ಅವಧಿಯಲ್ಲಿ ಆಹಾರವೇ ಅಲ್ಲ ಒಂದು ತೊಟ್ಟು ನೀರು ಸಹ ಹೊಟ್ಟೆಗೆ ಸೇರಬಾರದು. ಜೊಲ್ಲು ನುಂಗುವುದು ಸಹ ಧರ್ಮಬಾಹಿರ.

ಮುಸ್ಲಿಮರ ಹಿಜರಿ ಶಕೆಯಲ್ಲಿ ಬರುವ ಒಂಬತ್ತನೆಯ ತಿಂಗಳಾದ ರಂಜಾನ್ ತಿಂಗಳು ಮುಗಿದು ಮಾರನೆಯ ದಿವಸ ಆಚರಿಸುವ ಹಬ್ಬವಿದು. ಇದನ್ನು 'ಈದುಲ್-ಫಿತರ್' ಅಥವಾ ಉಪವಾಸವನ್ನು ಕೊನೆಗಾಣಿಸುವ ಹಬ್ಬ ಎಂದೂ ಕರೆಯುತ್ತಾರೆ. ಇದು ಇಸ್ಲಾಮ ಪೂರ್ವದ್ದಲ್ಲ. ಹಜರತ್ ಮೊಹಮ್ಮದ್ ಪೈಗಂಬರವರು ಆರಂಭಿಸಿದ್ದು. ಹಿಂದೂಗಳ ದೀಪಾವಳಿ ಹಬ್ಬದಂತೆ ಮುಸ್ಲಿಮರಿಗೆ ಇದು ಸಂತಸದ ಹಬ್ಬ, ಎಲ್ಲ ಪಂಗಡದ ಮುಸ್ಲಿಮರೂ ಈ ಹಬ್ಬವನ್ನು ಆಚರಿಸುತ್ತಾರೆ. ಇದನ್ನು ಚಾಂದ್ರಮಾನ ವರ್ಷಕ್ಕನುಗುಣವಾಗಿ ಆಚರಿಸುತ್ತಾರೆ. ಉಪವಾಸದ ಪ್ರಾಶಸ್ತ್ಯ ಕುರಾನಿನಲ್ಲಿ ಹೀಗೆ ನಿರೂಪಣೆಗೊಂಡಿದೆ. 'ಮಾನವಕುಲದ ಮಾರ್ಗದರ್ಶಿಯೂ ತಪ್ಪು ಒಪ್ಪುಗಳ ಮಾನದಂಡವೂ ಆದ ಕುರಾನ್ ಪ್ರಕಾಶನಗೊಂಡ ತಿಂಗಳು ರಂಜಾನ್ ನಿಮ್ಮಲ್ಲಿ ಹಾಜರಿರತಕ್ಕವರೆಲ್ಲ ಈ ತಿಂಗಳು ಉಪವಾಸ ಆಚರಿಸಿ ಮತ್ತು ನಿಮ್ಮಲ್ಲಿ ಅನಾರೋಗ್ಯ ದಿಂದಿರುವವರು ಮತ್ತು ಪ್ರಯಾಣದಲ್ಲಿರುವವರು ಅಷ್ಟೇ ಸಂಖ್ಯೆಯ ಇತರ ದಿನಗಳಲ್ಲಿ ಉಪವಾಸ ಆಚರಿಸಲಿ. ಅಲ್ಲಾಹ್ ನಿಮಗೆ ಸುಖ ಬಯಸುತ್ತಾನೆ. ಕಷ್ಟ ಕೊಡುವುದಿಲ್ಲ.

ಈ ವ್ರತ ಸ್ತ್ರೀ, ಪುರುಷ, ಬಡವ, ಶ್ರೀಮಂತರೆನ್ನದೆ ಹೀಗೆ ಎಲ್ಲ ಮುಸ್ಲಿಮರಿಗೂ ಕಡ್ಡಾಯವಾದುದು. ರೋಗಿಗಳು, ಕುರುಡರು,ಅಂಗವಿಕಲರು, ಗುಲಾಮರು, ಯಾತ್ರಿಕರು, ಚಿಕ್ಕಮಕ್ಕಳು, ಗರ್ಭಿಣಿ ಅಥವಾ ಬಾಣಂತಿಯರು ಈ ವ್ರತ ಆಚರಿಸುವುದು ಅನಿವಾರ್ಯವಲ್ಲ. ಆದರೆ ರೋಗಿಗಳು ತಮ್ಮ ರೋಗ ವಾಸಿಯಾದ ಬಳಿಕ, ಯಾತ್ರಿಕರು ತಮ್ಮ ಯಾತ್ರೆ ಮುಗಿದ ತರುವಾಯ ಒಂದು ತಿಂಗಳು ಈ ವ್ರತ ಆಚರಿಸಲೇಬೇಕು. ಇದರಿಂದ ಶ್ರೀಮಂತರು ಹಸಿವು, ಅವಶ್ಯಕತೆಗಳ ವೈಯಕ್ತಿಕ ಅನುಭವ ಪಡೆಯುತ್ತಾರೆ. ರಂಜಾನಿನ ಅವಧಿಯಲ್ಲಿ ಬಡವರು ಶ್ರೀಮಂತರು ಸಮಾನಸ್ಕಂಧರಾಗಿರುವುದರಿಂದ ಅವರನ್ನು ಅಲಕ್ಷಿಸುವಂತಿಲ್ಲ. ಆಧ್ಯಾತ್ಮಿಕ ಲಾಭಗಳ ಜೊತೆಗೆ ಉಪವಾಸದಿಂದ ದೇಹದ ಆರೋಗ್ಯ ಕೂಡ ವೃದ್ಧಿಸುತ್ತದೆ. ಉಪವಾಸ ಆಂತರಿಕ ವ್ಯಾಧಿಗಳಿಗೆ ಏಕೈಕ ಸಮರ್ಥ, ಚಿಕಿತ್ಸೆ. ಉಗುಳು ನುಂಗುವುದು, ಬೀಡಿ ಸಿಗರೇಟು ಸೇದುವುದು, ಕಳ್ಳತನ ಮಾಡುವುದು, ಸುಳ್ಳು ಹೇಳುವುದು, ಬಯ್ಯುವುದು ಇತ್ಯಾದಿ ಕೆಲಸಗಳಿಂದ ವ್ರತಭಂಗವಾಗುತ್ತದೆ. ನಿಜವಾದ ರೋಜಾ ಬಗ್ಗೆ ಹಜರತ್ ಮೊಹಮ್ಮದ ಪೈಗಂಬರ ಹೀಗೆ ಹೇಳಿದ್ದಾರೆ; ರೋಜಾ ಆಚರಿಸುವವರು ಅಸತ್ಯವನ್ನು ದುರ್ನಡತೆಗಳನ್ನು ತ್ಯಜಿಸದಿದ್ದರೆ ಆಹಾರತೆಗೆದುಕೊಳ್ಳುವುದನ್ನು ನಿಲ್ಲಿಸಿದರೂ ದೇವರ ದೃಷ್ಟಿಯಲ್ಲಿ ಅದಕ್ಕೆ ಏನೂ ಬೆಲೆಯಿಲ್ಲ. ಈ ರೀತಿ ಉಪವಾಸ ವ್ರತ ಆಚರಿಸಿದವರಿಗೆ ಹಸಿವು ಮತ್ತು ಬಾಯಾರಿಕೆ ಬಿಟ್ಟು ಇನ್ನೇನೂ ಸಿಗುವುದಿಲ್ಲ. ಮಧ್ಯರಾತ್ರಿ ಎದ್ದು ನಮಾಜ್ ಅಥವಾ ದೇವರ ಪ್ರಾರ್ಥನೆ ಮಾಡುವವರಲ್ಲಿ ಅನೇಕರಿಗೆ ನಿದ್ದೆಗೆಟ್ಟಿದ್ದಷ್ಟೇ ಹೊರತು ಇನ್ನಾವ ಲಾಭವೂ ಆಗುವುದಿಲ್ಲ.

**೪.೩. ನಂಬಿಕೆಗಳು ಮತ್ತು ವಿಧಿ-ನಿಷೇಧಗಳು**

ಜನಪದರಿಗೆ ನಂಬಿಕೆ ಮತ್ತು ನಿಷೇಧಗಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ನಂಬಿಕೆ ಜನಪದರ ಜ್ಞಾನ, ಅದನ್ನು ಬಿಟ್ಟು ಅವರು ಬದುಕಿಲ್ಲ. ಸಮಾಜ ವಿಧಿಸಿರುವ

ನಿಷೇಧಗಳನ್ನು ಅವರು ಎಂದೂ ಮಾಡುವುದಿಲ್ಲ ಸಮಾಜದ ಸಂಪ್ರದಾಯಗಳಲ್ಲಿ ಆಚರಣೆಗಳನ್ನು ನಂಬಿ ಬದುಕಿದವರು ನಮ್ಮ ಜನಪದರು.

**ನಂಬಿಕೆಗಳು:** ಜನಪದರಲ್ಲಿ ಸಾವಿರಾರು ವರ್ಷಗಳಿಂದ ನಂಬಿಕೆಗಳು ಹಾಸುಹೊಕ್ಕಾಗಿ ಸೇರಿಕೊಂಡಿವೆ. ಜನಪದ ನಂಬಿಕೆಯು ಪರಂಪರಾನುಗತವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆ. ನಂಬಿಕೆಯು ಜನಪದ ಜೀವನಾನುಭವದ ಉತ್ಪನ್ನ, ಹೀಗಾಗಿ ಮಾನವ ಬದುಕಿಗೂ ನಂಬಿಕೆಗೂ ಬೇರ್ಪಡಿಸಲಾಗದ ಸಂಬಂಧ. ಅದು ಸೂಚನೆ, ನಿಯಮ, ವಿಧಿ-ನಿಷೇಧ, ನಿರ್ದೇಶನ, ಆಗ್ರಹ, ಆದೇಶ. ಮತ್ತು ಆಜ್ಞೆಗಳ ರೂಪದಲ್ಲಿ ನಿತ್ಯ ಬದುಕಿನೊಂದಿಗೆ ಸಂಬಂಧವನ್ನು ಕಂಡುಕೊಂಡಿದೆ. ಜನಪದರ ಕೆಲಸ, ಆಲೋಚನೆ, ರೂಢಿ, ಜೀವನ ಕ್ರಮ, ಸಂಪ್ರದಾಯ, ಆಚರಣೆಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾದವುಗಳು. "ನಂಬಿಕೆಗಳು ಮಾತಿನ ಮೂಲಕ ವ್ಯಕ್ತಿಗೆ ಸ್ಫೂರ್ತಿ ನೀಡುವಂತವು. ಜೊತೆಗೆ ಇವು ಆಯಾ ಜನಾಂಗದವರ ಸ್ವತ್ತುಗಳು ಆಗಿವೆ. ಇವು ಜಾತಿ ಭೇದವಿಲ್ಲದೆ ಎಲ್ಲ ವರ್ಗದ ಜಾತಿಯವರಲ್ಲೂ ಇವೆ." ನಂಬಿಕೆಗಳು ಸರ್ವವ್ಯಾಪಿಯಾಗಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿದೆ.

ಮೂಲತ: ಕಾಲ್ಪನಿಕ ಆಲೋಚನೆಯೊಂದು ವೈಯಕ್ತಿಕ ನೆಲೆಯಲ್ಲಿ ಹುಟ್ಟಿಕೊಂಡು ಸಮೂಹದಲ್ಲಿ ಸಾಮೂಹಿಕ ಮಾನ್ಯತೆಯನ್ನು ಪಡೆದುಕೊಂಡಾಗ ಅದು ನಂಬಿಕೆಯಾಗುತ್ತದೆ. ಪ್ರಕೃತಿಯ ರಹಸ್ಯವನ್ನು ಭೇದಿಸುವಲ್ಲಿ ಆದಿಮಾನವನ ವಿಫಲತೆ, ಹುಟ್ಟು, ಬದುಕು, ಸಾವುಗಳ ನಿಗೂಢತೆಯನ್ನು ಅರ್ಥೈಸಲಾಗದ ಆತಂಕ, ಜಾತಿ, ಮತ, ಧರ್ಮಗಳ ತಮ್ಮ ಅಸ್ತಿತ್ವಕ್ಕಾಗಿ ನಡೆಸಿದ ಹೋರಾಟದ ಈ ಹಿನ್ನೆಲೆಯಲ್ಲಿ ನಂಬಿಕೆಗಳು ಹುಟ್ಟಿಕೊಳ್ಳುತ್ತವೆ. ಜಾನಪದ ವಿದ್ವಾಂಸರು ಹೇಳುವಂತೆ "ಒಬ್ಬರ ಬಾಯಿಂದ ಇನ್ನೊಬ್ಬರ ಬಾಯಿಗೆ, ಕಿವಿಯಿಂದ ಕೇಳಿ ನಡೆಯಲ್ಲಿ ತಂದರು. ಮುಂದಿನವರೂ ಮತ್ತೊಬ್ಬರೂ ಇವುಗಳನ್ನು ಕಣ್ಣಾರೆ ಕಂಡು ತನ್ನ ಮನಸ್ಸಿನ ಸಮಾಧಾನಕ್ಕೆ ಅನುಸರಿಸಿಕೊಂಡು ಬಂದಿರಬಹುದು. ಎಂದು ಊಹಿಸುತ್ತಾರೆ. 'ನಂಬಿಕೆ ಇದ್ದರೆ ಏನು ಬೇಕಾದರೂ ಮಾಡಬಹುದು'. 'ನಾಯಿ ನಂಬಿಕಸ್ಥ ಪ್ರಾಣಿ' ಮುಂತಾದ ನುಡಿಗಳನ್ನು ನಿತ್ಯ ಜೀವನದಲ್ಲಿ ಜನಸಾಮಾನ್ಯರ ಮಾತುಗಳಲ್ಲಿ ಕೇಳುತ್ತಲೇ ಇರುತ್ತೇವೆ. ಇದರಿಂದ ಜನಪದರು ನಂಬಿಕೆಯ ಬಗ್ಗೆ ಎಷ್ಟು ಮಹತ್ವವನ್ನು ಇಟ್ಟಿರುವರು ಎಂಬುದು ಅರ್ಥವಾಗುತ್ತದೆ.

ಜನಪದರ ನಂಬಿಕೆಗಳ ಬಗ್ಗೆ ಆರ್.ಎಸ್.ಬಾಗ್ಸ್ ಜಾನಪದದ ವರ್ಗೀಕರಣದಲ್ಲಿ ನಂಬಿಕೆಗಳನ್ನು ವೈಜ್ಞಾನಿಕವಾಗಿ ವಿವೇಚಿಸಿರುವವರು. ಅವರ ಪ್ರಕಾರ "ನಂಬಿಕೆಗಳು ಪುನರಾವರ್ತನವಾಗುವ, ಸಾಮೂಹಿಕ ವೀಕ್ಷಣೆಯ ಫಲವಾಗಿ ಮೂಡಿ ಬರುವ, ಕಾರ್ಯಕಾರಣ ಸಂಬಂಧವಿರುವ ಸಾಂಪ್ರದಾಯಿಕ ಭಾವನೆ". ಮರಿಯೂ ಲೀಚ್ ಅವರು" ಪುನರಾವೃತವಾಗುವ ಸಾಮೂಹಿಕ ವೀಕ್ಷಣೆಯ ಪ್ರತೀಕವಾಗಿ ಬರುವ ಭೂತ, ವರ್ತಮಾನ, ಭವಿಷ್ಯತ್ತುಗಳ ಕಾರ್ಯಕಾರಣ

ಸಂಬಂಧಗಳ ಸಾಂಪ್ರದಾಯಿಕ ಸ್ವೀಕೃತ ಪರಿಕಲ್ಪನೆಯೇ ಜಾನಪದ ನಂಬಿಕೆ" ಎಂದು ನಿಘಂಟಿನಲ್ಲಿ ತಿಳಿಸಿರುವರು. ಪ್ರೋ ದೇ. ಜವರೇಗೌಡರು "ದೇಶ ಕಾಲಗಳ ಹಿನ್ನೆಲೆಯಲ್ಲಿ ಪರಂಪರಾಗತವಾದ ಜ್ಞಾನ, ದೀರ್ಘ ಅನುಭವ, ಕಾಲ್ಪನಿಕ ಯೋಚನೆ ಮತ್ತು ಅತೀಂದ್ರಿಯ ವ್ಯಾಪಾರದ ಫಲವಾಗಿ ಮೂಡಿದ ಶ್ರದ್ಧೆಯೇ ನಂಬಿಕೆ" ಎಂದಿರುವರು. ನನ್ನ ಪ್ರಕಾರ ಒಂದು ಸಮೂಹ ಬಹುಕಾಲ ಮೆಚ್ಚಿ ಆಚರಿಸುವುದೇ ನಂಬಿಕೆ. ಒಟ್ಟಿನಲ್ಲಿ ಅನುಭವದ ಏಳು-ಬೀಳುಗಳ ಪ್ರಮಾಣಿತ ರೂಪವೇ ನಂಬಿಕೆಯಾಗಿದೆ ಎಂದು ಹೇಳಬಹುದು.

ಜನಪದರ ಜೀವನದ ವಿವಿಧ ಹಂತಗಳಲ್ಲಿ ಬಳಕೆಯಾಗುತ್ತಾ ಸಾಗುವ ನಂಬಿಕೆಗಳು ಬದುಕಿನ ಬಹುದೊಡ್ಡ ಆಧಾರ ಸ್ತಂಭಗಳು. ಸಂಶಯ ಸಂದೇಶಗಳನ್ನು ದೂರಸರಿಸಿ ಸಾರ್ಥಕತೆಯ ಜೀವನದ ಸಾರವನ್ನು ಸವಿಯಲು ನಂಬಿಕೆಗಳು ಸಹಕಾರಿಯಾಗುತ್ತವೆ. ನಂಬಿಕೆ ಕೆಲವೊಮ್ಮೆ ರಕ್ಷಣೆಯನ್ನು ಒದಗಿಸಿ ಬ್ರಾತೃತ್ವವನ್ನು ಬೆಳೆಸುತ್ತದೆ. ವ್ಯಕ್ತಿಯ ಮನೋಭಾವ ಹೇಗಿರುತ್ತದೆಯೋ ಹಾಗೆಯೇ ಜನರಲ್ಲಿ ಪ್ರಭಾವ ಬೀರುವ ನಂಬಿಕೆಗಳನ್ನು ಮಾನವ ತನ್ನ ಉಳಿವಿಗಾಗಿ ರೂಢಿಸಿ ಕೊಂಡಿದ್ದಾನೆ. ವ್ಯಕ್ತಿಯ ಬದುಕಿನಲ್ಲಿ ಶ್ರದ್ಧೆಯನ್ನುಂಟು ಮಾಡುವ ನಂಬಿಕೆಯು ಒಂದು ಮಾನಸಿಕ ಸ್ಥಿತಿ. ಇದು ಸಾಂಪ್ರದಾಯಿಕವಾಗಿ ಅಂಗಿಕೃತವಾದ ಒಂದು ಪರಿಕಲ್ಪನೆಯಾಗಿದ್ದು ಕಾರಣ ಮತ್ತು ಪರಿಣಾಮದ ಸಂಬಂಧವನ್ನು ಉಂಟುಮಾಡುತ್ತದೆ. ಭೂತ, ವರ್ತಮಾನ, ಭವಿಷ್ಯತ್ತಿನ ಸಂಗತಿಗಳನ್ನು ಸೃಷ್ಟಿಸಿಕೊಳ್ಳುತ್ತಾ ಹೋಗುತ್ತದೆ. ದೈನಂದಿನ ಆಲೋಚನೆ, ಸಂಪ್ರದಾಯ, ರೂಢಿ, ಆಚಾರ-ವಿಚಾರ ಹೀಗೆ ಪ್ರತಿಯೊಂದು ಕೆಲಸ ಕಾರ್ಯದ ಕ್ರಮಗಳನ್ನು ಗಮನಿಸಿದಾಗ ನಂಬಿಕೆಗಳು ಒಂದು ರೀತಿಯಲ್ಲಿ ದೈನಂದಿನ ಬದುಕಿನ ಸಮಸ್ಯೆಗಳನ್ನು ನಿವಾರಿಸಲು ಬಳಸುವ ವಿಧಾನಗಳೆಂದೇ ಹೇಳಬಹುದು. ನಂಬಿಕೆಯು ಜನಪದರ ಜೀವನಾನುಭವದ ಉತ್ಪನ್ನ. ಹೀಗಾಗಿ ಮಾನವನ ಬದುಕಿಗೂ ನಂಬಿಕೆಗೂ ಬಿಡಿಸಲಾಗದ ಸಂಬಂಧವಿದೆ. "ನಂಬಿಕೆಗಳು ಜನತೆಯ ಜೀವನವನ್ನು ನೇರವಾಗಿ ಚಿತ್ರಿಸುತ್ತವೆ. ಹಾಗಾಗಿ ಜೀವನಕ್ಕೂ ನಂಬಿಕೆಗೂ ನಿಕಟವಾದ ಸಂಬಂಧವಿದ್ದು ಅವೆರಡೂ ಹಾಸುಹೊಕ್ಕಾಗಿ ಸೇರಿಕೊಂಡಿವೆ. ನಂಬಿಕೆಗಳು ಮಾನವನ ಜೀವನದ ಪ್ರತಿಯೊಂದು ಕ್ಷೇತ್ರದಲ್ಲೂ ವ್ಯಾಪಿಸಿವೆ. ಜಾತಿ, ವೃತ್ತಿ, ಅಂತಃಸ್ತುಗಳ ಭೇದವಿಲ್ಲದೆ ಎಲ್ಲರ ಜೀವನದಲ್ಲಿ ಸೇರಿಕೊಂಡಿವೆ" ಹೀಗೆ ನಂಬಿಕೆಗಳು ವ್ಯಕ್ತಿಯ ಜೀವನದಲ್ಲಿ ಬಹುಮುಖ್ಯವಾದ ಪಾತ್ರವಹಿಸುತ್ತವೆ.

ನಂಬಿಕೆಗಳು ಭಯ ಭಾವನಾತ್ಮಕತೆಯ ಹಿನ್ನೆಲೆಯಲ್ಲಿ ಬಂದಿದ್ದು ಅವು ಕಲ್ಪನೆಯ ಕಥೆಗಳ ಮೇಲೆ ಹುಟ್ಟಿರಬಹುದು. ನೈಸರ್ಗಿಕ ಚೇಷ್ಟೆಗಳ ಬಗೆಗೆ ತಳೆದ ಮನೋಭಾವ ಆಗಿರಬಹುದು. ಇದರ ಜೊತೆಗೆ ಭಯ, ಭರವಸೆ, ಪೂರ್ವಾಗ್ರಹ, ಭಾವೋದ್ರೇಕ, ಅನುಕರಣೆ, ಜಾತಿ ಅಥವಾ ವರ್ಗದ ಒತ್ತಾಯದ ಭಾಗವಹಿಸುವಿಕೆಯಂತಹ ಹಲವಾರು ಕಾರಣಗಳಿಂದ ನಂಬಿಕೆ ಹುಟ್ಟಿರಬಹುದು. ಪ್ರತಿಯೊಂದು ಸಮಾಜ ಮತ್ತು ಸಮುದಾಯವು ತನ್ನದೇ ಆದ ನಂಬಿಕೆ

ಗಳನ್ನು ಆಚರಣೆಯಲ್ಲಿಟ್ಟುಕೊಂಡು ಬಂದಿದೆ. ಕಾಲದೇಶಗಳಿಗನುಗುಣವಾಗಿ ಅವು ಬದಲಾಗುತ್ತಿರುತ್ತದೆ. ನಂಬಿಕೆಗಳು ಮನಶಾಸ್ತ್ರೀಯ ಗುಣ, ವಾಸ್ತವಿಕತೆಯ ಅರಿವು, ಸಾಂಸ್ಕೃತಿಕ ಅಭಿವ್ಯಕ್ತಿ, ಸಾರ್ವತ್ರಿಕ ಮತ್ತು ಪ್ರಾದೇಶಿಕತೆಯ ಹಿನ್ನೆಲೆಯಲ್ಲಿ, ಪ್ರಾಚೀನತೆಯ ಹಿನ್ನೆಲೆಯಲ್ಲಿ ಅನುಭವ ಮಾನಸಿಕ ಅನುಭಾವಗಳ ಮಿಳಿತ, ಧಾರ್ಮಿಕ ಮನೋಭಾವವಾಗಿ ಜೀವನ ನಿಯಂತ್ರಣವಾಗಿ ಇವು ಭಾಗಿಯಾಗಿದ್ದು ಹಲವು ರೀತಿಯ ಒತ್ತಡಗಳನ್ನು ನಿರ್ಲಿಪ್ತಗೊಳಿಸುವ ಮತ್ತು ಆತಂಕಗಳಿಂದ ಪಾರುಮಾಡಲು ನಂಬಿಕೆಗಳು ಸಹಕಾರಿಯಾಗಿವೆ.

ನಂಬಿಕೆಗಳು ಕಾಲ, ದೇಶ, ವ್ಯಕ್ತಿಯೊಂದಿಗೆ ಸಾಪೇಕ್ಷ ಸಂಬಂಧ ಹೊಂದಿರುವಂತಹವು. ಒಬ್ಬನಿಗೆ ಅದು ನಂಬಿಕೆಯಾದರೆ ಮತ್ತೊಬ್ಬನಿಗೆ ಅದು ಮೂಡನಂಬಿಕೆಯಾಗಬಹುದು. ನಮ್ಮ ಜನಪದ ಜೀವನದೊಂದಿಗೆ ನಿಕಟ ಸಂಬಂಧವನ್ನು ಹೊಂದಿರುವ ನಂಬಿಕೆಗಳು ಅವರ ಬದುಕಿನ ಎಲ್ಲಾ ಮಗ್ಗುಲುಗಳನ್ನು ಆವರಿಸಿಕೊಂಡಿವೆ. ಬಂಕಾಪುರ ಪರಿಸರದಲ್ಲಿ ಇಂತಹ ನಂಬಿಕೆ, ವಿಧಿ ನಿಷೇಧಗಳು ಸಂವಿಧಾನದ ನಿಯಮಗಳಂತೆ ಕಟ್ಟುನಿಟ್ಟಾಗಿಯೇ ಇರುತ್ತವೆ. ಇಲ್ಲಿನ ಜನರು ಆ ನಿಯಮಗಳಿಗೆ ಬದ್ದರಾಗಿ ಅಲ್ಲಿನ ಸಾಮಾಜಿಕ ವ್ಯವಸ್ಥೆಯಲ್ಲಿ ಜೀವಿಸುತ್ತಿದ್ದಾರೆ.

ನಂಬಿಕೆಗಳನ್ನ ಈ ರೀತಿಯಾಗಿ ವರ್ಗಿಕರಿಸಿಕೊಳ್ಳಬಹುದು. ಜನನ–ಮಕ್ಕಳ ಸಂಬಂಧಿ ನಂಬಿಕೆಗಳು, ಅಂಗಾಂಗ ಸಂಬಂಧಿ ನಂಬಿಕೆಗಳು, ಪಶು, ಪಕ್ಷಿ, ಪ್ರಾಣಿಗಳಿಗೆ ಸಂಬಂಧಿಸಿದ ನಂಬಿಕೆಗಳು, ಮಳೆಗೆ ಸಂಬಂಧಿಸಿದ ನಂಬಿಕೆಗಳು, ವ್ಯವಸಾಯ ಸಂಬಂಧಿ ನಂಬಿಕೆಗಳು, ಸಾವಿನ ಸಂಬಂಧಿ ನಂಬಿಕೆಗಳು, ಪ್ರಯಾಣಕ್ಕೆ ಸಂಬಂಧಿಸಿದ ನಂಬಿಕೆ, ಮದುವೆಗೆ ಸಂಬಂಧಿಸಿದ ನಂಬಿಕೆಗಳು, ಸಂಕೀರ್ಣ ನಂಬಿಕೆಗಳು ಎಂದು ವಿಂಗಡಿಸಿಕೊಳ್ಳಬಹುದು.

**ಜನನ–ಮಕ್ಕಳ ಸಂಬಂಧಿ ನಂಬಿಕೆಗಳು:** ಜನಪದರ ಒಂದು ಮುಖ ಜನನವಾದರೆ, ಮತ್ತೊಂದು ಮುಖ ಮರಣ. ಜನನ ಹಾಗೂ ಮಕ್ಕಳಿಗೆ ಸಂಬಂಧಿಸಿದಂತೆ ನಂಬಿಕೆಗಳನ್ನು ಇಲ್ಲಿ ಹೇಳಲಾಗಿದೆ.

೧. ಚೊಚ್ಚಲ ಹೆರಿಗೆ ತವರು ಮನೆಯಲ್ಲಿಯೇ ಆಗಬೇಕು.

೨. ಮಗು ಹುಟ್ಟಿದ ಅಲ್ಪ ಸಮಯದಲ್ಲಿಯೇ ತಾಯಿಯ ಎದೆಹಾಲು ಕೊಡಬೇಕು.

೩. ಮಗು ಜನನ ನಂತರ, ಸೂತಕ ತೀರುವವರೆಗೂ ಮನೆ ಒಳಗಡೆ ಬೇರೆಯವರು ಬರುವಂತಿಲ್ಲ.

೪. ಮಕ್ಕಳಿಗೆ ಬಾಲಗ್ರಹವಾದರೆ ಬಾಲಗ್ರಹ ಚಿಕಿತ್ಸೆ ಮಾಡಿಸಬೇಕು.

೫. ಮಕ್ಕಳು ರಾತ್ರಿವೇಳೆ ಹಾಸಿಗೆ ಒದ್ದೆ ಮಾಡಿಕೊಂಡರೆ, ಕರಡಿ ಉಗುರು ತಂದು ಉಡುದಾರಕ್ಕೆ ಅಥವಾ ಕೊರಳಲ್ಲಿ ಕಟ್ಟಿದರೆ ನಿಲ್ಲುತ್ತದೆ.

ತವರು ಹೆಣ್ಣಿನ ಸಮಸ್ತ ಸಂಪತ್ತಿನ ಬದುಕಿನ ಸಂಕೇತ ತಾನು ಹುಟ್ಟಿನಿಂದ ಆಡಿ–ಬೆಳೆದ ಪರಿಸರ ಎಂಥವರಿಗೂ, ಎಂಥ ನೋವನ್ನು ಮರೆಸುತ್ತದೆ. ತಂದೆ–ತಾಯಿ ರಕ್ತ ಸಂಬಂಧಿಗಳನ್ನ

ನೋಡಿದರೆ ಯಾವ ತೊಂದರೆಯಿದ್ದರೂ ಕಾಣಿಸುವುದಿಲ್ಲ. ಈ ಹಿನ್ನೆಲೆಯಲ್ಲಿ ಪ್ರಸವ ಬೇನೆಯನ್ನು ಮರೆಯಲಿ ಎಂಬ ದೃಷ್ಟಿಯಿಂದ ಮೊದಲನೇ ನಂಬಿಕೆ ಹುಟ್ಟಿಕೊಂಡಿದೆ. ಎರಡನೆಯ ನಂಬಿಕೆ ತಾಯಿಯ ಹಾಲಿನ ಮಹತ್ವವನ್ನು ಕುರಿತದ್ದಾಗಿದೆ. ಹೊರಗಿನಿಂದ ಮಗು ನೋಡಲು ಬರುವವರು ಪರಿಶುದ್ಧವಾಗಿ ಬರುವುದಿಲ್ಲ. ಇದರಿಂದ ಮಗುವಿನ ಆರೋಗ್ಯದ ಮೇಲೆ ಪರಿಣಾಮ ಬೀರುತ್ತದೆ. ಎಂಬುದರ ಹಿನ್ನೆಲೆಯಲ್ಲಿ ಮೂರನೆಯ ನಂಬಿಕೆ ಹುಟ್ಟಿಕೊಂಡಿದೆ.

**ಅಂಗಾಂಗ ಸಂಬಂಧಿ ನಂಬಿಕೆಗಳು:** ತಮ್ಮ ಬದುಕಿನ ಒಳಗಡೆ ಏನೆಲ್ಲ ಆಗುತ್ತದೆ ಎಂಬುದನ್ನು ಬಂಕಾಪುರದ ಜನರ ಅಂಗಾಂಗಗಳ ಮೇಲೆ ಕಟ್ಟಿದ ನಂಬಿಕೆಗಳಿಂದ ತಿಳಿದು ಬರುತ್ತದೆ.

೧. ಗಂಡಸಿಗೆ ತಲೆಯಲ್ಲಿ ಎರಡು ಸುಳಿಗಳಿದ್ದರೆ ಇಬ್ಬರು ಹೆಂಡತಿಯರು.

೨. ಮಚ್ಚಿನಿಂದ ಹೊಡೆಯಲು ಕೈ ಎತ್ತಿದ ಮೇಲೆ ನೆಲಕ್ಕೆ ಕುಟುಕಬೇಕು.

೩. ಎಡಗಣ್ಣು ಅದುರಿದರೆ ಕೆಡಕಾಗುತ್ತದೆ.

೪. ಬಾಲನಿಗೆ ಬಲಗೈ, ಬಾಲೆಗೆ ಎಡಗೈ ಕಡಿದರೆ ಕಾಸು ಸಿಕ್ಕುತ್ತದೆ.

ಮೊದಲನೆ ನಂಬಿಕೆ ಎರಡು ಮದುವೆಯಾಗಿದ್ದವರ, ತಲೆಯಲ್ಲಿ ಎರಡು ಸುಳಿಗಳಿರುವುದರ ಹಿನ್ನೆಲೆಯಲ್ಲಿ ಬಂದಿದೆ. ಅಲ್ಲದೆ ಎರಡು ಎಂಬ ಸಂಖ್ಯೆಯ ಕರಾಮತ್ತು ಕೂಡ ಕಾರಣ. ಮಚ್ಚಿನಿಂದ ಆತನಿಗೆ ಹೊಡೆಯಲು ಕೈ ಎತ್ತಿದ ನಂತರದಲ್ಲಿ, ನೆಲಕ್ಕೆ ಕುಟ್ಟಬೇಕು. ಇಲ್ಲದಿದ್ದರೆ ಬೇರೆ ಯಾರಿಗಾದರೂ ಹೊಡೆಯುತ್ತಾನೆ ಎಂಬುದರ ಹಿನ್ನೆಲೆಯಿಂದ ಎರಡನೇ ನಂಬಿಕೆ ಬಂದಿದೆ. ಕಣ್ಣಿಗೆ ತೊಂದರೆಯುಂಟಾಗಿರುವುದರ ಹಿನ್ನೆಲೆಯಿಂದ ಮೂರನೇ ನಂಬಿಕೆ ಬಂದಿದೆ. ನಾಲ್ಕನೆಯದು ಕೈಕಡಿದರೆ ಹಣ ಸಿಗುತ್ತದೆಂಬ ನಂಬಿಕೆ ಮೂಢನಂಬಿಕೆಯು ಸೂಚಿಸುವಂತಹದ್ದು.

**ಪಶು, ಪಕ್ಷಿ, ಪ್ರಾಣಿ ಸಂಬಂಧಿ ನಂಬಿಕೆಗಳು:** ಕಾಡಿನಲ್ಲಿ ಹಿಂದೆ ವಾಸವಿದ್ದ ಮನುಷ್ಯನಿಗೆ, ಇಂದಿಗೂ ಕಾಡಿನ ಪ್ರಾಣಿ ಪಕ್ಷಿಗಳ ಬಗ್ಗೆ ನಂಬಿಕೆಯನ್ನು ಇಟ್ಟುಕೊಂಡಿದ್ದಾನೆ.

೧. ರಾತ್ರಿವೇಳೆ ಗೂಬೆ ಕೂಗಿದರೆ ಅಶುಭ.

೨. ಹಲ್ಲಿ ಮೈಮೇಲೆ ಬಿದ್ದರೆ ಸ್ನಾನ ಮಾಡಬೇಕು.

೩. ಕಾಗೆ ಮೆಟ್ಟುವುದನ್ನು ನೋಡಬಾರದು.

೪. ಬೆಕ್ಕು ಅಡ್ಡ ಬಂದರೆ ಹೋದ ಕೆಲಸ ಆಗುವುದಿಲ್ಲ.

೫. ಮಾತನಾಡುವಾಗ ಹಲ್ಲಿ ಲೊಚಗುಟ್ಟಿದರೆ (ಗವುಳಿಯಾದರೆ) ಅದು ನಿಜವಾಗುತ್ತದೆ.

೬. ಮನೆಯೊಳಗೆ ಕಾಗೆ ನುಗ್ಗಿದರೆ ಆ ಮನೆಗೆ ಕೇಡಾಗುತ್ತದೆ.

೭. ಗೂಬೆ ಮನೆಯ ಮೇಲೆ ಕೂತರೆ ಕೇಡಾಗುತ್ತದೆ.

೮. ಕಾಗೆ ಯಾರಿಗಾದರೂ ತಗುಲಿದರೆ ಸ್ನಾನ ಮಾಡಿ ಐದು ಶನಿವಾರ ಶನಿಮಹಾತ್ಮ ದೇವಸ್ಥಾನಕ್ಕೆ ಹೋಗಿ ಎಳ್ಳು ಬತ್ತಿಯನ್ನು ಹಚ್ಚಬೇಕು.

೯. ನರಿ ಮುಖ ನೋಡಿದರೆ ಶುಭವಾಗುತ್ತದೆ.

ಈ ಮೇಲಿನ ನಂಬಿಕೆಗಳಲ್ಲಿ ಎರಡನೇ ನಂಬಿಕೆ ವೈಜ್ಞಾನಿಕವಾಗಿದೆ. ಮೂರನೆಯದು ಹಲ್ಲಿ ಮೈಮೇಲೆ ಬಿದ್ದರೆ ಕೆಲವರಿಗೆ ಮೈಯಲ್ಲಿ ಗಂದೆಗಳು ಬರುವ ಸಾಧ್ಯತೆಯಿದೆ. ಆದ್ದರಿಂದ ಸ್ನಾನ ಮಾಡಬೇಕು ಉಳಿದವುಗಳು ಸಮಸ್ಯೆಗಳಿಗೆ ಪರಿಹಾರೋಪಾಯವಾಗಿ ಕಂಡುಕೊಂಡವು. ವೈಜ್ಞಾನಿಕವಾಗಿ ಪ್ರಗತಿ ಇಲ್ಲದ ಕಾಲದಲ್ಲಿ ಇಂಥ ನಂಬಿಕೆಗಳೇ ಜೀವನಾಧಾರವಾಗಿ ಇದ್ದಂತಹವು ತಮ್ಮ ಜೀವನದ ಎಲ್ಲ ಮಜಲುಗಳಲ್ಲಿ ಹಾಸುಹೊಕ್ಕಾಗಿ ನಂಬಿಕೆಗಳು ಸೇರಿವೆ. ಈಗಲೂ ಇಂಥವೇ ನಂಬಿಕೆಗಳಿಂದ ನಿಶ್ಚಿತ ತೀರ್ಮಾನ ಕೈಗೊಳ್ಳುತ್ತಾರೆ.

**ಮಳೆ ಸಂಬಂಧಿ ನಂಬಿಕೆಗಳು:**

೧. ಕಪ್ಪೆ ವಟಗುಟ್ಟಿದರೆ ಮಳೆ ಬರುತ್ತದೆ.

೨. ಚಿಟ್ಟೆ ಇರುವ ಬಿಲದಿಂದ ಹೊರಗಡೆ ಬಂದರೆ ಮಳೆ ಬರುತ್ತದೆ.

೩. ಕಾಮನ ಬಿಲ್ಲು ಎದ್ದರೆ ಮಳೆ ಬರುವುದಿಲ್ಲ.

೪. ತೊನ್ನು ರೋಗದವರು ಸತ್ತಾಗ ಹೂತರೆ ಮಳೆ ಬರುವುದಿಲ್ಲ.

೫. ಮಳೆ ಬಾರದಿದ್ದಾಗ ಮಳೆರಾಯನನ್ನು ಮಾಡಿ ಪೂಜಿಸಿದರೆ ಮಳೆ ಬರುತ್ತದೆ.

೬. ಕತ್ತೆಗೆ ಪೂಜಿಸಿ, ಗ್ರಾಮದಲ್ಲಿಟ್ಟುಕೊಂಡರೆ ಮಳೆ ಬರುತ್ತದೆ. ಎಂಬ ನಂಬಿಕೆ.

**ವ್ಯವಸಾಯ ಸಂಬಂಧಿ ನಂಬಿಕೆಗಳು**

೧. ಕೃಷಿಯಲ್ಲಿ ಬೀಜ ಬಿತ್ತನೆ ಮಾಡುವ ಮೊದಲು ಭೂಮಿಗೆ ಪೂಜೆ ಸಲ್ಲಿಸುವುದು.

೨. ಗೊಬ್ಬಳ ಮರದಿಂದ ನೇಗಿಲು ಮಾಡಿಸಬೇಕು.

೩. ಕೃಷಿಯಲ್ಲಿ ಬಳಸುವ ಸಲಕರಣೆಗಳನ್ನು ಕಾಲಿನಿಂದ ಒದೆಯಬಾರದು

**ಮದುವೆ ಸಂಬಂಧಿ ನಂಬಿಕೆಗಳು:** ಮದುವೆಗೆ ಸಂಬಂಧಿಸಿದಂತೆ ಹಲವು ನಂಬಿಕೆಗಳು ಇವೆ. ಅವುಗಳ ಆಧಾರದ ಮೇಲೆಯೇ ಹೆಣ್ಣು ನೋಡುವುದರಿಂದ ಮೊದಲುಗೊಂಡು, ಮದುವೆಯ ವರೆವಿಗೂ ಇರುವುದುಂಟು

೧. ಹೆಣ್ಣು ನೋಡಲು ಹೋಗುವಾಗ ಅಪಶಕುನಗಳು ಎದುರಾದರೆ ಹೆಣ್ಣು ನೋಡಲು ಹೋಗುವುದಿಲ್ಲ.

೨. ಹೆಣ್ಣು ನೋಡಲು ಹೋದಾಗ ಹುಳಿ ಪದಾರ್ಥ ಕೊಡಬಾರದು ಕಾರಣ 'ಹುಳಿ' ಕೆಟ್ಟಿದ್ದು ಎಂಬ ನಂಬಿಕೆ ಇವರಲ್ಲಿದೆ.

೩. ಹುಡುಗಿ ನಡೆವಾಗ ಕಾಲು ನೆಲಕ್ಕೆ ಸವರಿ ನಡೆಯಬಾರದು. ಅಂತಹ ಹುಡುಗಿಯರನ್ನ ಅವರು ಒಪ್ಪುವುದಿಲ್ಲ. ಕಾರಣ ಆ ಹೆಣ್ಣನ್ನ ಮದುವೆಯಾದರೆ ಮನೆ ಗುಡುಸಿ ಗುಂಡಾಂತರವಾಗುತ್ತದೆ ಎಂಬ ನಂಬಿಕೆ.

೪. ಒಂದೇ ಕುಲದವರನ್ನ ಅಥವಾ ಒಂದೇ ಬೆಡಗು ಇರುವವರನ್ನು ಮದುವೆಯಾಗುವುದಿಲ್ಲ ಕಾರಣ ಅಣ್ಣ-ತಮ್ಮಂದಿರಾಗುತ್ತೇವೆ. ಎಂಬುದು ಇದು ವೈಜ್ಞಾನಿಕವಾಗಿ ಒಳ್ಳೆಯ ನಂಬಿಕೆ ಯಾಗಿದೆ.

೫. ಗಂಡು ಮತ್ತು ಹೆಣ್ಣಿನ ಅರಿಶಿಣದ ನೀರು ಹಾಕಿದ ನಂತರ ಹೊರಗಡೆ ಹೋಗುವಂತಿಲ್ಲ. ಕಾರಣ ಅವರು ಗೃಹಸ್ಥರಾಗುವ ಪೂರ್ವದಲ್ಲಿ ಜೋಪಾನ ಮಾಡುವ ಜವಾಬ್ದಾರಿ ಕುಟುಂಬದ್ದು.

**ಮಕ್ಕಳ ಸಂಬಂಧಿ ನಂಬಿಕೆಗಳು**

೧. ಬರಿ ತೊಟ್ಟಿಲು ತೂಗಬಾರದು ತೂಗಿದರೆ ಮಗುವಿಗೆ ಹೊಟ್ಟೆನೋವು ಬರುವುದು.

೨. ಮಗುವಿನ ಜನನ ಸಂದರ್ಭದಲ್ಲಿ ಮಗು ಹೊಕ್ಕಳ ಬಳ್ಳಿ ಕೊರಳಿಗೆ ಸುತ್ತಿಕೊಂಡು ಹುಟ್ಟಬಾರದು ಹುಟ್ಟಿದರೆ ಆ ಮನೆಯಲ್ಲಿ ಸಾವು ಸಂಭವಿಸುತ್ತದೆ.

೩. ಮಗು ಹುಟ್ಟುವಾಗ ಬಾಯಿ ಮೇಲೆ ಮಾಡಿ ಹುಟ್ಟಬಾರದು ಹಾಗೆ ಹುಟ್ಟಿದರೆ ಬಾಣಂತನ ಮಾಡಿಸಿಕೊಂಡವರಿಗೆ ಶ್ರೇಯಸ್ಸಲ್ಲ ಎಂಬ ನಂಬಿಕೆಯಿದೆ.

**ಪ್ರಯಾಣಕ್ಕೆ ಸಂಬಂಧಿಸಿದ ನಂಬಿಕೆಗಳು:** ಇಲ್ಲಿಯ ಕೆಲವು ಜನರು ಪ್ರಯಾಣ ಮಾಡುವ ಸಂದರ್ಭದಲ್ಲಿ ಕೆಲವು ಆಶುಭ ಸೂಚಕವಾದ ಘಟನೆಗಳು ಕಂಡುಬಂದರೆ ಪ್ರಯಾಣವನ್ನು ಅವರು ಮಾಡುವುದಿಲ್ಲ

೧. ಬೆಕ್ಕು ಅಡ್ಡ ಬಂದರೆ ಪ್ರಯಾಣ ಮಾಡಬಾರದು.

೨. ಕೆಲಸಿಗ ಸಿಕ್ಕಿದರೆ ಪ್ರಯಾಣ ಬೆಳೆಸಬಾರದು.

೩. ಖಾಲಿ ಕೊಡ ಹೋಗುವ ಮಧ್ಯ ಬಂದರೆ ಪ್ರಯಾಣ ಮಾಡಬಾರದು.

ಮೊದಲನೆಯದು ಬೆಕ್ಕು ಅಶುಭವೆಂದು, ಎರಡನೆಯದು ನುಣ್ಣಗೆ ಬೋಳಿಸುವಂತೆ ಹೋದ ಕೆಲಸ ನುಣ್ಣಗೆ ಆಗುತ್ತದೆ ಎಂದು ಮೂರನೆಯದು ಹೋದ ಕೆಲಸವಾಗದೆ ಖಾಲಿ ಕೈಯಲ್ಲಿ ವಾಪಸ ಬರಬೇಕೆಂಬ ನಂಬಿಕೆಯಿದೆ.

**ಅಡಿ ಟಿಪ್ಪಣಿ**

೧. ಡಾ.ಸಿದ್ದಲಿಂಗಯ್ಯ, ಗ್ರಾಮದೇವತೆಗಳು, ಪುಟ. ೭೧

೨. ಜೀ.ಶಂ. ಪರಮಶಿವಯ್ಯ, ಕನ್ನಡ ವಿಶ್ವಕೋಶ, ಸಂಪುಟ ೧, ಪುಟ. ೭೦೩

೩. ರಹಮತ್ ತರೀಕೆರೆ, ಕರ್ನಾಟಕ ನಾಥಪಂಥ, ಪುಟ. ೨೮

೪. ನಿಂಗಪ್ಪ ಎಸ್. ಮಾದಣ್ಣನವರ, ಸೊರಟೂರ ಗ್ರಾಮದ ಜಾನಪದ ಅಧ್ಯಯನ ೨೦೧೩,

೫. ವಿದ್ವಾನ ವಿ.ಎನ್ ಭಟ್., ಭಾರತೀಯ ಹಬ್ಬಗಳ ವೈಶಿಷ್ಟ್ಯ, ವಿಶ್ವನಾಥ ಪ್ರಕಾಶನ ಜ್ಞಾನದೀಪ, ಸಹ್ಯಾದ್ರಿ ನಗರ ಶಿವಮೊಗ್ಗ. ೨೦೦೨

೬. ಅದೇ, ಪುಟ. ೩೫

೭. ಎಚ್.ವಿ. ನರಸಿಂಹಮೂರ್ತಿ, ನಮ್ಮ ಹಬ್ಬಗಳು, ನವದುರ್ಗಾ ಲೇಜರ್‌ಟೆಕ್, ಹೊನ್ನಪದ್ಮ ಪ್ರಿಂಟರ್ಸ್, ಉಡುಪಿ, ೨೦೦೨.

೮. ವಿದ್ವಾನ ವಿ.ಎನ್ ಭಟ್., ಭಾರತೀಯ ಹಬ್ಬಗಳ ವೈಶಿಷ್ಟ್ಯ, ವಿಶ್ವನಾಥ ಪ್ರಕಾಶನ ಜ್ಞಾನದೀಪ, ಸಹ್ಯಾದ್ರಿ ನಗರ ಶಿವಮೊಗ್ಗ. ೨೦೦೨. ಪುಟ. ೩೮

೯. ಡಾ.ಮಂಜುನಾಥ ಬೇವಿನಕಟ್ಟಿ, ಕನ್ನಡ ಜನಪದ ನಂಬಿಕೆಗಳು, ಪುಟ. ೩೧

## ಅಧ್ಯಾಯ : ಐದು

# ಬಂಕಾಪುರ ಗ್ರಾಮದ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಶೈಕ್ಷಣಿಕ ಸ್ಥಿತಿಗತಿಗಳು

೫.೧. ಧಾರ್ಮಿಕ ಅಸ್ಮಿತೆ ಮತ್ತು ಸ್ಥಿತಿಗತಿಗಳು

೫.೨. ಶೈಕ್ಷಣಿಕ ಇತಿಹಾಸ ಮತ್ತು ಸ್ಥಿತಿಗತಿಗಳು

೫.೩. ಆರ್ಥಿಕ ಚಹರೆಗಳು ಮತ್ತು ಸ್ಥಿತಿಗತಿಗಳು

೫.೪. ರಾಜಕೀಯ ನೆಲೆಗಳು ಮತ್ತು ಸ್ಥಿತಿಗತಿಗಳು

೫.೫. ಸಾಂಸ್ಕೃತಿಕ ಚಹರೆಗಳು ಮತ್ತು ಸ್ಥಿತಿಗತಿಗಳು

## ಅಧ್ಯಾಯ : ಐದು

# ಬಂಕಾಪುರ ಗ್ರಾಮದ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಶೈಕ್ಷಣಿಕ ಸ್ಥಿತಿಗತಿಗಳು

### ೫.೧. ಧಾರ್ಮಿಕ ಅಸ್ಮಿತೆ ಮತ್ತು ಸ್ಥಿತಿಗತಿಗಳು

"ಒಂದು ನಾಡಿನ ಜೀವಂತಿಕೆಯ ಸಾಕ್ಷಿ ಅಲ್ಲಿ ಬಾಳಿ ಬೆಳಗಿದ ಧರ್ಮಗಳು. 'ಸರ್ವ ಧರ್ಮಗಳ ಆಡುಂಬೊಲ'ವೆನಿಸಿಕೊಂಡುದು ಕರ್ನಾಟಕದ ಒಂದು ಅಂಗೈ ಅಗಲ ಪ್ರದೇಶವಾದ ಬಂಕಾಪುರ. ಇಲ್ಲಿ ಬಾಳಿ ಬೆಳಗಿದ ಧರ್ಮಗಳಿಗೆ ಸಾಕ್ಷಿಯಾಗಿ ಗುಡಿ ಗೋಪುರಗಳು, ಜೈನಬಸದಿ, ಮಸೀದಿಗಳೂ ತಲೆ ಎತ್ತಿ ನಿಂತಿವೆ. ಧರ್ಮಜ್ಯೋತಿಗೆ ತೈಲವನ್ನೆರೆದು ಬೆಳಗಿಸಿ ಧರ್ಮಜಾಗೃತಿಗೈದ ಆಚಾರ್ಯರುಗಳ ಪರಂಪರೆ ಇಲ್ಲಿದೆ. ಸತ್ಯಕಥೆಯನ್ನು ಬಿತ್ತರಿಸುವ ಧಾರ್ಮಿಕ ಅವಶೇಷಗಳಿವೆ. ಕಾಲಾಂತರದಲ್ಲಿ ತಲೆ ಎತ್ತಿದ ಜೈನ, ಶೈವಧರ್ಮಗಳ ಇತಿಹಾಸ ಇಲ್ಲಿದೆ.

ಧಕ್ಷಿಣ ಭಾರತದ ಜೈನಧರ್ಮದ ಇತಿಹಾಸವೆಂದರೆ ಕರ್ನಾಟಕದ ಶ್ರವಣಬೆಳಗೊಳ ಜೈನಧರ್ಮಕ್ಕೆ ನೆಲೆಯೆನಿಸಿದಂತೆ ಕಾಲಾಂತರದಲ್ಲಿ ಕೊಪ್ಪಳ, ಕಾರ್ಕಳ, ಹುಂಚ, ಬಂಕಾಪುರ ಮೊದಲಾದವು ಈ ಮಾಲಿಕೆಗೆ ಸೇರಿದವು. ಜೈನಧರ್ಮದ ಅಧ್ವರ್ಯುಗಳಾದ ಪೂಜ್ಯಪಾದ, ಜಿನಸೇನಾಚಾರ್ಯ, ಗುಣಭದ್ರಾಚಾರ್ಯ, ಅಜಿತಸೇನಾಚಾರ್ಯ, ದೇವೇಂದ್ರಮುನಿಗಳು ಒಂದಿಲ್ಲೊಂದು ರೀತಿಯಲ್ಲಿ ಬಂಕಾಪುರ ಸಂಬಂಧವಿರಿಸಿಕೊಂಡಿದ್ದವರು, ರಾಷ್ಟ್ರಕೂಟ, ಗಂಗರ ಕಾಲಕ್ಕೆ ತಮ್ಮ ವಿದ್ವತ್ತು, ತಪಸ್ಸು, ಪಾಂಡಿತ್ಯಗಳಿಂದ ರಾಜಪೂಜಿತರಾದವರು. ತಮ್ಮ ಅಮೂಲ್ಯ ಕೃತಿಗಳ ಮೂಲಕ ಜೈನಸಾಹಿತ್ಯವನ್ನು ತನ್ಮೂಲಕ ಕನ್ನಡ, ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಮಹನೀಯರು. ಇವರ ವ್ಯವಸ್ಥಿತ ಬದುಕನ್ನು ಶಾಸನ ಮತ್ತು ಕಾವ್ಯಗಳು ಮನದುಂಬಿ ಹೊಗಳಿವೆ".[೧]

**ಪೂಜ್ಯಪಾದರು:** ಜೈನಧರ್ಮದ ಇತಿಹಾಸದಲ್ಲಿ ಪೂಜ್ಯಪಾದರು ಬಹುದೊಡ್ಡ ಹೆಸರು. ಕರ್ನಾಟಕದ ಕೊಳ್ಳೇಗಾಲಪುರದಲ್ಲಿ ಮಾಧವಭಟ್ಟ ಮತ್ತು ಶ್ರೀದೇವಿಯರ ಮಗನಾದ ದೇವನಂದಿಯ ಪಾದಗಳನ್ನು ದೇವತೆಗಳು ಪೂಜಿಸಿದ್ದರಿಂದ ಇವನು ಪೂಜ್ಯಪಾದನೆಂಬ ಹೆಸರು ಪಡೆದನೆಂದು ಶ್ರವಣಬೆಳಗೊಳ ಶಾಸನದ ಹೇಳಿಕೆ. ಸೋದರಮಾವ ವೈಯಾಕರಣಿ ಪಾಣಿನಿ, ಸೋದರಳಿಯ

ತಾಂತ್ರಿಕ ನಾಗಾರ್ಜುನ. ತರ್ಕ, ವ್ಯಾಕರಣ, ದರ್ಶನ, ವೈದ್ಯ ಮೊದಲಾದ ವಿಷಯಗಳಲ್ಲಿ ಪರಿಣಿತರೆನಿಸಿದ ಇವರು ಸರ್ವಾರ್ಥ ಸಿದ್ಧಿ, ಸಮಾದಿತಂತ್ರಶತಕ ಮತ್ತು ಇಷ್ಟೋಪದೇಶ ಕೃತಿಗಳ ಕರ್ತೃಗಳು. ರಾಜಾವಳಿ ಕಥೆಯಲ್ಲಿ 'ಪೂಜ್ಯಪಾದಯತೀಂದ್ರಂ ಪದನಾಡಿನೊಳು ತಪಂಗೆಯ್ಯುತ್ತೆ ತೀರ್ಥ ವಂದನೆಯಂ ಪೂಡಲೆಂದು ಆಂಧ್ರ ಕರ್ನಾಟ ಚೋಳ ಪಾಂಡ್ಯ ಮೊದಲಾದ ಎಲ್ಲಾ ದೇಶಂಗಳಂ ವಿಹಾರಿಸಿ ಕೌಂಗೆಲೆಯ ಶೈಲಕ್ಕಂಬಂದು ಜಿನಾಗಮಂ ಕೆಲವು ನೋಡಿ ತಿಳಿದುಪದೇಶಂ ಮಾಳ್ಪವರಿಲ್ಲದೆ ಕೆಲವು ಸಿದ್ಧಾಂತಂ ಮರೆಗರೆದಿರ್ದುದರಿಂ ಸಂದೇಹಗ್ರಸ್ತಮಾಗೆ ಪೂರ್ವವಿದೇಹಕ್ಕೆ ಪಾದಲೇಪೌಷಧಿ ಸಾಮರ್ಥದಿಂ ಪೋಗಿ, ಸಮವಸರಣದೊಳಿರ್ದ ಶ್ರೀ ಜಿನಪತಿಗಳಂ ವಂದಿಸಿ, ತತ್ತ್ವಮಂ ನಿಸ್ಸಣದೇಹಮಾಗರಿದಲ್ಲಿಯ ಪುಸ್ತಕದೊಳ್ ಬರೆದುಕೊಂಡು ದೈವಯತ್ತದಿಂ ಭರತಕ್ಷೇತ್ರಮನೆಯ್ದುವಲ್ಲಿ ಸೂರ್ಯಕಿರಣೋಷ್ಣದಿಂ ದೃಷ್ಟಿಪೋಗಿ ಬಂಕಾಪುರವಂಬುದರೊಳ್ ಶಾಂತೀಶ್ವರರಂ ವಂದಿಸಿ ಶಾಂತ್ಯಷ್ಟಕಮಂ ಪೇಳಿ ದೃಷ್ಟಿಯಂ ಪಡೆದು ಬಂದು ಸಿದ್ಧಾಂತಮಂ ಶಿಷ್ಯ ಪ್ರಶಿಷ್ಯರ್ಗಮುದೇಶಂಗೆಯ್ದು ಲೌಕಿಕ ಪರಮಾರ್ರ್ದಂಗಳಂ ರಚಿಸಿ ಸದ್ಗತಿ ಪ್ರಾಪ್ತರಾದರ್' ಎಂಬ ಘಟನೆ ಇದೆ. ಇಂಥ ಜ್ಞಾನಪಿಪಾಸು ಕುಟುಂಬದ ಪೂಜ್ಯಪಾದ ಕ್ರಿ. ಶ ೫ನೆಯ ಶತಮಾನದಲ್ಲಿ ಬಂಕಾಪುರದ ಶಾಂತಿನಾಥ ತೀರ್ಥಂಕರನನ್ನು ಕುರಿತು ಅಷ್ಟಕ ರಚಿಸಿದ್ದನೆಂದು ಪ್ರತೀತಿ. ಬಂಕಾಪುರದ ಶಾಂತಿನಾಥನನ್ನು ಕುರಿತು ಅಷ್ಟಕ ರಚಿಸಿ ಕಳೆದುಕೊಂಡು ದೃಷ್ಟಿಯನ್ನು ಮರಳಿ ಪಡೆದು ಕೊಂಡಿದ್ದರೆಂದು ಪದ್ಮರಾಜನ ಪೂಜ್ಯಪಾದ ಚರಿತೆ ತಿಳಿಸಿದೆ.

**ಜೀನಸೇನಾಚಾರ್ಯರು:** "ಜೈನಧರ್ಮ, ಸಾಹಿತ್ಯವನ್ನು, ಶ್ರೀಮಂತಗೊಳಿಸಿದ ಇನ್ನೊಬ್ಬ ಆಚಾರ್ಯರು ಜಿನಸೇನರು, ಕ್ರಿ.ಶ. ೯ನೆಯ ಶತಮಾನದ ವ್ಯಕ್ತಿಗಳಿವರು. ಪೂಜ್ಯಪಾದರ ಶಿಷ್ಯ ವೀರಸೇನಾರ್ಯ ಜಿನಸೇನಾಚಾರ್ಯರ ಗುರು. ರಾಷ್ಟ್ರಕೂಟವಂಶದ ಕೀರ್ತಿಯನ್ನು ಬೆಳಗಿದ ನೃಪತುಂಗನ ಗುರು ಜಿನಸೇನರು ತ್ರಿಷಷ್ಟಿಶಲಾಕಾಪುರುಷ ಮಹಾಪುರಾಣ 'ಪೂರ್ವಪುರಾಣ'ದ ರಚಕರು. ಮಹಾಪುರಾಣದ ೪೨ ಪರ್ವಗಳನ್ನು ಬರೆಯುವಲ್ಲಿ ಇವರು ಅಕಾಲ ಮರಣ ಹೊಂದಲು ಅವರ ಶಿಷ್ಯ ಗುಣಭದ್ರಾಚಾರ್ಯ ಅದರ ಮುಂದಿನ ಭಾಗ 'ಉತ್ತರಪುರಾಣ' ರಚಿಸಿದರು. ಈ ನಯಸೇನರ ಪೂರ್ವಪುರಾಣದ ಆರಂಭೋತ್ಸವವು ರಾಷ್ಟ್ರಕೂಟ ಅರಸನ ಸಾನಿಧ್ಯದಲ್ಲಿ ವಟಗ್ರಾಮದ ಜಿನಮಂದಿರದಲ್ಲಿ ಆಯಿತೆಂದು ಪ್ರತೀತಿ. ಬಂಕಾಪುರದ ಒಂದು ಭಾಗವೆನಿಸಿದ ಒಳಕೇರಿ(ವಳಕೇರಿ೭, ವಟಕೇರಿ೭, ವಟಗ್ರಾಮ)ವಟಗ್ರಾಮವಾಗಿರಬೇಕೆಂಬುದು".[೨] ಈ ವಟಗ್ರಾಮ ಬಡೋದಾ ಜಿಲ್ಲೆಯ ವಟೋದರಾ ಎಂದು ಡಾ. ಅಲ್ಟೇಕರರ ಅಭಿಪ್ರಾಯವಿದೆ.

ಇತ್ತೀಚೆಗೆ ಗಂಡಸಿ ಗ್ರಾಮದಲ್ಲಿ ದೊರೆತ ಶಾಸನವೊಂದರಲ್ಲಿ ಜಿನಸೇನಾಚಾರ್ಯ ಮತ್ತು ವೀರಸೇನಾಚಾರ್ಯರ ಪ್ರಸ್ತಾವಿದ್ದುದು ತಿಳಿದುಬರುತ್ತದೆ. ಜಿನಸೇನಾಚಾರ್ಯರು ರಚಿಸಿದ 'ಪೂರ್ವಪುರಾಣ'ವನ್ನು ಬಂಕಾಪುರದಲ್ಲಿ ಆನೆಯ ಮೇಲೆ ಅಂಬಾರಿಯಿಟ್ಟು ಮೆರವಣಿಗೆ

ಮಾಡಿದ್ದರೆಂದು 'ಕನ್ನಡ ಶಾಸನದಲ್ಲಿ ಜಿನಸೇನ ಹಾಗೂ ಗುಣಭದ್ರಚಾರ್ಯ' ಲೇಖನದಲ್ಲಿ ವಿವರಿಸಲಾಗಿದೆ.

**ಗುಣಭದ್ರಾಚಾರ್ಯರು:** ಜೈನಸಂಪ್ರದಾಯದ ಗಣ್ಯ ಪರಂಪರೆಗೆ ಸೇರಿದ ಗುಣಭದ್ರರನ್ನು ಶ್ರವಣ ಬೆಳಗೊಳ (೧೩೮) ಶಾಸನ ಜಿನಸೇನರ ಅಗ್ರಪುತ್ರನೆಂದು ಕರೆದಿದೆ. ಜಿನಸೇನಾಚಾರ್ಯರು 'ಪೂರ್ವಪುರಾಣದ' ೪೨ ಪರ್ವಗಳನ್ನು ಬರೆಯುವದರೊಳಗಾಗಿ ಮರಣ ಹೊಂದಿದ್ದರಿಂದ ಅವರ ಶಿಷ್ಯ ಗುಣಭದ್ರಾಚಾರ್ಯರ ಅದನ್ನು ಮುಂದುವರೆಸಿ ೪೭ ಪರ್ವಗಳ 'ಉತ್ತರಪುರಾಣ' ರಚಿಸಿದರು. ಜೈನಧರ್ಮದ ಇತಿಹಾಸದಲ್ಲಿ ಇವೆರಡು ಮೈಲುಗಲ್ಲು ಕೃತಿಗಳು.

ಪೂರ್ವಪುರಾಣದ ಪ್ರಾರಂಭೋತ್ಸವ, ಉತ್ತರಪುರಾಣದ ಮುಕ್ತಾಯ ಸಮಾರಂಭವೂ ಇಲ್ಲಿಯೆ ಆದಂತೆ ತಿಳಿದು ಬರುತ್ತದೆ. ರಾಷ್ಟ್ರಕೂಟ ಸಾಮಂತ ಚೆಲ್ಲಕೇತನ ಮನೆತನದ ಬಂಕೇಯನ ಮಗ ಲೋಕಾದಿತ್ಯನ ಆಶ್ರಯದಲ್ಲಿ ಮುಕ್ತಾಯ ಸಮಾರಂಭವಾದುದನ್ನು

ಅಕಾಲವರ್ಷೆ ಭೂಪಾಲೇ ಪಾಲಯತ್ಯಖಿಲಾಮಿಲಾಂ
ತಸ್ಮಿನ್ ವಿಧ್ವಸ್ತನಿಶ್ಯೇಷದ್ವಿಷಿ ವೀಧ್ರಯಶೋಜಷಿ
ಪದ್ಮಾಲಯ ಮುಕುಲಕುಲ ಪ್ರವಿಕಾಸಕಸತ್ಪ್ರತಾಪತತಮಹಸಿ
ಶ್ರೀಮತಿ ಲೋಕಾದಿತ್ಯೇ ಪ್ರಧ್ವಸ್ತಪ್ರಥಿಶತ್ರುಸಂತಮಸೇ
ಶಕನೃಪ ಕಾಲಾಭ್ಯಂತರ ವಿಂಶತ್ಯಧಿಕಾಷ್ಟಶತಮಿತಾಬ್ದಾಂತೇ
ಮಂಗಲಮಹಾರ್ಥಕಾರಿಣಿ ಪಿಂಗಲನಾಮನಿ ಸಮಸ್ತಜನ ಸುಖದೇ
ಶ್ರೀ ಪಂಚಮ್ಯಾಂ ಬುಧದ್ರಾರ್ಯಯುಜಿ ದಿವಸಕರೇ ಮಂತ್ರಿವಾರೇ ಬುಧಾಂಶೇ
ಪೂರ್ವಾಯಾಂ ಸಿಂಹಲಗ್ನೇ ಧನುಷಿ ಧರಣೀಜೋ ವೃಶ್ಚಿಕೇರ್ಕೇ
ಸೂರ್ಯೇಶುಕ್ರೆ ಕುಲೀರೇಗವಿಚಸುರುಗುಕಾನಿಷ್ಠಿತಂ ಭವ್ಯ ವರ್ಯೈಃ ತುಲಾಯಾಂ
ಪ್ರಾಪ್ತೇಜ್ಯಂ ಸರ್ವಸಾರಂ ಜಗತಿ ವಿಜಯತೆ ಪುಣ್ಯಮೇ ತತ್ಪುರಾಣಂ[೩]//

ಎಂದು ಉತ್ತರಪುರಾಣದ ಪೀಠಿಕಾಪದ್ಯ ತಿಳಿಸಿದೆ. ಕ್ರಿ.ಶ. ೮೯೮ರಲ್ಲಿ ನೃಪತುಂಗನ ಸಾಮಂತ ಚೆಲ್ಲಕೇತನ ಲೋಕಾದಿತ್ಯನ ಉದಾರ ಆಶ್ರಯ ಈ ಕೃತಿ ರಚನೆಗೆ ನೆರವು ನೀಡಿ ತನ್ನ ಮನೆತನದ ಕೀರ್ತಿಯನ್ನು ಶಾಶ್ವತ ಉಳಿಸಿದೆ.

**ಅಜಿತಸೇನಾಚಾರ್ಯರು:** "ಬಂಕಾಪುರವನ್ನು ತಮ್ಮ ಆಧ್ಯಾತ್ಮಿಕ, ಸಾಹಿತ್ಯಿಕ ಕ್ಷೇತ್ರವನ್ನಾಗಿ ಮಾಡಿಕೊಂಡ ಇನ್ನೊಬ್ಬ ಪ್ರಮುಖ ರೆಂದರೆ ಅಜಿತಸೇನಾಚಾರ್ಯರು 'ಶಬ್ದಚತುರ್ಮುಖರುಂ ತಾರ್ಕಿಕ ಚಕ್ರವರ್ತಿಗಳುಂ ವಾದಿಭಸಿಂಹರುಂಮೆನಿಸಿದಜಿತಸೇನದೇವರೆ' ಎಂದು ಕರೆಸಿಕೊಂಡ ಇವರು ಚಂದ್ರಕವಾಟಾನ್ವಯದವರು. ಕನ್ನಡ ಸಾಹಿತ್ಯದಲ್ಲಿ ಕವಿ ಶ್ರೇಷ್ಠರಾಗಿ, ಸವ್ಯಸಾಚಿಗಳಾಗಿ ಬೆಳಗಿದ ಕವಿರನ್ನ, ನಾಗವರ್ಮ ಚಾವುಂಡರಾಯರ ಗುರುಗಳು, ಕವಿರನ್ನ 'ಬಿಳಿಯರಳೆಯಂತೆ ಗಂಗಾಜಳ ದಂತೆಸೆವಜಿತಸೇನ ಮುನಿಪತಿಯ ಗುಣಾವಳಿಯಂತೆ ನೆಗಳ್ದ ಕೊಪಣಾಚಳದಂತೆ' ಎಂದು

ಹಾಡಿಹರಸುವಲ್ಲಿ ಅಜಿತಸೇನರ ದಿವ್ಯ ವ್ಯಕ್ತಿತ್ವ ಗೋಚರಿಸುತ್ತದೆ. ಗಂಗ ರಾಚಮಲ್ಲ, ಮಾರಸಿಂಹರು ಇವರ ಶಿಷ್ಯರೆನಿಸಿದ್ದರು. ಬಂಕಾಪುರದಲ್ಲಿ ಅಜಿತಸೇನಾಚಾಯರ ಬಳಿ ಕವಿರನ್ನ ತನ್ನ ವಿದ್ಯಾಭ್ಯಾಸ ಮುಗಿಸಿಕೊಂಡನೆಂದು ವಿದ್ವಾಂಸರ ಹೇಳಿಕೆ. ಗಂಗ ಮಾರಸಿಂಹ ಬಂಕಾಪುರ ಅಜಿತಸೇನಾಚಾರ್ಯರ ಪಾದಮೂಲದಲ್ಲಿ ಮೂರು ದಿವಸ ಆರಾಧನಾವಿಧಿಯಿಂದ ನೋಂತು ಸಮಾಧಿ ಮರಣ ಪಡೆದನು. ಇಂಥ ಗುರುವರ್ಗವನ್ನು ಪಡೆದ ಬಂಕಾಪುರ ಸಾಹಿತ್ಯಕವಾಗಿ ಧಾರ್ಮಿಕವಾಗಿ ಉಚ್ಚಮಟ್ಟದ ಸಂಸ್ಕೃತಿಯನ್ನು ಹೊಂದಿದ ಪ್ರದೇಶವೆನಿಸಿತ್ತು."[೪]

**ದೇವೇಂದ್ರಮುನಿ:** 'ವಂಕಾಪುರ ಮುನೀಂದ್ರೋ ಭೂದ್ದೇವೆಂದ್ರೋರುಂದ್ರ ಸದ್ಗುಣ ಸಿದ್ದಾನ್ತಾದ್ಯಾಗಮಾರ್ಥಜ್ಞೋ ಸ ಜ್ಞಾನಾದಿಗುಣಾನ್ವಿತ' ಎಂದು ಸೂಚಿಸುವ ಶ್ರವಣ ಬೆಳಗೊಳ (೧೨೦೦) ಶಾಸನ ದೇವೇಂದ್ರಮುನಿಯನ್ನು ಪರಿಚಯಿಸಿದೆ. ೧೦ನೆಯ ಶತಮಾನಗಳ ಜಿನಮುನಿಗಳ ಮಾಲಿಕೆಯಲ್ಲಿ ಉಲ್ಲೇಖಿಸಲ್ಪಟ್ಟ ಈ ಮುನಿ 'ದೇವೇಂದ್ರ ವಂದಿತ' ಎಂದು ಹೊಗಳಿಸಿಕೊಂಡಿರುವನು. ಈ ದೇವೇಂದ್ರಮುನಿಯನ್ನು ಬೇತಾಳ ಕೈಮುಗಿದುಕೊಂಡು ಜೊತ್ತುಂಗನು ಬಾಗಿಲನ್ನು ಕಾಯ್ದುಕೊಂಡು ಸದಾಸೇವೆ ಮಾಡುತ್ತಿದ್ದರೆಂದು ಈ ಶಾಸನದ ಹೇಳಿಕೆ ಇದೆ. ಈತ ಕನ್ನಡದ ಆದಿ ಕವಿ ಪಂಪನ ಗುರು ಎಂಬುದು ಗಮನಿಸಬೇಕಾದ ಅಂಶ.

**ಜಿನಾಲಯಗಳು:** ರಾಷ್ಟ್ರಕೂಟ ದೊರೆಗಳು ಶಿವಭಕ್ತರಾಗಿದ್ದರೂ ಜೈನಧರ್ಮದ ಕಡೆಗೆ ಅವರ ಒಲವಿತ್ತು. ೧ನೆಯ ಶತಮಾನ ಜೈನಧರ್ಮದ ರಸಘಟ್ಟಿಯ ಕಾಲ ಗಂಗಚಮೂಪತಿ ಚಾವುಂಡರಾಯ, ರಾಷ್ಟ್ರಕೂಟ ರಾಜ್ಯದ ಶಂಕರಗಂಡ ಚಾಲುಕ್ಯ ರಾಜ್ಯದಲ್ಲಿದ್ದ ಅತ್ತಿಮಬ್ಬೆ ಮುಂತಾದವರ ತಪಸ್ಸಿಗೆ ಸಮನಾದ ಜೈನನಿಷ್ಠೆಯ ಸಾರವನ್ನುಂಡು ಜೈನಧರ್ಮವು ಪುಷ್ಪವಾಯಿತು. ರಾಷ್ಟ್ರಕೂಟರ ಸಾಮಂತ ಚಲ್ಲಕೇತನರು ಜೈನಮತೀಯರೇ ಅದುದರಿಂದ ಇವರ ಕಾಲದಲ್ಲಿ ಜೈನಧರ್ಮ ಸೊಂಪಾಗಿಯೇ ಬೆಳೆಯಿತು. ರಾಷ್ಟ್ರಕೂಟ ಅಮೋಘವರ್ಷ ನೃಪತುಂಗ, ಇಂದ್ರ, ಸಾಮಂತ ಬಂಕೇಯ ಲೋಕಾದಿತ್ಯರು ಜೈನಧರ್ಮ ಹೆಚ್ಚಳಕ್ಕೆ ಶ್ರಮಿಸಿದರು. ಈ ಜೀನಸೇನಾಚಾರ್ಯ, ಗುಣಭದ್ರಾಚಾರ್ಯ, ಅಜಿತಸೇನಾಚಾರ್ಯರಂತಹ ಜ್ಞಾನನಿಧಿ ತಪೋನಿಧಿಗಳ ಸಾನಿಧ್ಯದಿಂದ ಇತ್ತಲಿನ ಪರಿಸರಗಳು ಹೆಚ್ಚೆಚ್ಚು ಜಿನಪ್ರಭಾವದಿಂದ ಬೆಳಗಿದವು.

ಜೀನ ಧರ್ಮದ ಹೆಚ್ಚಳದಂತೆ ಧರ್ಮ ಸಂಘಟನೆ, ಬಸದಿ ನಿರ್ಮಾಣಕಾರ್ಯಗಳು ಭರದಿಂದ ಮುನ್ನಡೆದವು. ಈ ಶತಮಾನದ ವೇಳೆಗೆ ಬಸದಿಯನ್ನು ಬಿಟ್ಟು ಹೊರಗೆ ಹೋಗಲಾರದ ಜೈನಮುನಿಗಳು ಅವನ್ನು ತಮ್ಮ ವಸತಿ ಕೇಂದ್ರಗಳನ್ನಾಗಿ ಮಾಡಿಕೊಳ್ಳತೊಡಗಿದರು. ಜಿನ ದೇವಾಲಯಗಳನ್ನು ಬಸದಿ ಎಂದು ಕರೆಯುವದಕ್ಕೆ ಕಾರಣ ಇದೆ ಇರಬೇಕು.

ಈ ಮುನಿಗಳಲ್ಲಿ ಕೆಲವರ ವಿದ್ವತ್ತು ಅಪಾರವಾಗಿತ್ತು. ಅವರಲ್ಲಿ ಕೆಲವರಿಗೆ ಜೈನ ಗ್ರಂಥಗಳಲ್ಲಿ ಮಾತ್ರವಲ್ಲ, ಎಲ್ಲ ದರ್ಶನಗಳಲ್ಲೂ, ಎಲ್ಲ ಕಲೆಗಳಲ್ಲೂ, ಅನೇಕ ಭಾಷಾ ಸಾಹಿತ್ಯಗಳಲ್ಲೂ ಅದ್ಭುತವಾದ ಪರಿಶ್ರಮವಿತ್ತು. ಸನ್ಯಾಸಿಗಳು ಬಸದಿಗಳಲ್ಲಿ ನೆಲೆನಿಂತ ಮೇಲೆ ಅವು ವಿದ್ಯಾಕೇಂದ್ರ

ಗಳಾದವು. ಸಾಂಸ್ಕೃತಿಕ ಸ್ಥಳಗಳಾಗಿ ಪರಿವರ್ತನೆಗೊಂಡವು, ಜೈನಧಾರ್ಮಿಕ ಕೇಂದ್ರಗಳೆನಿಸಿದವು. ಜೈನರುಗಳ ಪಾಂಡಿತ್ಯಕ್ಕೆ ಮೆಚ್ಚಿದ ರಾಜರು ಅವರನ್ನು ರಾಜ್ಯಪೂಜ್ಯರನ್ನಾಗಿಸಿಕೊಂಡರು. ಇದರಿಂದ ಬಸದಿಗಳು ರಾಜೋಚಿತ ಪುರಸ್ಕಾರಕ್ಕೆ ಒಳಗಾಗತೊಡಗಿದವು. ಇದಕ್ಕೆ ಬಂಕಾಪುರ ಹೊರತಾಗಿರಲಿಲ್ಲ. ಬಂಕಾಪುರದಲ್ಲಿ ಇಂಥ ಸುಪ್ರಸಿದ್ಧ ಬಸದಿಗಳ ಮಾಲಿಕೆಯಲ್ಲಿ ಧೋರ ಜಿನಾಲಯ, ಉರಿಪಟ್ಟಾಯಣ ಬಸದಿ, ಕೊಂತಿಮಹಾದೇವಿ ಬಸದಿ ನಿಟ್ಟಸಿಂಗಿ ಬಸದಿಗಳು ಇದ್ದುದಾಗಿ ತಿಳಿಯುತ್ತದೆ.

ರಾಷ್ಟ್ರಕೂಟ ನಿತ್ಯವರ್ಷ ನಾಲ್ಕನೆಯ ಗೋವಿಂದನ ಅಸುಂಡಿ (೯೨೫) ಶಾಸನದಲ್ಲಿ 'ಬಂಕಾಪುರದ ಧೋರಜಿನಾಲಯ'ದ ಪಸ್ತಾಪವಿದೆ. ಚಂದ್ರಪ್ರಭಭಟಾರರು ಇದರ ಆಚಾರ್ಯರಾಗಿದ್ದು ಅಸುಂಡಿಯ ಆಳ್ವಿಕೆ ನೋಡುತ್ತಿದ್ದರು.

೧೦ನೆಯ ಶತಮಾನದ ಉತ್ತರಾರ್ಧಕ್ಕೆ ರಾಷ್ಟ್ರಕೂಟರ ಪ್ರಭಾವ ಕಡಿಮೆಯಾಗುತ್ತಿದ್ದಂತೆ ಕಲ್ಯಾಣದ ಚಾಲುಕ್ಯರು ತಲೆಯೆತ್ತಿದರು. ಜೈನಮತವನ್ನು ಪೋಷಿಸುವ ಹೊಣೆ ಈಗ ಚಾಲುಕ್ಯರ ಹೆಗಲಿಗೆ ಇಳಿಯಿತು. ಉತ್ತರ ಕರ್ನಾಟಕದ ಈ ಚಾಲುಕ್ಯರು ಹಿಂದೂಧರ್ಮಿಯರು, ಶೈವ ಪಕ್ಷಪಾತಿಗಳು, ಆದ್ದರಿಂದ ಮೊದಲಿನಷ್ಟು ಪ್ರೋತ್ಸಾಹ, ಆಶ್ರಯ ದೊರೆಯದೇ ಹೋಯಿತು. ಮುಂದೆ ಜೈನಧರ್ಮ ಹೊಯ್ಸಳರ ಕಾಲದಲ್ಲಿ ಪುನಶ್ಚೇತನಗೊಂಡಂತೆ ಕಾಣುತ್ತದೆ.

ಸುದತ್ತಾಚಾರ್ಯರೆಂಬ ಜೈನಗುರುವಿನ ಆಶೀರ್ವಾದದಿಂದ ಹುಟ್ಟಿದ ಹೊಯ್ಸಳ ಮನೆತನ ಅನೇಕ ವ್ಯಕ್ತಿಗಳು, ಬಹುಸಂಖ್ಯೆಯ ಮಾಂಡಲಿಕರು, ಮಂತ್ರಿವರ್ಯರು ಧರ್ಮಪಾಲನೆಗೈದು ಜಿನಧರ್ಮವನ್ನು ಶ್ರೀಮಂತಗೊಳಿಸಿದರು.

ಹೊಯ್ಸಳ ವಿಷ್ಣುವರ್ಧನನ ದಂಡನಾಯಕ ಗಂಗರಾಜ ಜೈನಧರ್ಮದ ರಸ ಘಟ್ಟಿಯೆನಿದ್ದ. ಅವನ ಮರಣಾನಂತರ ಅವನ ಮಗ ಬೊಪ್ಪಣದಂಡನಾಯಕ ತಂದೆಗೆ ಪರೋಕ್ಷವಿನಯವಾಗಿ ದೋರಸಮುದ್ರದಲ್ಲಿ ತಂದೆಯ ಬಿರುದಿನ 'ದ್ರೋಹ ಘರಟ್ಟ' ಜಿನಾಲಯ ನಿರ್ಮಿಸಿದ. ಅದರ ಮಂಗಳಶೇಷೆಯನ್ನು ಇಂದ್ರರು ಬಂಕಾಪುರಲ್ಲಿ ಬೀಡುಬಿಟ್ಟಿದ್ದ ವಿಷ್ಣು ವರ್ಧನನಿಗೆ ತಲುಪಿಸಲು ಬಂದರು. ವಿಷ್ಣುವರ್ಧನ ಅದೇ ಆಗ ಕದಂಬ ಮಸಣವನ್ನು ಸೋಲಿಸಿ ಜಯಸಂಪಾದನೆ ಮಾಡಿಕೊಂಡು ಬಂದಿದ್ದ. ಇದೇ ಸಂದರ್ಭದಲ್ಲಿ ವಿಷ್ಣುವರ್ಧನನ ಕುಮಾರನ ಜನ್ಮೋತ್ಸವದ ಶುಭಸಮಾಚಾರವು ಬಂದಿತು. ಈ ಮಂಗಳಕರ ಸಂದರ್ಭದಲ್ಲಿ ಅತ್ತ ವಿಜಯೋತ್ಸವಮುಂ ಕುಮಾರ ಜನ್ಮೋತ್ಸವಮುಮಾಗೆ' ಸಂತುಷ್ಟನಾದ ವಿಷ್ಣುವರ್ಧನ ಪಾರ್ಶ್ವದೇವರ ಗಂಧೋದಕ ಶೇಷಗಳನ್ನು ತೆಗೆದುಕೊಂಡು ಬಂದಿರ್ದಿಂದ್ರಂ ಕೆಂಡು ಬರವೇಳ್ಪಿದಿದಿರೆದ್ದು ಪೊಡವಟ್ಟು ಗಂಧೋದಕಮುಂ ಪೇಶೆಯುಮಂ ಕೊಂಡೆನಗೀದೇವರ ಪ್ರತಿಷ್ಠೆಯ ಫಲದಿಂ ವಿಜಯೋತ್ಸವಮುಂ ಕುಮಾರ ಜನ್ಮೋತ್ಸವಮುಮಾದುದೆಂದು ಸಂತೋಷ ಪರಂಪರೆಯನ್ನು ದೇವರ್ಗೆ ಶ್ರೀ ವಿಜಯಪಾರ್ಶ್ವ ದೇವರೆಂಬ ಪೆಸರುಮಂ ಕುಮಾರಂಗೆ ಶ್ರೀ ವಿಜಯ ನಾರಸಿಂಹನೆಂಬ ಪೆಸರನಿಟ್ಟು' ಹರುಷ ವ್ಯಕ್ತಪಡಿಸಿದುದನ್ನು ಶ್ರವಣ ಬೆಳಗೊಳ ಶಾಸನ ವರ್ಣಿಸಿದೆ.

ಹೊಯ್ಸಳ ಕಾಲದಲ್ಲಿ ಜೈನಮತಕ್ಕೆ ದೊರೆತ ಮನ್ನಣೆ ರಾಜಮನೆತನಕ್ಕಿಂತ ಅಧಿಕವಾಗಿ ಮಂತ್ರಿ ಮತ್ತು ಅಧಿಕಾರವರ್ಗದವರದು. ಇವರಲ್ಲಿ ಪ್ರಮುಖ ವ್ಯಕ್ತಿಗಳೆಂದರೆ ವಿಷ್ಣುವರ್ಧನನ ದಂಡನಾಯಕ ಗಂಗರಾಜ ಮತ್ತು ನಾರಸಿಂಹ ಮಂತ್ರಿ ಹುಳ್ಳದಂಡಾಧಿಪರು. ಶ್ರವಣಬೆಳಗೊಳದ

ಸ್ಥಿರಜಿನಶಾಸನೋದ್ಧರಣರಾದಿಯೊಳಾರೆನೆ ರಾಚಮಲ್ಲಭೂವರ
ವರಮಂತ್ರಿರಾಯನೆ ಬಳಿಕ್ಕೆ ಬುಧಸ್ತುತನಪ್ಪ ವಿಷ್ಣುಭೂವರ
ವರಮಂತ್ರಿ ಗಂಗಣನೆ ಮತ್ತೆ ಬಳಿಕ್ಕೆ ನೃಸಿಂಹದೇವಭೂವರ
ವರಮಂತ್ರಿ ಹುಳ್ಳನೆ ಪೆರಂಗಿನಿತುಳ್ಳದೆ ಪೇಳಲಾಗದೆ//

ಎಂಬ ಶಾಸನಪದ್ಯ ಗಂಗರಾಚಮಲ್ಲನ ಮಂತ್ರಿ ಚಾವುಂಡರಾಯ, ಹೊಯ್ಸಳ ವಿಷ್ಣುವರ್ಧನ ಮಂತ್ರಿ ಗಂಗರಾಜ, ನಾರಸಿಂಹನ ಮಂತ್ರಿ ಹುಳ್ಳರಾಜರನ್ನು ಪರಿಚಯಿಸಿದೆ. ಈ ಮೂವರು ಉದಾರ ಜಿನಧರ್ಮಾಭಿಮಾನಿಗಳು. ಇವರಲ್ಲಿ ಹುಳ್ಳನಿಗೆ ಸಂಬಂಧಿಸಿ ಕೆಲವು ವಿಶೇಷಗಳು ಬಂಕಾಪುರದಲ್ಲಿ ದೊರಕುತ್ತವೆ. ಈತ

ಜಿಗೇಹೋದ್ಧರಣಂಗಳಿಂ ಜಿನಮಹಾಪೂಜಾಸಮಾಜಂಗಳಿಂ
ಜಿನಯೋಗಿಬ್ರಜದಾನದಿಂ ಜಿನಪದಸ್ತೋತ್ರಕ್ರಿಯಾನಿಷ್ಠೆಯಿಂ
ಜಿನಸತ್ಪುಣ್ಯ ಪುರಾಣ ಸಂಶ್ರವಣದಿಂ ಸನ್ತೋಷಮಂ ತಾಳ್ದಿಭ
ವ್ಯನುತ ನಿಚ್ಚಲುಮಿನ್ತೆ ಪುರ್ಚುಗಳೆವಂ ಶ್ರೀ ಹುಳ್ಳದಂಡಾಧಿಪಂ//

ಎನ್ನುವಲ್ಲಿ ಜಿನಮಂದಿರಗಳ ಜೀರ್ಣೋದ್ಧಾರ, ಜಿನಮಹಾಪೂಜೆ, ಜಿನಯೋಗಿ ಸಮೂಹಕ್ಕೆ ಕೈಕೊಳ್ಳುವ ಚತುರ್ವಿಧದಾನ, ಜಿನಪದಸ್ತೋತ್ರಗಳ ಕ್ರಿಯಾನಿಷ್ಠೆ ಜಿನಸತ್ಪುಣ್ಯಪುರಾಂ ಶ್ರವಣ ಇವು ಹುಳ್ಳದಂಡಾಧಿಪನ ಬದುಕಿನ ಮುಖಗಳೆನಿಸಿದ್ದವು. ಈತ ಕೈಕೊಂಡ ಸೇವಾಕಾರ್ಯಗಳನ್ನು ವಿದಿತಪಡಿಸುವ ಶ್ರವಣಬೆಳಗೊಳ ಶಾಸನ

ನಿಪ್ಪಟಮೆ ಜೀರ್ಣ್ಣಮಾದುದ
ನುಪ್ಪಟ್ಟಾಯ್ತನ ಮಹಾಜಿನೊಂದ್ರಾಲಯಮಂ
ನಿಪ್ಪೊಸತು ಮಾಡಿದಂ ಕರ
ಮೊಪ್ಪಿರೆ ಹುಳ್ಳಂ ಮನಸ್ವಿ ಬಂಕಾಪುರದೊಳ್//

ಎಂದು ತಿಳಿಸಿದೆ. ಜೀರ್ಣವಾದ ಮಹಾಜಿನೇಂದ್ರಾಲಯವೊಂದರ ಜೀರ್ಣೋದ್ಧಾರಕ ಹುಳ್ಳ ಎಂಬುದು ಈ ಶಾಸನ ವಿಷಯ. ಇಲ್ಲಿಯ ಉಪ್ಪಮತಾಯ್ಚನ ಉಪ್ಪಟ್ಟಾಯ್ತನ, ಉರಿಪಟ್ಟಾಯ್ತನ, ಉರಿಪಟ್ಟಾಯಣ ಹೆಸರುಗಳ ವೈವಿಧ್ಯ ಉರಿಪಟ್ಟಾಯಣ ಬಸದಿಯನ್ನೇ ಸೂಚಿಸುತ್ತದೆ. ಹಾಗಾದರೆ ಈ ಉರಿಪಟ್ಟಾಯಣ ಬಸದಿಯ ನಿರ್ಮಾಪಕರಾರು? ಎಂಬ ಸಮಸ್ಯೆಗೆ ಇದೇ ಶಾಸನದ ಮುಂಭಾಗ ಉತ್ತರ ಹೇಳುತ್ತದೆ.

ಕಲಿತನಮುಂ ವಿಟತ್ವಮುಮನುಳ್ಳವನಾದಿಯೊಳೊರ್ವ್ವನುರ್ವಿಯೊಳ್
ಕಲಿವಿಟನೆಂಬಾತನ ಜಿನಾಲಯಮಂ ನೆರೆ ಜೀರ್ಣಮಾದುದಂ
ಕಲಿಸಲೆದಾನದೊಳ್ಪರಮ ಸೌಖ್ಯರಮಾರತಿಯೊಳ್ವಿಟಂವಿನಿ
ಶ್ಚಲಮೆನಿಸಿರ್ದ್ದ ಹುಳ್ಳನದನೆತ್ತಿಸಿದಂ ರಜತಾದ್ರಿತುಂಗಮಂ//

ಪ್ರಾಚೀನ ಕಾಲದಲ್ಲಿ ಕಲಿವಿಟನೆಂಬಾತ ಕಟ್ಟಿಸಿದ ಜಿನಾಲಯ ಜೀರ್ಣಗೊಳ್ಳಲು ಆ ಜಿನೇಂದ್ರಾಲಯವನ್ನು ಹುಳ್ಳ ಜೀರ್ಣೋದ್ಧಾರಗೊಳಿಸಿದನೆಂದು ತಿಳಿಯುತ್ತದೆ. ಇದರಿಂದ ಮೇಲಿನ ಪದ್ಯದಲ್ಲಿಯ 'ನಿಪ್ಪಟಮೆ ಜೀರ್ಣ್ನಮಾದುದನುಪ್ಪಟ್ಟಾಯ್ತನ ಮಹಾಜಿನೇಂದ್ರಾಲಯ'ವನ್ನು ಹುಳ್ಳ ಸರಿಪಡಿಸಿದುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಇದಕ್ಕೆ ಪೂರಕವಾಗುವಂತೆ ಕದಂಬ ಹರಿಕೇಸರಿದೇವ, ಹರಿಕಾಂತದೇವರು ಮತ್ತು ತೋಯಿಮರಸರು ಇದೇ ಉಪ್ಪಮತಾಯ್ಚನ ಬಸದಿ ಹಾಗೂ ಕೊಂತಿ ಮಹಾದೇವಿಯರ ಬಸದಿಗೆ ದಾನವಿತ್ತ ವಿಷಯವಿದೆ. ಹೀಗಾಗಿ ಕಲಿವಿಟನಿಂದ ನಿರ್ಮಿತ ವಾದ ಈ ಉರಿಪಟ್ಟಾಯಣ ಬಸದಿ ಜೀರ್ಣವಾಗಲು ಹುಳ್ಳ ಅದನ್ನು ಜೀರ್ಣೋದ್ಧಾರ ಗೊಳಿಸಿದನೆಂಬ ವಿಷಯ ಇಲ್ಲಿ ಸ್ಪಷ್ಟವಾಗುತ್ತದೆ. ಆತನ ಸೇವೆಯಿಂದ ಅದೊಂದು ಮಹಾಜಿನೆಂದ್ರಾ ಲಯವೆನಿಸಿತು.

ಕ್ರಿ.ಶ ೧೧ನೆಯ ಶತಮಾನದಲ್ಲಿ ಬಂಕಾಪುರದಲ್ಲಿ ಕೊಂತಿಮಹಾದೇವಿಯರ ಬಸದಿಯೊಂದು ಇದ್ದುದಾಗಿ ತಿಳಿಯುತ್ತದೆ.

ಬಂಕಾಪುರವನ್ನು ಕೇಂದ್ರವಾನ್ನಾಗಿರಿಸಿಕೊಂಡು ಆಳಿದ ಚಲ್ಲಕೇತನ ಮನೆತನದಲ್ಲಿ ಕಲಿವಿಟ ಹೆಸರಿನ ಇಬ್ಬರು ವ್ಯಕ್ತಿಗಳು ಆಗಿಹೋಗಿರುವರು. ಇವರಲ್ಲಿ ಲೋಕಾದಿತ್ಯನ ಮಗ ಒಬ್ಬನಾದರೆ, ಮೊಮ್ಮಗ ಇನ್ನೊಬ್ಬ. ಇವರು ಕ್ರಮವಾಗಿ ೯೧೩–೧೪, ೯೨೮–೯೪೬ರ ವರೆಗೆ ಆಳಿದರು. ಈ ಇಬ್ಬರಲ್ಲಿ ಕಲಿವಿಟ ಜಿನಾಲಯದ ಕರ್ತೃವನ್ನು ಅರಸುವದು ಸಂದಿಗ್ಧವಾದರೂ ಕಾಲಮಾನದ ದೃಷ್ಟಿಯಿಂದ ಎರಡನೆಯ ಕಲಿವಿಟ ಜಿನಾಲಯದ ನಿರ್ಮಾಪನಾಗಿರುವ ಸಾಧ್ಯತೆ ಇದೆ.

ಬಂಕಾಪುರದ ಈ ಮಹಾಜಿನೇಂದ್ರಾಲಯವನ್ನು ಒಳಗೊಂಡು ಹುಳ್ಳ ಇನ್ನೂ ಅನೇಕ ಬಸದಿಗಳನ್ನು ಜೀರ್ಣೋದ್ಧಾರಗೊಳಿಸಿದನೆಂದು ಶ್ರವಣಬೆಳಗೊಳ ಶಾಸನದ ಹೇಳಿಕೆ ಇದೆ. ಅದರಲ್ಲಿ ಬಂಕಾಪುರದ ಪ್ರಾಚೀನ ದೋರಜಿನಾಲಯವೂ ಸೇರಿಕೊಂಡಿರುವ ಸಾಧ್ಯತೆ ಇದೆ. ಚಲ್ಲಕೇತನ ಮನೆತನದಲ್ಲಿ ದೋರ ಹೆಸರಿನ ಇಬ್ಬರು ವ್ಯಕ್ತಿಗಳಿರುವರು. ಇವರಲ್ಲಿ ಯಾವ ದೋರನ ಹೆಸರಿನಿಂದ ಈ ಬಸದಿಯಾಗಿದೆಯೋ ಹೇಳಲುಬಾರದು. ಅಸುಂಡಿಯ ಶಾಸನದಿಂದ ಪ್ರಥಮ ಬಾರಿಗೆ ಗೋಚರವಾಗಿವ ಈ ದೋರಜಿನಾಲಯವನ್ನು ಹುಳ್ಳ ದುರಸ್ತಿಗೊಳಿಸಿರಬೇಕು.

ಡಾ. ಶೆಟ್ಟರ ಅವರು ತಮ್ಮ 'ಶ್ರವಣಬೆಳಗೊಳ' ಕೃತಿಯಲ್ಲಿ ಹುಳ್ಳ ಬಂಕಾಪುರದಲ್ಲಿ ಎರಡು ಬಸದಿಗಳನ್ನು ಜೀರ್ಣೋದ್ಧಾರಗೊಳಿಸಿದನೆಂದು ಬರೆದಿದ್ದು ಅವು ಯಾವುವು ಎಂಬುದರ ಬಗೆಗೆ

ಬರೆದಿಲ್ಲ. ಈ ಹಿಂದಿನ ವಿವರಣೆಯಿಂದ ಅವು ಉರಿಪಟ್ಟಾಯಣ ಮತ್ತು ದೋರಜಿನಾಲಯವೆಂದು ಗುರುತಿಸಬಹುದಾಗಿದೆ.

'ಜೈನಪೂಜಾ ಸಮಾಜ ಮಹೋತ್ಸಾಹಪರಂಪುರನ್ದರಂ' ಬಿರುದಾಂಕಿತ ಹುಳ್ಳ ನಯಕೀರ್ತಿ ಸಿದ್ಧಾಂತದೇವರ ಶಿಷ್ಯ. ವಾಜಿವಂಶದ ಯಕ್ಷರಾಜ, ಲೋಕಾಂಬಿಕೆಯರು ಈತನ ತಾಯಿತಂದೆಗಳು. ತನ್ನ ಉದಾರಹಸ್ತದಿಂದ 'ಹಿರಿಯದಾನಿ'ಯೆನಿಸಿದ ಈ ಹುಳ್ಳರಾಜ ಬಂಕಾಪುರವನ್ನಲ್ಲದೆ ಈತನ ಕಾರ್ಯಕ್ಷೇತ್ರ ಕಲ್ಲಂಗೆರೆ ಮತ್ತು ಗೊಮ್ಮಟಪುರಗಳನ್ನು ಒಳಗೊಂಡಿತ್ತು. ಅಲ್ಲಿಯೂ ಈತ ಜಿನಬಸದಿ ಚತುರ್ವಿಂಶ ಪ್ರತಿಮಾಗೇಹಗಳನ್ನು ರಚಿಸಿರುವನು.

ಕೃತದಿಗ್ಜೈತ್ರವಿಧಂ ಬರುತ್ತೆ ನರಸಿಂಹಕ್ಷೋಣಿಪಂ ಕಂಡು ಸ
ನ್ನೃತಿಯಿಂ ಗೊಮ್ಮಟಪಾರ್ಶ್ವಜಿನರಂ ಮತ್ತೀ ಚತುರ್ವಿಂಶತಿ
ಪ್ರತಿಮಾಗೇಹನಿನ್ತಿವರ್ಕ್ಕೆ ವಿನತಂ ಪ್ರೋತ್ಸಾಹದಿಂ ಬಿಟ್ಟನ
ಪ್ರತಿಮಲ್ಲಂ ಸವಣೇರನೂರನಭಯ ಕಲ್ಪಾನ್ತರಂ ಸಲ್ವಿನಂ//

ಹುಳ್ಳರಾಜನ ಈ ಕಾರ್ಯ ಮೆಚ್ಚಿದ ಹೊಯ್ಸಳ ದೊರೆ ನಾರಸಿಂಹ ಆತನಿಗೆ ಪ್ರೋತ್ಸಾಹಾರ್ಥವಾಗಿ ಅಂದು ಸವಣೇರ ಅಂದರೆ ಇಂದಿನ ಸವಣೂರನ್ನು ಬಿಟ್ಟುಕೊಟ್ಟಿರುವನು.

ಬಂಕಾಪುರದಲ್ಲಿ ಈ ಮೂರು ಜಿನಬಸದಿಗಳಲ್ಲದೆ ನಿಟ್ಟಸಿಂಗಿಯ ಬಸದಿ ಎಂಬ ಇನ್ನೊಂದು ಜಿನಾಲಯವಿದ್ದುದಾಗಿ ವಿಷಯವಿದೆ. ಜಿಂಜಿಯ ಬಾಮಯನ ಮಗ ಲಖಯನೆಂಬವ ಈ ನಿಟ್ಟಸಿಂಗಿಯ ಬಸದಿಗೆ ಚೌವೀಸತೀರ್ಥಂಕರ ವಿಗ್ರಹವನ್ನು ಮಾಡಿಸಿಕೊಟ್ಟಿರುವನೆಂದು ತಿಳಿದುಬರುತ್ತದೆ.

ಸುಮಾರು ಮೂರು ಶತಮಾನಗಳವರೆಗೆ ಬಂಕಾಪುರದಲ್ಲಿ ಬಾಳಿ ಬೆಳಗಿದ ಜೈನ ಧರ್ಮ, ಜಿನಬಸದಿಗಳು ಇಂದು ಇದ್ದವೋಇಲ್ಲವೋಎನ್ನುವಷ್ಟರ ಮಟ್ಟಿಗೆ ನಶಿಸಿ ಹೋಗಿವೆ. ಇತ್ತೀಚೆಗೆ ಇವುಗಳ ಕೆಲವು ಅವಶೇಷಗಳು ಸಿಗುತ್ತಿದ್ದು ಇವುಗಳ ವಿವರಣೆಗೆ ಪ್ರಾಚ್ಯವಸ್ತು ಶೋಧನ ಭಾಗವನ್ನು ನೋಡುವುದು.

**ಸಮಾಧಿ ಮರಣ:** ಜೈನಧರ್ಮದಲ್ಲಿ ಸಮಾಧಿಮರಣ ಬಸದಿ ನಿರ್ಮಾಣದಷ್ಟೇ ಪವಿತ್ರ, ಪೂಜ್ಯಕಾರ್ಯ. ಇಂತಹ ಮರಣ ಪ್ರಕ್ರಿಯೆಗೆ ಪವಿತ್ರ ಕ್ಷೇತ್ರಗಳ ಅವಶ್ಯಕತೆ ಇತ್ತು. ಪ್ರಾಚೀನ ಕರ್ನಾಟಕದಲ್ಲಿ ಶ್ರವಣಬೆಳಗೊಳ, ಕೊಪ್ಪಳಗಳು ಈ ಮಾಲಿಕೆಯಲ್ಲಿ ಮಹತ್ವದ ಪ್ರದೇಶಗಳೆನಿಸಿದಂತೆ ಬಂಕಾಪುರವೂ ಒಂದೆನಿಸಿತ್ತು.

ಉಪಸರ್ಗೇದುರ್ಭಿಕ್ಷೆ ಜರಸಿ ರುಜಾಯಾಂ ಚಸಿಃ ಪ್ರತಿಕಾರೇ
ಧರ್ಮಾಯ ತನುವಿಮೋಚನಮಾಹುಃ ಸಲ್ಲೇಖನಾಮಾರ್ಯಃ"

ಜೈನಮತೀಯನಿಗೆ ಜೀವನದಲ್ಲಿ ಆಪತ್ತು ಒದಗಿದರೆ, ಮುಪ್ಪಿನಿಂದ ಜರ್ಜರಿತನಾಗಿದ್ದರೆ, ಗುಣಪಡಿಸಲಾಗದ ವ್ಯಾಧಿಗೆ ಒಳಗಾದರೆ, ಜೀವನದಾಸೆ ಬತ್ತಿ ಹೋಗಿದ್ದರೆ, ಅಂಥವನು ಸಲ್ಲೇಖನಾ ವಿಧದಿಂದ ಮರಣವನ್ನಪ್ಪುವುದೆಂದು ರತ್ನಕರಂಡಕದ ಹೇಳಿಕೆ. ಸಲ್ಲೇಖನವ್ರತ ಕೈಕೊಂಡ ಕೆಲಕಾಲದಲ್ಲಿ ಮರಣದಲ್ಲಿ ಪರ್ಯವಸಾನವಾಗುವ ಕ್ರಿಯೆಯೆ ಸಮಾಧಿಮರಣ .ಈ ಕ್ರಿಯೆಗೆ ಪವಿತ್ರಸ್ಥಳಗಳನ್ನು ಅಯ್ಕೆ ಮಾಡುತ್ತಿದ್ದರು. ವ್ರತ ಸ್ವೀಕರಿಸಿದ ಸ್ಥಳದಲ್ಲಿಯೇ ಸಮಾಧಿಮರಣ ಹೊಂದುವ ಪರಿಪಾಠವಿತ್ತು. ಕೆಲವು ಸಲ ವ್ರತ ಸ್ವೀಕಾರ ಮಾಡಿದ ವ್ಯಕ್ತಿ ಆ ಸ್ಥಳ ಬಿಟ್ಟು ಮತ್ತೊಂದು ಸ್ಥಳದಲ್ಲಿ ಸಮಾಧಿ ಹೊಂದುವ ಸಂದರ್ಭವೂ ಇತ್ತು. ಕುಮಾರಸೇನನೆಂಬವ ಮುಳುಗುಂದದಲ್ಲಿ ವ್ರತ ಸ್ವೀಕರಿಸಿ ಸೊಗಸುಗಾಣದೆ ಕೊಪ್ಪಳಕ್ಕೆ ಹೋಗಿ ಸಮಾಧಿಮರಣ ಪಡೆದುದು ಇತಿಹಾಸ ಪ್ರಸಿದ್ಧ ವಿಷಯ.

ಗಂಗದೊರೆ ಮಾರಸಿಂಹ 'ಮಣ್ಣಳಿಕೆ ತ್ರಿಣೇತ್ರ' ಎಂದು ಬಿರುದಾಂಕಿತನಾದವ. ತನ್ನ ಅಧಿಕಾರದ ಅವಧಿಯಲ್ಲಿ ಸಮರ್ಥ ದೊರೆಯಾಗಿ ಅನೇಕ ದಾನದತ್ತಿಗಳನ್ನು ಬಿಟ್ಟಿರುವನು. ಜೀವಮಾನದಲ್ಲಿ ಹಲವಾರು ಬಸದಿ ಮಾನಸ್ತಂಭಗಳನ್ನು ಮಾಡಿಸಿ 'ಧರ್ಮಗಳಂ ನಮಸ್ಯಂ' ನಡೆಯಿಸಿದವನು. ತನ್ನ ಬದುಕಿನ ಬಹುಮುಖ ಸಾಧನೆ ಪೂರೈಸಿದ ನೊಳಂಬಕುಲಾಂತಕ ಮಾರಸಿಂಹ ಸಮಾಧಿಮರಣ ಪಡೆಯಬಯಸಿದ. ಬಂಕಾಪುರದ ಅಜಿತಸೇನಾಚಾರ್ಯರು ಅವನ ಸಮಾದಿಮರಣದ ಮಾರ್ಘದರ್ಶಕ ಆಚಾರ್ಯರಾದರು. ಮಾರಸಿಂಹ 'ಬರಿಯಮೊನ್ದುವರ್ಷ ರಾಜ್ಯಮಂ ಪತ್ತುವಿಟ್ಟು ಬಂಕಾಪುರದೊಳಜಿತಸೇನಭಟ್ಟಾರಕರ ಶ್ರೀಪಾದಸನ್ನಿಧಿಯೊಳಾರಾಧನಾ ವಿಧಿಯಿಂ ಮೂರುದಿವಸ ನೋನ್ತು ಸಮಾಧಿಯಂ ಸಾಧಿಸಿದರ್' ಎಂದಿದೆ. ಶ್ರವಣಬೆಳಗೊಳ ಕೂಗೆ ಬ್ರಹ್ಮದೇವರ ಕಂಬದ ಮೇಲಿದ್ದ ಶಾಸನದ ಒಕ್ಕಣಿಕೆ ಇದು. ತಲಕಾಡಿನಂತಹ ಪ್ರಶಸ್ತ ಪ್ರದೇಶದ ರಾಜ್ಯಭಾರ ಕೈಕೊಂಡ ಮಾರಸಿಂಹ ಇಷ್ಟೂ ದೂರದ ಸ್ಥಳಕ್ಕೆ ಬಂದು ತನ್ನ ಗುರುಗಳ ಸಾನಿಧ್ಯದಲ್ಲಿ ಆರಾಧಾನಾವಿಧಿಯಿಂದ ಮುಡಿಪಬೇಕಾದರೆ ಸ್ಥಳಮಹಿಮೆ, ಆಚಾರ್ಯ ಸಾನಿಧ್ಯದ ಪ್ರಾಮುಖ್ಯತೆ ಗೋಚರಿಸದೆ ಇರದು. ಸಮಾಧಿಮರಣದ ಕ್ಷೇತ್ರ ಮಹಿಮೆಯಲ್ಲಿ ಬಂಕಾಪುರ ಪಡೆದ ಸ್ಥಾನವೂ ಗಮನಾರ್ಹವೆನಿಸಿದೆ.

ಈ ರೀತಿ ಸಲ್ಲೇಖನವಿಧಿ ಸ್ವೀಕರಿಸಿದ ಸಮಾಧಿಮರಣ ಹೊಂದಿದವರ ಸ್ಮರಣೆಗಾಗಿ ಸಮಾಧಿಮರಣದ ಸ್ಥಳದಲ್ಲಿಯೋ ಅಥವಾ ಯಾವುದೋ ಜೈನಧಾರ್ಮಿಕ ಪರಿಸರದ ಪ್ರದೇಶ ದಲ್ಲಿಯೋ ಸ್ಮಾರಕಗಳನ್ನು ನಿಲ್ಲಿಸುವ ಪರಿಪಾಠವಿತ್ತು. ಇಂಥ ಸ್ಮಾರಕಗಳು ಆಯಾ ವರ್ಗದ ಶ್ರೇಷ್ಠತೆಯನ್ನನುಸರಿಸಿ ನಿಷಿದಶಿಲೆಗಳು, ಮಂಟಪ, ಶಿಲಾ ಬಸದಿಗಳಾಗಬಹುದಿತ್ತು. ಬಂಕಾಪುರದಲ್ಲಿ ಸಮಾಧಿಮರಣ ಹೊಂದಿದ ಮಾರಸಿಂಹನ ಮರಣ ದಾಖಲೆ ದೊರಕುವುದು ಶ್ರವಣಬೆಳಗೊಳದ ಕೂಗೆ ಬ್ರಹ್ಮದೇವರ ಶಿಲಾ ಸ್ತಂಭದ ಶಾಸನ ಬರಹದಿಂದ. ಹೀಗಾಗಿ ಬಂಕಾಪುರ ಜೈನಧರ್ಮದ

ಪ್ರಭಾವಿ ಪ್ರದೇಶವೆನಿಸಿತ್ತು. ಇಂದು ಇಲ್ಲಿ ಸಿಗುತ್ತಿರುವ ಜೈನಧರ್ಮದ ಪ್ರಾಚೀನ ಅವಶೇಷಗಳು ಈ ವಿಷಯವನ್ನು ಸ್ಪಷ್ಟಪಡಿಸುತ್ತವೆ. ಇಂದು ಇಲ್ಲಿರುವ 'ಮಾಗಿಕೇರಿ' ಎಂಬ ಪ್ರದೇಶ ಅಂದು ಜೈನಧರ್ಮದ ನಿಬಿಡವರ್ತಿ ಪದೇಶ 'ಮಹಾವೀರಕೇರಿ' ಎಂದಾಗಿರಬಹುದಿದ್ದು, ಆ ಸ್ಥಳದಲ್ಲಿ ಸರಿಯಾಗಿ ಉತ್ಖನನ ಕಾರ್ಯ ಕೈಕೊಂಡರೆ ಜೈನಧರ್ಮದ ಹೆಚ್ಚಿನ ಐತಿಹ್ಯ ಕಂಡು ಬರಬಹುದು.

**ಶೈವಧರ್ಮ:** ವೇದ ಮೂಲದ ದ್ವೈತ ಅದ್ವೈತ ವಿಶಿಷ್ಟಾದ್ವೈತದಂತೆ, ಆಗಮ ಮೂಲದ ನಕುಲೀಶ ಪಾಶುಪತ, ಕಾಳಾಮುಖ, ಕಾಪಾಲಿಖ ಮತ್ತು ವೀರಶೈವವಾದಿಗಳೂ ಕರ್ನಾಟಕದ ಮತಗಳೆನಿಸಿದ್ದವು. ಸ್ಥಾವರಪೂಜೆ ನಕುಲೀಶ ಪಾಶುಪತದ ಆಚರಣೆಯಾಗಿತ್ತು. ಸಮಾಜ ಸಂಘಟನೆ, ದೇವಾಲಯ ನಿರ್ಮಾಣ, ವಿದ್ಯಾಭಿವೃದ್ಧಿ ಇವರ ಪ್ರಮುಖ ಚಟುವಟಿಕೆಗಳೆನಿಸಿದ್ಧವು. ಇವರಲ್ಲಿ ಮುಖದ ಮೇಲೆ ಕಪ್ಪುಗೆರೆಯೊಂದನ್ನು ಧರಿಸಿದವರು ಕಾಳಾಮುಖರೆನಿಸಿದ್ದರು. ಇವರೂ ಧಾರ್ಮಿಕ ಚಟುವಟಿಕೆಗಳ ಕೇಂದ್ರ ವ್ಯಕ್ತಿಗಳಾಗಿದ್ದರು. ಈ ಮೂರು ವರ್ಗದ ಆಚಾರ್ಯರ ನಿಷ್ಠಾಪೂರ್ಣ ಜೀವನ ಸಮಾಜದ ಬಗೆಗಿರುವ ಕಳಕಳಿ, ಪಾಂಡಿತ್ಯ, ಶೀಲ ಔದಾರ್ಯಗಳನ್ನು ಅನೇಕ ಶಾಸನಗಳು ಪ್ರಶಂಸಿಸಿವೆ. ಇವರ ಮಹತ್ವಪೂರ್ಣ ಸೇವೆಯಿಂದ ದೇವಾಸ್ಥಾನಗಳು ಸಾಂಸ್ಕೃತಿಕ ಕೇಂದ್ರಗಳೆನಿಸಿದ್ದವು. ಆಯಾ ಪ್ರದೇಶದ ಸಾಂಸ್ಕೃತಿಕಸ್ವಾಸ್ಯ ಕಾಯುವಲ್ಲಿ ದೇವಸ್ಥಾನಗಳು ತುಂಬ ಮಹತ್ವದ ಪಾತ್ರ ವಹಿಸಿದ್ದವು. ಹೀಗಾಗಿ ಬಂಕಾಪುರದಲ್ಲಿ ಜೈನಧರ್ಮದಷ್ಟೇ ಪ್ರಭಾವ ಶಾಲಿಯಾಗಿ ಶೈವಧರ್ಮ ಬೆಳೆಯಲು ಅವಕಾಶ ದೊರೆತಿದೆ.

ಬಂಕಾಪುರವನ್ನಾಳಿದ ರಾಜಮನೆತನಗಳ ಧರ್ಮನಿಷ್ಠೆ ವಿಭಿನ್ನವಾದುದು. ಇವರಲ್ಲಿ ಅಲ್ಪ ಪ್ರಮಾಣದಲ್ಲಿ ಮೊದಲು ಆಳಿದ ರಾಷ್ಟ್ರಕೂಟದೊರೆಗಳು ಜೈನ ಮತೀಯರಾಗಿದ್ದರೆ, ಕಲ್ಯಾಣಿ ಚಾಲುಕ್ಯರು ಶೈವಧರ್ಮ ಪಕ್ಷಪಾತಿಗಳಾಗಿದ್ದರು. ಇವರ ಧರ್ಮನಿಷ್ಠೆ ಇವರ ಆಳ್ವಿಕೆಯ ಪ್ರದೇಶದ ಮೇಲೆ ಪ್ರಭಾವಬೀರದೆ ಹೋಗಲಿಲ್ಲ. ಹೀಗಾಗಿ ರಾಷ್ಟ್ರಕೂಟ ಮತ್ತು ಹೊಯ್ಸಳ ಕಾಲದಲ್ಲಿ ಬಸದಿ ನಿರ್ಮಾಣಕ್ಕೆ ಅಗ್ರ ಸ್ಥಾನ ದೊರೆತರೆ, ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ದೇವಸ್ಥಾನ ನಿರ್ಮಾಣಕ್ಕೆ ಅಧಿಕ ಮನ್ನಣೆ ದೊರೆಯಿತು. ಇವರ ಅಧಿಕಾರದ ಅವಧಿಯಲ್ಲಿ ನಿರ್ಮಾಣಗೊಂಡ ಬಂಕಾಪುರದ ದೇವಾಲಯಗಳು ವೈವಿಧ್ಯಮಯವಾಗಿವೆ. ರಾಜಗುರುದೇವ ವರುಣಶಿವಪಂಡಿತ, ಚಂದ್ರಭೂಷಣಯತಿ ಮತ್ತು ವಿಮಳಶಕ್ತಿಯತಿಗಳು ಇಲ್ಲಿಯ ಧಾರ್ಮಿಕ ಬೆಳವಣಿಗೆಗೆ ಮೆರಗಿತ್ತವರು. ಕನ್ನಡ ನಾಡಿನ ಅನೇಕ ದೇವಸ್ಥಾನಗಳ ಜವಾಬ್ದಾರಿಯೂ ಇವರಿಗಿದ್ದಂತೆ ತೋರುತ್ತದೆ. ನೈಷ್ಠಿಕ ಬ್ರಹ್ಮಚಾರಿಗಳು, ಶ್ರೇಷ್ಠ ವಿದ್ವಾಂಸರು ಎನಿಸಿಕೊಂಡ ಇವರ ಮಾರ್ಗದರ್ಶನದಲ್ಲಿ ಬಂಕಾಪುರ ಧಾರ್ಮಿಕ ಕೇಂದ್ರವಾಗಿ, ವಿದ್ಯಾಕೇಂದ್ರವಾಗಿ, ತಪೋಕೇಂದ್ರವಾಗಿ, ದೀನಾನಾಥರಿಗೆ ಅನ್ನದಾನ ಕೇಂದ್ರವಾಗಿ ಮೆರೆದಿದೆ.

'ಎಲ್ಲಾ ಸಂಪತ್ತುಗಳ್ಗಂ ಪುಣ್ಯಮೆ ಮೊದಲಾದಪುಣ್ಯಕ್ಕೆಲ್ಲವೀಶ್ವರ ಪ್ರತಿಷ್ಠೆಯೆ ಮೊತ್ತಮೊದ ಲೆಂತೆನಲಾ ಪುಣ್ಯದ ಬಳಿವಿಡಿದೆಲ್ಲಾ ಪುಣ್ಯಂಗಳುಂ ದೊರೆಕೊಳ್ಗುಂ ಮತ್ತವೆಲ್ಲಾ ಪ್ರತಿಮೆಗಳಂ

ಪ್ರತಿಷ್ಠೆಮಾಡಿದೊಡವಾ ದೇವರ್ಕಳ ಹೆಸರೆಯಕ್ಕುವೀಶ್ವರ ಪ್ರತಿಷ್ಠೆಯಂ ಮಾಡಿದವನೀಶ್ವರ ನೆಯಕ್ಕುವೆಂಬುದನಾ ದೇವರ ಪೆಸರಾತನ ಪೆಸರಕ್ಕು" ಇದು ಪ್ರಾಚೀನ ಕನ್ನಡಿಗರು ನಂಬಿಕೊಂಡು ಬಂದ ರೀತಿ ಈ ನಂಬಿಕೆಯ ಬಳಿವಿಡಿದು ದೇಗುಲ ನಿರ್ಮಾಣಕಾರ್ಯ ಪ್ರಾರಂಭವಾಯಿತು. ವ್ಯಕ್ತಿಯ ಹೆಸರಿನಲ್ಲಿ ಲಿಂಗಸ್ಥಾಪನೆ, ದೇವಾಲಯ ರಚನೆ ಪ್ರಾರಂಭವಾದಂತೆ, ಇವು ಸಾರೋದ್ಧಾರ ವಾಗಿ ನಿಲ್ಲಲಿ ಎಂಬ ದೃಷ್ಟಿಯಿಂದ ದಾನದತ್ತಿಗಳು ವರ್ಧಿಸತೊಡಗಿತು. ಇದರಿಂದ ಧರ್ಮಕ್ಕೆ ಹೊಸ ಚೈತನ್ಯ ಬರಲು ಅನುಕೂಲವಾಯಿತು.

ಕ್ರಿ.ಶ. ೧೦ನೆಯ ಶತಮಾನದಲ್ಲಿ ರಾಷ್ಟ್ರಕೂಟ ದೊರೆಗಳ ಸಾಮಂತರಾಗಿ ರಾಜ್ಯವಾಳುತ್ತಿದ್ದ ಚಲ್ಲಕೇತನ ಮನೆತನದ ದೊರೆಗಳು ಜೈನಧರ್ಮಿಯರಾಗಿದ್ದರೂ ಅನ್ಯಧರ್ಮಗಳ ಬಗೆಗೆ ಉದಾರಮನೋಭಾವನೆಯುಳ್ಳವರಾಗಿದ್ದರು. ಈ ಕಾರಣದಿಂದ ಇಲ್ಲಿ ಜೈನ ಮತ್ತು ಶೈವಧರ್ಮಗಳು ಜೊತೆಜೊತೆಯಾಗಿಯೇ ವೃದ್ಧಿಗೊಳ್ಳತೊಡಗಿದವು. ಇದಕ್ಕೆ ಆಧಾರವೆಂಬಂತೆ, ಚಲ್ಲಕೇತನದೊರೆ ಬಂಕೇಯನ ಮಗ ಕಂದಟ್ಟೆ ನಿಡಗಿಂದಗೆಯ ಕುಪ್ಪಣದೇಗುಲದ ಮಹಾದೇವರಿಗೆ ದಾನ ನೀಡಿರುವನು. ಇಲ್ಲಿಯ ಪ್ರಮುಖ ದೊರೆಗಳಾದ ರಾಷ್ಟ್ರಕೂಟ ಇಂದ್ರ, ಚಾಲುಕ್ಯ ಒಂದನೆಯ ಸೋಮೇಶ್ವರ, ಆರನೆಯ ವಿಕ್ರಮಾದಿತ್ಯ, ಕದಂಬ ಅರಿಕೇಸರಿ ಕೀರ್ತಿವರ್ಮರಸರು ಯಾವುದೇ ಧರ್ಮದ ಆಚರಣೆ ಕೈಕೊಂಡಿರಲಿ, ಅವರ ಆಳ್ವಿಕೆಯಲ್ಲಿ ಬಂಕಾಪುರದಲ್ಲಿ ಶೈವಧರ್ಮಕ್ಕೆ ಉತ್ತಮ ಪ್ರೋತ್ಸಾಹ ನೀಡಿರುವರು. ಈ ಮಾಲಿಕೆಯಲ್ಲಿ ಶೈವಧರ್ಮ ಬೆಳಗಿದ ಆಚಾರ್ಯ ಪರಂಪರೆಯಲ್ಲಿ ಇಂದ್ರೇಶ್ವರದಾಚಾರ್ಯ ವುಣಶಿವಪಂಡಿತರು ಮೊದಲಿಗರು.

**ಇಂದ್ರೇಶ್ವರದಾಚಾರ್ಯ: ರಾಜಗುರುದೇವ ವರುಣಶಿವಪಂಡಿತರು:** ಗಂಗರು ಮತ್ತು ರಾಷ್ಟ್ರಕೂಟರ ಆಡಳಿತ ತರುವಾಯ ಜೈನಧರ್ಮ ಪ್ರಾಬಲ್ಯ ಕಡಿಮೆಯಾಗಿ ಶೈವಮಠಗಳು, ಅಗ್ರಹಾರಗಳು ಅಧಿಕ ಮಟ್ಟದಲ್ಲಿ ತಲೆಎತ್ತತೊಡಗಿದವು. ನಕುಲೀಶ, ಪಾಶುಪತ, ಕಾಳಾಮುಖ, ಕಾಪಾಲಿಕಗಳು ಕರ್ನಾಟಕದ ಮುಖ್ಯ ಮತಗಳೆನಿಸಿದ್ದವು. ಸ್ಥಾವರಪೂಜೆ ನಕುಲೀಶ ಪಾಶುಪತರ ಆಚರಣೆಯೆನಿಸಿತ್ತು. ಸುಸಂಬದ್ಧ ಸಮಾಜರಚನೆ, ದೇವಾಲಯದ ಸಾಂಸ್ಕೃತಿಕ ಬೆಳವಣಿಗೆ ವರ್ಚಸ್ಸು, ಅಧ್ಯಯನ ಸಮಾಜದ ಕೇಂದ್ರಶಕ್ತಿಯೆನಿಸಿದ್ದವು. ಹೀಗಾಗಿ ದೇವಸ್ಥಾನಗಳು ಸಾಂಸ್ಕೃತಿಕ ಕೇಂದ್ರಗಳಾಗಿ ಬೆಳೆದವು. ಶೈವಆಚಾರ್ಯರು ಮಠ ದೇವಸ್ಥಾನಗಳ ಆಚಾರ್ಯರಾಗಿ ತಮ್ಮ ಕಾರ್ಯಸಾಧನೆ, ಬಹುಮುಖ ಪ್ರತಿಭೆಯಿಂದ ನಾಡಿನ ಸಾಂಸ್ಕೃತಿಕ ಬದುಕನ್ನು ಶ್ರೀಮಂತಗೊಳಿಸಿದ್ದರು.

ಪ್ರಾಚೀನ ಬಂಕಾಪುರದಲ್ಲಿ ಇಂಥ ಪ್ರಮುಖ ಧಾರ್ಮಿಕ ಕೇಂದ್ರವಾಗಿ ಬೆಳಗಿದ ಸಂಸ್ಥೆ ಇಂದ್ರೇಶ್ವರ ದೇವಸ್ಥಾನ. ಇದರ ಉಗಮದ ಕಾಲ ತಿಳಿಯದೆ ಹೋದರು ಕ್ರಿ.ಶ. ೧೦೪೫ರ ಕೋಳೂರು ಶಾಸನದಲ್ಲಿ ಇದರ ಉಲ್ಲೇಖವಿದೆ. ರಾಜಗುರುದೇವರೆಂಬವರು ಇಂದ್ರೇಶ್ವರದ ಆಚಾರ್ಯರೆನಿಸಿದ್ದರು. ಶ್ರೀಮದ್ಬಂಕಾಪುರದಿಂದ್ರೇಶ್ವರ ದೇವರ್ಗ್ಗಾಳ್ವ ಪನ್ನೆರಡು ಬಾಡಮಂ'

ಇವರು ಸುಖಸಂಕಥಾವಿನೋದದಿಂದ ಆಳುತ್ತಿದ್ದರು. ಕೋಳುರಿನ(೧೦೪೫,೧೦೮೫-೮೬) ಶಾಸನಗಳು ಇವರನ್ನು 'ರಾಜಗುರು ಶ್ರೀ ವರುಣಪಂಡಿತದೇವ' ಎಂದು ಕರೆದಿದೆ. ಹೀಗಾಗಿ ಈ ರಾಜಗುರು, ವರುಣಶಿವಪಂಡಿತದೇವರೇ ಆಗಿರಬೇಕು. ಈತ ಚಾಲುಕ್ಯ ಭುವನೈಕ್ಯಮಲ್ಲನ ರಾಜಗುವಾಗಿದ್ದು, ಹೀಗೆ ರಾಜಪೂಜಿತರಾಗಿದ್ದ ಆಚಾರ್ಯರನ್ನು ರಾಜಗುರುದೇವ' ಎಂದು ಕರೆದಿರುವದುಂಟು.

'ಸ್ವಸ್ತಿ ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಪ್ರಾಣಾಯಮ ಪ್ರತ್ಯಾಹಾರಜಪಸಮಾಧಿ ಸಂಪನ್ನರ್ ಈಶ್ವರಪಾದ ಕಮಲಭ್ರಿಂಗ ಸಾಹಸೋತ್ತುಂಗಾ ಶ್ರೀತಜನಕಲ್ಪವ್ರಿಕ್ಷಶರಣಾಗಣಸುರಕ್ಷ ನುಡಿದಂತೆ ಮಾರ್ಪ ಕರೆಕೂರ್ಪಂ ಪ್ರತಿಪನ್ನಮೇರುವೇಕಾಂಗವೀರ ಆಸಂದುಂದೀರಂ ವೀರಾವತಾರಂ ವೀರಚೂಡಾಮಣಿ ಗೋತ್ರಚಿನ್ತಾಮಣಿ ರೊಡ್ಡಕೈವಾರಂ ಶೈವಪ್ರಾಕಾರಂ ಸಾರಪರಿಪರಿಣತ ನಸ್ಸಂಕ ವೈರಿವ್ರಿಂದಕ ಸಾರಸಂಧಾನ ಬಾಣಶಿಕ್ಷಾಗುರು ಕಲಿಯುಗ ದ್ರೋಣಾಚಾರ್ಯ ಸರ್ವಶಸ್ತ್ರವಿಶಾರದಂ ನಾರಚಪರಶುರಾಮ ಗಿರಿದುರ್ಗಭಂಜನಾಂಜನೇಯ ತ್ರೈಲೋಕ್ಯ ರಾಮಜನಂ ಕಟಕಮಾಭಿಸಂ ಕೊಂಕಣರಕ್ಷಾಲಂ ಕಡಂಬಾನ್ವರ್' ಸಮುದ್ದರಣ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತ್ ರಾಜಗುರುದೇವರ್ ಇದು ವರುಣಶಿವಪಂಡಿತರ ಗೌರವಪೂರ್ಣ ವ್ಯಕ್ತಿತ್ವದ ಚೌಕಟ್ಟು.

ರಾಜಗುರುದೇವರು ಜಪಸಮಾಧಿಸಂಪನ್ನರು ಸರ್ವಶಸ್ತ್ರಶಾಸ್ತ್ರ ವಿಶಾರದರು, ಸಿದ್ಧಾಂತ, ತರ್ಕ ವ್ಯಾಕರಣ ಕಾವ್ಯ ನಾಟಕ ನರ್ತನಾದಿಗಳಲ್ಲಿ ಪರಿಣತರೆನಿಸಿದ್ದರು. ಇದು ಇವರ ಶಾಸ್ತ್ರಾಧ್ಯಯನಕ್ಕೆ ಸೂಚನೆಯಾದರೆ, ಶಸ್ತ್ರಾಧ್ಯಯನಕ್ಕೂ ತಕ್ಕಂತೆ ಧನುರ್ವಿದ್ಯೆ ಅವರಿಗೆ ಕರಗತವಾಗಿತ್ತು. ಇವರು ತಮ್ಮ ಶಸ್ತ್ರಶಾಸ್ತ್ರ ಪರಿಣತಿಯಿಂದ ರಾಜಕುಲಗಳನ್ನು ಸಮುದ್ಧರಣಗೊಳಿಸಿದ ಆಪೂರ್ವ ವ್ಯಕ್ತಿತ್ವದ ಆಚಾರ್ಯ ರೆನಿಸಿದ್ದರು. ಅವರ ಉಜ್ವಲ ಪ್ರಖ್ಯಾತಿಯನ್ನು ಮನದುಂಬಿ ಹೊಗಳುವ ಕೋಳೂರು ಶಾಸನದ 'ಸಾಹಸೋತ್ತುಂಗ ವೀರಾವತಾರಂ ವೀರಚೂಡಾಮಣಿ ಬಾಣಶಿಕ್ಷಾಗುರು ಕಲಿಯುಗ ದ್ರೋಣಾಚಾರ್ಯ ಸರ್ವಶಸ್ತ್ರಶಾಸ್ತ್ರವಿಶಾರದಂ ನಾರಾಚಂ ಪರಶುರಾಮ ಗಿರಿದುರ್ಗಭಂಜನಾಂಜ ನೇಯ' ಎಂಬ ಬಿರುದು ರಾಜಗುರುದೇವರ ಸಮರ್ಥವಂತಿಕೆಯನ್ನು ಸೂಚಿಸಿವೆ. ಕೊಂಕಣ ರಕ್ಷಾಳಂ ಕದಂಬಾನ್ವಯ ಸಮುದ್ದರಣ' ರೆಂಬ ಇವರ ವಿಶೇಷಣ, ಇವರು ಬನವಾಸಿ ಕದಂಬ ವಂಶವನ್ನು ಉದ್ದರಿಸಿದ್ದರೆಂಬುದು ಸ್ಪಷ್ಟವಾಗುತ್ತದೆ. ತಮ್ಮ ಜ್ಞಾನಬಲ, ತಪೋಬಲ ಗಳಿಂದ ರಾಜವಂಶವನ್ನು ಉದ್ದರಿಸುವಲ್ಲಿ ಇಂಥ ಆಚಾರ್ಯರು ಮಹತ್ವದ ಪಾತ್ರ ವಹಿಸುತ್ತಿದ್ದರು. ಕೋಳೂರು ಇನ್ನೊಂದು ಶಾಸನ(೧೦೮೫) ಇವರನ್ನು 'ಬುಧಜನ ಪ್ರಸನ್ನ... ಧರ್ಮಲತಾ... ವಾಕಮಲಮಾರ್ತಾಂಡ' ಎಂದು ಕರೆದಿದೆ.

ತ್ರೈಲೋಕ್ಯಮಲ್ಲ (ಸೋಮೇಶ್ವರ೧), ಭುವನೈಕ್ಯಮಲ್ಲ (ಸೋಮೇಶ್ವರ೨) ತ್ರಿಭುವನಮಲ್ಲ (ವಿಕ್ರಮಾದಿತ್ಯ೬), ಈ ಮೂವರು ಚಾಲುಕ್ಯ ದೊರೆಗಳ ಕಾಲದಲ್ಲಿ ಇಂದ್ರೇಶ್ವರ ಆಡಳಿತ ಕೈಕೊಂಡ ಆಚಾರ್ಯ ವರುಣಶಿವಪಂಡಿತ. ಇಂದ್ರೇಶ್ವರ ದೇವಸ್ಥಾನಕ್ಕೆ ಬಿಟ್ಟ ೧೨ ಹಳ್ಳಿಗಳ ಆಡಳಿತ ಜವಾಬ್ದಾರಿ ಇವರಿಗಿತ್ತು. ಇವುಗಳಲ್ಲಿ ಕೋಳೂರು ಒಂದಾಗಿತ್ತು.

ಕೋಳೂರಿನ (೧೦೪೫) ಶಾಸನ ಇವರನ್ನು 'ಶೈವಪ್ರಾಕಾರ'ರೆಂದು ಕರೆದರೆ ಕ್ರಿಶ ೧೧೭೪ರ ಶಾಸನ 'ಗೊರವ'ರೆಂದು ಕರೆದಿವೆ. ಇದರಿಂದ ಇವರು ಲಾಕುಳ ಶೈವಯತಿಗಳಾಗಿದ್ದರೆಂದು ಹೇಳಬೇಕು.

ಇಂದ್ರೇಶ್ವರದೇವರಿಗೆ ಬಿಟ್ಟ ೧೨ ಹಳ್ಳಿಗಳಲ್ಲಿ ಒಂದಾದ ಕೋಳೂರು, ಬಾಸವೂರು ನೂರನಾಲ್ವತ್ತರ ಮನ್ನೆಯದ ಗ್ರಾಮ. ಕಲಿಯಮರಸನೆಂಬ ಚಾಲುಕ್ಯ ಮಾಂಡಲಿಕ ಈ ಮನ್ನೆಯದರಸನಾಗಿದ್ದ. ಈತ ತನ್ನನ್ನು 'ಪದ್ಮಾವತಿ ವರಲಬ್ದ ಪ್ರಸಾದ ಜಿನಪಾದ ಪಂಕಜ ರಜಃಪುಂಜ ಪಿಂಜರಿತಗಾತ್ರ' ಎಂದು ಕರೆದುಕೊಂಡಿರುವನು. ಈತ ಕೋಳೂರಿನಲ್ಲಿ ತನ್ನಹೆಸರಿನ ಕಲಿದೇವೇಶ್ವರದೇಗುಲ ಕಟ್ಟಿಸಿ ಆ ದೇವರ ನಂದಾ ದೀವಿಗೆಗೆ ಮೂವತ್ತು ಪರಿಸೂತ್ರದ ಮನೆಗಳನ್ನು ದಾನವಾಗಿ ಕೊಟ್ಟಿದ್ದ. ಜೈನ ಮತೀಯನಾದ ಕಲಿಯಮರಸ ದೇವಸ್ಥಾನಕ್ಕೆ ನೀಡಿದ ದಾನ ಅವನ ಶಿವಪರಮತವನ್ನು ಸೂಚಿಸುತ್ತದೆ. ಈ ಸಂದರ್ಭದಲ್ಲಿ ರಾಜಗುರು ವರುಣಶಿವಪಂಡಿತರೂ ಕೋಳೂರು ಕಲಿದೇವಶ್ವರ ದೇಗುಲದ ಆಚಾರ್ಯ ವಾಮರಾಸಿದೇವರ ಶಿಷ್ಯ ಮಲ್ಲಿಕಾರ್ಜುನಭಟಾರರ ಕಾಲು ತೊಳೆದು ಹತ್ತಿಮತ್ತೂರ ಭೂಮಿಯನ್ನು ದತ್ತಿ ಬಿಟ್ಟುಕೊಟ್ಟಿದ್ದರು.

ಈ ಕಲಿಯಮರಸನ ಮಗ ಹೆಮ್ಮಾಡಿಯರಸ. ತಂದೆಯ ತರುವಾಯ ಅದೇ ಮನ್ನೆಯದ ಅಧಿಕಾರಿವನಿಗಿತ್ತು. ಈತನೂ ತಂದೆಯಂತೆ ಜಿನಧರ್ಮದವನಾಗಿದ್ದು 'ಪದ್ಮಾವತಿ ಲಬ್ದವರ ಪ್ರಸಾದ'ನೆನಿಸಿಕೊಂಡಿರುವ. ಆದರೆ ಕಾಲಾಂತರದಲ್ಲಿ ಈತ 'ಮಾಹೇಶ್ವರ ದೀಕ್ಷೆ' ಸ್ವೀಕರಿಸಿ ತನ್ನ ಗುರು ತ್ರಿಭುವನಸಿಂಗಿಪಂಡಿತರ ಪಾದ ತೊಳೆದು ಅಲ್ಲಿಯ ತ್ರಿಭುವನೇಶ್ವರಕ್ಕೆ ದತ್ತಿ ಬಿಟ್ಟಿರುವದು ಅವನ ಶಿವಪರ ನಿಲುವನ್ನು ದೃಢಪಡಿಸಿದೆ.

**ಸೋಮರಾವುಳ ಪಂಡಿತರು:** ಕದಂಬ ಮಯೂರವರ್ಮನ ಕಾಲದಲ್ಲಿ ಇಂದ್ರೇಶ್ವರದ ಜವಾಬ್ದಾರಿಯನ್ನು ನಿರ್ವಹಿಸಿದವರು ಸೋಮರಾವುಳ ಪಂಡಿತ ಮತ್ತು ಶಿವಶಕ್ತಿಪಂಡಿತರು. ರಾಜಗುರು ವರುಣಶಿವಪಂಡಿತರಂತೆ ಇವರೂ ಸಮರ್ಥ ಆಚಾರ್ಯರು. ಸೋಮರಾವುಳನನ್ನು ಹೊಗಳುವ ಒಂದು ಶಾಸನ 'ಶ್ರೀ ರಾಜಧಾನಿಪಟ್ಟಣಂ ಬಂಕಾಪುರದ ಶ್ರೀ ಮದಿಂದೇಶ್ವರದೇವರಾ ಚಾರ್ಯರು ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷ್ಠಾನ, ಜಪಸಮಾಧಿ ಶೀಳಗುಣಸಂಪನ್ನರುಂ ಸಕಳಬುಧಜನ ಪ್ರಸಂನರುಂ ಧರ್ಮಲತಾಧಾರದಂಡರುಂ ನಿರ್ಮಳವಾಚಾ ಪ್ರಚಂಡರು ಸತ್ಯವಾರ್ಕ್ಕಮಳಿನೀ ಮಾರ್ತ್ತಂಡರುಂ ಸಕಳ ಶಾಸ್ತ್ರಾಂಗ ವಿಚಾರ ಚತುರರುಂ ಸಾಹಿತ್ಯ ವಿದ್ಯಾಧರರುಂ ಸಂಸಾರನಿರತರುಂ ಅತಿತಾನಾಗತವರ್ತ್ತಮಾನ ಪ್ರತಿಬೋಧಕರುಂ ಕವಿಕೋಟಿ ಚಾತುರಂಗ ದ್ವಂದ್ವಯುದ್ಧ ಪ್ರವೀಣರುಂ ಶ್ರೀ ಮದೇಕ್ಕೋಟಿಯ ಕುಮಾರಂ ಭೂಬಲಿಚಕ್ರವರ್ತಿ ಸೋಮರಾವುಳಪಂಡಿತದೇವರು' ಎಂದು ಸ್ತುತಿಸುವಲ್ಲಿ ಅವರ ಭವ್ಯ ನಿಲುವು ವ್ಯಕ್ತವಾಗುತ್ತದೆ. ಇತ್ತೀಚೆಗೆ ಇಲ್ಲಿಯ ಸಿದ್ದೇಶ್ವರ ದೇವಸ್ಥಾನವೆಂದು ಪ್ರಸಿದ್ದ ಪಡೆದ ಅಂದಿನ ಹೋಯ್ಸಳೇಶ್ವರ

ದೇವಸ್ಥಾನದಲ್ಲಿಯ ಒಂದು ಶಾಸನದಲ್ಲಿಯೂ ಸೋಮರಾವುಳನನ್ನು ಕುರಿತು ವರ್ಣನೆ ಇದೆ. ಮೇಲಿನ ಶಾಸನ ಸೋಮರಾವುಳ ಪಂಡಿತ ಮತ್ತು ಶಿವಶಕ್ತಿಮುನಿಪರನ್ನು ತಂದೆ ಮಕ್ಕಳೆಂದು ಕರೆದಿದೆ. ವಿರಕ್ತ ಪರಂಪರೆಯಲ್ಲಿ ಗುರುಪುತ್ರರನ್ನು ಮಕ್ಕಳು ಎಂದು ಕರೆದರೂ ಇವರು ರಕ್ತ ಸಂಬಂಧಿಗಳಾಗಿರದೆ ಶಿಷ್ಯ ಸಂಬಂಧಿಗಳಾಗಿದ್ದರೆನ್ನಬೇಕು.

**ಶಿವಶಕ್ತಿಪಂಡಿತರು:** ಸೋಮರಾವುಳನಂತೆ ಆಧ್ಯಾತ್ಮದಲ್ಲಿ ಮುನ್ನಡೆದ ಇನ್ನೊಬ್ಬ ಆಚಾರ್ಯ ಶಿವಶಕ್ತಿಪಂಡಿತ. ಇವರನ್ನು ಪರಿಚಯಸಿದ ಬಂಕಾಪುರ ಶಾಸನ

ಇನ್ದ್ರ[ ] ಸುರಧೇನುವೆನೆ ಕೈ
ವನ್ದ ಸುರೋರ್ವ್ವಿಜನಿಕರಮೆನೆ ಮಿಗೆ ಹೂರಂ
ಬನ್ದೆಸೆವೆ ಸಿದ್ದರಸಮೆನೆ
ವನ್ದಿಗೆ ಶಿವಶಕ್ತಿದೇವಮುನಿಪಂ ಕುಡುವಂ//

ಎಂದು ವರ್ಣಿಸಿದೆ. ಶಿವಶಕ್ತಿಮುನಿಪ ಕೈಕೊಂಡ ಸಾಧನೆಗೆ, ರೂಪಿಸಿಕೊಂಡ ವ್ಯಕ್ತಿತ್ವ ನಿರೂಪಣೆಗೆ ಇದೊಂದು ಪದ್ಯ ಸಾಕು.

**ಸೂಕ್ಷ್ಮಶಿವದೇವರು:** ಬಂಕಾಪುರದ (೧೨೫೮)ರ ಅಪ್ರಕಟಿತ ಶಾಸನ ಸೋಮರಾವುಳದೇವರ ಕುಮಾರ ಸೂಕ್ಷ್ಮಶವದೇವರನ್ನು ಪರಿಚಯಿಸಿದೆ. 'ನಿಘಂಟಣಕಾರ ಕಾವ್ಯ ನಾಟಕ ಭರತ ವಾತ್ಸಾಯನ ಶಬ್ದಸ್ಮೃತಿ ಮೊದಲಾಗಿ ಅನೇಕ ವಿದ್ಯಾಪಾರಾವಾರರುಂ ವಿಭೂಳಿತ ಜಟಾಜೂಟ ಲಾಕುಳೋದ್ಧರಣ ಪರಿತಾಂತ್ತಃಕರಣರು ಧರ್ಮಲತಾ ಧಾರದಂಡರುಂ ನಿರ್ಮಳವಾಚಾಪ್ರಚಂಡರುಂ ಸತ್ಯವಾಕ್ಕಮಳಿನೀ ಮಾರ್ತ್ತಂಡರುಂಸಕಳ ಶಾಸ್ತ್ರಾಂಗ ವಾಚಾರ ಚದುರರುಂ ಸಾಹಿತ್ಯ ವಿದ್ಯಾಧರರುಂ ಚಾರಿತ್ರನಿರತರುಂ ಶ್ರೋತ್ರಿಯಾನ್ವಯ ಪವಿತ್ರಾಂಬೋಧಿವರ್ದ್ಧನ ಸುಧಾಕರರುಂ ಶ್ರೀ ಇಂದ್ರೇಶ್ವರ ದೇವಾವಲೋಕನೋದ್ವವೋದ್ಬೂತ ರೋಮಾಂಚ ಕಂಚುಗಿತಗಾತ್ರರುಮಪ್ಪ ಶ್ರೀ ಸೋಮರಾವುಳದೇವರ ಕುಮಾರ ಶ್ರೀ ಸೂಕ್ಷ್ಮಶಿದೇವರ ಬ್ರಹ್ಮಶಿವದೇವ' ಎಂದು ವರ್ಣಿಸಿದೆ. ಈ ಸೋಮರಾವುಳದೇವರ ಕುಮಾರ ಸೂಕ್ಷ್ಮಶಿವದೇವ ಬ್ರಹ್ಮಶಿವದೇವರನ್ನು 'ಶ್ರೀ ಇಂದ್ರೇಶ್ವರ ದೇವಾವಲೋಕನೋದ್ವವೋದ್ಭೂತ ರೋಮಾಂಚ ಕಂಚು ಗಿತಗಾತ್ರ' ಎಂದು ಕರೆದುದು ಗಮನಿಸಬೇಕಾದ ಸಂಗತಿ.

ಸೋಮರಾವುಳಪಂಡಿತ ಮತ್ತು ಶಿವಶಕ್ತಿಪಂಡಿತರು 'ಧರ್ಮಲತಾಧಾರ ದಂಡರು' ಎನಿಸಿ ಕೊಂಡಿರುವರು. ಶ್ರೀ ಮದೆಕ್ಕೋಟಿಯ ಕುಮಾರರ ಭೂಬರಿ ಚಕ್ರವರ್ತಿ' ಎಂದು ಸೋಮರಾವುಳ ನನ್ನು ಕರೆದಿದ್ದರೆ 'ಲಾಕುಳೋದ್ಧರಣ ಪರಿತಾಂತ್ತಃಕರಣ' ಎಂದು ಸೂಕ್ಷ್ಮದೇವನನ್ನು ಕರೆದಿರುವರು. ಇಲ್ಲಿಯ ಶಿಷ್ಯ ಪ್ರಶಿಷ್ಯ ಪರಂಪರೆಯನ್ನು ಗಮನಿಸಿದರೆ ಇಂದ್ರೇಶ್ವರದೇವರ ಈ ಆಚಾರ್ಯವರ್ಗ ಲಾಕುಳಶೈವ ಸಂಪ್ರದಾಯಕ್ಕೆ ಸಂಬಂಧಿಸಿದುದು ಅಲ್ಲದೆ ವರುಣಶಿವಪಂಡಿತರಿಂದ ಬೆಂಬಳಿವಿಡಿದು ಬೆಳೆದು ಬಂದ ಶಿಷ್ಯಸಂತತಿ ಎಂಬುದನ್ನು ಗಮನಿಸಬೇಕು.

ಧಾರ್ಮಿಕ ಮೇಲ್ವಿಚಾರಣೆಯ ಸೂತ್ರಧಾರಿಕೆ ಹಿಡಿದ ಈ ಇಂದ್ರೇಶ್ವರ ದಾಚಾರ್ಯರು ಸಂದರ್ಭ ಬಂದಾಗ ರಾಜದಂಡ ಹಿಡಿಯಲೂ ಹಿಂಜರಿದಿಲ್ಲ. ರಾಜಗುರು ದೇವರು 'ಕೊಂಕಣ ರಕ್ಷಾಲ ಕದಂಬಾನ್ವಯ ಸಮುದ್ಧರಣ'ರೆನಿಸಿದ್ದರು, ಸೋಮರಾವುಳಪಂಡಿತರು 'ಸಕಳ ಶಾಸ್ತ್ರಾಂಗ ವಿಚಾರ ಚತುರ' ರಾಗಿ ಕವಿ ಕೋಟಿ ಚಾತುರಂಗ ದ್ವಂದ್ವಯುದ್ಧ ಪ್ರವೀಣರಾಗಿ ಕಾಣಿಸಿಕೊಂಡುದು ಅವರ ಹೋರಾಟ ಪರಜೀವನಕ್ಕೆ ಪೂರಕವಾಗಿದೆ.

ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಇಂದ್ರೇಶ್ವರ ದೇವಾಲಯ ಒಂದು ಮಹತ್ವ ಪೂರ್ಣ ಸಾಂಸ್ಕೃತಿಕ ಕೇಂದ್ರವೆನಿಸಿಕೊಂಡಿತು. ರಾಜಗುರುದೇವ ವರುಣಶಿವಪಂಡಿತರ ಸಮರ್ಥ ಮಾರ್ಗದರ್ಶನ ಕೋಳೂರು ಮುಂತಾದ ೧೨ ಹಳ್ಳಿಗಳ ದತ್ತಿ, ವ್ಯವಸ್ಥಿತ ಆಡಳಿತದಿಂದ ಹತ್ತು ಹನ್ನೊಂದನೆಯಶತಮಾನದಲ್ಲಿ ಇಂದ್ರೇಶ್ವರ ಪ್ರಮುಖ ಶೈವಕೇಂದ್ರವಾಗಿ ಬೆಳೆದಿದೆ.

ಕಲ್ಯಾಣಿ ಚಾಲುಕ್ಯರಂತೆ ಅವರ ಸಾಮಂತರಾದ ಕದಂಬರ ಕಾಲದಲ್ಲಿಯೂ ಈ ದೇವಸ್ಥಾನಕ್ಕೆ ಹೆಚ್ಚಿನ ಗೌರವ ಸಂದಿದೆ. ರಾಜಗುರುದೇವರು ಕ್ಷಾತ್ರಕ್ಕೆ ಅಧಿಕ ಮಹತ್ವ ನೀಡಿದರೆ, ಸೋಮರಾವುಳ, ಶಿವಶಕ್ತಿದೇವರು ವಿದ್ಯ ಮತ್ತು ಆಡಳಿತ ನೀತಿಗೆ ಹೆಚ್ಚಿನ ಮಹತ್ವ ನೀಡಿರುವರು. ಅದರಲ್ಲೂ ಶಿವಶಕ್ತಿಪಂಡಿತದೇವರ ಜ್ಞಾನಮಟ್ಟ ವಿಶಾಲವಾಗಿದ್ದು. ನಿಘಂಟು ಭರತ ವಾತ್ಸಾಯನ ಶಬ್ದಸ್ಮೃತಿಯಂತಹ ವಿಷಯಗಳನ್ನು ಅಳವಡಿಸಿಕೊಂಡಿತ್ತು.

ಇಂದ್ರೇಶ್ವರದ ಆಚಾರ್ಯವರ್ಗ ಸುಮಾರು ೩೦೦ ವರ್ಷ ನಾಡಿನ ಇತಿಹಾಸದಲ್ಲಿ ಮಹತ್ವದ ಪಾತ್ರ ವಹಿಸಿರುವರು. ಕಾಲದಿಂದ ಕಾಲಕ್ಕೆ ಧಾರ್ಮಿಕ ಸೂತ್ರಧಾರರಾಗಿ ರಾಜ್ಯನೀತಿ ವಿಶಾರದರಾಗಿ, ಇವರ ಸೂಕ್ತ ಮಾರ್ಗದರ್ಶನ ರಾಜ್ಯಗಳ ಅಳಿವು ಉಳಿವುಗಳನ್ನು ಅವಲಂಬಿಸಿತ್ತು.

**ನಗರೇಶ್ವರದಾಚಾರ್ಯರು: ಚಂದ್ರಭೂಷಣದೇವರು:** ಬಂಕಾಪುರದ ನಗರೇಶ್ವರ ದೇವಸ್ಥಾನ ಇಲ್ಲಿಯ ಇನ್ನೊಂದು ಮಹತ್ವಪೂರ್ಣ ಸಾಂಸ್ಕೃತಿಕ ಕೇಂದ್ರ. ಕ್ರಿ.ಶ ೧೦೫೩ರ ಸುಮಾರಿನ ಶಾಸನ ಈ ದೇಗುಲದ ಪ್ರಾಚೀನ ಉಲ್ಲೇಖ. ಚಂದ್ರಭೂಷಣದೇವರು ಈ ನಗರೇಶ್ವರ ಆಚಾರ್ಯ ರೆನಿಸಿದ್ದರು. ತಮ್ಮ ನಿಷ್ಠಾಪೂರ್ಣ ತಪಸ್ಸು ಸಾಧನೆಯಿಂದ ಚಂದ್ರಭೂಷಣಯತಿಗಳು ನಗರೇಶ್ವರಕ್ಕೆ ಗೌರವ ಸ್ಥಾನ ತಂದುಕೊಟ್ಟಿದ್ದರು. ಇವರನ್ನು ಕುರಿತು ಚಾಲುಕ್ಯ ಭೂಲೋಕಮಲ್ಲನ ಶಾಸನವೊಂದು.

ಒದವಿದ ಮೋಹಪಾಶಮನದಂ ಪರಿದಿಕ್ಕಿ ಕಳತ್ರಮೆಂಬ ಕಂ
ಭದ ತೊಡರಂ ಬಿದಿರ್ಚಿ ವಿಶಯಂಗಳನೆಯ್ದೆಂ ಕಿವಿರ್ಚಿರಾಗಮಂ
ಬುದಧಿಯನೀಂಟಿ ಬನ್ದು ಶಿವಯೋಗಸುಧಾಂಬುನದೀ ಪ್ರವಾಹದೊಳು
ಮುದದವಗಾಂಹಮಿರ್ದುದಹ ಚಂದ್ರವಿಭೂಶಣ ಗನನ್ಧಸಿಂಧುರ//

ಎಂದು ವರ್ಣಿಸಿದೆ. ಜೀವಕ್ಕಂಟಿಕೊಂಡು ಬಂದ ಮೋಹವೆಂಬ ಪಾಶವನ್ನು ಹರಿದೊಗೆದು 'ಕಳತ್ರ' ವೆಂಬ ಕಂಬದ ಬಂಧನದ ತೊಡರನ್ನು ಬಿಡಿಸಿ ವಿಷಯ ಸುಖಗಳನ್ನು ಕೈಬಿಟ್ಟು

ರಾಗವೆಂಬ ಸಮುದ್ರವನ್ನೇ ಕುಡಿದು ಸದಾ ಶಿವಯೋಗಸುಧೆಯೆಂಬ ಸಮುದ್ರದಲ್ಲಿ ಪ್ರವಹಿಸಬಲ್ಲ ಗಂಧಸಿಂಧುರ' ಎಂಬ ಕಾವ್ಯವ್ಯಾಖ್ಯ ಅವರ ಉನ್ನತ ವ್ಯಕ್ತಿತ್ವವನ್ನು ಕಿರಿದರದಲ್ಲಿಯೆ ಪರಿಚಯಿಸಿಕೊಟ್ಟಿದೆ. ಇವರನ್ನು 'ಯಮ ನಿಯಮ ಸ್ವಾಧ್ಯಾಯ ಧಾನ ಧಾರಣ ಮೋನಾನುಷ್ಠಾನ ಜಪಸಮಾಧಿ ಶೀಲಗುಣ ಸಂಪನ್ನರು ಸಕಳಬುಧಜನ ಪ್ರಸಂನರು ಧರ್ಮಲತಾಧಾರದಂಡರುಮಪ್ಪ ಶ್ರೀ ಮದುನಕಕೇಶ್ವರ ದೇವರಾಚಾರ್ಯ್ಯರಂ' ಎಂದು ಬಂಕಾಪುರ ಶಾಸನ ಪರಿಚಯಿಸಿಕೊಟ್ಟಿದೆ. ಇದು ಅವರ ತಪಸ್ಸು, ಶ್ರದ್ಧೆ, ನಿಷ್ಠೆ, ಆಳವಾದ ಅಧ್ಯಯನ ಶೀಲಯುಕ್ತ ಬದುಕು.

ಚಂದರಭೂಷಣರ ಅಧಿಕಾರದ ಆವಧಿಯಲ್ಲಿ ನಗರೇಶ್ವರ ದೇವಸ್ಥಾನ ಧಾರ್ಮಿಕ ತಾಣವೆನಿಸಿದ್ದಂತೆ ತಪೋಧನರ ವಾಸಸ್ಥಾನವೆನಿಸಿತ್ತು. ಧಾರ್ಮಿಕ ಚಿಂತನೆ ಚಂದ್ರಭೂಷಣರ ಮಾರ್ಗದರ್ಶನದಲ್ಲಿ ವ್ಯವಸ್ಥಿತವಾಗಿ ನಡೆಯುತ್ತಿತ್ತು. ಇಲ್ಲಿಯ ತಪೋಧನರುಗಳು ಇನ್ನುಳಿದ ಆಡಳಿತವರ್ಗದ ವ್ಯಕ್ತಿಗಳಿಗೆ ಆಳುವ ಅರಸರು ಮಂತ್ರಿ ವರ್ಗದವರು, ಅಧಿಕಾರಿಗಳು ಅನ್ನ ಅರಿವೆ ಆಶ್ರಯ ಆಚ್ಛಾದನದ ವ್ಯವಸ್ಥೆಮಾಡಿ ಕೊಟ್ಟಿರುವರು. ಕ್ರಿಶ ೧೦೯೩,೧೧೨೨,೧೧೩೭,೧೧೩೭ರ ನಾಲ್ಕು ಶಾಸನಗಳು ಇಲ್ಲಿಯ ತಪೋಧನರುಗಳಿಗೆ ನೀಡಿದ ದಾನದತ್ತಿಗಳನ್ನು ವಿವರಿಸಿವೆ.

ನಗರೇಶ್ವರದ ಸರ್ವೋತೋಮುಖ ಅಭಿವೃದ್ಧಿಗೆ ಬಂಕಾಪುರದ, ಸುತ್ತಮುತ್ತಲಿನ ಪ್ರದೇಶದ ಪ್ರಜಾವರ್ಗ, ಪ್ರಭುವರ್ಗ ಪ್ರಯತ್ನಿಸಿರುವರು. ದಂಡನಾಯಕ ಡಾಕರಸನೆಂಬವ ನಗರೇಶ್ವರದೇವರ ಪುರವರ್ಗಕ್ಕೆ ದೇವರ ಸಮೀಪದ ಗ್ರಾಮ ಬಾಡದ ಸಾದಬಣ್ಣಿಗೆ ಕಾರುಕದೆರೆಯನ್ನು ಹೆಗ್ಗಡೆ ಮಹಾದೇವಣನ ಮೂಲಕ ಸಂಗ್ರಹಿಸಿ ಚಂದ್ರಭೂಷಣಂಗೆ ಸಮರ್ಪಿಸಿರುವನು.

ಕ್ರಿಶ ೧೧೨೨ರಲ್ಲಿ ಚಾಲುಕ್ಯ ತೈಲದೇವನ ಆಳ್ವಿಕೆಯಲ್ಲಿ ದೇವಸ್ಥಾನಕ್ಕೆ ನೀಡಿದ ಸಾರ್ವಜನಿಕ ದಾನವೊಂದರ ವಿವರಣೆ ಇದೆ. ನಗರೇಶ್ವರದೇವರಿಗೆ ಬಂಕಾಪುರದ ಮಾದಿಗೊಂಡ, ಹೊಲ್ಲಿಗೌಂಡ, ಸೇನಬೋವ ಭಾಸ್ಕರಯ್ಯ, ಶಿವರಾಶಿ ಪಂಡಿತರು, ಧರ್ಮದ ಬಸವಣ್ಣ, ಆಲವಳ್ಳಿ ಗೇತ, ಕೋವೂರ ಕಗ್ಗಣ, ಕೊರದಿಹಳ್ಳ ಕಡಲೆ ಬಾಕಣ್ಣ ಮುಂತಾದ ಪುರಪ್ರಮುಖರು 'ಧರ್ಮೋತ್ಸಾಹ ಚಿತ್ತ' ರಾಗಿ ಸೆಂಬೂರ ತೆಂಕಣ ಬಿಲಗಕೆರೆಯ ಕೆಳಗೆ ೬ಂಕಮ್ಮ ಗದ್ದೆ ಅದರ ಬಳಿಯ ಮನೆಯೊಂದನ್ನು ಬಿಟ್ಟುಕೊಟ್ಟಿರುವರು.

ಬಂಕಾಪುರದ(೧೧೩೭)ರ ಶಾಸನದಲ್ಲಿ ನಗರೇಶ್ವರ ದೇವರ ಪೂಜೆ ತಪೋಧನರ ಅನ್ನದಾನಕ್ಕೆ ಮಡಿಲೆಯ ಬೆಣ್ಣೆಯ ಹಿರಿಯಕೆರೆಯ ಕೆಳಗೆ ಬಸವಗೌಂಡನೆಂಬವ ಅರೆವತ್ತಲು ಗದ್ದೆ ಬಿಟ್ಟಿದ್ದರೆ, ಬೆಳ್ಳಿಯರ ಸಂಕಣ, ಅಂಡುರ ಕಾಳಿಯಣ, ಬೆಳಗಲಿ ಗೇತಣ, ಸಿಂಗಜ್ಜ, ಮತ್ಸಜ್ಜ ಮೋರಿಯ ಬೊಪ್ಪಣ, ಮಾಳಿಸೆಟ್ಟಿ ಅಲ್ಲಿಯ ಸೇನಬೋವ ನಾಣಿಯಣ್ಣ, ಬೈಸಜ್ಜ ಮೊದಲಾದವರು ಚಂದ್ರಭೂಷಣರ ಪಾದತೊಳೆದು ಮನೆಯೊಂದನ್ನು ಬಿಟ್ಟುಕೊಟ್ಟಿರುವರು. ಬಂಕಾಪುರದ ಬಮ್ಮಗಾವುಂಡ ಮುಗುಳಿಕಟ್ಟದಕೆರೆಯ ತಟದಲ್ಲಿ ನೈವೇದ್ಯಕ್ಕಾಗಿ ಅರೆವತ್ತಲು ಗದ್ದೆ ಬಿಟ್ಟಿರುವನು.

ಬಮ್ಮಗಾವುಂಡ ದತ್ತಿ ಬಿಟ್ಟ ಈ ಸ್ಥಳ ಕಿರಿಯ ಬಂಕಾಪುರದ ಬಮ್ಮಗಾವುಂಡ ನಗರೇಶ್ವರದೇವರಿಗೆ ದಾನವನ್ನರ್ಪಿಸಿದ ಪ್ರದೇಶವೇ ಅಂದು ಹಿರಿಯ ಬಂಕಾಪುರವಾಗಿರಬೇಕು. ಹಿರಿಯ, ಕಿರಿಯ ಬಂಕಾಪುರವೆಂಬ ಈ ವಿಭಾಗ ಕ್ರಿಶ ೧೨ನೆಯ ಶತಮಾನದಷ್ಟು ಪ್ರಾಚೀನ ಎಂಬುದು ಗಮನಿಸಬೇಕಾದುದು

**ವಿಮಳಶಕ್ತಿಯತಿಗಳು:** ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಗರೇಶ್ವರ ದೇವಸ್ಥಾನದ ಆಚಾರ್ಯರ ಮಾಲಿಕೆಯಲ್ಲಿ ಚಂದ್ರಭೂಷಣ ಪಂಡಿತರ ಹೆಸರು ಚಿರಸ್ಥಾಯಿಯಾಗಿ ನಿಂತಂತೆ, ಬನವಾಸಿ ಕದಂಬರ ಕಾಲಕ್ಕೆ ಈ ದೇವಸ್ಥಾದ ಜವಾಬ್ದಾರಿ ನಿರ್ವಹಿಸಿದ ವ್ಯಕ್ತಿ ವಮಳಶಕ್ತಿಯತಿಗಳು. ಕ್ರಿಶ ೧೧೭೦ರಿಂದ ನಗರೇಶ್ವರ ದೇವಸ್ಥಾನಕ್ಕೆ ಸಂಬಂಧಿಸಿದ ಆಚಾರ್ಯವರ್ಗದಲ್ಲಿ ವಿಮಳಶಕ್ತಿಗಳ ಹೆಸರು ಮತ್ತೆ ಮತ್ತೆ ಕೇಳಿಬರುತ್ತದೆ.

ಕ್ರಿ.ಶ ೧೧೭೮ರ ವೇಳೆಗೆ ಕದಂಬರು ಬಂಕಾಪುರದ ಅಧಿಕಾರವನ್ನು ವಹಿಸಿಕೊಂಡರು. ಕದಂಬ ಮಹಾಮಂಡಳೇಶ್ವರ ಎರಡನೆಯ ಕೀರ್ತಿದೇವರಸನ ಕಾಲದಲ್ಲಿ ಈ ವಿಮಳಶಕ್ತಿಯತಿಗಳು ಮಹಿಮೋನ್ನತಿ ತಪಪ್ರಭಾವವನ್ನು ಶಾಸನವೊಂದು ಮನದುಂಬಿ ಹೊಗಳಿದೆ. ಇವರನ್ನು 'ಪರಹಿತ ಚಿತ್ತ' 'ಷಡಕ್ಷರ ಮಂತ್ರಸಿದ್ದ' 'ಜಂಗಮ ಪಾರಿಜಾತ' ಎಂಬ ವಿಭಿನ್ನ ಹೆಸರುಗಳಿಂದ ಗುರುತಿಸಿವೆ. 'ಕಾಳಾಮುಖ ಕುಳಕುಮುದಿನೀ ಪೂರ್ಣಚಂದ್ರ' ಎಂಬುದು ಅಂದಿನ ಜನತೆ ಇವರಿಗೆ ಅಭಿಮಾನ ಪೂರ್ವಕ ಇತ್ತ ಬಿರುದು. ಇವರನ್ನು ಕುರಿತು

'ಆತತಕೀರ್ತಿಯಂ ವಿಮಳಶಕ್ತಿಯನಿ...........ಕ್ತಿಯಂ
ಸಾತ್ವಿಕದಾನನಂ ಮನುಚರಿತ್ರನನಿರ್ಜ್ಜಿತ ಪುರ್ಪ್ಪಿಚಾಪನಂ
ನೀತಿವಿಚಾರನಂ ಮುನಿಕಳಾಪನ ನಿರ್ಮಿತದೇವಗೇ......
ತಳವಂದ್ಯನಂ ಮರುಳೆ ಬೇಡವೊ ಜಂಗಮಪಾರಿಜಾತನಂ//

ಎನ್ನುವಲ್ಲಿ ವಿಮಳಶಕ್ತಿಮುನಿಗಳ ಗೌರವ ತುಂಬಿನಿಂತಿದೆ. ಅವರ ಸಾತ್ವಿಕ ತೇಜಸ್ಸು, ನಿರ್ಜಿತ ಪುರ್ಪ್ಪಿಚಾಪನೆಂಬಲ್ಲಿಯ ದೃಢವೈರಾಗ್ಯ, ನೀತಿಪರ ಮನೋಭಾವ 'ಜಂಗಮಪಾರಿಜಾತ' ಎಂಬ ಪದಕ್ಕೆ ಹೆಚ್ಚಿನ ಅರ್ಥಕೊಟ್ಟಿದೆ. ಇಂಥ 'ಮನುಚರಿತ್ರ' 'ಮುನಿಕಳಾಪ' ನೆನಿಸಿದೆ ವಿಮಳಶಕ್ತಿ ಸಾಮಾಜಿಕ ಉನ್ನತಿಗಾಗಿ ಹೆಚ್ಚಿನ ಶ್ರಮ ವ್ಯಕ್ತಪಡಿಸಿರುವನು. ಅವರು ಕೈಕೊಂಡ ಧಾರ್ಮಿಕ ಕಾರ್ಯಕಲಾಪಗಳು ಸಂಖ್ಯಾ ದೃಷ್ಟಿಯಿಂದ ಅಧಿಕವೆಂದೆ ಹೇಳಬೇಕು. ಬಂಕಾಪುರ ಶಾಸನ ಇವರು ಕೈಕೊಂಡ ಜನಹಿತಕಾರ್ಯಗಳ ಪಕ್ಷಿನೋಟ ಬೀರಿದೆ.

ವಿಚಿಪನರ್ತ್ಥಿಯಿಂ ಸುರಗ್ರಿಹಾವಳಿಯಂ ವಿವಿಧ ಪ್ರಕಾರದಿಂ
...........ಪತ್ರಕ ವಿರಾಜಿತಮಾಗಿರಲೆಂತು ನೋರ್ಪಡಂ
ಪರಹಿತಚಿತ್ತಂ ವಿಮಳಶಕ್ತಿಯತೀಶ್ವರನೆಂದು ಲೀಲೆಯಿಂ
ಪರಸು................ಮನೋರಥಸಿದ್ದಿಯನಾವಕಾಲಮುಂ//

ಎನ್ನುವಲ್ಲಿ ಇವರು ವಿರಚಿಸಿದ 'ಸುರಗ್ರಿಹಾವಳಿ'ಗಳ ಉಲ್ಲೇಖ ಕಂಡುಬರುತ್ತದೆ. ಇವು ಯಾವುದೆಂಬು ದನ್ನು ಶಾಸನ ತಿಳಿಸಿದ್ದರೆ. ವಿಮಳಶಕ್ತಿಗಳ ಕರ್ತೃತ್ವಶಕ್ತಿಯ ಬಗೆಗೆ ಹೆಚ್ಚಿನ ಬೆಳಕು ಬೀಳುತ್ತಿತ್ತು. ಇವರ ತಪೋಮಹಿಮೆ, ಜ್ಞಾನಭಂಡಾರವನ್ನು ಸೂಚಿಸುತ್ತ 'ಸ್ವಸ್ತಿಯಮ ನಿಯಮ ಸಾಧ್ಯಾಯ ಧ್ಯಾನ ಧಾರಣ ಮೋನಾನುಷ್ಠಾನ ಜಪಸಮಾಧಿ ಸಂಪನ್ನರುಂಯಾಹಾರಾಭಯ ಭೈಶಜ್ಯಶಾಸ್ತ್ರ ಪ್ರದಾನೋದ್ಯುಕ್ತ ಚಿತ್ತರುಂ ವಿಚಿತ್ರ ಚಿತ್ರಕೂಟ ಪ್ರಾಸಾದ....... ವಳಿ ನಿರ್ಮಾಣ ನಿಪುಣಪಟು....... ಸಿದ್ಧಸೂತ್ರಧಾರರುಂ ಕಾಳಾಮುಖ ಕುಳಕುಮುನೀ ಪೂರ್ಣ್ಣಚಂದ್ರರುಂ.........ಣ ಸ್ಮರಣ ಪರಿಣಿತಾಂತಃಕರಣರು[ ಕುಳಾ]ಗಮ ಸರೋಜಿನಿ ವಿರಾಜಿತ ರಾಜಹಂಸರುಂ ದತ್ತಾರ್ತ್ಥಿಕಾಂಚನರುಂ... ....... ........ ಶಿಷ್ಟ ಸಂತರ್ಪ್ಪಿತಾಂನದಾ........ನಗರೇಶ್ವರದೇವ ಲಬ್ಧವರ ಪ್ರಸಾದರುಂ ಷಡಕ್ಷರ ಮಂತ್ರಸಿದ್ದರು ಕಾ.......ಯ ನಿದರ್ಶಿಗಳುಮಪ್ಪಶ್ರೀ ವಿಮಳಶಕ್ತಿಗಳ ಸಮಸ್ತ ಬಿರುದುಗಳು ಅವರೊಬ್ಬ ರನ್ನು ಕಾಳಾಮುಖ ಪಂಡಿತರೆಂದು ಪರಿಚಯಿಸಿಕೊಟ್ಟಿವೆ. ಇವರ ಸಮರ್ಥಶಕ್ತಿಯನ್ನು ಮನಗಂಡ ಕದಂಬ ಕೀರ್ತಿದೇವ ಆದರಿಸಿ ಸತ್ಕರಿಸಿದಂತಿದೆ. "ಅಲ್ಲಿಯಾಚಾರ್ಯರ ತಪಪ್ರಭಾವ ಮುಮಂ ಕೇಳ್ದು ಪರಮಪೀತಿಯಿಂ ಬಂದು... ತಹ್ರಿಷ್ಟನಂ ಧರ್ಮನಿಷ್ಠನುಂ ಸನ್ತುಷ್ಟ ಚಿತ್ತನುಮಾಗಿ" ನಗರೇಶ್ವರದೇವರ ವಿಚಿತ್ರಕೂಟ ಪ್ರಾಸಾದದ ಮಾಟಮುಮಂ ನಾನಾಪ್ರಕಾರದ ನೈವೇದ್ಯಮುಮಂ ಶಿಷ್ಟ.........ನಾಥಗಿಕ್ಕುವ ವಾರಿಸತ್ರಮುಮಂ// ಮಾಡಿಸಿಕೊಟ್ಟಿರುವನು. ಕದಂಬ ಕೀರ್ತಿದೇವ ವಿಮಳಶಕ್ತಿಗಳು ಕೈಕೊಂಡ ಕಾರ್ಯಕ್ಕೆ, ದೇವರಸೇವೆಗೆ ಎಲ್ಲ ಅನುಕೂಲ ಮಾಡಿ ಕೊಟ್ಟಿರುವನು. ನಗರೇಶ್ವರದ ಅಂಗಭೋಗ ರಂಗಭೋಗಕ್ಕೆ ವಿಚಿತ್ರಕೂಟ ಪ್ರಸಾದದ ಮಾಟಕ್ಕೆ ತಪೋಧನರ ಆಹಾರದಾನಕ್ಕೆ ವಿದ್ಯಾದಾನಕ್ಕೆ ದೀನಾನಾಥರಿಕ್ಕುವ ವಾರಿಸತ್ರಕ್ಕೆ ಹಾನುಗಲ್ಲ ೫೦೦ರ ಕಂಪಣ ಮೂವತ್ತರ ಬಳಿಯ ಗಾವುಂಡವಳ್ಳಿ ಡಂಬ ಗ್ರಾಮವೊಂದರ ಆದಾಯವನ್ನು ಬಿಟ್ಟುಕೊಟ್ಟಿರುವನು.

ವಿಮಳಶಕ್ತಿಗಳ ಈ ಕಾರ್ಯನೈಪುಣ್ಯತೆ ಇನ್ನುಳಿದ ಆಚಾರ್ಯರಿಗೆ ಆದರ್ಶವೆನಿಸಿತ್ತು. ಬೇರೆ ಬೇರೆ ಸ್ಥಳಗಳಲ್ಲಿರುವ ದೇವಸ್ಥಾನಗಳ ಪ್ರಮುಖ ಆಚಾರ್ಯರುಗಳ ಮಾಲಿಕೆಯಲ್ಲಿ ವಿಮಳಶಕ್ತಿಗಳನ್ನು ಪರಿಗಣಿಸಲ್ಪಡುತ್ತಿತ್ತು. ಇಂಥ ಒಂದು ಸಂದರ್ಭವನ್ನು ಸೂಚಿಸಿದ ಶಾಸನವಿದೆ. 'ಶ್ರೀ ಮನ್ನೇಲೇಶ್ವರ ದೇವರಾಚಾರ್ಯ ರಾಜಗುರು ಅಮರೇಶ್ವರದೇವರು ಶ್ರೀ ಮದನಾದಿಪಟ್ಟಣ ಹಾನುಂಗಲ್ ಚಿಕ್ಕೇಶ್ವರ ದೇವರಾಚಾರ್ಯ ವಾಗೀಶ್ವರದೇವರು, ಬಿಲ್ಲೇಶ್ವರದೇವರಾಚಾರ್ಯ ಚಂದ್ರಭೂಷಣದೇವರು ಗಳನ್ನು ಉಲ್ಲೇಖಿಸುತ್ತಾ 'ಶ್ರೀ ಮನ್ನಗರೇಶ್ವರದೇವರ ಆಚಾರ್ಯ ರಾಜಗುರು ವಿಮಳಶಕ್ತಿದೇವರನ್ನು ಹೆಸರಿಸಿದುದು ಗಮನಿಸಬೇಕಾದುದು ಸಂಗತಿ. ಇದು ಅಂದು ವ್ಯಾಪಕವಾಗಿ ಹಬ್ಬಿದ ಕಾಳಾಮುಖ ಪಂಥದ ರಾಜಗುರುಗಳ ಸಮೂಹದಲ್ಲಿ ವಿಮಳ ಶಕ್ತಿಪಂಡಿತರಿಗಿದ್ದ ಸ್ಥಾನಮಾನವನ್ನು ಸೂಚಿಸಿದೆ.

ಕೆಲಕಾಲ ನಗರೇಶ್ವರ ದೇವಸ್ಥಾನದ ಚಂದ್ರಭೂಷಣದೇವರು ಮತ್ತು ವಿಮಳಶಕ್ತಿಯತಿಗಳು ಇಬ್ಬರೂ ಜೊತೆಯಾಗಿಯೇ ಕಾರ್ಯನಿರ್ವಹಿಸಿದಂತಿದೆ. ಬೋಗಾನೂರಿನ(೧೨೦೦) ಶಾಸನದಲ್ಲಿ

'ಶ್ರೀಮತು ಹಾನುಂಗಲ ಶ್ರೀ ಮದೀಂದ್ರವಲ್ಲಭ ರಾಜಧಾನಿ ಬಂಕಾಪುರದ ಶ್ರೀ ಮನ್ನಗರೇಶ್ವರದೇವರ ಸ್ಥಾನಾಚಾರ್ಯರು ಶ್ರೀ ಮದ್ರಾಜಗುರು ಚಂದ್ರಭೂಷಣರ ವಿವರಣೆ ಇದೆ. ಈ ಕಾಲದಲ್ಲಿ ವಿಮಳ ಶಕ್ತಿಗಳು ನಗರೇಶ್ವರದ ಜವಾಬ್ದಾರಿ ನೋಡುತ್ತಿದ್ದರೂ ವೃದ್ಧಾಪ್ಯದ ಚಂದ್ರಭೂಷಣರು ತಮ್ಮ ಕರ್ತವ್ಯ ಪ್ರಜ್ಞೆಯಿಂದ ಹಿಂದೆ ಸರಿದಿರಲಿಲ್ಲವೆನ್ನಬೇಕು. ಒಟ್ಟಿನಲ್ಲಿ ಈ ಇಬ್ಬರು ಆಚಾರ್ಯರ ತಪೋಮಯ ವ್ಯಕ್ತಿತ್ವದಿಂದ ಈ ದೇವಸ್ಥಾನ ಧಾರ್ಮಿಕ ಕೇಂದ್ರವಾಯಿತು. ಸಾಂಸ್ಕೃತಿಕ ತಾಣವಾಯಿತು.

**ಕಂದಬೇಶ್ವರದಾಚಾರ್ಯರು: ಸೋಮೇಶ್ವರಪಂಡಿತರು:** ಬನವಾಸಿ ಕದಂಬಮನೆತನದ ಹರಿಕೇಸರಿಯ ಕಾಲದಲ್ಲಿ ಬಂಕಾಪುರದ ಕಂದಬೇಶ್ವರ ದೇವಸ್ಥಾನದ ಆಚಾರ್ಯಸ್ಥಾನ ವಹಿಸಿದ ವ್ಯಕ್ತಿಗಳಿವರು. ಇವರನ್ನು 'ಯಮನಿಯಮಸ್ವಾಧ್ಯಾಯ ಧ್ಯಾನಧಾರಣ ಮೋನಾನುಷ್ಠಾಣ ಜಪಸಮಾಧಿ ಸಂಪನ್ನ'ರೆಂದು ಅಲ್ಲಿಯ ಶಾಸನ ಕರೆದಿದೆ. ಕದಂಬೇಶ್ವರದೇವಸ್ಥಾನದ ತುಂಬು ಆಡಳಿತ ಜವಾಬ್ದಾರಿ ಇವರಿಗಿದ್ದು ಇವರದು ನೈಷ್ಠಿಕ ಸ್ಥಾನವೆನಿಸಿತ್ತು. ಕದಂಬೇಶ್ವರ ದೇವಸ್ಥಾನ ವಿಭಿನ್ನ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸುಮಾರು ಎರಡು ಶತಮಾನ ಕಾರ್ಯ ಪ್ರವೃತ್ತವಾಗಿದ್ದುದು ಅದರ ಇನ್ನುಳಿದ ದಾಖಲೆಗಳಿಂದ ತಿಳಿಯುತ್ತದೆ.

**ಹೊಯ್ಸಳೇಶ್ವರದಾಚಾರ್ಯ: ಕುಮಾರ ಸೋಮರಾಕುಳಪಂಡಿತದೇವರು:** ಇಲ್ಲಿಯ ಸುಪ್ರಸಿದ್ಧ ದೇವಸ್ಥಾನಗಳಲ್ಲಿ ಹೆಸರು ಪೆದ ಸಿದ್ದೇಶ್ವರ ದೇವಸ್ಥಾನ ಒಂದು ಸಾವಿರ ವರ್ಷದಷ್ಟು ಪ್ರಾಚೀನ ವಾದುದು. ಆದರೆ ಇಂದು ಸಿದ್ದೇಶ್ವರವೆನಿಸಿದ ಈ ಪುಣ್ಯಕ್ಷೇತ್ರ ಅಂದು ಹೊಯ್ಸಳೇಶ್ವರವೆನಿಸಿದುದು ಇತ್ತೀಚೆಗೆ ಅಲ್ಲಿ ದೊರೆತ ಅಪ್ರಕಟಿತ ಶಾಸನದಿಂದ ತಿಳಿದು ಬರುವ ವಿಚಾರ.

ಪ್ರಸ್ತುತ ಹೊಯ್ಸಳೇಶ್ವರ ಹೊಯ್ಸಳ ಮನೆತನದ ವೀರನಾರಸಿಂಹ ತನ್ನ ತಂದೆಯ ಬಿಟ್ಟಿದೇವ ನಾಮಾಂಕಿತ ಕಟ್ಟಿಸಿದ ದೇವಸ್ಥಾನ. ಕ್ರಿ.ಶ.೧೯೯೦ ರಲ್ಲಿ ನಿರ್ಮಾಣಗೊಂಡ ಈ ದೇವಸ್ಥಾಕ್ಕೆ ವೀರನಾರಸಿಂಹ ದೇವರ ಅಂಗಭೋಗ ರಂಗಭೋಗ ಖಂಡಸ್ಪುಟಿತ ಜೀರ್ಣೋದ್ಧಾರಕ್ಕೆ ಎಕ್ಕೋಟ ಆಮ್ನಾಯದ ಕುಮಾರ ಭುಜಬಳ ಚಕ್ರವರ್ತಿ ಸೋಮರಾಕುಳರ ಪಾದತೊಳೆದು ತೇಕಲ್ಲು ಗ್ರಾಮವನ್ನು ಬಿಟ್ಟುಕೊಟ್ಟಿರುವನು. ಶಾಸನ ಕುಮಾರ ಸೋಮರಾಕುಳರ ಬಗೆಗೆ ಮನದುಂಬಿ ವರ್ಣಿಸುತ್ತದೆ.

ಇವರ 'ಛಂದಸ್ಸು ನಿಘಂಟು' ಕಾವ್ಯನಾಟಕ ಭರತ ವಾತ್ಸಾಯನಷ್ಟಾದಶ ಸ್ಮೃತಿ ಶಬ್ದಸ್ಮೃತಿ ಮೊದಲಾಗಿ ಅನೇಕ ವದ್ಯಾಪಾರಾವಾರರು, ವಿಭೂಳಿತ ಜಟಾಜೂಟ ಲಾಕುಳೋದ್ಧರಣ ಪರಿಣತಾಂತಃಕರಣರು ಸಕಲಬುಧಜನ ಪ್ರಸಂನರುಂಧರ್ಮಲತಾಧಾರದಂಡರು ನಿರ್ಮಳವಾಚನ ಪ್ರಚಂಡರು ಸತ್ಯವಾಕ್ಯಮಳಿನೀಮಾರ್ತಂಡರುಂ ಸಕಳ ಶಾಸ್ತ್ರಾಂಗ ವಚಾರಚತುರರುಂ ಸಾಹಿತ್ಯ ವಿದ್ಯಾಧರರುಂ ಸಂಸಾರ ವಿರತರುಂ ಚಾರಿತ್ರನಿರತರುಂ ಕವಿಕೋಟಿಚಾತುರಂಗ ದ್ವಂದ್ವವಿದ್ಯಾ ಪ್ರವೀಣರುಂ ಶ್ರೀ ಇಂದ್ರೇಶ್ವರದೇವದೇವಾವಲೋಕನೋದ್ಭುತ ರೋಮಾಂಚ ಕಂಚುಗಿತಗಾತ್ರರುಮಪ್ಪ

ಶ್ರೀ ಕುಮಾರ ಸೋಮರಾಕುಳದೇವರು' ಎಂಬ ಹೊಗಳಿಕೆ ಗಮನಿಸಿದರೆ ಸೊಮರಾವುಳಪಂಡಿತ, ಶಿವಶಕ್ತಿ, ಸೂಕ್ಷ್ಮಶಿವಪಂಡಿತರ ಸಾಲಿನಲ್ಲಿ ಈ ಕುಮಾರ ಸೋಮರಾವುಳಪಂಡಿತ ಘನ ವಿದ್ವಾಂಸರೆನಿಸಿದ್ದು ಹೊಯ್ಸಳೇಶ್ವರ ದೇವಸ್ಥಾನದ ಜವಾಬ್ದಾರಿ ಇವರಿಗಿದ್ದುದು ತಿಳಿಯುತ್ತದೆ. ಇವರನ್ನು ಗುಡಗುಡಿಯ ಕ್ರಿ.ಶ ೧೦೭೮ರ ಶಾಸನವೊಂದು ರಾಜಗುರು ಮಂಡಲಾಚಾರ್ಯ ಸಮೆಯ ಚಕ್ರವರ್ತಿ ಬ್ರಹ್ಮರಾಸಿ ಗುರುಗಳು ಮಕ್ಕಳು ಕುಮಾರ ಸೋಮೇಶ್ವರದೇವರು' ಎಂದು ಕರೆದಿರುವದನ್ನು ಗಮನಿಸಬೇಕು. ಇವರಲ್ಲದೆ ಬಂಕಾಪುರದ ಇನ್ನಿತರೆ ದೇವಸ್ಥಾನಗಳಲ್ಲಿ ಮಲ್ಲಿಕಾರ್ಜುನ ಪಂಡಿತರೆಂಬವರ ಹೆಸರು ಮತ್ತೆ ಮತ್ತೆ ಕೇಳಿಬರುತ್ತಿದ್ದು ಇವರು ಬಂಕಾಪುರದ ಧಾರ್ಮಿಕ ದೀವಿಗೆ ಬೆಳಗಿದ ಮಹಾಪುರುಷರು

**ವೈದಿಕ ಧರ್ಮ:** ಶಿವಪರವಾದ ಸ್ಮಾರ್ತ ಪರಂಪರೆ, ವಿಷ್ಣುಪರವಾದ ವೈಷ್ಣವ ಪರಂಪರೆಗೆ ಮಧ್ಯ ಮಾರ್ಗ ಶ್ರೀ ಕೃಷ್ಣಪರವಾದ ಭಾಗವತ ಪರಂಪರೆ, ಈ ಮೂರು ಪರಂಪರೆಗಳ ಸಂಗಮ ವನ್ನು ಒಟ್ಟಾಗಿ ವೈದಿಕ ಪರಂಪರೆ ಎಂದು ಕರೆಯಲಾಗಿದೆ. ಶೈವ ಜೈನಮತಗಳಂತೆ ಬಂಕಾಪುರದಲ್ಲಿ ತಕ್ಕಮಟ್ಟಿಗೂ ಪ್ರಚಲಿತವಿದ್ದ ಧರ್ಮವಿದು. ಆದರೆ ಈ ಉಲ್ಲೇಖಗಳು ಕಂಡುಬರುವುದು ಕ್ರಿ.ಶ. ೧೪ನೆಯ ಶತಮಾನದ ತರುವಾಯ. ದಾಸಶ್ರೇಷ್ಠರು ಕೈಕೊಂಡ ಶ್ರೀಕೃಷ್ಣಭಕ್ತಿ, ಅವರ ಅನನ್ಯನಿಷ್ಠೆಯಿಂದ ಭಾಗವತಧರ್ಮ ಅತ್ಯಲ್ಪ ಅವಧಿಯಲ್ಲಿ ಅಧಿಕಮಟ್ಟದಲ್ಲಿ ಪ್ರಚಾರಗೊಂಡಿತು. ದಾಸಪಂಥದ ಅಧ್ವರ್ಯುಗಳಾದ ಶ್ರೀಪಾದರಾಯರು, ರಘುನಿಧಿತೀರ್ಥರು, ವಾದಿರಾಜರು, ಕನಕದಾಸರು ಜೀವನದ ಕೆಲ ಘಟನೆಗಳು ಬಂಕಾಪುರದ ಧಾರ್ಮಿಕ ಇತಿಹಾಸದೊಂದಿಗೆ ಹೆಣೆದುಕೊಂಡಿವೆ. ಕ್ರಿಶ ೧೪ನೆಯ ಶತಮಾನದ ತರುವಾಯದಲ್ಲಿ ಕೆಲವು ವೈದಿಕ ದೇವಸ್ಥಾನಗಳ ಪ್ರಸ್ಥಾಪ ಇಲ್ಲಿವೆ.

**ಶ್ರೀಪಾದರಾಯರು:** "ಕರ್ನಾಟಕದಲ್ಲಿ ಕ್ರಿ.ಶ ೧೨ನೆಯ ಶತಮಾನದ ಕೊನೆಗೆ ಹರಿದಾಸ ಪರಂಪರೆ ಪ್ರಾರಂಭವಾಯಿತು. ಶ್ರೀ ಮಧ್ವಾಚಾರ್ಯರು ಹರಿದಾಸ ಪರಂಪರೆಗೆ ಆದಿಪುರುಷ ರೆನಿಸಿದರೆ, ಕ್ರಿಶ ೧೪೦೪ ರಿಂದ ಕ್ರಿ.ಶ. ೧೫೦೨ರವರೆಗೆ ಜನಿಸಿದ್ದ ಶ್ರೀಪಾದರಾಯರು ದಾಸಕೂಟದ ಮೂಲಸ್ಥಾಪಕರೆನಿಸಿದರು. ದಾಸಕೂಟದ 'ಅರುಣೋದಯ' ಎಂದು ಕರೆಸಿಕೊಂಡ ಶ್ರೀಪಾದರಾಯರು ಮುಳಬಾಗಿಲಿನವರು. ಸ್ವರ್ಣವರ್ಣಯತಿಗಳ ಶಿಷ್ಯರಾದ ಇವರು 'ರಂಗವಿಠಲ'ನೆಂಬ ಅಂಕಿತ ದೊಂದಿಗೆ ಕಾವ್ಯ ರಚಿಸಿರುವರು. 'ದರಿತಗಜ ಪಂಚಾಸ್ಯ ನರಹರಿಯೆ ದೇವರದೇವ ಕಾಯೋ ಗೋವಿಂದ' ಎಂಬ ತಮ್ಮ ಕವನದಲ್ಲಿ ನರಸಿಂಹನನ್ನು ಸ್ತುತಿಗೈದ ಶ್ರೀಪಾದರಾಜರು 'ಬಂಕಾಪುರದ ಧಾರುಣಿಪುರವಾಸ ವೀರನರಸಿಂಹ'ನನ್ನು ಕಂಡಾಗ ಅವರ ಆರ್ತಭಾವ ಮುಗಿಲನ್ನೇ ಮುಟ್ಟಿದಂತೆ ಭಾಸವಾಗುತ್ತದೆ.

ಆರುಗತಿ ನಿನಗಧಿಕರಾರು ಧಾರುಣಿಯೊಳಗೆ
ತೋರಿಸೈ ಕರುಣನಿಧಿಯೆ ಕೃಷ್ಣ

ಈರೇಳು ಲೋಕಕಾಧಾರವಾವಗೆ ಬಲು
ಭಾರವಾದವನೆ ನಾನು ಕೃಷ್ಣ
ಮಿರಿ ನುಡಿಯಲು ಹದಿನಾರೆರಡುಪಲ್ಗಳು
ಬೇರು ಕಳಿಕಳಿಯಿತೋ ಕೃಷ್ಣ
ತೋರು ಬಂಕಾಪುರದ ಧಾರುಣಿ ಪುರವಾಸ
ವೀರನರಸಿಂಹದೇವ ಕೃಷ್ಣ//

ಎಂಬ ಶ್ರೀಪಾದರಾಯರ ಕೀರ್ತನೆ, ಬಂಕಾಪುರದ ನರಸಿಂಹನ ಸಾನಿಧ್ಯದಲ್ಲಿ ಹೊರಹೊಮ್ಮಿದೆ. ಶ್ರೀಪಾದರಾಯರು ಬಂಕಾಪುರಕ್ಕೆ ಬರಲು, ಅವರನ್ನು ಒಬ್ಬ ದರಿದ್ರ ವ್ಯಕ್ತಿ ಮೊರೆಹೊಕ್ಕನಂತೆ. ಆತನ ಪರವಾಗಿ ಈ ಕೃತಿಯನ್ನು ಶ್ರೀಪಾದರಾಯರು ರಚಿಸಿದರೆಂದೂ ಆತನು ಇದನ್ನು ಪ್ರತಿನಿತ್ಯವೂ ಪಠಿಸಿ ತನ್ನ ಇಷ್ಟಾರ್ಥವನ್ನು ಪಡೆದನೆಂದು ಹಂಡೆಗುರು ವೇದವ್ಯಾಸ ದಾಸರ 'ಭಕ್ತ ಶ್ರೀಪಾದರಾಜರು' ಎಂಬ ಕೃತಿಯಿಂದ ತಿಳಿದುಬರುವ ಅಂಶ."[೫]

**ಶ್ರೀರಘುನಿಧಿತೀರ್ಥರು:** ವಿಜಯನಗರದ ಕಾಲದಲ್ಲಿ ದಾಸರಮಹಿಮೆಯಿಂದ ದಾಸಸಾಹಿತ್ಯ ಶ್ರೀಮಂತವಾಗಿ ಬೆಳೆದು ನಿಂತಿತು. ವಿಜಯನಗರದ ತಿರುಮಲರಾಯನ ಕಾಲದ ಶಾಸನವೊಂದು ಬಂಕಾಪುರದಲ್ಲಿದ್ದು ಅದರಲ್ಲಿ ಬಂಕಾಪುರದ ರಘುನಿಧಿತೀರ್ಥರ ಉಲ್ಲೇಖವಿದೆ. 'ಉಡುಪಿಯ ಶ್ರೀಕೃಷ್ಣದೇವರಿಗೂ ಶ್ರೀ ಮತ್ಪರಮಹಂಸನಾದ ವಾದಿರಾಜತೀರ್ಥ ಶ್ರೀಪಾದಂಗಳಿಗೂ ಬಂಕಾಪುರದ ರಘುನಿಧಿತೀರ್ಥ ಶ್ರೀಪಾದಂಗಳಿಗೂ ಸಮರ್ಪಿಸಿದ ಅಗ್ರಹಾರದ ದಾನ' ಎಂಬ ವಿಷಯದ ಉಲ್ಲೇಖ ಪ್ರಸ್ತುತ ಶಾಸನದಲ್ಲಿದೆ. ಬಂಕಾಪುರದ ರಘುನಿಧಿತೀರ್ಥ ಶ್ರೀಪಾದಂಗಳು ವೈದಿಕಧರ್ಮದ ನಿಷ್ಠಾವಂತ ವ್ಯಕ್ತಿಗಳಾಗಿದ್ದು ಅವರಿಗೆ ಮೂರು ವೃತ್ತಿಗಳನ್ನು ದತ್ತಿಯಾಗಿಬಿಟ್ಟಿದೆ. ವಿಜಯನಗರದ ದೊರೆ ತಿರುಮಲರಾಯನಿಂದ ಅಗ್ರಹಾರ ದಾನ ಪಡೆಯುವಷ್ಟರ ಮಟ್ಟಿಗೆ ರಘುನಿಧಿತೀರ್ಥ ಶ್ರೀಪಾದಂಗಳು ಪಡೆದ ಗೌರವ ಸುವಿಧಿತವಾಗುತ್ತದೆ.

**ಶ್ರೀ ವಾದಿರಾಜರು:** ಬಂಕಾಪುರದ ಬ್ರಾಹ್ಮಣಕೇರಿಯಲ್ಲಿ ಈಗ ಕೇಶವದೇವರ ಪುರಾತನ ವಿಗ್ರಹವೊಂದಿದೆ. ಹರಿದಾಸ ಶ್ರೇಷ್ಠರಾದ ವಾದಿರಾಜರು ಈ ಕೇಶವನ ಆರಾಧಕರಾಗಿದ್ದರೆಂದು ಪ್ರತೀತಿ. ಈ ವಾದಿರಾಜರು ತಮ್ಮ 'ತೀರ್ಥಪ್ರಬಂಧ' ಕೃತಿಯಲ್ಲಿ

ಶಂಖಾಂಭೋಜಗಧಾಸುದರ್ಶನಧರಂ ಸಂಕೀರ್ತ್ಯಮಾನಂ ಸುರೈಃ
ಕೈಂಕರ್ಯಪ್ರಿಯ ಲಕ್ಷ್ಮಣೇಂದ್ರರಚಿತಾಲಂಕಾರ ಪೂಜೋತ್ಸವಂ
ಪಂಕೋದ್ಭೂತ ಸಮಾನ ಲೋಚನಯುಗಂ ಬಂಕಾಪುರ ಶ್ರೀಕರಂ
ಹುಂಕಾರದ್ವನಿಧಿಕ್ಕೃತ ಜನಾಂತಂಕಂ ಭಜೇ ಕೇಶವಂ"

ಎಂದು ಕೇಶವನನ್ನು ಮನದುಂಬಿ ಹಾಡಿ ಹೊಗಳಿದ್ದಾರೆ.

ವಿಜಯನಗರದ ಅಚ್ಯುತರಾಯನ ಆಡಳಿತಕ್ಕೆ ಸಂಬಂಧಿಸಿದಂತೆ ದೊರಕುವ ಒಂದು ದಾಖಲೆಯಲ್ಲಿ ಬಂಕಾಪುರದ ಚನ್ನಕೇಶವದೇವರ ಶ್ರೀಕಾರ್ಯಕ್ಕೆ ನಾಯಕರೊಬ್ಬರು ದೇವರಅಮೃತ

ಪಡಿಗೆ ದತ್ತಿ ಬಿಟ್ಟುಕೊಟ್ಟಿದ್ದನ್ನು ಹೊಸಕೋಟೆಯ(೧೫೩೮)ರ ಶಾಸನವೊಂದು ತಿಳಿಸಿದೆ. ಇದರಿಂದ ಕ್ರಿ.ಶ. ೧೬ನೆಯ ಶತಮಾನದಲ್ಲಿ 'ಬಂಕಾಪುರದ ಚನ್ನಕೇಶವ' ದೇಗುಲ ಇದ್ದುದಾಗಿ ತಿಳಿದುಬರುತ್ತದೆ.

**ಶ್ರೀ ಕನಕದಾಸರು:** "ಕನ್ನಡ ಸಾಹಿತ್ಯಕ್ಕೆ ಶ್ರೇಷ್ಠವಾದ ಕಾಣಿಕೆ ಸಲ್ಲಿಸುವ ಮೂಲಕ ದಾಸ ಶ್ರೇಷ್ಠರೆಂದು ದಾಸರದಾಸರೆಂದು ಪ್ರಖ್ಯಾತಿ ಪಡೆದ ಕನಕದಾಸರು ಹುಟ್ಟಿದ ಸ್ಥಳ ಬಂಕಾಪುರದ ಸಮೀಪದ ಗ್ರಾಮ ಬಾಡ. ಬಂಕಾಪುರ ಮತ್ತು ಬಾಡಗ್ರಾಮಗಳ ಅಂತರ ಕೇವಲ ನಾಲ್ಕು ಫರ್ಲಾಂಗ ಅಂತರ. ವಿಜಯನಗರ ಕಾಲದಲ್ಲಿ ಕನಕದಾಸರ ತಂದೆ ದಂಡನಾಯಕ ಬಂಕಾಪುರದ ಅಧಿಕಾರ ನೋಡುತ್ತಿದ್ದರೆಂದು ಪ್ರತೀತಿ. ಕನಕದಾಸರಿಗೆ ಕಾಗಿನೆಲೆಯ ಆದಿಕೇಶವ ಆರಾಧ್ಯ ದೇವನೆನಿಸಿದ್ದ. ಕುರುಬ ಮತದಲ್ಲಿ ಜನಿಸಿದ ಕನಕದಾಸ ತನ್ನ ಅಪಾರಜ್ಞಾನ ಭಕ್ತಿ–ಮಹಿಮೆಯಿಂದ ಶ್ರೀ ಕೃಷ್ಣನ ಆರಾಧಕನಾಗಿ, ಭಾಗವತಮತ ಪ್ರವರ್ತಕನೆನಿಸಿಕೊಂಡ. ನಳಚರಿತೆ, ಮೋಹನ ತರಂಗಿಣಿ, ರಾಮಧಾನ್ಯ ಚರಿತೆ, ಹರಿಭಕ್ತಿಸಾರ ಇವು ಕನಕದಾಸರ ಕೃತಿಗಳು.

ಕನಕದಾಸರು ಬಾಡದ ಆದಿಕೇಶವನ ವಿಗ್ರಹವನ್ನು ಕಾಗಿನೆಲೆಯಲ್ಲಿ ಸ್ಥಾಪಿಸಿದರೆಂಬ ಐತಿಹ್ಯ ಒಂದುಂಟು. ಇಂದು ಬಾಡದ 'ರಂಗನಬೈಲು' ಎಂಬ ಸ್ಥಳ ಕನಕದಾಸರ ನೆನಪನ್ನು ಮರುಕಳಿಸುವ ಸ್ಥಳವೆನಿಸಿದೆ. ಇತ್ತೀಚೆಗೆ ಬಾಡದಲ್ಲಿ ದೇವಸ್ಥಾನವೊಂದರ ತಳಪಾಯ ಅಗೆಯುತ್ತಿದ್ದಾಗ ಈ ರಂಗನ ಬೈಲು ಪ್ರದೇಶದಿಂದಲೇ ಅನೇಕ ಐತಿಹಾಸಿಕ ಅವಶೇಷಗಳು ಕಂಡುಬಂದಿವೆ. ಅದೇ ಪ್ರದೇಶದ ಪರಿಸರದಲ್ಲಿ ಬೃಹದಾಕಾರದ ದೇವಸ್ಥಾನದ ಅವಶೇಷಗಳು ಸಿಕ್ಕಿವೆ. ಅಳಿದುಳಿದ ಈ ಅವಶೇಷಗಳಿಂದ ಕನಕದಾಸರು ಸ್ತುತಿಸಿದ ಆದಿಕೇಶವ ಇಲ್ಲಿಯು ಇರಬೇಕೆನ್ನಿಸುತ್ತದೆ.

ಕನಕದಾಸರು ತಮ್ಮ ಕೊನೆಗಾಲದಲ್ಲಿ ಕಾಗಿನೆಲೆಯಲ್ಲಿ ಆದಿಕೇಶವನನ್ನು ಮರಳಿ ಬಂಕಾಪುರಕ್ಕೆ ತಂದು ಪ್ರತಿಷ್ಠಿಸಿದರೆಂಬ ಪ್ರತೀತಿ ಇದೆ. ಇಂದು ಬಂಕಾಪುರದಲ್ಲಿ ದೊರೆಯುವ ಕೇಶವ ವಿರಹ ಇದು ವಾದಿರಾಜರ ಕೇಶವನ ವಿಗ್ರಹವೊ ಅಥವಾ ಕನಕದಾಸರ ಕೇಶವನ ವಿಗ್ರಹವೊ ಸ್ಪಷ್ಟವಾಗಿ ತಿಳಿದುಬರುವುದಿಲ್ಲಾ.

ಕೃಷ್ಣನ ಮೇಲೆ ಅಪಾರ ಭಕ್ತಿಯನ್ನಿರಿಸಿ, ಕೃಷ್ಣಭಕ್ತಿಯನ್ನು ನಾಡಿನುದ್ದಕ್ಕೂ ಹರಿಸಿ ಕನಕದಾಸರು ತಮ್ಮ ೯೦ನೆಯ ವರ್ಷ ವಯಸ್ಸಿನಲ್ಲಿ ಇಹಲೋಕದ ಯಾತ್ರೆಯನ್ನು ಮುಗಿಸಿದರು. ಕನಕದಾಸರು ಬಾಡದಲ್ಲಿ ಜನಿಸಿ ಹೆಚ್ಚಿನ ಆಧ್ಯಾತ್ಮ ವಿವೇಚನೆಗೆ ಕಾಗಿನೆಲೆಗೆ ಹೋಗಿ ನೆಲೆಸಿದರು. ಹೂವಗಲಿದರು ಪರಿಮಳವಗಲದಂತೆ ಬಾಡದ ಶಿಷ್ಯಸಮೂಹ ಅವರ ಮೇಲಿನ ಮಮತೆಯನ್ನು ಬಿಟ್ಟುಕೊಟ್ಟಿಲ್ಲ. ಇಂದಿಗೂ ಬಾಡದಲ್ಲಿ ಕನಕದಾಸರು ಉಪಯೋಗಿಸಿದ ಗೋಪಾಳ ಬುಟ್ಟಿ, ಶಂಖ, ಕಟ್ಟಿಗೆಯ ಊಟದ ಪಾತ್ರೆ ಮತ್ತು ಬಿದಿರಿನ ಬೆತ್ತವೊಂದನ್ನು ಕಾಯ್ದಿರಿಸಿದ್ದು ಕಂಡುಬರುತ್ತದೆ."[೬]

ಹೀಗೆ ಕಾಲದಿಂದ ಕಾಲಕ್ಕೆ ಬಂಕಾಪುರ ವೈದಿಕ ಧರ್ಮವನ್ನು ಮೆರೆದು ತನ್ನ ಮಹಿಮೆಯನ್ನು ಉಳಿಸಿಕೊಂಡಿದೆ.

**ಇನ್ನಿತರೆ ದೇವಸ್ಥಾನಗಳು:** ಇಂದು ಇಲ್ಲಿ ವೈದಿಕಧರ್ಮಕ್ಕೆ ಸಂಬಂಧಿಸಿದಂತೆ ಲಕ್ಷ್ಮೀನರಸಿಂಹ ದೇವಸ್ಥಾನ, ಆದಿಕೇಶವಮಂದಿರ, ವೆಂಕಟೇಶ ದೇವಸ್ಥಾನ, ದತ್ತಾತ್ರೇಯ ಮಂದಿರಗಳು ಕಂಡು ಬರುತ್ತವೆ. ಇಲ್ಲಿಯ ಶಿವಾನಂದ ಮಹಾರಾಜರು ಆಧ್ಯಾತ್ಮವಾದಿಗಳಾಗಿದ್ದರು ಪಾಂಡುರಂಗ ರುಕ್ಮಿಣಿ ಮಂದಿರ, ಬೊಬ್ಬೆಯ ಹನುಮಂತ, ಪ್ರಸನ್ನ ಮಾರುತಿ ಕಲಕಟ್ಟಿ ಹನುಮಂತ ದೇವಸ್ಥಾನಗಳು ಇಲ್ಲಿ ಭಕ್ತಿಯ ನಿಷ್ಠೆಯ ಸೂಚಕ ಸ್ಥಾನಗಳೆನಿಸಿವೆ.

**ಇಸ್ಲಾಮ ಧರ್ಮ:** ವರ್ಣ ವ್ಯವಸ್ಥೆ ಶ್ರೇಣಿಕರಣ ಭಾರತದಲ್ಲಿ ಆದಿ ಅನಾದಿ ಕಾಲದಿಂದಲೂ ಉಳಿದುಕೊಂಡು ಬಂದಿರುವುದು. ಇದು ಸಾಮಾಜಿಕ ವ್ಯವಸ್ಥೆಯಲ್ಲಿ ಕೋಮುವಾದಿಗಳಿಂದ ಸಮಾಜದ ಸ್ವಾಸ್ಥ್ಯ ಕೆಡುತ್ತದೆ. ಆದರೂ ಆಗಾಗ ಅಲ್ಲಲ್ಲಿ ಅಂತಹ ಘಟನೆಗಳು ನಡೆಯುತ್ತಲೇ ಇರುತ್ತವೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಬಂಕಾಪುರ ಗ್ರಾಮ ಸಮುದಾಯ ಸಮುದಾಯಗಳ ನಡುವೆಯೂ ಉತ್ತಮ ಬಾಂಧವ್ಯವನ್ನು ಕಾಯ್ದುಕೊಂಡಿರುವುದನ್ನು ಕಾಣಬಹುದು. ಯಾವುದೇ ಸಮುದಾಯದ ಆಚರಣೆಗಳಿರಲಿ ಪ್ರತಿಯೊಂದು ಸಮುದಾಯದ ಜನರು ಭಾಗವಹಿಸುವುದು ವಿಶೇಷತೆ. ಹಾಗೂ ಗ್ರಾಮದಲ್ಲಿರುವ ಪ್ರತಿಯೊಂದು ಧರ್ಮ, ಸಮುದಾಯದವರು ತಮ್ಮ ತಮ್ಮ ಮತಧರ್ಮದ ಸಂಪ್ರದಾಯದ, ಆಚರಣೆ, ವಿಧಿ ವಿಧಾನಗಳನ್ನು ಕಟ್ಟು ನಿಟ್ಟಾಗಿ ಆಚರಿಸುತ್ತಾರೆ. ಬಸವ ಜಯಂತಿ, ಕನಕದಾಸ ಜಯಂತಿ, ಮಹಾವೀರ ಜಯಂತಿ, ಅಂಬೇಡ್ಕರ್ ಜಯಂತಿ, ಹೀಗೆ ಗ್ರಾಮದಲ್ಲಿರುವ ಎಲ್ಲಾ ಸಮುದಾಯದವರು ತಮ್ಮ ತಮ್ಮ ಧರ್ಮದ ಜಯಂತಿಯನ್ನು ಅದ್ಧೂರಿಯಾಗಿ ಆಚರಿಸುತ್ತಾರೆ. ಇದನ್ನು ಸಂಕುಚಿತ ಭಾವನೆಯಿಂದ ನೋಡಿದರೆ ಬೇರೆ ಅರ್ಥವನ್ನು ನೀಡಿದರು. ಆದರೆ ಅದರ ಒಳಹೊಕ್ಕು ನೋಡಿದರೆ ಎಲ್ಲ ಸಮುದಾಯದವರು ಸೇರಿ ಈ ಎಲ್ಲಾ ಹಬ್ಬಗಳನ್ನು ಆಚರಿಸುವುದು ವಿಶೇಷತೆ. ಎಲ್ಲಾ ಸಮುದಾಯ, ಧರ್ಮ ಆಚರಣೆಗಳಲ್ಲಿ ಭಾವೈಕ್ಯತೆ ಇದೆ. ಬಂಕಾಪುರದಲ್ಲಿರುವ ಅಲ್ಲಾವುದ್ದೀನ ಶಾ ಖಾದ್ರಿ ದರ್ಗಾಕ್ಕೆ ಹಿಂದೂ ಸಮುದಾಯದವರು ಹೆಚ್ಚು ನಡೆದುಕೊಳ್ಳುವುದನ್ನ ನಾವು ಕಾಣಬಹುದು. ಅದೇ ರೀತಿ ಹಿಂದು ಸಮುದಾಯದ ದುರ್ಗಾದೇವಿ ದೇವಸ್ಥಾನಕ್ಕೆ ಎಲ್ಲಾ ಸಮುದಾಯದವರು ನಡೆದುಕೊಳ್ಳುವದನ್ನ ಕಾಣಬಹುದು. ಬಂಕಾಪುರದ ಹೆಚ್ಚು ಜನರು ಸಂತ ಶಿಶುವಿನಹಾಳ ಶರೀಫರಿಗೆ ನಡೆದುಕೊಳ್ಳುವುದನ್ನು ಕಂಡಾಗ ಇಲ್ಲಿಯ ಜನರ ಸೌಹಾರ್ದತೆ ತಿಳಿಯತ್ತದೆ. ಮುಸ್ಲಿಂಮರು ತಮ್ಮ ಧರ್ಮದ ನಮಾಜ್ ಖುರಾನ್ ಓದುವುದರ ಜೊತೆಗೆ ದುರುಗಮ್ಮ, ದ್ಯಾಮವ್ವ, ಮುಂತಾದ ಹಿಂದೂ ಸಂಪ್ರದಾಯದ ದೇವತೆಗಳಿಗೆ ನಡೆದುಕೊಳ್ಳುವದನ್ನು ಹಾಗು ಹರಕೆ ತೀರಿಸುವುದನ್ನು ಹಾಗೂ ಅದೇ ರೀತಿ ರಂಜಾನ್ ತಿಂಗಳಲ್ಲಿ ರೋಜಾ ಮಾಡುತ್ತಿರುವ ಮುಸ್ಲಿಂ ಭಾಂಧವರಿಗೆ ಹಿಂದುಗಳು ಊಟದ ವ್ಯವಸ್ಥೆ ಮಾಡುವುದು ಅವರ ಬಾಂಧವ್ಯಕ್ಕೆ ಸಾಕ್ಷಿಯೆನ್ನಬಹುದು.

ಬಂಕಾಪುರ ಕಾಲದಿಂದ ಕಾಲಕ್ಕೆ ಭಾವೈಕ್ಯತೆಯನ್ನು ಸಾಧಿಸಿಕೊಂಡು ಬಂದಿದೆ. ಇದು ಸರ್ವಧರ್ಮಗಳಿಗೆ ಆಡುಂಬೊಲವೆಂಬಂತೆ ರೂಪಿತಗೊಂಡಿದೆ. ಒಂದು ಕಾಲಕ್ಕೆ ಬಂಕಾಪುರದ ಮೇಲೆ ದಾಳಿ ಮಾಡಿ ಇದನ್ನು ಕೈವಶಮಾಡಿಕೊಂಡ ಮುಸ್ಲಿಂರು ಇಂದು ಬಂಕಾಪುರದವರೇ ಎಂಬಷ್ಟರ ಮಟ್ಟಿಗೆ ಈ ಪ್ರದೇಶದಲ್ಲಿ ಈ ಸಂಸ್ಕೃತಿಯಲ್ಲಿ ಒಂದಾಗಿ ಹೋದುದು ಈ ನಾಡಿನ ವೈಶಿಷ್ಟ್ಯ. ಅವರ ಬಹುಕಾಲದ ಆಳ್ವಿಕೆಯ ಅನುಪಮ ಕುರುಹುಗಳೆಂಬಂತೆ ಇಂದು ಬಂಕಾಪುರದ ಎಲ್ಲೆಡೆಯಲ್ಲಿ ಕಾಣುತ್ತಿರುವ ಮಸೀದಿಗಳು, ದರ್ಗಾಗಳು ಅಲ್ಲಲ್ಲಿ ಕೇಳಿ ಬರುತ್ತಿರುವ ಪವಿತ್ರ ಕುರಾನದ ಮಂತ್ರ ಪಠಣ, ಭಾವುಕರ ಮನಕ್ಕೆ ಶಾಂತಿಯನ್ನಿತ್ತಿವೆ.

ಪ್ರಾಚೀನ ಕಾಲದಿಂದ ಇಲ್ಲಿ ನೆಲೆನಿಂತ ಶರೀಫಶಾವಲಿ ದರಗಾ, ಹುಸೇನಶಾವಲಿ ದರಗಾ, ನೂರುಲ್ಲಾಶಾಖಾದ್ರಿ ದರಗಾ, ಹಜರತ್ ಸೈಯದ್ ಅಲ್ಲಾವುದ್ದೀನಶಾ ಖಾದ್ರಿದರಗಾಗಳು ಭಕ್ತಿಯ ಕೇಂದ್ರಗಳಾಗಿವೆ. ಇವಲ್ಲದೆ ಬಂಕಾಪುರದಲ್ಲಿ ಇನ್ನೂ ಹತ್ತು ದರ್ಗಾಗಳಿವೆ. ಸುಮಾರು ಏಳು ಮಕಾನಗಳು ಇಲ್ಲಿದ್ದು. ಅಲಿದೇವರ ಪೂಜಾ ಪುರಸ್ಕಾರಗಳು ವಿಜ್ರಂಭಣೆಯಿಂದ ಜರುಗುತ್ತಿವೆ. ಸುಮಾರು ೧೦ ಮಸೀದಿಗಳಿವೆ. ಮಹಬೂಬಸುಬಾನಿ ಝುಂಡಕಟ್ಟೆಗಳು, ಅಡ್ಡೆಗುಮ್ಮಜಗಳು ಇಲ್ಲಿವೆ. ಸೈದಾನಬಿ, ಮಹಾಜನಬಿ, ಮಸಾಬಿ ಎಂಬ ಮೂವರು ಮುಸಲ್ಮಾನ ಶರಣೆಯರು ಇಲ್ಲಿ ಬಾಳಿ ಬೆಳಗಿದಂತೆ ಉಲ್ಲೇಖಗಳಿವೆ.

ಇಲ್ಲಿಯ ಹಜರತ್‌ಸೈಯದ ಅಲ್ಲಾವುದ್ದೀನ ಶಾ ಖಾದ್ರಿ ದರಗಾ ಪ್ರಾಚೀನ ಇತಿಹಾಸ ಹೊಂದಿದ್ದಂತೆ, ದರ್ಗಾದ ಶಿಲ್ಪ ಸುಂದರವಾಗಿದೆ. ಈ ಪರಂಪರೆಯ ಹಜರತ್‌ಶಹಾ ಖಾದ್ರಿ ಇವರು ಸಿದ್ಧಿಪುರುಷರು, ಶಿಶುನಾಳ ಶರೀಫರು ಇವರ ಕರುಣೆಯ ಕಂದನೆಂಬುದು ಮರೆಯಲಾಗದು. ಹಯಾತಬಾಶಾವಲಿ, ಮಿಸ್ಕಿನ್ ಶಾವಲಿಯ ಮಹಿಮರು ಜೀವಂತ ಸಮಾಧಿ ಮಾಡಿಕೊಂಡಿರುವರು ಎಂಬುದು ಮುಸ್ಲಿಮ ಬಾಂಧವರ ಹೇಳಿಕೆ.

ಪ್ರತಿವರ್ಷ ಇಲ್ಲಿ ಅ ಸಂಖ್ಯೆಯಲ್ಲಿ ಜನ ಬಂದು ಉರುಸು ಆಚರಿಸುತ್ತಾರೆ. ಮೂರು ದಿನ ಜಂಗೀಬೈಲು ಕುಸ್ತಿಗಳು ಜರುಗುತ್ತವೆ. ಪ್ರತಿ ಗುರುವಾರ ದೂರದೂರದಿಂದ ಭಕ್ತರು ಬಂದು ಸೇವೆ ಸಲ್ಲಿಸಿ ತಮ್ಮ ಇಷ್ಟಾರ್ಥ ಪೂರೈಸಿಕೊಳ್ಳುತ್ತಿದ್ದಾರೆ. ಹೀಗೆ ಬಂಕಾಪುರ ಸರ್ವಧರ್ಮದ ಅನುಪಮ ತತ್ವಗಳನ್ನು ಅರಗಿಸಿಕೊಂಡು ಇಂದು ಭಾವೈಕ್ಯತೆ ಸಾಧಿಸಿದೆ, ಎಲ್ಲರೂ ಒಂದೇ ತಾಯಿಯ ಮಕ್ಕಳೆಂಬ ಭಾವ ಇಲ್ಲಿ ನೆಲೆನಿಂತಿದೆ.

### ೫.೨. ಶೈಕ್ಷಣಿಕ ಇತಿಹಾಸ ಮತ್ತು ಸ್ಥಿತಿಗತಿಗಳು

ಅಂದು ಧಾರ್ಮಿಕ ಕೇಂದ್ರವಾಗಿದ್ದ ಬಂಕಾಪುರದ ಪ್ರಾಚೀನ ದೇವಸ್ಥಾನಗಳು, ವಿದ್ಯಾ ಕೇಂದ್ರಗಳೂ ಆಗಿದ್ದವು. ಕನ್ನಡ ಕವಿ ರನ್ನ ಬಂಕಾಪುರದ ಅಜಿತಸೇನಾಚಾರ್ಯರಲ್ಲಿ ವಿದ್ಯಾಭ್ಯಾಸ

ಮಾಡಿದುದು, ಇತಿಹಾಸ ಪ್ರಸಿದ್ಧ ವಿಷಯ. ಪ್ರಾಚೀನ ಕರ್ನಾಟಕದ ಜ್ಞಾನಸಂಪಾದನೆಯ ಕೇಂದ್ರಗಳೆನ್ನಿಸಿದ ಬ್ರಹ್ಮಪುರಿ, ಅಗ್ರಹಾರ, ಘಟಿಕಾಸ್ಥಾನಗಳ ಪ್ರಸ್ತಾಪ ಇಲ್ಲಿ ಬರದಿದ್ದರೂ ನಾಲ್ಕ ನೆಯದಾದ ಮಠಗಳು ಇಲ್ಲಿವೆ.

ಇಲ್ಲಿಯ ಶೈವಯತಿಗಳು ವಿದ್ವಾಂಸರಾಗಿದ್ದು ತಮ್ಮ ವೈಯಕ್ತಿಕ ತಪ ಕರ್ಮಾದಿಗಳ ಜೊತೆಯಲ್ಲಿ ವಿದ್ಯಾದಾನವನ್ನು ಕೈಕೊಂಡಿದ್ದರು. ಭಕ್ತಾದಿಗಳು ದೇವಸ್ಥಾನ, ದೇವರುಗಳ ಪೂಜಾಕಾರ್ಯಕ್ಕೆ ದತ್ತಿಬಿಟ್ಟುಕೊಡುವಾಗ ಅಲ್ಲಿ ನಡೆಯುತ್ತಿರುವ ವಿದ್ಯಾದಾನಕ್ಕೂ ದತ್ತಿ ಕೊಟ್ಟಿರುವರು. ಇಲ್ಲಿಯ ಇಂದ್ರೇಶ್ವರ, ನಗರೇಶ್ವರ, ಹೊಯ್ಸಳೇಶ್ವರ, ಕದಂಬೇಶ್ವರದಾಚಾರ್ಯರು ವಿಭಿನ್ನ ಜ್ಞಾನಕಲೆಗಳಲ್ಲಿ ಪಾರಂಗತರಾಗಿದ್ದರು. ಹೊಯ್ಸಳೇಶ್ವರದ ಎಕ್ಕೋಟಿ ಆಮ್ನಾಯದ ಕುಮಾರ ಸೋಮರಾಕುಳ ಪಂಡಿತರು 'ಕಾಳೋತ್ತರೇಶ್ವರ ಕಾಳೋತ್ತರ ಮೊದಲಾಗೀಶ್ವರ ಶಾಸ್ತ್ರ ನಿರ್ಣಯ ಪ್ರವೀಣರು' ಎನಿಸಿಕೊಂಡಿದ್ದರು.

ಕದಂಬ ಹರಿಕೇಸರಿಯ ಕಾಲದಲ್ಲಿ ಇಲ್ಲಿಯ ಪಂಚಮಠಾಸ್ಥಾನಗಳ ಉಲ್ಲೇಖವಿದೆ. ಕದಂಬೇಶ್ವರ ದೇವಸ್ಥಾನಕ್ಕೆ ದತ್ತಿಬಿಟ್ಟವುಗಳ ಸಾಲಿನಲ್ಲಿ ಇಲ್ಲಿಯೂ ಪಂಚ ಮಠಸ್ಥಾನವೂ ಸೇರಿತ್ತು. 'ಪಂಚಮಠಸ್ಥಾನ' ಐದು ಪ್ರಮುಖ ವಿದ್ಯಾಕೇಂದ್ರಗಳನ್ನು ಸೂಚಿಸುತ್ತದೆ ಎಂಬುದು ಕಸಿನ್ಸರ ಹೇಳಿಕೆ. ಇಲ್ಲಿಯ ಇಂದ್ರೇಶ್ವರ ಮತ್ತು ನಗರೇಶ್ವರ ದೇವಾಲಯಗಳಲ್ಲಿ 'ವಿದ್ಯಾದಾನಕ್ಕೆ' ದತ್ತಿ ಬಿಟ್ಟಿರುವರು.

ದೇವಾಲಯಗಳ ತಪೋಧನರು ದಾನದತ್ತಿಯ ಬಹುಭಾಗವನ್ನು ವಿದ್ಯಾದಾನಕ್ಕೆ ಸದುಪಯೋಗ ಮಾಡಿಕೊಳ್ಳುತ್ತಿದ್ದರು. ವಿದ್ಯಾಭ್ಯಾಸದ ಜೊತೆಯಲ್ಲಿ ಅನ್ನದಾನ, ಛತ್ರಗಳ ವ್ಯವಸ್ಥೆಯೂ ಇಲ್ಲಿತ್ತು. ಈ ಎಲ್ಲ ಅನುಕೂಲತೆ ಪರನಾಡಿನ ವಿದ್ಯಾಭಿಲಾಷಿಗಳನ್ನು ಆಕರ್ಷಿಸಿರುವ ಸಾಧ್ಯತೆ ಇದೆ.

ಇಲ್ಲಿ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಯಾವುದೇ ಅನುಕೂಲತೆಗಳಿದ್ದುದು ತಿಳಿದು ಬರುವುದಿಲ್ಲಾ. ಆದರೂ ರಾಜಮನೆತನಗಳ ಸ್ತ್ರೀಯರು, ಅಧಿಕಾರಿವರ್ಗದ ಮನೆತನದ ಮಹಿಳೆಯರು ಓದುಬರಹ ಕ್ಕಿಂತ ನರ್ತನ, ಸಂಗೀತದಂತಹ ಕಲೆಗಳಿಗೆ ಹೆಚ್ಚು ಮಾನ್ಯತೆ ಕೊಟ್ಟಿದ್ದರು. ಕದಂಬ ಹರಿಕೇಸರಿಯ ಮಡದಿ ಲಚ್ಚಲದೇವಿ 'ವಿವೇಕ ವಿದ್ಯಾಧರಿ', 'ಸಕಳ ಕಳಾಧರಿ', ಎನಿಸಿದ್ದಳು. ಸ್ತ್ರೀಯರು ಒಳ್ಳೆಯ ಗೃಹಿಣಿಯರಾದರೆ ಸಾಕು ಎಂಬ ಅಭಿಪ್ರಾಯವು ಇದಕ್ಕೆ ಕಾರಣವಾಗಿರಬೇಕು.

ಸಾಮಾನ್ಯವರ್ಗದ ಅದರಲ್ಲೂ ದೇವದಾಸಿವ ರ್ಗದ ಮಹಿಳೆಯರು ಗೀತ ನರ್ತನ ಕಲೆಗಳಲ್ಲಿ ಪರಿಣಿತರಾಗಿದ್ದರು. ಕದಂಬೇಶ್ವರದ ಸಾಂಸ್ಕೃತಿಕ ಯೋಜನೆಯಲ್ಲಿ ಪರಿಕಾರ, ಗಂಧರ್ವರು, ಪಿರಿಯರು, ಕಂಬದ ನಾಲ್ವರು ಸೂಳೆಯರು, ಓಲಗದ ಸೂಳೆಯರು ಸೂಳೆ. ಏಳ ಮುಂತಾದವರು ಇದ್ದರು.

ಆಳುವ ದೊರೆಗಳ ಉದಾರದಾನ ಊರವರ ಅಭಿಮಾನ, ವಿದ್ಯಾರ್ಥಿಗಳ ಅಭಿಲಾಷೆ ಆಕಾಂಕ್ಷೆಗೆ ತಕ್ಕಂತೆ ಇಲ್ಲಿಯ ವಿದ್ಯಾಭ್ಯಾಸ ಮುನ್ನಡೆದಿದೆ.

ಇತ್ತೀಚೆಗೆ ಶಿಕ್ಷಣಕ್ಕೆ ಇಲ್ಲಿ ಹೆಚ್ಚಿನ ಮಹತ್ವ ಸಿಗತೊಡಗಿದೆ. ಇದಕ್ಕೆ ಕಾರಣ ೧೯ನೆಯ ಶತಮಾನದಲ್ಲಿ ಕನ್ನಡನಾಡು ನುಡಿಯನ್ನು ಬೆಳಗಿದ ಅನೇಕ ಮಹನೀಯರ ಸೇವೆ. ಬಂಕಾಪುರದಲ್ಲಿ ಶಿಕ್ಷಣದ ಪ್ರಾಥಮಿಕ ತಳಹದಿ ಹಾಕಿದ ಮಹನೀಯರಲ್ಲಿ ಶ್ರೀ ಗಂಗಾಧರ ಮಡಿವಾಳೇಶ್ವರ ತುರಮರಿ, ಶಾಂತಕವಿಗಳು ಮತ್ತು ಗಳಗನಾಥರು ಅಗ್ರಗಣ್ಯರು

**ಶ್ರೀ ಗಂಗಾಧರ ಮಡಿವಾಳೇಶ್ವರ ತುರಮರಿಯವರು(ಸು ೧೮೨೭-೧೮೭೭):** ಶ್ರೀ ಗಂಗಾಧರ ಮಡಿವಾಳೇಶ್ವರ ತುರಮರಿಯವರ ಬಹುಪ್ರಯತ್ನದ ಫಲವಾಗಿ ಇಲ್ಲಿ ಪ್ರಾಥಮಿಕ ಶಾಲೆ ಪ್ರಾರಂಭ ವಾಯಿತು. ತುರಮರಿಯವರು ಬಹುಶ್ರುತ ಪಂಡಿತರಾಗಿದ್ದಂತೆ ಒಳ್ಳೆಯ ಶಿಕ್ಷಕರು ಆಗಿದ್ದರು. ಅವರು ೧೮೬೬ರಲ್ಲಿ 'ಮಠ' ಪತ್ರಿಕೆಯನ್ನು ಪ್ರಾರಂಭಿಸಿ ಉತ್ತರ ಕರ್ನಾಟಕದ ಶಿಕ್ಷಣ ಮಟ್ಟವನ್ನು ಹೆಚ್ಚಿಸಲು ಪ್ರಯತ್ನಿಸಿದರಷ್ಟೇ. ಈ ಸಂದರ್ಭದಲ್ಲಿ ಅವರು ಸೇವೆ ಸಲ್ಲಿಸಿದ ಅನೇಕ ಸಂಸ್ಥೆಗಳು ಉರ್ಜಿತಾವಸ್ಥೆಗೆ ಬಂದವು. ಇದೇ ವೇಳೆಯಲ್ಲಿ ಬಂಕಾಪುರದ ಶಿಕ್ಷಣ ಸಂಸ್ಥೆಯ ಬಗ್ಗೆ ಗಂಗಾಧರ ತುರಮರಿಯವರ ಸಾಧನೆಯನ್ನು 'ಮಠ' ಪತ್ರಿಕೆಯಲ್ಲಿ ಪ್ರಕಟಿಸಲು ಅವರನ್ನು ಕೇಳಿಕೊಂಡು ಇಬ್ಬರು ಶಿಕ್ಷಕ ಮಹನೀಯರು ಬರೆದುಕೊಂಡ ಪತ್ರ ಹೀಗಿದೆ.

"ಬಂಕಾಪುರ ಸಾಲಿಯ ಸ್ಥಾಪನೆ ತಾರೀಖ ೯ನೆಯ ಜೂನ ೧೮೪೮ನೆಯ ಇಸವಿ ದಿವಸಾ ಗಂಗಾಧರ ಮಡಿವಾಳೇಶ್ವರ ಎಂಬವರಿಂದ ಸ್ಥಾಪಿಸಲ್ಪಟ್ಟಿತು. ಅವರು ಅಜಮಾಸು ಏಳು ಎಂಟು ವರ್ಷದ ತನಕ ಈ ಗ್ರಾಮದಲ್ಲಿ ಮಾಸ್ತರ ಕೆಲಸ ಮಾಡಿ ಕೈಲಾದ ಮಟ್ಟಿಗೆ ಪ್ರಯತ್ನ ಮಾಡಿ ಈ ಸಾಲಿನಲ್ಲಿ ಉತ್ತಮಸ್ಥಿತಿಗೆ ತಂದು ಬಹು ಜನರನ್ನು ಯೋಗ್ಯ ಮಾರ್ಗದರ್ಶನಕ್ಕೆ ಹಚ್ಚಿದರು" ಎಂದು ಬರೆದಿರುವರು ಹೀಗೆ ಗಂಗಾಧರ ತುರಮರಿಯವರು ಕಳೆದ ಶತಮಾನದಲ್ಲಿ ಇಲ್ಲಿ ಜ್ಞಾನದ ದೀಪ ಬೆಳಗಲು ಕಾರ್ಯಕೈಕೊಂಡಿರುವರು.

**ಶಾಂತಕವಿಗಳು(ಸು ೧೮೫೬-೧೯೨೧):** ಕನ್ನಡದ ಬಗೆಗೆ ಅವ್ಯಾಜ ಪ್ರೇಮವನ್ನಿರಿಸಿಕೊಡಿದ್ದ ಶಾಂತಕವಿಗಳು ಕ್ರಿ.ಶ. ೧೮೫೬ರಿಂದ ೧೯೨೧ರ ವರೆಗೆ ಕೈಕೊಂಡ ಸಾಧನೆಗಳು ಅಪಾರ. ೧೮೭೨ ರಲ್ಲಿ ರಾಣೆಬೆನ್ನೂರಿನ ಕನ್ನಡ ಶಾಲೆಯಲ್ಲಿ ೧೨ರೂ ಸಂಬಳದ ಮೇಲೆ ಶಾಲಾಮಾಸ್ತರ ಆಗಿ ನಿಯಮಿಸಲ್ಪಟ್ಟ ಶಾಂತಕವಿಗಳು ಹಾವೇರಿ, ಶಿಗ್ಗಾಂವಗಳಲ್ಲಿಯಂತೆ ಬಂಕಾಪುರದ ಶಾಲೆಗೂ ಸೇವೆ ಸಲ್ಲಿಸಿರುವರು. ಇವರು ಒಳ್ಳೆಯ ಕೀರ್ತನಕಾರರಾಗಿದ್ದು ೧೮೯೧ರಲ್ಲಿ ಇವರ 'ಗಜೇಂದ್ರಮೋಕ್ಷ' ಕೀರ್ತನೆ ಧಾರವಾಡ ಹುಬ್ಬಳ್ಳಿ ಬಂಕಾಪುರ ಹಾವೇರಿ, ಕರ್ಜಗಿ, ಅಗಡಿ ಮತ್ತು ಮುರಗೋಡ ಗ್ರಾಮ ಸಪ್ತಕಗಳಲ್ಲಿ ಹೆಚ್ಚು ಪ್ರಸಿದ್ಧಿ ಹೊಂದಿತ್ತು' ಎಂಬುದು ಅವರ ಚರಿತ್ರೆಯಿಂದ ತಿಳಿಯುತ್ತದೆ.

**ಗಳಗನಾಥರು(ಸು ೧೮೬೯-೧೯೪೨):** ಗಳಗನಾಥರದು ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಮಹತ್ವಪೂರ್ಣ ವ್ಯಕ್ತಿತ್ವ. ೧೮೮೯ರಲ್ಲಿ ಧಾರವಾಡ ಜಿಲ್ಲಾ ಶಿರಗುಪ್ಪಿಯ ಶಾಲೆಯ ಮುಖ್ಯಾಧ್ಯಾಪಕರೆಂದು ಕೆಲಸ ಪ್ರಾರಂಭಿಸಿದ ಅವರು ಕೆಲಕಾಲ ಬಂಕಾಪುರವನ್ನು ತಮ್ಮ ಕ್ಷೇತ್ರವನ್ನಾಗಿಸಿಕೊಂಡಿರುವರು. ಉಪ್ಪಿನ

ಬೆಟಗೇರಿಯಲ್ಲಿ ಕೆಲಕಾಲ ಸೇವೆ ಕೈಕೊಂಡ ಸಂದರ್ಭದಲ್ಲಿಯೇ ಶಿಕ್ಷಣದ ಹೊಸ ಪದ್ಧತಿಗಳ ತಿಳುವಳಿಕೆಗಾಗಿ ರೊದ್ದರಾಯರ ನೇತೃತ್ವದಲ್ಲಿ ಗಳಗನಾಥರು, ಅಮ್ಮಿನಭಾವಿ ತಮ್ಮಣ್ಣ ಮಾಸ್ತರು, ಕುಂಚೂರ ಮಾಸ್ತರು ಜೊತೆಯ ೫೦ ವಿದ್ಯಾರ್ಥಿಗಳೊಂದಿಗೆ ಮುಂಬಯಿಗೆ ಸಂದರ್ಶನವಿತ್ತಿರುವರು. ಅಲ್ಲಿಂದ ಮರಳಿ ಬಂದನಂತರ ಇವರ ಸೇವೆ ಗುತ್ತಲದಲ್ಲಿ ಮುಂದುವರೆಯಿತು.

**ರೊದ್ದ ಶ್ರೀನಿವಾಸರಾಯರು(೧೮೫೦-೧೯೨೯):** ಗಳಗನಾಥರಂತೆ ಸದಾ ಸ್ಮರಿಸಬೇಕಾದ ಇನ್ನೊಂದು ಗೌರವಯುತ ಹೆಸರು ರೊದ್ದ ಶ್ರೀನಿವಾಸರಾಯರದು. ಬಂಕಾಪುರಕ್ಕೆ ಇವರ ನೇರಸಂಬಂಧ ಬಾರದೇ ಹೋದರೂ ಬಂಕಾಪುರದ ಜನತೆ ಇವರ ಬಗ್ಗೆ ಇರಿಸಿಕೊಂಡ ಪೂಜ್ಯಾದರ ಅಪಾರ. ಉಚ್ಚಮಟ್ಟದಲ್ಲಿ ಶಿಕ್ಷಣ ಪ್ರಸಾರ ಕಾರ್ಯದಲ್ಲಿ ಶಿಕ್ಷಣ ಪ್ರಸಾರ ಕಾರ್ಯದಲ್ಲಿ ಅವರು ಕೈಕೊಂಡ ಪ್ರಯತ್ನವೇನೂ ಕಡಿಮೆಯದಲ್ಲ. ಬಡಮಕ್ಕಳ ಉಚ್ಚತಮ ಶಿಕ್ಷಣಕ್ಕೆ ಸದಾ ಪ್ರಯತ್ನಿಸಿದವರಿವರು. ರಾಯರ ಬದುಕಿನಲ್ಲಿ ಎಂದೂ ಜಾತಿ-ಮತ-ಪಂಥಗಳ ಭೇದಭಾವ ಉಂಟಾಗಲಿಲ್ಲ. ಅದಕ್ಕೆ ಸಾಕ್ಷಿ ಎಂಬಂತೆ ರಾಯರಲ್ಲಿ ಮಲ್ಲಿಕಾರ್ಜುನಪ್ಪ ವನಹಳ್ಳಿ ಎಂಬ ಲಿಂಗಾಯತ ವ್ಯಕ್ತಿ ಕೆಲಸ ಮಾಡುತ್ತಿದ್ದನು. ರಾಯರು ಅವನಿಗೆ ಶಿಕ್ಷಕ ಕೆಲಸವನ್ನು ಕೊಟ್ಟು ಅವನನ್ನು ಚೆನ್ನಾಗಿಯೇ ನೋಡಿಕೊಳ್ಳುತ್ತಿದ್ದರು. ಈ ಉಪಕಾರದ ಕೃತಜ್ಞತೆಗಾಗಿ ಅವನು ತನ್ನ ಗಂಡುಮಗುವಿಗೆ 'ಶ್ರೀನಿವಾಸ ವನಹಳ್ಳಿ ಎಂದು ಹೆಸರಿಟ್ಟಿದ್ದನು. ಮುಂದೆ ದೊಡ್ಡವನಾದ ಈ ಶ್ರೀನಿವಾಸ ವನಹಳ್ಳಿ ಹದಿಮೂರನೆಯ ವರ್ಷದ ಶಿಕ್ಷಕ ವೃತ್ತಿಯಲ್ಲಿ ಪರಿಣತನಾಗಿ ಬಂಕಾಪುರದಲ್ಲಿಯೇ ಉಪಶಿಕ್ಷಕನಾಗಿ ಸೇವೆ ಸಲ್ಲಿಸಿರುವರು. ಇದು ಜಾತಿ ಮತಗಳ ಸಂಕುಚಿತ ಸೀಮೆ ಮೀರಿ ರಾಯರು ಬಂಕಾಪುರಕ್ಕೆ ದಯಪಾಲಿಸಿದ ಅತ್ಯುತ್ತಮ ಕೊಡುಗೆ.

ಶ್ರೀ ಗಂಗಾಧರ ತುರಮರಿಯವರ ಪ್ರಯತ್ನದ ಫಲವಾಗಿ ಹುಟ್ಟಿದ ಈ ಪ್ರಾಥಮಿಕ ಶಾಲೆ ಸುಮಾರು ೧೦ ವರ್ಷ ವ್ಯವಸ್ಥಿತವಾಗಿಯೇ ಮುನ್ನಡೆಯಿತು. 'ಇವರ ನಂತರ ಮುಂದೆ ಬಂದಂಥ ಮಾಸ್ತರು ಕೆಲಕೆಲವು ದಿವಸ ಈ ಗ್ರಾಮದಲ್ಲಿ ವಾಸ ಮಾಡಿ ತಮ್ಮ ಕೈಲಾದ ಮಟ್ಟಿಗೂ ಶ್ರಮಪಟ್ಟು ಮೊದಲಿನ ಸ್ಥಿತಿಯನ್ನು ಕೆಡಿಸಿ ಸಾಲಿಯನ್ನು ಸುದ್ದಾ ಬಂದು ಮಾಡಿಸಿಬಿಟ್ಟರು' ಎಂಬುದು ಶಾಲೆಯ ಬಗೆಗೆ 'ಮಠ' ಪತ್ರಿಕೆಗೆ ಪತ್ರ ಬರೆದ ಮಹನೀಯರ ಹೇಳಿಕೆ ಇದೆ. ಇಂಥ ಸಂದಿಗ್ಧ ಸಂದರ್ಭದಲ್ಲಿ ಬಂಕಾಪುರದ ಶಿಕ್ಷಣ ಪ್ರಸಾರದ ಬಹು ಜವಾಬ್ದಾರಿ ಹೊತ್ತು ಸಮರ್ಥವಾಗಿ ಕಾರ್ಯ ನಿರ್ವಹಿಸಿದವರು ಮಾನ್ಯರಾದ ಶ್ರೀ ಗದಿಗೆಪ್ಪ ಚನ್ನಬಸಪ್ಪ ಕಾಳಪ್ಪನವರು. ಈ ಮಾನ್ಯರು ಸಲ್ಲಿಸಿದ ಅನುಪಮ ಸಹಾಯ ಸಹಕಾರ ಹೀಗಿದೆ.

**ಶ್ರೀ ಗದಿಗೆಪ್ಪ ಚನ್ನಬಸಪ್ಪ ಕಾಳಪ್ಪನವರು(ಸು.೧೮೫೦-೧೯೧೨):** ೧೯ನೆಯ ಶತಮಾನದ ಪ್ರಾರಂಭದಲ್ಲಿ ಧರ್ಮಜಾಗೃತಿಗಾಗಿ ಹಾನಗಲ್ಲು ಕುಮಾರ ಶಿವಯೋಗಿಗಳು ಸಲ್ಲಿಸಿದ ಸೇವೆ ಅಪಾರ. ಅಂದು ಅವರು ಬಂಕಾಪುರದಲ್ಲಿ ಒಂದು ಸಂಸ್ಕೃತ ಪಾಠಶಾಲೆ ಪ್ರಾರಂಭಿಸಿದ್ದರು.

ಈ ಶಾಲೆಯ ಬೆಳವಣಿಗೆ ಉತ್ತಮ ಭವಿಷ್ಯಕ್ಕಾಗಿ ಊರ ಹಿರಿಯರು ಸಾರ್ವಜನಿಕ ವಂತಿಕೆ ಕೂಡಿಸಲು ಮುಂದಾದರು. ಮಳೆಯ ಸದಾ ಅವಲಂಬಿಸಬೇಕಿದ್ದ ಬಂಕಾಪುರದಲ್ಲಿ ಆ ವರ್ಷ ಚೆನ್ನಾಗಿ ಫಸಲು ಬಾರದಿದ್ದರಿಂದ ವಂತಿಕೆ ಸರಿಯಾಗಿ ಸಂಗ್ರಹವಾಗದೇ ಹೋಯಿತು. ಇಂಥ ಸಂದಿಗ್ಧ ಸಂದರ್ಭದಲ್ಲಿ ಶ್ರೀ ಗದಿಗೆಪ್ಪ ಕಾಳಪ್ಪನವರು ಈ ಶಾಲೆಗೆ ತಮ್ಮ ಸಮಸ್ತ ಆಸ್ತಿಯನ್ನು ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಗೆ ಬರೆದು ಕೊಟ್ಟು ಆ ಸಂಸ್ಥೆಯ ಆರ್ಥಿಕ ಧನಸಹಾಯದ ಸಹಕಾರದಿಂದ ಬಂಕಾಪುರದಲ್ಲಿ ಸಂಸ್ಕೃತ ಪಾಠಶಾಲೆ ನಡೆಸಲು ಮುಂದಾದರು. ಈ ಕಾರ್ಯಕ್ಕಾಗಿ ಅವರು ಬಂಕಾಪುರದ ಅಂಕದಖಣ ಮತ್ತು ಚಿಕ್ಕನೆಲ್ಲೂರು ಗ್ರಾಮಗಳಲ್ಲಿಯ ಎಪ್ಪತ್ತೇಳು ಎಕರೆ ಎರಡು ಗುಂಟೆ ಸುಧಾರಿತ ಭೂಮಿಯನ್ನು ದಾನ ಕೊಟ್ಟಿದ್ದರಲ್ಲದೆ ಶಹಬಝಾರ ದಲ್ಲಿರುವ ಭವ್ಯ ಮನೆಯೊಂದನ್ನು ಪಾಠಶಾಲೆಗೆ ಬಿಟ್ಟುಕೊಟ್ಟರು. ಈ ಉದಾರ ದೇಣಿಗೆಯನ್ನು ಅವರೇ ತಮ್ಮ ಮೃತ್ಯುಪತ್ರದಲ್ಲಿ ದಾಖಲಿಸಿದ್ದಾರೆ. ಅವಗಾಹನೆಗೆ ಆ ಮೃತ್ಯು ಪತ್ರದ ಒಕ್ಕಣಿಕೆ ಹೀಗಿದೆ.

Will executed by shri Gadigeppa Channabasappa Kalappanavar of Bankapur on 28th November 1907:

Being advised by the Hangal kumarswamiji to open a Sanskrit School at Bankapur to saw religious seeds among the lingayats we, the in habitants of Bankapur have collected a fund with an ordent desire to establish a Pathashala here sufficient money has not been subscribed as Bankapur is not a big village. I therefore far maintaining the Pathashala at Bankapur give the following immovable property.

| **Rs No.** | **OF Kundur** | **Assessment** |
|---|---|---|
| | Acres Guntas | |
| 32 | 14-13 | 21 |
| 33 | 16-21 | 27 |
| | OF Chikkanellur | |
| 44 | 24-33 | 53 |

A house in Shahabazar. The property should be handed over to the members of the committee appointed for the purpose in our village. If pathashala is established at bankapur' failing which these three surve Nos, & the house should go to the Lingayat Education Association Dharwad & the profit of this immovable properties should utilised for the general purpose for the same.

ಈ ಉದಾರದಾನಿಗಳ ಉದಾರ ದಾನದಿಂದ ಈ ಸಂಸ್ಕೃತ ಪಾಠಶಾಲೆ ಕೆಲವು ಕಾಲ ಚೆನ್ನಾಗಿಯೇ ಮುಂದುವರೆಯಿತು. ಕಾಲಾಂತರದಲ್ಲಿ ೧೯೫೮ ಸುಮಾರಿಗೆ ಬಂಕಾಪುರದ ನಾಡಶಿಕ್ಷಣ ಸಮಿತಿಯ ಆಶ್ರಯದಲ್ಲಿ 'ದಿ ಮಾಡರ್ನ ಇಂಗ್ಲೀಷ ಸ್ಕೂಲ' ಇದೇ ಸಂಸ್ಕೃತ ಪಾಠಶಾಲೆಯ ಕಟ್ಟಡದಲ್ಲಿ ಮುನ್ನಡೆದು ಬಂದಿದೆ. ಇಂದಿಗೂ ನೂರಾರು ಬಡ ವಿದ್ಯಾರ್ಥಿಗಳ ವಿದ್ಯಾಭ್ಯಾಸ ಇಲ್ಲಿ ಜರುಗುತ್ತಿದೆ. ಹೈಸ್ಕೂಲ ಮಟ್ಟದ ಶಿಕ್ಷಣ ಕೇಂದ್ರ ಇಲ್ಲಿದೆ. ಭಾಷಾ ಸೌಹಾರ್ದವೆಂಬಂತೆ ಪೂರ್ಣ ಪ್ರಾಥಮಿಕ, ಮಾಧ್ಯಮಿಕ ಉರ್ದು ಶಾಲೆಗಳು ಇಲ್ಲಿವೆ. ಹೆಣ್ಣುಮಕ್ಕಳಿಗೆ ಹೊಲಿಗೆ, ಹೆಣಿಕೆಯ ಬಿಡುವಿನ ದುಡಿಮೆಯ ಕೇಂದ್ರಗಳು ಇಲ್ಲಿವೆ. ಇತ್ತೀಚೆಗೆ ಪ್ರಾರಂಭವಾದ ಕೀರ್ತಿ ವಿದ್ಯಾಸಂಸ್ಥೆಯ, ಸಂಯುಕ್ತ ಮಹಾವಿದ್ಯಾಲಯವೊಂದು ಇಲ್ಲಿದ್ದು, ವಿಭಿನ್ನ ರೀತಿಯ ಉಚ್ಚಶಿಕ್ಷಣಕ್ಕೆ ಬಂಕಾಪುರದ ಮಕ್ಕಳು ಪರನಾಡಿನ ಮುಖ ನೋಡಬೇಕಿದೆ.

**೫.೩. ಆರ್ಥಿಕ ಚಹರೆಗಳು ಮತ್ತು ಸ್ಥಿತಿಗತಿ**

ಬಂಕಾಪುರ ಗ್ರಾಮದಲ್ಲಿ ಕೃಷಿ ಸಂಸ್ಕೃತಿ ಪ್ರಧಾನವಾಗಿದೆ. ಕೃಷಿ ಪದ್ಧತಿಯು ಭೌಗೋಳಿಕವಾಗಿ ಬೇರೆ ಬೇರೆ ಪ್ರದೇಶಗಳು ಪ್ರಾಕೃತಿಕ ಸನ್ನಿವೇಶಗಳ ಸಂದರ್ಭಗಳನ್ನು ಅನುಸರಿಸಿ ಮತ್ತು ಅವುಗಳಲ್ಲಿನ ಸಾಮಾಜಿಕ ಸ್ಥಿತಿ ಹಾಗೆಯೇ ಅಧಿಕ ಹಣದ ಖರ್ಚಿಲ್ಲದೆ ಹವಾಮಾನಕ್ಕೆ ಅನುಗುಣವಾಗಿ ಹೊಂದಿಕೊಂಡು ಸರಳ ಜ್ಞಾನ ಪ್ರಯೋಗದಲ್ಲಿ ವ್ಯವಸಾಯವನ್ನು ಮಾಡುವುದಾಗಿದೆ. ಹಣದಾಸೆಗೆ ಬಲಿಯಾಗದೆ ನಿರಾಶೆಯನ್ನು ಪಡದೆ ಸಮ ಸ್ಥಿತಿಯಲ್ಲಿ ಕೃಷಿಯಲ್ಲಿ ಬದುಕು ನಡೆಸುತ್ತಿದ್ದಾರೆ. ಗ್ರಾಮದಲ್ಲಿ ಕೃಷಿಗೆ ಯೋಗ್ಯವಾದ ಭೂಮಿ ಮತ್ತು ಪರಿಸರವನ್ನು ಹೊಂದಿದೆ. ಬಂಕಾಪುರ ಗ್ರಾಮದಲ್ಲಿ ಅನೇಕ ರೀತಿಯ ಕೆರೆ, ಕಟ್ಟೆ, ಬಾವಿಗಳ ಇರುವಿಕೆಯನ್ನು ಕಾಣಬಹುದಾಗಿದೆ. ಇಲ್ಲಿನ ಪರಿಸ್ಥಿತಿ ಕರ್ನಾಟಕದ ಇತರೆ ಬೇರೆ ಬೇರೆ ಪ್ರದೇಶಗಳಲ್ಲಿ ಕಂಡು ಬರುತ್ತಾದರೂ ಜನಪದೀಯವಾಗಿ, ಸಾಂಸ್ಕೃತಿಕವಾಗಿ ವಿಶೇಷವಾದ ಪ್ರಾಮುಖ್ಯತೆಯನ್ನು ನೀಡಲಾಗುತ್ತದೆ.

ಹತ್ತಿ, ಮೆಕ್ಕೆಜೋಳ, ಬಿಳಿಜೋಳ ಶೇಂಗಾ, ಈರುಳ್ಳಿ, ಬೆಳ್ಳುಳ್ಳಿ, ತೊಗರಿ, ಅಲಸಂದಿ, ಸೂರ್ಯಕಾಂತಿ, ಅವರೆ, ಉದ್ದು, ಸೋಯಾಬಿನ್, ಮೆಣಸಿನಕಾಯಿ ಮುಂತಾದವನ್ನು ಬೆಳೆಯುತ್ತಾರೆ.

**ಸಾಂಪ್ರದಾಯಿಕ ಕೃಷಿ ಪದ್ದತಿ:** ಈ ಗ್ರಾಮದಲ್ಲಿ ಸಾಂಪ್ರದಾಯಿಕವಾಗಿ ಕೃಷಿ ಮಾಡುತ್ತಿದ್ದಾರೆ. ಬಂಕಾಪುರ ಗ್ರಾಮದವರು ನೆಲ, ಜಲ ಹವಾಮಾನಗಳ ಲಭ್ಯತೆಯನ್ನು ಅರಿತು ಕೃಷಿ ಜ್ಞಾನವನ್ನು ಬಳಸಿಕೊಂಡಿದ್ದಾರೆ. ಗ್ರಾಮದಲ್ಲಿ ಪರಿಸರ, ಪ್ರಕೃತಿಯನ್ನು ಅತ್ಯಂತ ಹೃದಯ ಪೂರ್ವಕವಾಗಿ ಆರಾಧನೆಯನ್ನು ಮಾಡುತ್ತಾರೆ. ಕೃಷಿಯೇ ಮಾನವನ ಭೂಮಿ ಬಿಸಿಲು, ಮಳೆ, ಹವಾಮಾನಗಳಿಗೆ ಹೊಂದಿಕೊಂಡು ಅರಳಿ ರೂಪಗೊಂಡಿದ್ದ ಅನುಭವ, ಅನುಸರಣೆಯಿಂದಾಗಿ ರೈತ ಸಾಲ ತೀರಿಸಲಿಕ್ಕಾಗದೆ ಸಾವಿಗೆ ಶರಣಾಗುವ ದುರ್ಬಲ ಮನಸ್ಥಿತಿಗೆ ಬಂದಿದ್ದಾನೆ.

**ಒಣ ಬೇಸಾಯ ಅಥವಾ ಖುಷ್ಕಿ ಬೇಸಾಯ:** ಹೆಸರೇ ಹೇಳುವಂತೆ ಮಳೆಯನ್ನು ಆಧರಿಸಿ ಬೆಳೆಯುವ ಬೇಸಾಯ ಬೆಳೆಗಳಿಗೆ ಒಣ ಬೇಸಾಯ ಅಥವಾ ಖುಷ್ಕಿ ಬೇಸಾಯ ಎಂದು ಕರೆಯುತ್ತಾರೆ.

**ಒಕ್ಕಲುತನ:** ಬಂಕಾಪುರ ಗ್ರಾಮದ ಜನರು ತಮ್ಮ ಜೀವನಕ್ಕೆ ಬೇಕಾದಂತಹ ಮೂಲಭೂತ ಸೌಕರ್ಯಗಳನ್ನು ಒಕ್ಕಲುತನ ಮಾಡುವುದರ ಮೂಲಕ ಬಡವರು ತಮ್ಮ ಜೀವನವನ್ನು ನಡೆಸಿ ಕೊಂಡು ಹೋಗುತ್ತಿರುವದನ್ನು ಸಾಮಾನ್ಯವಾಗಿ ಕಾಣಬಹುದು.

**ಹಂತಗಳು:** ರೈತರು ಹೊಲವನ್ನು ಬಿತ್ತನೆ ಮಾಡುವಾಗ ಮೂರು ರೀತಿಯಾದಂತಹ ಹಂತದಲ್ಲಿ ಮಾಡುತ್ತಾರೆ. ಬಿತ್ತನೆ ಮಾಡುವುದು, ಫಸಲು ಸರಿಯಾಗಿ ಪೋಷಣೆ ಮಾಡುವುದು ಹಾಗೂ ಕಟಾವು ಮಾಡುವುದನ್ನು ಕಾಣುತ್ತೇವೆ.

**ನೆಲ ಹಸನು ಮಾಡುವುದು:** ಮಳೆ ಬಿದ್ದ ನಂತರ ಪುರುಷರು ಉಳುಮೆ ಮಾಡುವ ಪೂರ್ವದಲ್ಲಿ ನೆಲ ಹದಗೊಂಡಿರುವುದನ್ನು ಪರೀಕ್ಷಿಸುತ್ತಾರೆ. ಇದಕ್ಕೆ ಎರಡು ಮೂರು ಬಾರಿ ರೆಂಟೆ ಹೊಡೆದು, ಕೊಟ್ಟಿಗೆ ಗೊಬ್ಬರ ಹರಡಿ ಕುಂಟೆಯಿಂದ ಹರಗುತ್ತಾರೆ. ಇದನ್ನು ರಂಟೆ ಹೊಡೆಯುವುದು ಅಥವಾ ಹೊಲ ಉಳುವುದು ಎನ್ನುತ್ತಾರೆ. ಹೊಲದಲ್ಲಿ ಬೆಳೆದ ಅನಗತ್ಯ ಹುಲ್ಲು ಸೊಪ್ಪು ಸೆದೆ ಗಿಡಗಳನ್ನು ಕಿತ್ತು ಹೊಲದ ಬದುವಿಗೆ ಹಾಕುತ್ತಾರೆ ಇಲ್ಲವೇ ಸುಟ್ಟು ಹಾಕುತ್ತಾರೆ. ರೈತರು ಭೂಮಿಯನ್ನು ಉಳುಮೆ ಮಾಡುವ ಪೂರ್ವದಲ್ಲಿ ಬಿತ್ತನೆಗೆ ಯೋಗ್ಯ ವಾಗಿದೆಯೊ ಅಥವಾ ಇಲ್ಲವೊ ಎಂಬುದನ್ನ ತಮ್ಮದೇ ಆದ ಜ್ಞಾನದಿಂದ ಕಂಡಿಹಿಡಿಯುತ್ತಾರೆ. ಮಳೆ ಬಿದ್ದ ಒಂದು ವಾರದ ನಂತರ ಗುದ್ದಲಿಯಿಂದ ಮಣ್ಣನ್ನು ತೆಗೆದು ನೋಡುತ್ತಾರೆ. ಭೂಮಿಯಲ್ಲಿ ನೀರು ಇಂಗಿ ಮಣ್ಣು ಸುಲಭವಾಗಿ ಮೇಲೆ ಬಂದರೆ ಭೂಮಿ ಬಿತ್ತನೆಗೆ ಯೋಗ್ಯವಾಗಿದೆ ಎಂದು ತಿಳಿಯುತ್ತಾರೆ. ಮುಂಗಾರು ಮಳೆ ಪ್ರಾರಂಭವಾಗುವ ಮುನ್ನ ಹೊಲವನ್ನು ನೇಗಿಲಿನಿಂದ ಹೊಡೆದು ಸುಮಾರು ಎರಡು ತಿಂಗಳು ಕಾಲ ಬಿಸಿಲಿಗೆ ಒಣಗಲಿ ಎಂದು ಹಾಗೆಯೇ ಬಿಟ್ಟು ಮಳೆ ಬಿದ್ದಾಗ ಕುಂಟೆ ಹರಗಿ ಬಿತ್ತನೆ ಮಾಡುತ್ತಾರೆ.

**ಬೀಜದ ಆಯ್ಕೆ:** ಉತ್ಕೃಷ್ಟವಾದ ಬೆಳೆದ ತೆನೆಗಳನ್ನು ಆಯ್ಕೆ ಮಾಡಿಕೊಂಡು ಒಕ್ಕಣೆ ಮಾಡಿ ಅದರಲ್ಲಿ ಮಿಶ್ರವಾಗಿರುವಂತ ಬೇರೆ ಕಾಳುಗಳನ್ನು ತೆಗೆದು ಹಾಕುತ್ತಾರೆ. ಅವನ್ನು ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿ ಕಣಜ, ವಾಡೆ, ಗೋಡಾನು ಮತ್ತು ಹಗೇವುಗಳಲ್ಲಿ ಸಂಗ್ರಹಿಸಿ ಸಂರಕ್ಷಣೆ ಮಾಡುತ್ತಾರೆ. ಇನ್ನು ಕೆಲವೊಂದು ಬೀಜಗಳನ್ನು ಕೆಮ್ಮಣ್ಣಿನಿಂದ ಬೆರೆಸಿ ಬೇವಿನ ತೊಪ್ಪಲು ಹಾಕಿ ಬೀಜಗಳನ್ನು ಸಂರಕ್ಷಿಸುತ್ತಾರೆ, ಈ ಕ್ರಮ ಅನುಸರಿಸುವುದರಿಂದ ಉತ್ಕೃಷ್ಟವಾದ ಬೀಜಗಳು ತಯಾರಾಗುತ್ತವೆ ಮತ್ತು ರೋಗಮುಕ್ತವಾಗುತ್ತವೆ. ಇಂತಹ ಬೀಜಗಳನ್ನು ಆಯ್ಕೆ ಮಾಡಿಕೊಂಡು ಭೂಮಿಯ ಫಲವತ್ತತೆಗೆ ಅನುಗುಣವಾಗಿ ಬೀಜ ಆಯ್ಕೆ ಮಾಡಿಕೊಳ್ಳುತ್ತಾರೆ

ಕೆಲವೊಂದು ನಂಬಿಕೆಗಳ ಆಧಾರದ ಮೇಲೆ ಬೀಜಗಳನ್ನು ದೇವರ ಸನ್ನಿಧಿಗೆ ಇಟ್ಟು ನಂತರ ಅವಕ್ಕೆ ಅರಿಶಿಣ ಲೇಪಿಸಿ ಕಾಳುಗಳನ್ನು ಪೂಜಿಸಿ ಅರ್ಚಕ ರೈತರಿಗೆ 'ಹುಲುಸು ಜೋಳ' ಅಥವಾ 'ಹುಲುಸು ಕಾಳು' ಗಳನ್ನು ಕೊಡುತ್ತಾರೆ. ಅವನ್ನು ಬಿತ್ತನೆ ಮಾಡುವ ಬೀಜದಲ್ಲಿ ಮಿಶ್ರ ಮಾಡಿ ಬಿತ್ತುವ ಪದ್ಧತಿ ಅನುಸರಿಸುತ್ತಾರೆ.

**ಬೀಜ ಬಿತ್ತವುದು:** ನಾಟಿ ಮಾಡುವುದಕ್ಕಿಂತ ಬಿತ್ತನೆ ಮಾಡುವುದು ಹೆಚ್ಚಾಗಿ ಕಂಡುಬರುತ್ತದೆ. ಹಸನು ಮಾಡಿದ ಹೊಲಗಳಿಗೆ ಮಳೆಯ ಆದ ಪ್ರಮಾಣಕ್ಕೆ ಅನುಗುಣವಾಗಿ ಬಿತ್ತನೆ ಮಾಡಲು ಪ್ರಾರಂಭಿಸುತ್ತಾರೆ. ರೋಹಿಣಿ ಮಳೆಗೆ ಜೋಳವನ್ನು ಅಸ್ಲಿ ಮಳೆಗೆ ಹತ್ತಿ ಬಿತ್ತುವ ಪದ್ದತಿ ಇದೆ. ಹೀಗೆ ಒಂದೊಂದು ಮಳೆಗೆ ಇಂತಿಂತಹ ಧಾನ್ಯಗಳ ಬಿತ್ತನೆ ಬೀಜಗಳು ಶ್ರೇಷ್ಠ ಎಂದು ರೈತರು ತಿಳಿದುಕೊಂಡಿದ್ದಾರೆ. ಬೀಜ ಬಿತ್ತನೆಗೆ ಕೂರಗಿಯನ್ನು ಬಳಸುತ್ತಾರೆ. ಮನೆ ಮುಂದಿನ ಜಗುಲಿಯ ತೊಲೆ ಮೇಲೆ ಮೂರು ಅಥವಾ ನಾಲ್ಕು ಕಾಳಿನ ಕೂರಿಗೆ ತೆಗೆದು ಅದು ಸರಿಯಾಗಿದೆಯೋ ಇಲ್ಲವೋ ಎಂದು ಪರೀಕ್ಷಿಸಿದ ನಂತರ ಅದಕ್ಕೆ ಬಟ್ಟಲು ಕಟ್ಟಿ ಮನೆಯ ಪಡಸಾಲೆಯಲ್ಲಿ ಕಂಬಳಿ ಹಾಸಿ ಕೂರಿಗೆಯನ್ನು ಇಡುತ್ತಾರೆ. ಕೂರಿಗೆಗೆ ಹೂವಿನ ಮಾಲೆ ಹಾಕಿ ಅದರ ದಿಂಡು ಮತ್ತು ಪೀಣೆ ಸೇರಿಸಿ ಸೀರೆ, ಕುಪ್ಪಸ ತೊಡಿಸುತ್ತಾರೆ. ಕೂರಿಗೆಯ ಕೊಳದ ಭಾಗಕ್ಕೆ ಉಡಿಚೀಲ ಕಟ್ಟಿ ಬಿತ್ತನೆ ಬೀಜಗಳಾದ ಜೋಳ, ಶೇಂಗಾ, ಅಕ್ಕಡಿ, ಹಾಕುತ್ತಾರೆ. ನಂತರ ಹಿರಿಯರಿಂದ ಪೂಜೆ ಸಲ್ಲಿಸುತ್ತಾರೆ. ಪೂಜೆಗಾಗಿ ಜೋಳದ ರೊಟ್ಟಿ, ಕಡಬು, ಶೇಂಗಾಹೋಳಿಗೆ, ಅಗಸಿಚಟ್ನಿ, ಪುಂಡಿ ಪಲ್ಯಗಳಿರುತ್ತವೆ. ಈ ಪೂಜೆಗೆ ಊರಿನ ಹಿರಿ–ಕಿರಿಯರನ್ನು ಪ್ರಸಾದಕ್ಕೆ ಬರ ಹೇಳುವುದು ರೂಢಿಯಲ್ಲಿದೆ. ನಂತರ ಬಿತ್ತನೆ ಮಾಡಲು ಕೂರಿಗೆಯನ್ನು ಹೆಗಲ ಮೇಲೆ ಹೊತ್ತು ಹೊಲಕ್ಕೆ ಹೊರಡುತ್ತಾರೆ. ಬೀಜ ಬಿತ್ತನೆ ಮಂಗಳವಾರ ಅಥವಾ ಶುಕ್ರವಾರ ಮಾಡುತ್ತಾರೆ. ಇನ್ನು ಕೆಲವು ರೈತರು ಮನೆಗೆ ಹೊಸದಾಗಿ ಬಂದ ಸೊಸೆಯ ಕಡೆಯಿಂದ ಬಿತ್ತನೆ ಮಾಡಿಸುವ ಪದ್ದತಿ ಕೂಡಾ ಇದೆ. ಒಟ್ಟಾರೆಯಾಗಿ ಹೇಳುವುದಾದರೆ ಉತ್ತಮ ಫಸಲಿಗೆ ಉತ್ತಮ ಬಿತ್ತನೆಯೇ ಮೂಲ ಎಂಬುದು ರೈತರ ಅನುಭವದ ಮಾತಾಗಿದೆ.

**ಮೆದೆ ಹಾಕುವುದು:** ಹೊಲದಲ್ಲಿ ಬೆಳೆದಂತಹ ಬೆಳೆಗಳನ್ನು ಕಟಾವು ಮಾಡಿದ ನಂತರ ಅವುಗಳನ್ನು ಸಿವುಡುಗಳ ರೂಪದಲ್ಲಿ ಕಟ್ಟಿ ಒಣಗಿಸಲು ಬಿಡುತ್ತಾರೆ. ಆ ನಂತರ ಕಣಗಳನ್ನು ಮಾಡಿ ಬೆಳೆದಂತಹ ಬೆಳೆಗಳನ್ನು ತಂದು ಹಸನು ಮಾಡಿ ಧಾನ್ಯಗಳನ್ನು ತೆಗೆಯುತ್ತಾರೆ. ಈ ಸಂದರ್ಭದಲ್ಲಿಯೇ ಹಸನ ಮಾಡಿ ಪೂಜೆ ಮಾಡಿ ತಮ್ಮ ಮನೆಗೆ ತೆಗೆದುಕೊಂಡು ಹೋಗುತ್ತಾರೆ

**ಒಕ್ಕುವುದು ಅಥವಾ ಒಕ್ಕಣೆ ಮಾಡುವುದು:** ರೈತರು ಬೆಳೆದಂತಹ ಅದರ ಫಲ ತೆಗೆದುಕೊಂಡು ಕಟಾವು ಮಾಡಿದ ನಂತರ ಒಕ್ಕಣೆಯನ್ನು ಮಾಡುವುದಾಗಿದೆ. ರೈತರು ಸಮೃದ್ಧಿಯಾಗಿ ಬೆಳೆದ ಜೋಳ, ಗೋವಿ ಜೋಳ, ರಾಗಿ ಅವರೇ, ಹುರುಳಿ, ನವಣೆ, ಭತ್ತ ಹೀಗೆ ಮೊದಲಾದ ಧಾನ್ಯಗಳನ್ನು ಹುಲ್ಲಿನಿಂದ ಕಾಳುಗಳನ್ನು ಬೇರ್ಪಡಿಸುತ್ತಾರೆ.

**ಕಣ:** ಹೊಲ ಅಥವಾ ಗದ್ದೆಯಲ್ಲಿ ಧಾನ್ಯ ಒಕ್ಕಣೆಗಾಗಿ ರಚಿಸಿಕೊಳ್ಳುವ ಒಂದು ಅಂಗಳ. ಇದು ಸಾಮಾನ್ಯವಾಗಿ ಚಚ್ಚೌಕಾಕಾರವಾಗಿ ರಚಿತವಾಗಿರುತ್ತದೆ. ಅದಕ್ಕೆ ಸಗಣಿ ರಾಡಿಯನ್ನು ಹಾಕುವುದು ಹಾಗೂ ಎತ್ತುಗಳಿಂದ ಚೆನ್ನಾಗಿ ತುಳಿದು ಬಿಗಿ ಬರುವವರೆಗೂ ತುಳಿಸಿ ಗಟ್ಟಿಗೊಳಿಸುತ್ತಾರೆ. ರೋಣಿಗಲ್ಲಿನಿಂದ ಹೊಡೆದು ಸಮತಟ್ಟಾಗಿ ಮಾಡಿ ಚೆನ್ನಾಗಿ ಸ್ವಚ್ಚ ಮಾಡಿ ಒಣಗಿದ ನಂತರ ಕಣವನ್ನು ಮಾಡುವರು. ಈ ರೀತಿ ಸಜ್ಜಾದ ಕಣಕ್ಕೆ ಬೆಳೆದ ಬೆಳೆಗಳನ್ನು ತಂದು ಹಸನು ಮಾಡಿಕೊಳ್ಳುತ್ತಾರೆ.

**ರಾಶಿ ಪೂಜೆ:** ಜನಪದರ ನಂಬಿಕೆಯೇ ಅವರ ಉಸಿರಾಗಿದೆ. ರೈತರು ವರ್ಷವಿಡೀ ಬೆಳೆದ ಬೆಳೆಗಳನ್ನು ಕಟಾವು ಮಾಡಿಕೊಂಡು ಬಂದು ಅವುಗಳನ್ನು ಕಣದಲ್ಲಿ ಹಸನ ಮಾಡುವರು. ಹಸನ ಮಾಡಿ, ರಾಶಿ ಪೂಜೆ ಮಾಡಿ, ತಮಗೆ ಬೇಕಾದವರನ್ನು ಕರೆದು ಅಂದು ರಾತ್ರಿ ಸುಂಕ ಬುತ್ತಿ ಎಂದು ಎಲ್ಲರಿಗೂ ಊಟದ ವ್ಯವಸ್ಥೆ ಮಾಡಲಾಗುತ್ತದೆ. ಆ ನಂತರ ತಮ್ಮ ಮನೆಯ ಆಯಗಾರರಿಗೆ ಬೆಳೆದ ಬೆಳೆಯಲ್ಲಿ ಪಾಲನ್ನು ಕೊಡಲಾಗುವುದು. ಆ ನಂತರದಲ್ಲಿ ಬೆಳೆಗಳನ್ನು ಮನೆಗೆ ತರಲಾಗುವುದು. ತಮಗೆ ಬೇಕಾದಷ್ಟನ್ನು ಮನೆಗೆ ಇಟ್ಟುಕೊಂಡು ಉಳಿದಿದ್ದನು ಮಾರಾಟ ಮಾಡಲಾಗುತ್ತದೆ.

**ಭಣವೆ/ಧಾನ್ಯ ಸಂಗ್ರಹಣೆ:** ಒಕ್ಕಣೆ ಕೆಲಸ ಮುಗಿದ ಮೇಲೆ ಜಾನುವಾರುಗಳಿಗಾಗಿ ಆಹಾರ ಸಂಗ್ರಹಿಸುತ್ತಾರೆ. ಇದಕ್ಕಾಗಿ ಜೋಳದ ಒಣ ಸೊಪ್ಪೆಯಿಂದ ಬಣವೆಗಳನ್ನು ನಿರ್ಮಿಸುತ್ತಾರೆ. ಇದರ ತಳಪಾಯಕ್ಕೆ ಕಡ್ಡಿಯನ್ನು ಒಂದರಿಂದ ಎರಡು ಅಡಿ ಎತ್ತರಕ್ಕೆ ಹಾಸಲಾಗುತ್ತದೆ. ಭಣವೆ ಹಾಕುವ ಮುನ್ನ ಸೊಪ್ಪಿಗೆ ಉಪ್ಪುಕಲಸಿದ ನೀರನ್ನು ಚಿಮುಕಿಸುವ ಕ್ರಮವಿದೆ. ದನಗಳಿಗೆ ರುಚಿ ಬರಲೆಂದು ಈ ಕ್ರಮ ಅನುಸರಿಸುತ್ತಾರೆ. ಈ ಬಣವೆಯನ್ನು ಪೂರ್ವ–ಪಶ್ಚಿಮವಾಗಿ ನಿರ್ಮಿಸಲಾಗುತ್ತದೆ. ಸಾಮಾನ್ಯವಾಗಿ ಈ ಬಣವೆ ನಿರ್ಮಿಸಲು ೪ ರಿಂದ ೬ ಮಂದಿ ಬೇಕಾಗುತ್ತದೆ. ಕೆಲವು ೪ ರಿಂದ ೬ ವರ್ಷಗಳವರೆಗೆ ಇದ್ದು ಜಾನುವಾರಗಳಿಗೆ ಅನುಕೂಲವಾಗುತ್ತದೆ.

**ಹಗೇವು:** ಧಾನ್ಯ ಮತ್ತು ಬೀಜ ಸಂರಕ್ಷಣೆಗಾಗಿ ಸಂಬಂಧಿಸಿದಂತೆ ಪಾರಂಪರಿಕ ಪದ್ಧತಿ ಅನುಸರಿಸುವುದು ಕಂಡುಬರುತ್ತದೆ. ವರ್ಷ ಪೂರ್ತಿ ಬೆವರು ಸುರಿಸಿ ಬೆಳೆದ ಧಾನ್ಯಗಳನ್ನು ಪ್ರಾಣಿ–ಪಕ್ಷಿಗಳಿಂದ, ಕ್ರಿಮಿ ಕೀಟಗಳಿಂದ ಸಂರಕ್ಷಿಸಲು ತಮ್ಮದೇ ಆದ ವಿಧಾನವನ್ನು ಅನುಸರಿಸುತ್ತಾರೆ.. ಹಗೇವು ,ಕಣಜ, ವಾಡೆ, ಗೋದಾಮು ಮತ್ತು ಮಡಿಕೆಗಳಲ್ಲಿ ಸಂಗ್ರಹಿಸುವ ಪದ್ಧತಿ ಇದೆ.

**ಅಳತೆ ಸಾಧನಗಳು:** ನಮ್ಮ ಪೂರ್ವಜರು ತಾವು ಕೊಂಡುಕೊಂಡಂತಹ ವಸ್ತುಗಳನ್ನು ಮತ್ತು ದಿನನಿತ್ಯದ ವ್ಯವಹಾರಗಳನ್ನು ನಡೆಸಲಿಕ್ಕೆ ಅವರದೇ ಆದ ಅಳತೆಯ ಮಾಪನಗಳನ್ನು ಮಾಡಿಕೊಂಡಿರುವುದನ್ನು ಕಾಣಬಹುದು. ಈಗಲೂ ಸಹ ಗ್ರಾಮೀಣ ಪ್ರದೇಶಗಳಲ್ಲಿ ಇವುಗಳನ್ನು

ಮಾಪನಗಳನ್ನಾಗಿ ಉಪಯೋಗಿಸುತ್ತಾರೆ. ಒಂದು ನಿರ್ದಿಷ್ಟತೆಯನ್ನು ಕಂಡುಹಿಡಿಯಲು ಅವುಗಳ ಪ್ರಮಾಣ ತಿಳಿಯಲು ಅಳತೆಯ ಮಾಪನಗಳನ್ನು ತಾವೇ ತಯಾರು ಮಾಡಿಕೊಳ್ಳುತ್ತಿದ್ದರು.

**ಕೊಳಗ:** ಒಂದು ವೃತ್ತಾಕಾರವುಳ್ಳ ಅಳತೆಯ ಮಾಪನವು ಇದಾಗಿದೆ. ನೋಡಲಿಕ್ಕೆ ಸಿಲಿಂಡರಿನಾಕಾರದಲ್ಲಿರುತ್ತದೆ. ಇದನ್ನು ಕಬ್ಬಿಣದ ತಗಡಿನಿಂದ ತಯಾರಿಸಿರುತ್ತಾರೆ.

**ಇಬ್ಬಳಿಗೆ:** ಇಬ್ಬಳಿಗೆಯು ಒಂದು ಅಡಿ ಎತ್ತರ ಒಂದು ಅಡಿ ಅಗಲವಾಗಿರುತ್ತದೆ. ಬಾಯಿ ಸ್ವಲ್ಪ ಅಗಲವಾಗಿರುತ್ತದೆ. ಬಾಯಿ ಸ್ವಲ್ಪ ಅಗಲವಾಗಿದ್ದನ್ನು ಅಳೆಯುವಂತಹ ಮಾಪನವಾಗಿದೆ.

**ಸೇರು:** ಗ್ರಾಮೀಣ ಪ್ರದೇಶದಲ್ಲಿ ಧಾನ್ಯಗಳನ್ನು ಅಳೆಯಲು ಬಳಸುತ್ತಾರೆ. ಸೇರು ಮದುವೆಯಾಗಿ ಹೊಸಮನೆಗೆ ಪ್ರವೇಶ ಮಾಡುವಂತಹ ಮದುಮಗಳು ಸೇರು ಒದ್ದು ಅವರ ಮನೆಯ ಒಳಗೆ ಹೋಗುತ್ತಾರೆ. ಸೇರಿನ ತುಂಬಾ ಅಕ್ಕಿ-ಬೆಲ್ಲ ಇಟ್ಟು ಬಾಗಿಲಿಗೆ ಪೂಜೆ ಮಾಡಿ ಅದನ್ನು ಹೊಸದಾಗಿ ಮದುವೆಯಾದ ಹೆಣ್ಣು ತನ್ನ ಗಂಡನ ಮನೆಗೆ ಪ್ರವೇಶ ಮಾಡುವಾಗ ಈ ಆಚರಣೆ ಮಾಡುತ್ತಾರೆ.

**ಪಾವು:** ಬಂಕಾಪುರ ಗ್ರಾಮದಲ್ಲಿ ನಾವು ಪಡಿ ಪಾವು ಅಂದರೆ ಕಾಲುಸೇರು ತುಂಬುವಂತಹ ಸಾಧನವಾಗಿದೆ. ಅತಿ ಕಡಿಮೆ ದವಸ ಧಾನ್ಯಗಳಾದ ಬೇಳೆಕಾಳು, ಕಾರದಪುಡಿ, ಉಪ್ಪು ಮುಂತಾದವನ್ನು ಅಳೆಯಲು ಬಳಸುವ ಸಾಧನ.

**ಚಟಾಕ:** ಅತ್ಯಂತ ಚಿಕ್ಕದಾದಂತಹ ಕನಿಷ್ಠ ಪ್ರಮಾಣದ ವಸ್ತುಗಳನ್ನು ಅಳತೆ ಮಾಡಲು ಬಳಸುವಂತಹ ಪ್ರಮುಖ ಸಾಧನಗಳಲ್ಲಿ ಇದು ಒಂದಾಗಿದೆ.

**ಇಂಚು;**-ಬೆರಳ ತುದಿಯಲ್ಲಿನ ಒಂದು ಗೆರೆಯವರೆಗಿನ ಉದ್ದಕ್ಕೆ ಇಂಚು ಎನ್ನುವರು. ಅತ್ಯಂತ ಕಡಿಮೆ ಉದ್ದ ಅಳೆಯುವುದಕ್ಕೆ ಬಳಸುತ್ತೇವೆ. ಅರ್ಧ ಇಂಚು, ಕಾಲು ಇಂಚು ಎಂದು ಲೆಕ್ಕವನ್ನು ಮಾಡುವುದನ್ನು ಕಾಣಬಹುದು.

**ಮೊಳ:** ದೇವಸ್ಥಾನದ ಮುಂದೆ ಹೂವುಗಳನ್ನು ಮಾರುವವರೆಲ್ಲಾ ಒಂದು ಮೊಳ ಐದು ಮೊಳದ ಹೂವು ಕೊಂಡುಕೊಳ್ಳುವುದನ್ನು ಈಗಲೂ ಕಾಣುತ್ತೇವೆ. ನಾವು ಹೊಲವನ್ನು ಸಹ ಅಳತೆ ಮಾಡುವಾಗ ಬಳಸುತ್ತೇವೆ.

**ಅರ್ಧಮಾರು:** ಒಂದು ಕೈಯನ್ನು ಭುಜದ ನೇರವಾಗಿ ಪಕ್ಕಕ್ಕೆ ಚಾಚಿದರೆ ಮಧ್ಯದ ಬೆರಳಿನ ತುದಿ ಮತ್ತು ಎದೆಯ ಮಧ್ಯದ ಭಾಗ ಇವುಗಳ ನಡುವಿನ ಅಂತರವನ್ನು ಅರ್ಧಮಾರು ಎನ್ನುತ್ತಾರೆ.

**ಮಾರುದ್ದ:** ಎರಡೂ ಕೈಗಳ ಅಡ್ಡವಾಗಿ ಎರಡೂ ಕೈಗಳನ್ನು ನೇರವಾಗಿ ಎಡಗೈ ಬೆರಳ ತುದಿಯಿಂದ ಬಲಗೈ ಬೆರಳ ತುದಿಯವರೆಗಿನ ಅಂತರಕ್ಕೆ ಒಂದು ಮಾರು ಎನ್ನುವರು.

**ಅಡಿ:** ಎರಡೂ ಕೈಗಳ ಮುಷ್ಠಿಯನ್ನಿಡಿದು ಹೆಬ್ಬೆರಳುಗಳನ್ನು ಅಡ್ಡವಾಗಿ ಚಾಚಿ ಒಂದಕ್ಕೊಂದು ಜೋಡಿಸಿದರೆ ಉಂಟಾಗುವ ಅಂತರವನ್ನು ಒಂದು ಅಡಿ ಎನ್ನುವರು.

**ಬಂಕಾಪುರ ಗ್ರಾಮದ ಸಹಕಾರಿ ಜೀವನ ಪದ್ಧತಿ:** ಗ್ರಾಮೀಣ ಜನರ ಅವರ ಸಂಸ್ಕಾರ ಸಂಸ್ಕೃತಿಯೇ ಜೀವಾಳವಾಗಿದೆ. ಹಾಗೆಯೇ ಹಳೆಯ ಕಾಲದ ಸಂಸ್ಕಾರಗಳು ಕೆಲವು ಕಡೆ ಅಳಿದು ಹೋಗಿರುವಿಕೆಯನ್ನು ಸಹ ಕಾಣಬಹುದು. ಅದರೂ ಬಂಕಾಪುರ ಗ್ರಾಮದಲ್ಲಿನ ಜನರ ಸಾಮಾಜಿಕ, ಧಾರ್ಮಿಕ, ಆರ್ಥಿಕವಾದ ಪರಿಸ್ಥಿಯನ್ನು ಸಹಕಾರ ಜೀವನದ ಮೂಲಕ ನಿಭಾಯಿಸಿ ಕೊಂಡು ಸುಖ-ಸಂಸಾರದ ನೆಮ್ಮದಿಯುಕ್ತ ಜೀವನವನ್ನು ನಡೆಸುತ್ತಿದ್ದಾರೆ.

**ಸಂಬಳ:** ಹೆಸರೇ ಹೇಳುವಂತೆ ಬಂಕಾಪುರ ಗ್ರಾಮದಲ್ಲಿ ಈ ಪದ್ಧತಿ ಅಲ್ಲಲ್ಲಿ ಕಂಡು ಬರುತ್ತದೆ. ಧಣಿಗಳು ತಮಗೆ ಬೇಕಾದಂತಹ ಕೆಲಸವನ್ನು ಮಾಡಿಸಿಕೊಂಡು ಅವರಿಗೆ ಕಾಳು-ಕಡಿಯನ್ನು ಅಥವಾ ಹಣದ ರೂಪದಲ್ಲಿ ಕೊಡುವ ಪದ್ಧತಿಯೆನ್ನುತ್ತೇವೆ.

**ಮುಯ್ಯಾಳುಗಳು:** ರೈತರಿಗೆ ಆರ್ಥಿಕ ಕೊರತೆಯಾದಾಗ ಈ ಪದ್ಧತಿ ಅನುಸರಣೆ ಮಾಡಲಾಗುತ್ತದೆ. ಇದರಿಂದ ಕೂಲಿ ಕೊಡುವುದು ತಪ್ಪುತ್ತದೆ. ಏಕೆಂದರೆ ಹೊಲಗದ್ದೆಗಳಲ್ಲಿ ಕೆಲಸ ಮಾಡಿದ ಕೆಲಸದಾಳು, ಅವರ ಹೊಲಮನೆ ಗದ್ದೆಗಳಲ್ಲಿ ಕೆಲಸ ಮಾಡುವಂತೆ ಮಾತಾಡಿ ಕೊಳ್ಳುತ್ತಾರೆ. ಬೀಜ ಬಿತ್ತನೆಯಿಂದ, ಕೊಯ್ಯುವವರೆಗೂ ಈ ಮುಯ್ಯಾಳುಗಳು ಕೆಲಸ ಮಾಡುವುದನ್ನು ಕಾಣುತ್ತೇವೆ.

**ಗುತ್ತಿಗೆ:** ಗುತ್ತಿಗೆಯಿಂದ ನಮ್ಮ ಹಣದ ಸಂಪಾದನೆ ಹೆಚ್ಚಾಗುತ್ತದೆ. ಕೂಲಿ ಅಂದರೆ ಕೆಲಸ ಕಡಿಮೆ, ಹಣವೂ ಕಡಿಮೆ. ಗುತ್ತಿಗೆ ಅಂದರೆ ಕೆಲಸನೂ ಜಾಸ್ತಿ ಹಾಗೆಯೇ ಹಣವೂ ಜಾಸ್ತಿ ಸಾವಿರರೂಗಳಿಗೆ ಗುತ್ತಿಗೆಯನ್ನು ಹಿಡಿದು ಒಂದು ಕೆಲಸವನ್ನು ಪೂರ್ಣಗೊಳಿಸಲು ಗುತ್ತಿಗೆ ಎಂದು ಕರೆಯುತ್ತಾರೆ.

**ಪಾಲು:** ರೈತನು ತಾನು ಬೆಳೆದಂತಹ ಬೆಳೆಯಲ್ಲಿಯೇ ಭೂ ಒಡೆಯನಿಗೆ ಅರ್ಧದಷ್ಟು ಕೊಟ್ಟು ಇನ್ನು ಅರ್ಧದಷ್ಟು ತಾನು ಬಳಸಿಕೊಳ್ಳಬಹುದಾಗಿದೆ. ಹಾಗೆಯೇ ಪಾಲುಗಾರಿಕೆಯ ಅತಿ ಹೆಚ್ಚು ಭೂಮಿಯನ್ನು ಹೊಂದಿದ ರೈತರು ತಾವು ಮಾಡಲಾಗದೆ ಈ ಪದ್ಧತಿಯನ್ನು ಅನುಸರಣೆ ಮಾಡುವುದನ್ನು ಕಾಣಬಹುದು.

**ಮಳೆ:** ಸಕಲ ಪ್ರಾಣಿ, ಪಕ್ಷಿವೃಕ್ಷಗಳ ಜೀವಾಧಾರ. ಅದಿಲ್ಲದೆ ಬದುಕಿಲ್ಲ. ಬೇಸಾಯವೇ ಬೆನ್ನುಲುಬಾದ ಜನಪದರ ಜೀವನದ ಬಹುಮುಖ್ಯ ಅಂಗ. ಮಳೆ ಎಂಬುದು ಸಕಲ ಜೀವರಾಶಿಗಳಿಗೂ ಅತ್ಯಾವಶ್ಯಕ. ಮಳೆ ಇಲ್ಲದೆ ಹೋದರೆ ಈ ಭೂಮಿಯೂ ಸರ್ವನಾಶವಾಗುತ್ತದೆ. ಆದ್ದರಿಂದ ರೈತರಿಗೆ ಮಳೆ ಬಹಳ ಮುಖ್ಯ ಪಾತ್ರವಹಿಸುತ್ತದೆ. ಮಳೆ ಬಂದರೆ ಬೆಳೆ, ಬೆಳೆ

ಬಂದರೆ ಬದುಕು ಎನ್ನುವಂತೆ ರೈತರ ಜೀವನವಾಗಿರುತ್ತದೆ. ಅವರಿಗೆ ಮಳೆಯಿಂದ ಬೆಳೆ ಚೆನ್ನಾಗಿ ಬಂದರೆ ಅವರು ಜೀವನ ಸಾಗಿಸಲು ಸಹಾಯಕವಾಗುತ್ತದೆ. ರೈತರು ಸಮೃದ್ಧವಾದ ಜೀವನ ಸಾಗಿಸಲು ಕಾಲಕಾಲಕ್ಕೆ ಮಳೆ ಬರಬೇಕಿದ್ದು ಅಗತ್ಯವಾಗಿದೆ. ಬಂಕಾಪುರ ಗ್ರಾಮದಲ್ಲಿ ಮಳೆ ಬಾರದಿದ್ದಾಗ ಮಳೆರಾಯನ್ನು ಕರೆಯಲು ಹಲವಾರು ರೀತಿಯಾದ ಹಾಡು ಹಾಗೂ ಆಚರಣೆಗಳನ್ನು ಮಾಡುವುದನ್ನು ಕಾಣಬಹುದು.

**ಮಳೆಯ ನಕ್ಷತ್ರಗಳು**

| | | |
|---|---|---|
| ಉತ್ತರಾಷಾಡ | : | ಜನವರಿ ೧೧ ರಿಂದ ೩೧ |
| ಶ್ರಾವಣ | : | ಜನವರಿ ೨೪ ರಿಂದ ಫೆಬ್ರವರಿ ೫ |
| ಧನಿಷ್ಠ | : | ಫೆಬ್ರವರಿ ೬ ರಿಂದ ಫೆಬ್ರವರಿ ೧೮ |
| ಶತಬಿಷ್ಠು | : | ಫೆಬ್ರವರಿ ೧೫ ರಿಂದ ಮಾರ್ಚ ೦೩ |
| ಪೂರ್ವಭಾದ್ರ | : | ಮಾರ್ಚ ೪ ರಿಂದ ಮಾರ್ಚ ೧೬ |
| ಉತ್ತರ ಭಾದ್ರ | ; | ಮಾರ್ಚ ೧೨ ರಿಂದ ಮಾರ್ಚ ೨೯ |
| ರೇವತಿ | : | ಮಾರ್ಚ ೩೦ ರಿಂದ ಏಪ್ರಿಲ್ ೧೨ |
| ಅಶ್ವಿನಿ | : | ಏಪ್ರಿಲ್ ೧೩ ರಿಂದ ಏಪ್ರಿಲ್ ೨೬ |
| ಭರಣಿ | : | ಏಪ್ರಿಲ್ ೨೭ ರಿಂದ ಮೇ ೧೦ |
| ಕೃತ್ತಿಕ | : | ಮೇ ೧೧ ರಿಂದ ಮೇ ೨೩ |
| ರೋಹಿಣಿ | : | ಮೇ ೨೪ ರಿಂದ ಜೂನ್ ೬ |
| ಮೃಗಶಿರ | : | ಜೂನ್ ೭ ರಿಂದ ಜೂನ್ ೩೦ |
| ಆರಿದ್ರಾ | : | ಜೂನ್ ೨೧ ರಿಂದ ಜುಲೈ ೨೧ |
| ಪುನರ್ವಸು | : | ಜುಲೈ ೫ ರಿಂದ ಜುಲೈ ೧೯ |
| ಪುಷ್ಯ | : | ಜುಲೈ ೨೦ ರಿಂದ ಅಗಸ್ಟ್ ೨ |
| ಆಶ್ಲೇಷ | : | ಅಗಸ್ಟ್ ೩ ರಿಂದ ಅಗಸ್ಟ್ ೧೬ |
| ಮಾಘ | : | ಅಗಸ್ಟ್ ೧೩ ರಿಂದ ಅಗಸ್ಟ್ ೨೯ |
| ಪಾಲ್ಗುಣ | : | ಅಗಸ್ಟ್ ೩೦ ರಿಂದ ಸೆಪ್ಟೆಂಬರ್ ೧೨ |
| ಉತ್ತರ | : | ಸಪ್ಟಂಬರ್ ೧೩ ರಿಂದ ಸೆಪ್ಟೆಂಬರ್ ೨೬ |
| ಹಸ್ತ | : | ಸೆಪ್ಟೆಂಬರ್ ೨೭ ರಿಂದ ಅಕ್ಟೋಬರ್ ೦೯ |
| | : | ಅಕ್ಟೋಬರ್ ೧೦ ರಿಂದ ಅಕ್ಟೋಬರ್ ೨೪ |

ಸ್ವಾತಿ : ಅಕ್ಟೋಬರ್ ೨೫ ರಿಂದ ನವೆಂಬರ್

ವಿಶಾಖ : ನವೆಂಬರ್ ೬ ರಿಂದ ನವೆಂಬರ್ ೧೮

ಅನುರಾಧ : ನವೆಂಬರ್ ೧೯ ರಿಂದ ಡಿಸೆಂಬರ್ ೧

ನಮ್ಮ ರಾಶಿ ಚಕ್ರದಲ್ಲಿ ಅಶ್ವಿನಿಯಿಂದ ರೇವತಿವರೆಗೆ ೨೭ ನಕ್ಷತಗಳಿವೆ. ಜನಪದರು ತಮಗೆ ಬೇಕಾದಂತಹ ಜೋತಿಷ್ಯರ ಹಾಗೆಯೇ ಪಂಚಾಂಗವನ್ನು ಸಹ ರಚಿಸಿಕೊಂಡಿದ್ದಾರೆ. ರೈತರು, ಹಿರಿಯರ, ಅನುಭವ ಅವರ ಮಾತು ವೇದ ವಾಕ್ಯವಾಗಿದೆ. ಹಾಗೆಯೇ ಮಳೆ ಬಗ್ಗೆ ಅಪಾರವಾದ ನಂಬಿಕೆ ಉಳ್ಳವರಾಗಿದ್ದಾರೆ.

**ಮಳೆ ಸಂಬಂಧಿ ಆಚರಣೆಗಳು:** ಮಳೆ ರೈತರ ಜೀವನಾಡಿ. ಮಳೆ ಬಂದರೆ ಬೆಳೆ. ಬೆಳೆ ಬಂದರೆ ರೈತರ ಮುಖದಲ್ಲಿ ಸಂತೋಷದ ಕಳೆ ಇರುವುದು. ಮಳೆ ಬರದಿದ್ದರೆ ರೈತರೆಲ್ಲ ಮಳೆಗಾಗಿ ಹಪಹಪಿಸುತ್ತಾರೆ. ಇಂತಹ ಸಂದರ್ಭದಲ್ಲಿ ರೈತರು ಹತ್ತಾರು ಆಚರಣೆಗಳನ್ನು ಮಾಡುತ್ತಾರೆ. ದೇವರಿಗೆ ಮಳೆ ಕೊಡುವಂತೆ ಮೊರೆ ಹೋಗುತ್ತಾರೆ. ಈ ಬಗೆಯ ಮಳೆಗಾಗಿ ಮಾಡುವ ಆಚರಣೆಗಳು ಬಂಕಾಪುರದಲ್ಲಿ ಕಂಡುಬರುತ್ತವೆ.

**ಗುರ್ಜಿ ಆಡುವುದು** : ಕೊರವಂಜಿ ಸಮುದಾಯದ ಮಕ್ಕಳು ತಲೆಮೇಲೆ ತವೆಯನ್ನು ದಬ್ಬ ಹಾಕಿಕೊಂಡು ಅದರ ಮೇಲೆ ಸಗಣಿಯ ಉಂಡೆ ಮತ್ತು ಆ ಸಗಣಿಯ ಮಧ್ಯದಲ್ಲಿ ಒಂದು ಕಪ್ಪೆಯನ್ನು ಇಟ್ಟುಕೊಂಡು ಅದಕ್ಕೆ ಹೂವೆಲ್ಲಾ ಚುಚ್ಚಿಕೊಂಡು ಮನೆ ಮನೆಗೂ ಹೋಗುವರು. ಹೀಗೆ ಎಲ್ಲರು ಗುರ್ಜಿ ಹೊತ್ತ ಮಕ್ಕಳು ತಲೆಯ ಮೇಲೆ ಇದ್ದ ಸಗಣಿಯ ಗುರ್ಜಿಗೆ ಚರಿಗೆಯಿಂದ ನೀರು ಸುರಿಯುವರು. ಗುರ್ಜಿ ಹೊತ್ತ ಹುಡುಗರು "ಗುರ್ಜಿ ಗುರ್ಜಿ ಎಲ್ಲಾಡಿ ಬಂದೆ ಎಂದು ಹಾಡು ಹೇಳುತ್ತಾ ತಿರುಗುವರು. ಆಗ ತವೆಯಿಂದ ಕೆಳಗೆ ನೀರು ಬಂದ ರೀತಿಯಲ್ಲಿ ಸುತ್ತಲು ಮೇಲಿನಿಂದ ಕೆಳಗೆ ಬೀಳುವುದು. ಹೀಗೆ ಮಾಡಿದರೆ ಮಳೆ ಬರುವುದೆಂಬ ನಂಬಿಕೆ ಜನರಲ್ಲಿದೆ.

**ಕತ್ತೆ ಮದುವೆ ಮಾಡಿ ಮೆರವಣಿಗೆ ಮಾಡುವುದು:** ಹೊತ್ತು ಬಂದಾಗ ಕತ್ತೆ ಕಾಲಾದ್ರು ಹಿಡಿಯಬೇಕು ಎನ್ನುವ ಗಾದೆಯಂತೆ ಮಳೆ ಬಾರದಿದ್ದರೆ ಊರವರೆಲ್ಲ ಸೇರಿಕೊಂಡು ಒಂದು ಗಂಡು ಕತ್ತೆ ಮರಿ ಮತ್ತು ಒಂದು ಹೆಣ್ಣು ಕತ್ತೆ ಮರಿ ತಂದು ಊರ ದೇವತೆಯ ಪಾದ ಗಟ್ಟಿಯಲ್ಲಿ ಅವುಗಳಿಗೆ ಪೂಜೆ ಮಾಡಿ ಕತ್ತೆ ಕಾಲು ಹಿಡಿದು ನಮಸ್ಕರಿಸುವರು. ನಂತರ ಮದುವೆಯ ಮೆರವಣಿಗೆಯ ರೀತಿಯಲ್ಲಿಯೇ ಊರವರೆಲ್ಲ ಹಲವು ವಾದ್ಯಗಳನ್ನು ಬಾರಿಸುತ್ತ ಆ ಕತ್ತೆಗಳನ್ನು ಮೆರವಣಿಗೆ ಮಾಡುವರು. ಹೀಗೆ ಮಾಡಿದರೆ ಮಳೆ ಬರುವುದೆಂಬ ನಂಬಿಕೆ ಇದೆ.

**ವಾರ ಮಾಡುವುದು/ಉಡಿತುಂಬುವುದು:** ಮಳೆ ಬರದಿದ್ದರೆ ೫ವಾರ ಮಾಡುವರು. ಮಂಗಳವಾರ ಶುಕ್ರವಾರ ಹೀಗೆ ೫ ವಾರಗಳಂದು ರೈತರುಗಳೆ ಹೂಡುವುದಿಲ್ಲ ಮತ್ತು

ಮನೆಯಲ್ಲಿ ಕುಟ್ಟುವುದು, ಬೀಸುವುದು, ರೊಟ್ಟಿ ಮಾಡುವುದು ಇವುಗಳನ್ನೆಲ್ಲಾ ಮಾಡುವುದಿಲ್ಲ. ಹೀಗೆ ೫ ವಾರದ ನಂತರ ಊರವರೆಲ್ಲ ಸೇರಿ ದೇವರಿಗೆ ಉಡಿ ತುಂಬುವ ಕಾರ್ಯಕ್ರಮ ಮಾಡುವರು. ಆ ದಿನ ಮನೆಗೊಬ್ಬ ಹೆಣ್ಣುಮಕ್ಕಳಂತೆ ಆರತಿಯನ್ನು ತೆಗೆದುಕೊಂಡು ಬರುತ್ತಾರೆ. ಡೊಳ್ಳು, ಭಜನೆ ಸಮೇತ ಊರವರೆಲ್ಲಾ ಗ್ರಾಮದ ಎಲ್ಲಾ ದೇವರಿಗೆ ಹೋಗುತ್ತಾರೆ. ಊರ ದೇವತೆಗಳಾದ ದುರ್ಗವ್ವ, ದ್ಯಾಮವ್ವನಿಗೆ ಉಡಿ ತುಂಬುವರು ಜೊತೆಗೆ ಊರಲ್ಲಿನ ಇತರ ದೇವರಿಗೂ ಹಣ್ಣು ಕಾಯಿ ಮಾಡಿಸುವರು. ಹೀಗೆ ಬೇಗ ಮಳೆಬರುವಂತೆ ದೇವರಲ್ಲಿ ಕೋರಿಕೆಯನ್ನು ಸಲ್ಲಿಸುತ್ತಾರೆ. ಹೀಗೆ ದೇವರು ಸಂತೃಪ್ತರಾದರೆ ಮಳೆ ಬೆಳೆ ಬರುವುದೆಂಬ ನಂಬಿಕೆ ಇದೆ.

**ಸಪ್ತಭಜನೆ ಹಚ್ಚುವುದು:** ದೇವಸ್ಥಾನಗಳಲ್ಲಿ ಬಿಟ್ಟು ಬಿಡದಂತೆ ನಿರಂತರವಾಗಿ ವಾರಗಟ್ಟಲೆ, ಬೆಳತನಕ ಭಜನೆ ಹಚ್ಚಿ ಪದ ಹಾಡುವರು. ಒಂದರ್ಥದಲ್ಲಿ ದೇವರ ದ್ಯಾನದಲ್ಲಿ ತೊಡಗುವುದು. ದೇವರ ನಾಮಸ್ಮರಣೆಯ ಪದಗಳನ್ನು ಹೇಳುತ್ತಾ ಈ ಮೂಲಕ ದೇವರಿಗೆ ಮಳೆ ಕೋರಿಕೆಯನ್ನು ಸಲ್ಲಿಸಲಾಗುವುದು.

**ಪರ್ವ ಮಾಡುವುದು:** ದೇವರಿಗೆ ವಾರ ಮಾಡಿ ಹಣ್ಣು, ಕಾಯಿ ಮಾಡಿಸಿ ಊರವರೆಲ್ಲ ಸೇರಿ ಅಡುಗೆ ಮಾಡಿಸಿ ದೇವರಿಗೆ ನೈವೇದ್ಯ ಮಾಡಿ ನಂತರ ಊರವರಿಗೆಲ್ಲ ಊಟ ಮಾಡಿಸುವರು. ಇದನ್ನೆ ಪರ್ವ ಮಾಡುವುದು ಇಲ್ಲವೆ ಪ್ರಸ್ತಾ ಮಾಡುವುದು ಎಂದು ಕರೆಯುತ್ತಾರೆ. ಬಂಕಾಪುರದಲ್ಲಿ ಹಳ್ಳಿಕೇರಿ ಬಸವೇಶ್ವರ, ಬಂಕನಾಥ ದೇವಸ್ಥಾನಗಳಿಗೆ ಪರ್ವ ಮಾಡುವುದನ್ನು ಕಾಣಬಹುದು.

**ವಾಣಿಜ್ಯ ಕೃಷಿ:** ಇಂದು ಊರಿನ ಆರ್ಥಿಕವಾದ ಪರಿಸ್ಥಿತಿಯನ್ನು ನಿರ್ಧರಿಸುವಲ್ಲಿ ಅಲ್ಲಿನ ಕೃಷಿಯೇ ಮುಖ್ಯ ಪಾತ್ರವಹಿಸುತ್ತದೆ. ಈ ಗ್ರಾಮದಲ್ಲಿ ಸಾಕಷ್ಟು ಕೆರೆ ಕಟ್ಟೆಗಳಿದ್ದರು ಅವುಗಳನ್ನು ಕೃಷಿಗೆ ಬಳಸಿಕೊಳ್ಳದೆ ಇರುವುದು ವಿಷಾದದ ಸಂಗತಿಯಾಗಿದೆ. ಅಂತರ ಜಲದ ಮಟ್ಟ ಸಾಕಷ್ಟು ಕುಸಿತ ಕಂಡಿರುವುದನ್ನು ಕಾಣಬಹುದು. ಇತ್ತೀಚೆಗೆ ವರದಾನದಿಯ ನೀರನ್ನು ಹೊಲಗಳಿಗೆ ಬಿಟ್ಟಿರುವುದು ರೈತರಿಗೆ ಸಾಕಷ್ಟು ಸಹಕಾರಿಯಾಗಿದೆ. ಬಂಕಾಪುರ ಗ್ರಾಮದಲ್ಲಿ ಹೆಚ್ಚಾಗಿ ಗೋವಿನ ಜೋಳ, ಹತ್ತಿ, ಕಬ್ಬು, ಶೇಂಗಾ ಸೋಯಾಬಿನ್, ಇತ್ತೀಚೆಗೆ ಚೆಂಡು ಹೂವು ಅಲ್ಲಲ್ಲಿ ತರಕಾರಿಯನ್ನು ಬೆಳೆಯುವುದನ್ನು ಕಾಣಬಹುದು.

**ಹೈನುಗಾರಿಕೆ:** ಆರ್ಥಿಕತೆಯನ್ನು ಸುಧಾರಿಸುವ ಸಲುವಾಗಿಯೇ ಹೈನುಗಾರಿಕೆ, ಕೋಳಿ ಸಾಕಾಣಿಕೆ, ಮೊಲಸಾಕಾಣಿಕೆಯನ್ನು ನಾವು ಕಾಣಬಹುದಾಗಿದೆ. ಇಲ್ಲಿಯ ಶೇಕಡಾ ೭೫ ರಷ್ಟು ಜನರು ಹಾಲನ್ನು ಹಾಲಿನ ಡೈರಿಯನ್ನು ನಂಬಿಕೊಂಡು ಜೀವನವನ್ನು ಸಾಗಿಸುತ್ತಿದ್ದಾರೆ. ಹಾಗೆಯೇ ಹೈನುಗಾರಿಕೆಯಿಂದ ತಮ್ಮ ಸಂಸಾರದ ಆರ್ಥಿಕ ಸಂಕಷ್ಟಗಳನ್ನು ಪರಿಹರಿಸಿಕೊಳ್ಳುವ ಮಾರ್ಗವಾಗಿದೆ.

**ಹಾಲಿನ ಡೈರಿ:** ಬಂಕಾಪುರದಲ್ಲಿ ಸಾಕಷ್ಟು ವರ್ಷಗಳಿಂದ ಸಹಕಾರಿ ತತ್ವದ ಮೇಲೆ ರಚನೆಯಾಗಿರುವ ಹಾಲಿನ ಡೈರಿಯನ್ನು ಕಾಣಬಹುದು. ಹಾಗೂ ಅಲ್ಲಲ್ಲಿ ಸಣ್ಣ ಸಣ್ಣ ಡೈರಿ ಇರುವುದನ್ನು ಕಾಣಬಹುದು. ಇಲ್ಲಿ ಬಂದು ಎಲ್ಲರೂ ಹಾಲು ಹಾಕುವುದರಿಂದ ರೈತರ ಆರ್ಥಿಕ ಪರಿಸ್ಥಿತಿಯೂ ಸುಧಾರಿಸಿ ಮತ್ತೊಬ್ಬರ ಅವಲಂಬನೆ ಮಾಡುವುದು ತಪ್ಪುತ್ತದೆ.

**ವ್ಯಾಪಾರ:** ಈ ಊರಿನ ಸಾಕಷ್ಟು ಜನ ವ್ಯಾಪಾರ ನಂಬಿ ಬದುಕುತ್ತಿದ್ದಾರೆ. ಇಲ್ಲಿಯ ಜನ ಬೇರೆ ಬೇರೆ ರಾಜ್ಯಗಳಿಗೆ ಹೋಗಿ ಸೊಪ್ಪಿನ ವ್ಯಾಪಾರ ಮಾಡುವುದನ್ನು ಕಾಣಬಹುದು. ಅದರ ಜೊತೆಗೆ ಮೆಣಸಿನಕಾಯಿ ವ್ಯಾಪಾರ ಸೇರಿದಂತೆ ಬೇರೆ ಬೇರೆ ರೀತಿಯ ವ್ಯಾಪಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದನ್ನು ಕಾಣಬಹುದು. ಮಂಗಳವಾರ ಇಲ್ಲಿ ವಾರದ ಸಂತೆ ನಡೆಯುತ್ತದೆ.

**೫.೪. ರಾಜಕೀಯ ನೆಲೆಗಳು ಮತ್ತು ಸ್ಥಿತಿಗತಿಗಳು**

ಬಂಕಾಪುರವೂ ಹಾವೇರಿ ಜಿಲ್ಲೆಯ ಶಿಗ್ಗಾಂವ ತಾಲೂಕಿಗೆ ಸೇರಿದ ಜನವಸತಿ ಹೋಬಳಿ ಕೇಂದ್ರವಾಗಿದೆ. ಮಹಾಭಾರತದಲ್ಲಿ ಬರುವ ಬಕಾಸುರನ ರಾಜ್ಯದಾನಿ ಏಕಚಕ್ರ ನಗರವೆಂದು ಗುರುತಿಸಲ್ಪಟ್ಟಿದೆ. ತಾಲೂಕು ಕೇಂದ್ರದಿಂದ ಆಗ್ನೇಯ ದಿಕ್ಕಿಗೆ ಹತ್ತು ಕಿ.ಮಿ ದೂರದಲ್ಲಿದೆ. ೧೯೫೧ ರ ವರೆಗೂ ಇದು ತಾಲೂಕು ಕೇಂದ್ರವಾಗಿದ್ದಿತ್ತು. ಈಗ ಶಿಗ್ಗಾಂವಿಗೆ ವರ್ಗಾಯಿಸಲಾಗಿದೆ. ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನ ಪ್ರಮುಖ ಸೇನಾನಿ ಮಾಂಡಲಿಕ ಬಂಕೇಯ ಅರಸನ ಹೆಸರಿನ ಮೇಲೆ ಈ ಊರಿಗೆ 'ಬಂಕೇಯನಪೂರ' ಅಥವಾ ಬಂಕಾಪೂರ ವೆಂದು ಹೆಸರು ಬಂದಿತೆಂದು ಗುಣಭದ್ರಾಚಾರ್ಯರ ಉತ್ತರಪುರಾಣದಿಂದ ತಿಳಿದು ಬರುತ್ತದೆ. ಬಂಕಾಪೂರವು ಹಿಂದಿನಿಂದಲೂ ಒಂದು ಐತಿಹಾಸಿಕ, ಸಾಂಸ್ಕೃತಿಕ ಕೇಂದ್ರವು, ಜೈನ ವಿದ್ಯಾಪೀಠವು ಆಗಿದ್ದಿತ್ತು. ಇದು ಹಲವು ಶಿವಾಲಯ, ಪ್ರಾಚೀನ ಶಾಸನ, ದೇವಾಲಯ, ಜೈನಬಸದಿ, ಕೋಟೆ, ಮಠ, ಮಸೀದಿ, ದರ್ಗಾಗಳನ್ನು ಹೊಂದಿರುವ ನಗರಗಳಲ್ಲಿ ಒಂದಾಗಿದೆ.

ಮಹಾಭಾರತ ಕಾಲದಷ್ಟು ಪ್ರಾಚೀನ ಇತಿಹಾಸ ಇದಕ್ಕಿದ್ದರು, ಬಂಕಾಪುರದ ಶಾಸನೋಕ್ತ ಇತಿಹಾಸ ದೊರಕುವುದು ೯ ನೇ ಶತಮಾನದ ತರುವಾಯ. ರಾಷ್ಟ್ರಕೂಟರಿಂದ ಮೊದಲ್ಗೊಂಡು ಕಲ್ಯಾಣದ ಚಾಲುಕ್ಯರು, ಅವರ ಕೆಲವು ಸಾಮಂತರು, ಹೊಯ್ಸಳರು, ಹಾನಗಲ್ಲು ಕದಂಬರು, ವಿಜಯನಗರ, ಕೆಳದಿ, ಬಹುಮನಿ, ಹಂಡೆ ಪಾಳೆಗಾರರ ವರೆಗಿನ ರಾಜ ಮನೆತನಗಳ ಸಂಬಂಧ ಬಂಕಾಪುರಕ್ಕೆ ಇದೆ.

ಶತಮಾನಗಳ ಇತಿಹಾಸದಲ್ಲಿ ಬಂಕಾಪುರ ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದೆ. ಪ್ರಭು ವರ್ಗದ ಅಧಿಕಾರ ಹಸ್ತಾಂತರ, ವಿಭಿನ್ನ ಸಂಸ್ಕೃತಿಯನ್ನ ಪರಿಚಯಿಸಿಕೊಟ್ಟಿದೆ. ಚಾರಿತ್ರಿಕ ಬೆಳವಣಿಗೆ ಸಾಧಿಸಿದೆ. ಧರ್ಮ, ಸಾಹಿತ್ಯ ಕ್ಷೇತ್ರಗಳಲ್ಲಿ ಮಹತ್ವದ ಸ್ಥಾನ ಪಡೆದಿದೆ. ವೈರಿಗಳ

ರುಂಡ ಚಂಡಾಡಿದ ರಣಾಂಗಣವಾಗಿದೆ. ಜನಜೀವನದ ಸಾಂಸ್ಕೃತಿಕ ವಲಯದಲ್ಲಿ ತನ್ನ ಮೇಲ್ಮೆಯನ್ನು ಸಾರಿದೆ.

"ಭಾರತ ದೇಶದ ಸ್ವಾತಂತ್ರ್ಯ ಸಂಗ್ರಾಮ ಅಸದೃಶವಾದುದು. ಮಹಾತ್ಮಾಗಾಂಧಿಯವರ ಅಹಿಂಸೆ, ಸೇವೆ ತ್ಯಾಗದ ಕರೆಗೆ ಒಗೊಟ್ಟು ಜನಸಾಮಾನ್ಯರೂ ಈ ಸಂಗ್ರಾಮದಲ್ಲಿ ಧುಮುಕಿದರು. ವರ್ಣ ಜಾತಿ ಮತಗಳ ಸಂಕುಚಿತ ಸೀಮೆ ದಾಟಿ ಈ ಹೋರಾಟ ಹೆಮ್ಮರವಾಗಿ ಬೆಳೆಯಿತು. ಹೋರಾಟದಲ್ಲಿ ತಮ್ಮನ್ನು ಸಮರ್ಪಣೆ ಮಾಡಿಕೊಂಡ ಎಷ್ಟೋ ವೀರರು ಹುತಾತ್ಮರೆನಿಸಿದರು, ಅವರೆಲ್ಲರ ಪ್ರಯತ್ನದ ಫಲ ಇಂದಿನ ಸ್ವತಂತ್ರ ಭಾರತ.

ಈ ಹೋರಾಟದಲ್ಲಿ ತನ್ನ ಪ್ರಾಮಾಣಿಕ ಸೇವೆ ಸಲ್ಲಿಸಿದ ಕೀರ್ತಿ ಬಂಕಾಪುರಕ್ಕಿದೆ. ಮಹಾತ್ಮ ಗಾಂಧೀಜಿಯವರ ವಿಧಾಯಕ ಕಾರ್ಯಕ್ರಮಗಳಾಗಿದ್ದ ಅಸ್ಪೃಶ್ಯತಾ ನಿವಾರಣೆ, ಗ್ರಾಮೋದ್ಯೋಗಗಳ ಉತ್ಥಾನ, ರಾಷ್ಟ್ರೀಯ ಶಿಕ್ಷಣ ವಿಕಾಸ, ಮದ್ಯಪಾನ ನಿಷೇದ, ಮೂಲ ಶಿಕ್ಷಣ, ಮೊದಲಾದವುಗಳಲ್ಲಿ ಭಾಗವಹಿಸಿ ರಾಷ್ಟ್ರೀಯ ಜಾಗೃತಿಗೆ ಸಂಪೂರ್ಣ ಸಹಕಾರವಿತ್ತವರು. ಶಿಗ್ಗಾಂವ, ಬಂಕಾಪುರ, ಹಾವೇರಿ, ಸವಣೂರು, ರಾಣೆಬೆನ್ನೂರು, ಹಾನಗಲ್ಲು ಪ್ರದೇಶದ ಬಹುಭಾಗಗಳು ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯ ಪಾತ್ರ ವಹಿಸಿದ್ದವು. ಡಾ. ಹರ್ಡಿಕರ, ಬಿಂದು ಮಾಧವ ಬುರ್ಲಿ, ದಿವಾಕರರಂತಹ ಮೇಧಾವಿಗಳ ಜೊತೆಯಲ್ಲಿ ಹಾವೇರಿಯ ಸಂಗೂರ ಕರಿಯಪ್ಪ, ಹೊಸಮನಿ ಶಿದ್ದಪ್ಪ, ಗಣಪೂಲೆ ಮನೆತನಗಳು ಹೋರಾಟದಲ್ಲಿ ಭಾಗಿಯಾಗಿದ್ದವು. ಶಿಗ್ಗಾಂವದ ಅನಂತಭಟ್ಟ ಹುರಳಿಕೊಪ್ಪಿಯವರಂತ ದೇಶದ ಮುಖಂಡರ ಅಸಹಕಾರದ ಕರೆಗೆ ಓಗೊಟ್ಟು ಶಾಲೆಗೆ ಶರಣು ಹೊಡೆದು 'ಸರಕಾರಿ ನೌಕರಿ ಮಾಡಲಿಕ್ಕಿಲ್ಲ; ಪರದೇಶಿ ಜಾನ್ಸನ್ ಸಕ್ಕರೆ ತಿನಲಿಕ್ಕಿಲ್ಲ; ಚಹಾಪಾನ ಮಾಡುವುದಿಲ್ಲ' ಎಂದು ಪ್ರತಿಜ್ಞೆ ಕೈಕೊಂಡವರು ಪಂಡಿತ ಶಂಕರ ದೀಕ್ಷಿತ ಕರ್ಮಠ ಅವರು. ಇವರ ಜೊತೆ ಬಂಕಾಪುರದ ಶ್ರೀ ಗುಂಡೇರಾವ ಸವಣೂರ, ಶ್ರೀ ದತ್ತ ದೀಕ್ಷಿತ ಜಂತಲಿ, ಶ್ರೀ ಚಿಕ್ಕನಗೌಡ ನಿಂಗನಗೌಡ ಪಾಟೀಲ, ಶ್ರೀ ಕೃಷ್ಣ ಚಂದ್ರಾಮ ಜೋಶಿ, ಶ್ರೀ ರಾಮಚಂದ್ರ ಜಂತಲಿ, ಶ್ರೀ ನಿಂಗನಗೌಡ ಗಿಡ್ಡನಗೌಡ ಪಾಟೀಲ, ಶ್ರೀ ಕಾಂತಪ್ಪ ಗಂಟೇಪ್ಪನವರ ಮುಂತಾದವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ದುಮುಕಿದರು.

ಇವರೆಲ್ಲ ತಾಲೂಕಿನ ಮೂಲೆ ಮೂಲೆಗೂ ತಿರುಗಿ ಕಾಂಗ್ರೆಸ್ ಮೆಂಬರನ್ನು ನೇಮಕ ಮಾಡುವುದು, ಖಾದಿ ಪ್ರಚಾರ, ಚರಖಾ, ಸೆಟ್ಲಮಗ್ಗ ಹಾಕಿಸುವುದು, ಚಹಾ ಸೆರೆ ನಿಷೇಧ ಪ್ರಚಾರ ಇವರದಾಗಿತ್ತು. ದೇಶಭಕ್ತ ಮುಖಂಡರನ್ನು ಕರೆಸಿ ಭಾಷಣಗಳ ಏರ್ಪಾಡು ಮಾಡಿಸಿ ಜನಮನದಲ್ಲಿ ರಾಷ್ಟ್ರೀಯ ಭಾವನೆಯನ್ನು ಬಿಂಬಿಸಿದ್ದು ಇವರ ಕಾಯಕ. ಇದರಲ್ಲಿ ಹೇಜೀಬ ಎಂಬುವರು 'ಮಾರುತಿ ವಾಚನಾಲಯ' ವನ್ನು ಪ್ರಾರಂಭಿಸಿದ್ದರು. ಇದು ಬಂಕಾಪುರದ ಒಂದು ಭಾಗವಾದ ಅಂಖದಖಣ ಹದ್ದಿನಲ್ಲಿಯ ಕಲ್ಕಟ್ಟಿ ಹತ್ತಿರದ ಹನುಮಂತ ದೇವಸ್ಥಾನದ ಹತ್ತಿರ ಇತ್ತು. ರಾಷ್ಟ್ರೀಯ ಪುಸ್ತಕಗಳ ಸಂಗ್ರಹ, ಸತ್ಯಾಗ್ರಹದ ರೂಪರೇಷೆಗಳ ರಹಸ್ಯ ಕಾರ್ಯಕ್ರಮದ

ಕೇಂದ್ರವಾಗಿತ್ತು ಈ ಮಾರುತಿ ವಾಚಾನಾಲಯ. ಇದರೊಂದಿಗೆ ಖಾದಿ ಅಂಗಡಿಗಳ ಸ್ಥಾಪನೆ, ಪ್ರೌಢರಿಗೆ ರಾತ್ರಿಶಾಲೆ ಪ್ರಾರಂಭಿಸಿ ಓದು ಬರಹ ಕಲಿಸುವುದು. ಹೋರಾಟಗಾರರ ಕೆಲಸವಾಗಿತ್ತು. ತಾಲೂಕಿನ ಪ್ರಮುಖ ಸ್ಥಳಗಳಾದ ತಡಸ, ಧುಂಡಸಿ, ಸೋಮಾಪುರ, ಕಳಸ, ಹುಲಗೂರು, ಹುರಳಿಕೊಪ್ಪಿ ಮುಂತಾದ ಊರುಗಳಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಅಹಿಂಸಾತ್ಮಕ ಆಂದೋಲನದ, ವಿಶೇಷ ಪ್ರಚಾರ ಮುಂದುವರೆದಿತ್ತು. ಈ ಹೋರಾಟದಲ್ಲಿ ಸಕ್ರಿಯ ಪಾಲುದಾರರಾಗಿದ್ದ ಪಂಡಿತ ಶಂಕರ ದೀಕ್ಷಿತ ಕರ್ಮಠರು ತಮ್ಮ ಅನುಭವವನ್ನು ಸುಂದರವಾಗಿ ವಿವರಿಸಿರುವರು."[೭]

"೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹ ಮಾಡುವುದರ ಸಲುವಾಗಿ ಬುರ್ಲಿಯವರೊಂದಿಗೆ ೮೦ ಜನ ಅಂಕೋಲಾಕ್ಕೆ ಹೋಗಲು ತಡಸ ಶಿಗ್ಗಾಂವಿ ಮಾರ್ಗವಾಗಿ ಬಂಕಾಪುರಕ್ಕೆ ಬಂದಾಗ ಅವರನ್ನು ಆದರದಿಂದ ಬರಮಾಡಿಕೊಂಡು ಪೇಟೆ ತುಂಬೆಲ್ಲಾ ಮೆರವಣಿಗೆ ತೆಗೆದು ಜಾಹೀರ ಸಭೆ ಮಾಡಿದೆವು. ಅಂದಿನ ನಮ್ಮ ಕಾರ್ಯಕ್ರಮ ಸೇಂದಿಗಿಡ ಕಡಿಯುವುದು. ಎರಡು ಮೂರು ದಿವಸಗಳಲ್ಲಿ ನಮ್ಮೂರ ಸುತ್ತ ಮುತ್ತಲಿನ ಎಲ್ಲ ಗಿಡಗಳೂ ಮಾಯವಾದವು. ಅಷ್ಟರಲ್ಲಿ ನೀರಲಗಿ ಗ್ರಾಮದ ಅಗಡಿಯವರು ಬಂಕಾಪುರದ ಹೇಜೀಬರ ಮನೆಗೆ ಬಂದರು. ಅವರು ತಮ್ಮ ಹೊಲದಲ್ಲಿ ಮಾಲ್ಕಿ ಗಿಡ ಕಡಿಯಲು ಪರವಾನಿಗೆ ಕೊಟ್ಟರು. ಸೇಂದಿ ಗುತ್ತಿಗೆದಾರರ ಮಾತನ್ನು ಕೇಳದೆ ಕಾರ್ಯಕೈಕೊಂಡೆವು. ಗುತ್ತಿಗೆದಾರರು ನೂರಾರು ಜನರಿಗೆ ಮಾಂಸದ ಅಡಿಗೆ ಮಾಡಿಸಿ, ಬೇಕಾದಷ್ಟು ಸೇಂದಿ ಕುಡಿಸಿ 'ಚಳವಳಿ ಜನರು ಇತ್ತ ಬರದಂತೆ ಅವರನ್ನು ಚೆನ್ನಾಗಿ ಥಳಿಸಿರಿ' ಎಂದು ತಯಾರು ಮಾಡಿದ್ದರು. ಈಚಲ ಗಿಡವಿದ್ದ ಕಡೆಗೆ ನಡೆದೆವು. ನಡುವೆ ಉಕ್ಕಾಟದ ಒಬ್ಬರೇ ಹೋಗುವ ಕಾಲುದಾರಿ ಹಳ್ಳ ದಾಟಿ ಹೋಗಬೇಕು ಹಳ್ಳದ ದಂಟೆಗುಂಟ ಈಚಲ ಗಿಡದ ಗುಂಪುಗಳು. ಅಲ್ಲಿಯೆ ಪುಂಡರು ಅಡಗಿ ಕುಳಿತು ನಮಗೆ ಮುತ್ತಿಗೆ ಹಾಕಿ ನಮ್ಮಲ್ಲಿ ಒಬ್ಬನಾದ ರಾಮಚಂದ್ರ ವೈದ್ಯನ ಕಾಲಿಗೆ ಬಡಗಿಯಿಂದ ಹೊಡೆದರು. ಕೃಷ್ಣ ಜೋಷಿಯ ಕೈ ಎಲಬು ಮುರಿಯುವಂತೆ ಹೊಡೆದು ಕೆಳಕ್ಕೆ ಒಗೆದರು. ಕೊಡ್ಲಿ, ಗಾಂಧೀ ಟೊಪ್ಪಿಗೆ, ನಿಶಾನೆ ಕಸಿದುಕೊಂಡು ನಮ್ಮವರನ್ನು ಥಳಿಸಹತ್ತಿದರು. ನಮ್ಮ ಬಡಿದಾಟ ಸರಕಾರದೊಂದಿಗೆ ಇದೆ. ನಿಮ್ಮೊಂದಿಗೆ ಇಲ್ಲ. ದೇಶದ ಸ್ವಾತಂತ್ರ್ಯದ ಸಲುವಾಗಿ ಇದೆ. ನಿಮ್ಮೊಂದಿಗೆ ಇಲ್ಲ. ದೇಶದ ಸ್ವಾತಂತ್ರ್ಯದ ಸಲುವಾಗಿ ಇದೆ. ಕುಡಿಯುವದರಿಂದ ನಿಮ್ಮ ಸರ್ವನಾಶ ನೀವೇ ಮಾಡಿಕೊಳ್ಳುತ್ತೀರಿ, ಎಂದರು ಹೇಳಿದರು ಅವರು ಕೇಳಲಿಲ್ಲ. ಹಿಂದೆ ಇದ್ದ ಕೇಶವರಾಯರ ತಲೆಗೆ ಪುಂಡರು ಕೊಡಲಿಯಿಂದ ಹೊಡೆದಿದ್ದರು. ಗಾಯವಾಗಿ ರಕ್ತ ಸೋರುತ್ತಿತ್ತು. ಅಲ್ಲಿ ಉಪಚಾರವಾಗದೆ ಬಂಕಾಪುರಕ್ಕೆ ಬಂದು, ಸರಕಾರಿ ಡಾಕ್ಟರರಿಗೆ ಭೆಟ್ಟಿಯಾದರೂ ಅವರು ಉಪಚಾರ ಮಾಡಲಿಲ್ಲ. ಅದೇ ಹುಬ್ಬಳ್ಳಿಯಿಂದ ಬಂದ ದತ್ತೋ ದೀಕ್ಷಿತರು ಅವನನ್ನು ನೋಡಿ ಸಂತಾಪಗೊಂಡು ತಕ್ಷಣ ಸಾರ್ವಜನಿಕ ಸಭೆ ಕರೆದು "ಕುಡುಕತನ ಬಿಡಿಸದೆಹೋದರೆ ಈ ರೀತಿ ನಮ್ಮ ಹುಡುಗರಿಗೆ ಹಿಂಸೆ ಕೊಡುತ್ತಾರೆ ಇಂಥ ಸರಕಾರಕ್ಕೆ ಧಿಕ್ಕಾರವಿರಲಿ. ನೀವೆಲ್ಲರು

ಒಗ್ಗಟ್ಟಿಂದ ಚಳವಳಿ ಮಾಡಬೇಕು." ಎಂದು ಹೇಳಿದರು. ಈ ಸುದ್ದಿ ಸೇವಾದಳಕ್ಕೆ ಮುಟ್ಟಲು ಕೂಡಲೆ ಕಾರಿನಿಂದ ಹ.ರಾ ಪುರೋಹಿತ, ಲೋಕರೆ, ಡಾ. ಹರ್ಡಿಕರ ಬಂದು ಎಲ್ಲ ವಿಷಯ ವನ್ನು ತಿಳಿದುಕೊಂಡು ಬಡಿತ ತಿಂದವನನ್ನು ಉಪಚರಿಸಿದರು. ಪ್ರತಿದಿನ ಹೊಸಮನಿ ಸಿದ್ದಪ್ಪ, ಸಂಗೂರ ಕರಿಯಪ್ಪ, ಪರಮಣ್ಣ ಮುಂತಾದವರ ಭಾಷಣ ಏರ್ಪಡಿಸಿ ಜನಮನದಲ್ಲಿ ಜಾಗ್ರತಿಯನ್ನು ತುಂಬುತ್ತಿದ್ದರು.

ಮುದವಿಡು ಕೃಷ್ಣರಾಯರು ಒಂದು ದಿನ ಭಾಷಣ ಮಾಡುತ್ತಿದ್ದಾಗ ನಾಳೆ ಸೋಮವಾರ ಈಚಲಗಿಡ ಸಂಹಾರಕ್ಕೆ ಹೋಗತಕ್ಕದ್ದು, ಮೀಸೆಹೊತ್ತ ಒಬ್ಬ ಗಂಡಸು ಕೂಡ ಊರಲ್ಲಿ ಉಳಿಯತಕ್ಕದ್ದಲ್ಲ ಎಂದು ಆಹ್ವಾನ ನೀಡಿದರು. ಬಂಕಾಪುರದಿಂದ ೩ ಮೈಲು ದೂರದಲ್ಲಿದ್ದ ಕುಂದೂರ ಗ್ರಾಮದ ರಸ್ತೆ ಹಿಡಿದು ಮೆರವಣಿಗೆ ಹೊರಟಿತು. ಅಲಲ್ಲಿ ಸಮೀಪದ ಸ್ಥಳಗಳಿಂದ ಜನರು  ಬರತೊಡಗಿದರು.

ಧಾರವಾಡದ ಎಸ್.ಪಿ ಹಾಲಂಡರು ಸಶಸ್ತ್ರ ನೂರು ಜನ ಪೋಲಿಸರೊಂದಿಗೆ ಊರ ತುಂಬೆಲ್ಲ ಪರೇಡ ಮಾಡಿಸಿ ಗಿಡಗಳ ರಕ್ಷಣೆಗಾಗಿ ಪೋಲಿಸರನ್ನ ಹಳ್ಳದ ಕಡೆಗೆ ಕಳಿಸಿ ತಾವು ನೀರಲಗಿ ಅಗಸಿಗೆ ನಿಂತರು. ಕೂಡಿದ ಜನ ಇವರನ್ನು ಲೆಕ್ಕಿಸದೇ ಮುಂದೆ ಹೋಗಿ ಗಿಡ ಕಡಿಯ ಹತ್ತಿದರು. ತಂಡದ ಮುಖಂಡರನ್ನು ಸೆರೆ ಹಿಡಿಯಬೇಕೆಂದು ಮುದವೀಡು ಕೃಷ್ಣರಾಯನ್ನು ಅಡ್ಡಗಟ್ಟಿದರು. ಇದೇನು ಸರಕಾರದ ವಿರುದ್ದ ಮಾಡುವ ದ್ವಂಸ ಕಾರ್ಯ ಎಂದು ಕೇಳಿದಾಗ ಅವರು ನಾವು ಮಾಲೀಕಿ ಗಿಡಗಳನ್ನು ಮಾತ್ರ ಪರವಾನಗಿಯಿಂದ ಕಡಿಯುತ್ತಿದ್ದೇವೆ. ಹಾಗೆ ಗಿಡಗಳನ್ನು ಮಾತ್ರ ಕಡಿಯುವಾಗ ನಿಮ್ಮ ಜನ ಈ ಹುಡಗನ ತಲೆ ಒಡೆದು ಹಿಂಸಾಚಾರ ಮಾಡಿದ್ದಾರೆ ಎಂದು ಕೇಶವರಾಯವರು ಅಲ್ಲಿಯೇ ಇದ್ದ ರಕ್ತದ ಕಲೆಯ ಬಟ್ಟೆಗಳನ್ನು ತೋರಿಸಿದರು. ಅತ್ತ ಕಡೆ ಗಿಡಗಳನ್ನು ಕಟ್ ಕಟ್ ಎಂದು ಜೋರಾಗಿ ಕಡಿಯುವ ಸಪ್ಪಳ ಕೇಳಿ ಬರುತ್ತಿತ್ತು. ' ನಿಮ್ಮ ಜನರ ಕೆಲಸವನ್ನು ನೋಡಬರ್ರಿ' ಎಂದು ಹಾಲಂಡರು ಕೃಷ್ಣರಾಯರನ್ನು ಕರೆದುಕೊಂಡು ಈಚಲ ಮರ ಕಡಿಯುವ ಜಾಗಕ್ಕೆ ಬಂದರು. ಅಲ್ಲಿ ಸರಕಾರಿ ನಂಬರು ಇದ್ದ, ಇಲ್ಲದ ಗಿಡಗಳ ಸಂಹಾರ ನಡೆದಿತ್ತು. ಇದನ್ನು ಹಾಲಂಡರು ತೋರಿಸುವಷ್ಟರಲ್ಲಿ ಒಂದು ಅವರ ಬೆನ್ನು ಸವರುತ್ತಾ ನೆಲಕ್ಕುರುಳಿತು. ಈ ನೂರಾರು ಕ್ರಾಂತಿಕಾರಿ ಜನರ ಅವತಾರ ನೋಡಿದ ಹಾಲಂಡರು ಇವರು ನಮ್ಮನ್ನೆ ಕೊಡಲಿಯಿಂದ ಚೆಂಡಾಡಿ ಬಿಟ್ಟಾರು ಎಂದು ಉಪಾಯದಿಂದ ಸರಕಾರಿ ಗಿಡಗಳನ್ನು ಮಾತ್ರ ಕಡಿಯಬೇಡಿರಿ ಎಂದು ಹೇಳಿ ಅಲ್ಲಿಂದ ತಮ್ಮ ಪೋಲಿಸರನ್ನು ಕರೆದುಕೊಂಡು ಕಾಲತೆಗೆದರು. ಶತ್ರುಗಳನ್ನು ಚೆಂಡಾಡುವಂತೆ ಈ ರಣರಂಗದಲ್ಲಿ ಒಂದು ಗಿಡವೂ ಉಳಿಯದಂತೆ ಚೆಂಡಾಡಲಾಯಿತು. ತಮ್ಮ ಪ್ರತಿಜ್ಞೆ ಪೂರ್ಣಗೊಂಡ ಯೋಧರು ಬಂಕಾಪುರಕ್ಕೆ ಬಂದು ರಾತ್ರಿ ಪ್ರಚಂಡ ಸಭೆ ನಡೆಸಿದರು. ಎಂದು ಶ್ರೀ ಕರ್ಮರು ಬರೆದರೆ, ಈ ಹೋರಾಟಗಾರರ ಕೈಗೆ ಸಿಕ್ಕು ಸುಮಾರು ೨೫ ಸಾವಿರ ಸೇಂದಿಗಿಡಗಳು ಉರುಳಿದವಲ್ಲದೆ

ಮುಂದೆ ಪ್ರತಿವಾರ ೫ ವಾರ ಈ ಕಾರ್ಯಕ್ರಮ ಮಾಡುವೆಂದು ತೀರ್ಮಾನಿಸಿ ೫ ವಾರಗಳ ಅವಧಿಯಲ್ಲಿ ಸುಮಾರು ೮೦ ಸಾವಿರದಿಂದ ಒಂದು ಲಕ್ಷದವರೆಗೆ ಈಚಲಮರಗಳನ್ನು ನೆಲಕ್ಕುರುಳಿಸಲಾಯಿತೆಂದು ಅನಂತಭಟ್ಟ ಹುರಳಿಕುಪ್ಪಿಯವರು ಬರೆದಿರುವರು."[೮]

**ಬಂಕಾಪುರದ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರ ಪರಿಚಯ ಹೀಗಿದೆ.**

೧. **ಶ್ರೀ ಚಿಕ್ಕನಗೌಡ ನಿಂಗನಗೌಡ ಪಾಟೀಲ** : ೧೯೨೧ ರಲ್ಲಿ ಜನಿಸಿದ ಪಾಟೀಲರು ಹಂಸಭಾವಿಯ ದುರ್ಗದ ಹೈಸ್ಕೂಲಿನಲ್ಲಿದ್ದಾಗಲೇ ಚಳವಳಿಯಲ್ಲಿ ಭಾಗವಹಿಸಿದರು. ೧೯೪೨ ರ ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರೀಯ ಪಾತ್ರವಹಿಸಿದರು. ಇದರಿಂದ ಆರು ತಿಂಗಳು ಜೈಲುವಾಸ ಅನುಭವಿಸಿದ ಶ್ರೀಯುತರು ಸ್ವಾತಂತ್ರ್ಯ ಹೋರಾಟಗಾರರೆಂದು ಪ್ರಮಾಣ ಪತ್ರ ಹೊಂದಿದರು. ಇವರು ೧೯೭೧ ರಲ್ಲಿ ಮರಣ ಹೊಂದಿದರು.

೨. **ಶ್ರೀ ಕೃಷ್ಣ ಚಂದ್ರಾಮ ಜೋಶಿ** : ೧೯೧೦ ರಲ್ಲಿ ಜನನ ಹೊಂದಿದ ಕೃಷ್ಣ ಅವರು ವೈದಿಕ ವೃತ್ತಿಯವರು. ಮುಲ್ಕಿ ಪರೀಕ್ಷೆಗೆ ಕಟ್ಟಿದಾಗಲೇ ಸ್ವಾತಂತ್ರ್ಯ ಹೋರಾಟದಲ್ಲಿ ಮಹಾತ್ಮ ಗಾಂಧಿಜೀಯವರ ಕರೆಗೆ ಒಗೊಟ್ಟು ವಿದ್ಯಾಭ್ಯಾಸಕ್ಕೆ ಶರಣು ಹೊಡೆದರು. ೧೯೪೨ರ ಚಳವಳಿಯಲ್ಲಿ ಇವರು ಕೈಗೊಂಡ ಕ್ರಾಂತಿಕಾರಿ ಕಾರ್ಯಗಳಿಗೆ ಸೆರೆ ಹಿಡಿದ ಇಂಗ್ಲಿಷ ಸರಕಾರ ಇವರನ್ನು ಬೆಳಗಾವಿಯ ಹಿಂಡಲಗ ಜೈಲಿನಲ್ಲಿ ಕೈದಿಯನ್ನಾಗಿಸಿದರು. ತಮ್ಮ ಸೇವೆಯ ಕಾರ್ಯದಲ್ಲಿ ರಾಷ್ಟ್ರೀಯ ಮಟ್ಟದ ದೇಶ ಪ್ರೇಮಿ ಹೋರಾಟಗಾರರ ಜೊತೆಗಿದ್ದ ಕೆಲವು ಭಾವಚಿತ್ರಗಳು ಇವರಲ್ಲಿ ಸುಂದರವಾಗಿವೆ. ಇವರು ೧೯೭೦ ರಲ್ಲಿ ಮರಣ ಹೊಂದಿದರು.

೩. **ಶ್ರೀ ಶಂಕರ ದೀಕ್ಷಿತ ಕರ್ಮಠರು** : ಇವರು ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯ ಪಾಲುಗಾರರಾಗಿ ಅಶ್ಪ್ರಶ್ಯತಾ ನಿವಾರಣೆ, ಗ್ರಾಮೋದ್ಯೋಗದಂತಹ ಪ್ರಮುಖ ಕಾರ್ಯ ಕೈಗೊಂಡಿರುವರು.

೪. **ಶ್ರೀ ರಾಮಚಂದ್ರ ಜಂತ್ಲಿ** : ಇವರು ಸ್ವಾತಂತ್ರ್ಯ ಸಂಗ್ರಾಮ ಚಳವಳಿಯಲ್ಲಿ ಭಾಗವಹಿಸಿ ಸರಕಾರದಿಂದ ಮನ್ನಣೆ ಪಡೆದಿರುವರು. ರಾಷ್ಟ್ರೀಯ ನೇತಾರರ ಮಾರ್ಗದರ್ಶನದಲ್ಲಿ ಕ್ರಿಯಾತ್ಮಕ ಕಾರ್ಯಗಳನ್ನು ಮುಂದುವರೆಸಿಕೊಂಡು ಹೋದವರು.

೫. **ನಿಂಗನಗೌಡ ಗಿಡ್ಡನಗೌಡ ಪಾಟೀಲ** : ಸ್ವಾತಂತ್ರ್ಯ ಸಂಗ್ರಾಮದ ಸಕ್ರಿಯ ಹೋರಾಟಗಾರರಲ್ಲಿ ಒಬ್ಬರಾದ ಶ್ರೀಯುತರು ೧೯೧೯ರಲ್ಲಿ ಜನಿಸಿದರು. ರಾಷ್ಟ್ರೀಯ ನೇತಾರರ ಮಾರ್ಗದರ್ಶನದಲ್ಲಿ ಹಲವಾರು ಕ್ರಿಯಾತ್ಮಕ ಕಾರ್ಯಗಳನ್ನು ಮುಂದುವರೆಸಿಕೊಂಡು ಹೋದವರಲ್ಲಿ ಇವರು ಪ್ರಮುಖರು. ಇವರು ೧೯೯೪ರಲ್ಲಿ ಮರಣ ಹೊಂದಿದರು.

೬. **ಶ್ರೀ ಕಾಂತಪ್ಪ ಘಂಟೆಪ್ಪನವರ** : ಸಂಗೂರ ಕರಿಯಪ್ಪ, ಹೊಸಮನಿ ಶಿದ್ದಪ್ಪನವರಂತಹ ಸ್ವಾತಂತ್ರ್ಯ ಹೋರಾಟದ ಮುಂದಾಳುಗಳ ಮಾಲಿಕೆಯಲ್ಲಿ ಪ್ರಾಮಾಣಿಕ ಸೇವೆ ಗೈದ ಶ್ರೀ

ಕಾಂತಪ್ಪ ಘಂಟೆಪ್ಪನವರು. ಇವರ ಸೇವೆಯನ್ನು ಗಮನಿಸಿ ಸ್ವಾತಂತ್ರ್ಯ ಸರಕಾರ ಇವರಿಗೆ ಮನ್ನಣೆಯಿತ್ತಿದೆ.

೭. **ಶ್ರೀ ಗೋಪಾಲರಾವ ಹಜೇಬ್** : ಶ್ರೀಯುತರು ಬಂಕಾಪುರದಲ್ಲಿ ೧೯೨೦ರ ಸುಮಾರಿಗೆ ಮಾರುತಿ ವಾಚನಾಲಯವನ್ನು ಸ್ಥಾಪಿಸಿ ಸ್ವಾತಂತ್ರ್ಯ ಹೋರಾಟಗಾರರಿಗೆ ಎಲ್ಲ ರೀತಿಯ ಪುಸ್ತಕಗಳ ಪರಿಚಯ ಮಾಡಿಕೊಟ್ಟಿದ್ದರು. ಈಗಲೂ ಈ ಕಟ್ಟಡ ನಮಗೆ ನೋಡಲು ಸೀಗುತ್ತದೆ. ಮಾರುತಿ ವಾಚನಾಲಯ ಸ್ವಾತಂತ್ರ್ಯ ಹೋರಾಟಗಾರರ ರಕ್ಷಣೆಯ ಕೇಂದ್ರವಾಗಿಯೇ ಕೆಲಸ ಕೈಗೊಂಡಿತು. ಇಲ್ಲಿಯ ಹೋರಾಟಗಾರರಲ್ಲಿ ಕೆಲವರು ತುಂಬಾ ಗಂಭೀರವಾದ ಜವಾಬ್ದಾರಿ ಹೊತ್ತು ಎಂತ ಸಂದರ್ಭ ಬಂದರು ತಮ್ಮ ಗುಟ್ಟು ಬಿಡದೇ ಕಾರ್ಯ ನಿರ್ವಹಿಸಿರುವರು.

ಶ್ರೀ ಶಂಕರ ಕರ್ಮಠ ದೀಕ್ಷೀತರ ಮನೆ ಹೋರಾಟಗಾರರ ಒಂದು ಭೂಗತ ಕೇಂದ್ರವಾಗಿತ್ತು. ಸುತ್ತಲಿಂದ ಬರುವ ಚಳವಳಿಗಾರರಿಗೆ ಅನ್ನ, ಅರಿವೆ, ರಕ್ಷಣೆ ಒದಗಿಸುವುದು. ಬಂದವರನ್ನು ಆದರದಿಂದ ಕಾಣುವುದು, ಕರಪತ್ರ ಹೊರಡಿಸುವುದು. ರಹಸ್ಯವಾಗಿ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಅವುಗಳ ಹಂಚಿಕೆಯಾಗುವುದು, ಜನಮನದಲ್ಲಿ ಜಾಗೃತಿ ತುಂಬಿ ಸ್ವಾತಂತ್ರ್ಯ ಹೋರಾಟಕ್ಕೆ ಅವರನ್ನು ಸನ್ನದ್ದಗೊಳಿಸುವುದು. ಚಿಕ್ಕವರು ದೊಡ್ಡವರು ಎನ್ನದೇ ಎಲ್ಲರನ್ನು ಒಂದು ಗೂಡಿಸುವುದು. ಹೀಗೆ ಅಂದು ಈ ಹೋರಾಟಗಾರರು ಬಿತ್ತಿದ ಬೀಜ ಇಂದು ಮೊಳಕೆ ಒಡೆದು ಗೌರವಕ್ಕೆ ಸಾಕ್ಷಿಯಾಗಿದೆ.

ಮುಖ್ಯ ರಸ್ತೆಗೆ ಹೊಂದಿಕೊಂಡು ಊರಿನ ಕೇಂದ್ರ ಸ್ಥಳದಲ್ಲಿರುವ ಈ ವಾಚನಾಲಯ ಮಹಾತ್ಮ ಗಾಂಧೀಜಿಯವರ ತತ್ವಗಳ ಪರಿಪಾಲನೆಯ ಸಂಸ್ಥೆಯಾಗಿತ್ತು. ಹೀಗಾಗಿ ಈ ವಾಚನಾಲಯದ ಸದಸ್ಯತ್ವ ಪಡೆಯುವುದೇ ಒಂದು ಗೌರವದ ಸಂಕೇತವಾಗಿತ್ತು. ಯಾವುದೊಂದು ಸಂಘ ಸಂಸ್ಥೆ ಸಮಾಜ ಇವುಗಳ ಸಂಸ್ಥಾಪಕರು ಚಾಲಕರು ಎಷ್ಟೇ ಧ್ಯೇಯವಾದಿಗಳು, ತತ್ವನಿಷ್ಠರು, ದೀರ್ಘ ಪರಿಶ್ರಮ ಪಡುವವರು ಇದ್ದರು. ಅವರ ಜೊತೆಗಾರರು ಸಹಾಯಕರು ಅಷ್ಟೇ ತ್ಯಾಗ ಜೀವಿಗಳಾಗಿ ಕಾರ್ಯ ಮಾಡಬೇಕಾಗುತ್ತದೆ. ಈ ರೀತಿಯ ನೆರವು ಸಿಗದೇ ಹೋದರೆ ಆ ಸಂಸ್ಥೆಗಳು ಎಂದೂ ಮುಂದೆ ಬರಲಾರವು. ಹೀಗಾಗಿ ಇಲ್ಲಿಯ ಕೆಲಸಗಾರರು ಮೀರಿದ ತ್ಯಾಗಮನೋಭಾವನೆಯಿಂದಲೂ, ಕಾರ್ಯತತ್ಪರತೆಯಿಂದಲೂ ಯಾವ ಬಗೆಯ ಜನರ ದೂಷಣೆಗಳನ್ನು ಲೆಕ್ಕಿಸದೇ ಕಾರ್ಯ ಕೈಗೊಂಡಿದ್ದರಿಂದ ಮಾರುತಿ ಸರಸ್ವತಿಯ ಆರಾಧನಾ ಕೇಂದ್ರವಾಗುವ ಜೊತೆಯಲ್ಲಿ ಸ್ವಾತಂತ್ರ್ಯ ಪ್ರೇಮಿಗಳ ವಾಸಸ್ಥಾನವು ಆಯಿತು. ಇಲ್ಲಿ ಕೆಲವರು ಒಳಗೆ ಇದ್ದು ಕೊಂಡು ಕೆಲಸ ಮಾಡುತ್ತಿದ್ದರೆ, ಕೆಲವರು ಸಮಾಜದ ಹಿತೋಭಿಲಾಷಿಗಳಾಗಿ ಸೇವೆ ಸಲ್ಲಿಸುತ್ತಿದ್ದರು. ನೂಲುವುದು, ನೇಯುವುದು ಚಿಕ್ಕ ಪುಟ್ಟ ಗೃಹ ಕೈಗಾರಿಕೆಗಳ ಬಗೆಗೆ

ಜನ-ಮನದಲ್ಲಿ ತಿಳುವಳಿಕೆ ಮೂಡಿಸುವ ಕಾರ್ಯ ಎಲ್ಲರ ಜವಾಬ್ದಾರಿಯಾಗಿತ್ತು. ಇಂಥ ಕೆಲಸಗಾರರು ಯಾವುದೊಂದು ಕಟ್ಟಡದ ತಳಹದಿಯಲ್ಲಿರುವ ಕಲ್ಲು ಗಾರೆ ಗಚ್ಚುಗಳಂತೆ. ಇಂದು ಒಂದು ಕೋಣೆ ಮಾತ್ರ ಉಳಿದಿರುವ ಈ ವಾಚನಾಲಯ ಅಂದು ಸಾಧಿಸಿದ ಕಾರ್ಯ ಗಮನಾರ್ಹ. ಇಲ್ಲಿಯ ಸ್ವಾತಂತ್ರ್ಯ ಹೋರಾಟಗಾರರ ಕಾರ್ಯ ಕಾಣಿಸದಿದ್ದರೂ ಕಾಣಿಸುವರಷ್ಟೇ ಮಹತ್ವದೆನ್ನುವುದನ್ನು ಮರೆಯಲಾಗದು. ಈ ವಾಚನಾಲಯವನ್ನು ೧೯೫೪ ರವರೆಗೆ ಪಂಪಾಪತಿ ರಘುನಾಥ ಜೋಶಿ ಎಂಬುವರು ನಡೆಸಿದ್ದರು. ಕಾಲಾಂತರದಲ್ಲಿ ಇದರ ಕಾರ್ಯ ಸ್ಥಗಿತಗೊಂಡಿದೆ.

ಈ ಎಲ್ಲ ಹಿನ್ನೆಲೆಗಳನ್ನು ಗಮನಿಸಿದರೆ ಬಂಕಾಪುರದ ಸುತ್ತಮುತ್ತಲಿನ ಪ್ರದೇಶದಲ್ಲಿ ಸ್ವಾತಂತ್ರ್ಯ ಹೋರಾಟ ಕಾರ್ಯ ವ್ಯವಸ್ಥಿತವಾಗಿ ಮುನ್ನಡೆದಿತ್ತೆಂದು ತಿಳಿದುಬರುತ್ತದೆ. ಬಂಕಾಪುರ ಅದರ ಸುತ್ತಲಿನ ಬಹುಸಂಖ್ಯೆಯ ಹೋರಾಟಗಾರರು ರಾಷ್ಟ್ರೀಯ ಹೋರಾಟದಲ್ಲಿ ಪಾಲುಗಾರರಾಗಿ ಯಶಸ್ಸು ತಂದುಕೊಡುವಲ್ಲಿ ತುಂಬಾ ಪ್ರಯತ್ನಿಸಿರುವರು. ಇಲ್ಲಿ ಪ್ರಕಟಿಸಲ್ಪಟ್ಟಿರುವ ಈ ಹೋರಾಟ ಗಾರರನ್ನು ಬಿಟ್ಟು ಬಂಕಾಪುರದ ಇನ್ನು ಕೆಲವರು ಇದರಲ್ಲಿ ಸಕ್ರಿಯ ಕಾರ್ಯ ನೆರವೇರಿಸಿದ್ದು, ಅವರೆಲ್ಲರ ಸೇವೆಗೆ ನಾವು ಚಿರಋಣಿ.

ಈ ಮೇಲಿನ ವಿಷಯಗಳನ್ನು ಅವಲೋಕಿಸಿ ನೋಡಿದಾಗ ಸ್ವಾತಂತ್ರ್ಯ ಹೋರಾಟದಲ್ಲಿ ಬಂಕಾಪುರದ ಆಗಿನ ಹೋರಾಟಗಾರರ ಕೆಚ್ಚದೆಯ ಹೋರಾಟ, ಅವರ ಆದರ್ಶ ಬದುಕು, ರಾಷ್ಟ್ರಪ್ರೇಮ ಇಂದಿನ ಯುವಕರಿಗೆ ಮಾದರಿಯಾಗಿದ್ದು, ಅವರ ಆದರ್ಶದಲ್ಲಿ ಇಂದಿನ ಯುವ ಜನಾಂಗ ಮುನ್ನಡೆದರೆ ನಿಜಕ್ಕೂ ನಾವು ಆ ಸ್ವಾತಂತ್ರ್ಯ ಹೋರಾಟಗಾರರಿಗೆ ಗೌರವ ಸೂಚಿಸಿ ದಂತಾಗುತ್ತದೆ.

**೫.೫. ಸಾಂಸ್ಕೃತಿಕ ಚಹರೆಗಳು ಮತ್ತು ಸ್ಥಿತಿಗತಿಗಳು**

ಸಂಸ್ಕೃತಿ ಮಾನವ ಜೀವನವನ್ನು ಆವರಿಸಿರುವ ಒಂದು ಪರಂಪರೆ. ಇಂತಹ ಸಾಂಸ್ಕೃತಿಕ ಆಯಾಮಗಳಲ್ಲಿಯೂ ಬಂಕಾಪುರ ಗ್ರಾಮದಲ್ಲಿ ಇಂದಿಗೂ ಅನೇಕ ಸಂಸ್ಕೃತಿ ಉಳಿದುಕೊಂಡು ಬಂದಿರುವುದನ್ನು ಕಾಣಬಹುದು.

ಮನುಷ್ಯ ಹುಟ್ಟಿನಿಂದ ಸಾಯುವವರೆಗೆ ಆಚರಣೆ ಮಾಡುವ ಜೀವನಾವರ್ತನ ಆಚರಣೆಗಳು ಇಂದಿಗೂ ಆಚರಿಸಿಕೊಂಡು ಬರುತ್ತಿರುವುದನ್ನು ಕಾಣಬಹುದು. ಹಿಂದೆ ಬಂಕಾಪುರದಲ್ಲಿ ಗದಿಗೆಮ್ಮ ಹಡಪದ ಎಂಬ ಸೂಲಗಿತ್ತಿಯು ಸಾವಿರಾರು ಹೆರಿಗೆಯನ್ನು ಮಾಡಿ ಅಂದಿನ ಕಾಲದ ಹೆಣ್ಣು ಮಕ್ಕಳ ಆರಾಧ್ಯ ದೈವವಾಗಿದ್ದನ್ನು ನಾವು ಇಂದಿಗೂ ಹಿರಿಯರಿಂದ ತಿಳಿಯಬಹುದು. ಇಂದಿಗೂ ಹೆರಿಗೆ ಮನೆಯಲ್ಲಿ ಆದರೆ ಜನನ ಸಮಯದಲ್ಲಿ ಬರುವ ಮಾಂಸವನ್ನು ಮನೆಯಲ್ಲಿ ಅಥವಾ ಹಿತ್ತಲಿನಲ್ಲಿ ಅದನ್ನು ಹುಗಿಯುತ್ತಾರೆ ಹಾಗೂ ಐದನೆ ದಿನ ಅದನ್ನು ಹಾಲು ತುಪ್ಪ ಹಾಕಿ ತನ್ನ ಹುಟ್ಟಿದ ಮಗುವಿಗೆ ಒಳ್ಳೆದಾಗಲೆಂದು ಹಡೆದ ತಾಯಿ ಬೇಡಿಕೊಳ್ಳುತ್ತಾಳೆ. ಇದರಿಂದ ಹುಟ್ಟಿದ ಮಗುವಿಗೆ ಎಲ್ಲಾ ರೀತಿಯಿಂದ ಒಳ್ಳೆದಾಗುತ್ತದೆ ಎಂಬ ನಂಬಿಕೆ ಇದೆ.

ಋತುಮತಿಯಾದ ಸಮಯದಲ್ಲಿ ೧೬ ದಿನಗಳ ಕಾಲ ಕೂಡಿಸುವ, ಆರತಿ ಮಾಡುವ ಪರಿಪಾಠ ಇಂದಿಗೂ ಕೆಲವು ಕಡೆ ಕಾಣುತ್ತೇವೆ ಆದರೆ ಕೆಲವು ಮುಂದುವರೆದ ಸಮುದಾಯಗಳಲ್ಲಿ ಇದು ನಶಿಸಿ ಹೋಗುತ್ತಿರುವುದನ್ನು ಕಾಣಬಹುದು. ಬಾಳ ಸಂಗಾತಿಯ ಆಯ್ಕೆಯಲ್ಲಿ ಹಿರಿಯರೆ ಅಂತಿಮ ತೀರ್ಮಾನ ತೆಗೆದುಕೊಳ್ಳುವ ಸಂಗತಿಗಳು ಕೆಲವು ಸಮುದಾಯಗಳಲ್ಲಿ ಸಂಪ್ರದಾಯಗಳಲ್ಲಿ ಉಳಿದುಕೊಂಡು ಬಂದಿದೆ.

ಬಂಕಾಪುರ ಗ್ರಾಮದ ಹಿರಿಯರು ತಮ್ಮ ತಮ್ಮ ಸಮುದಾಯದಲ್ಲೇ ಮದುವೆಯಾಗ ಬೇಕೆಂಬುದು ಹಾಗೂ ಅದು ಹಿಂದಿನಿಂದಲೂ ನಡೆದುಕೊಂಡು ಬಂದ ಸಂಪ್ರದಾಯವೆಂದು ಅಂತರ್ ಸಮುದಾಯದ ವಿವಾಹಗಳನ್ನು ವಿರೋದ ಮಾಡುವದನ್ನು ಕಾಣಬಹುದು. ಮದುವೆ ನಂತರ ಬರುವ ಸೀಮಂತ ಕಾರ್ಯ ಕೂಡ ಇಲ್ಲಿ ಅಚ್ಚುಕಟ್ಟಾಗಿ ಹಾಗೂ ವಿಜೃಂಭಣೆಯಿಂದ ಮಾಡುವುದನ್ನು ಕಾಣಬಹುದು.ಈ ಹಿಂದೆ ಮಗುವಿಗೆ ನಾಮಕರಣ ಮಾಡುವಾಗ ಮನೆಯ ದೇವರ ಹೆಸರನ್ನು ಮೊದಲು ಹಾಗೂ ಹಿರಿಯರ ಹೆಸರನ್ನು ಕರೆಯಲಾಗುತ್ತದೆ ಈ ಸಂಪ್ರದಾಯ ಇಂದಿಗೂ ಉಳಿದುಕೊಂಡು ಬಂದಿರುವುದನ್ನು ನೋಡಬಹುದು.

ಗ್ರಾಮದಲ್ಲಿ ನಡೆಯುವ ಉತ್ಸವಗಳಾದ ದುರ್ಗಾದೇವಿ ಜಾತ್ರೆ, ಬಂಗಾರ ಬಸವೇಶ್ವರ ತೇರು, ಮಂಜುನಾಥ ಸ್ವಾಮಿಯ ಲಕ್ಷ ದೀಪೋತ್ಸವ, ಅರಳೆಲೆ ಮಠ ಹಾಗೂ ಹುಚ್ಚೇಶ್ವರ ಮಠದಲ್ಲಿ ನಡೆಯುವ ಪುರಾಣ ಮಂಗಲೋತ್ಸವ ಹಿಂದೆ ಈ ಹಬ್ಬಗಳನ್ನು ಬಹಳ ವಿಜೃಂಭಣೆ ಯಿಂದ ಆಚರಿಸುತ್ತಿದ್ದರು. ಇತ್ತೀಚೆಗೆ ಸಾಯಿ ಸೇವಾ ಸಂಸ್ಥೆ ಹಾಗೂ ಹಲವಾರು ಸ್ವ ಸಹಾಯ ಸಂಘಗಳಿಂದ ಸಾಂಸ್ಕೃತಿಕ ಕಾರ್ಯಕ್ರಮಗಳು ಬಲು ವಿಜೃಂಭಣೆಯಿಂದ ನಡೆಯುತ್ತಿರುವು ದನ್ನು ನೋಡಬಹುದು.

ಕಾಲಾಂತರದಿಂದ ನಡೆದುಕೊಂಡ ಬಂದ ಜನಪದ ವೈದ್ಯ ಪದ್ಧತಿ ಇಂದಿಗೂ ಇಲ್ಲಿ ಕಂಡುಬರುತ್ತದೆ. ಎಲುಬು ಕೀಲು ಮುರಿದರೆ ಕಟ್ಟುವಂತವರು, ಮಕ್ಕಳಾಗದ ಹೆಣ್ಣುಮಕ್ಕಳಿಗೆ ಮಕ್ಕಳಾಗುವಂತ ಔಷಧಿ ಕೊಡುವಂತಹವರು. ನೆಗಡಿ, ಕೆಮ್ಮು, ಜ್ವರದಂತಹ, ಸಾಮಾನ್ಯ ಕಾಯಿಲೆಗೆ ಔಷಧಿ ಕೊಡುವಂತವರು ಕಂಡುಬರುವರು.

ಹಲವಾರು ಪ್ರದರ್ಶನ ಕಲೆಗಳಾದ ದೊಡ್ಡಾಟ, ಸಣ್ಣಾಟ, ಬಯಲಾಟ, ನಾಟಕ, ಡೊಳ್ಳು ಕುಣಿತ, ಧಾರ್ಮಿಕ ಕಲೆಗಳಾದ ಭಜನೆ, ಅಲಾವಿ, ಮೊಹರಂ ಕುಣಿತ ಮುಂತಾದವು ಕರಕುಶಲ ಕಲೆಯಾದ ಹಚ್ಚೆ ಹಾಕುವವರು, ಕೌದಿಹೊಲೆಯುವವರು, ಗಣೇಶನ ಮೂರ್ತಿ ಮಾಡುವವರು, ಬಾಸಿಂಗ ತಯಾರು ಮಾಡುವವರು, ಬುಟ್ಟಿ ಹೆಣೆಯುವಿಕೆ, ಕರಿ ಕಟ್ಟುವವರು, ಮುಂತಾದವರು ತಮ್ಮ ವೃತ್ತಿಯನ್ನು ಇಂದಿಗೂ ಮುಂದುವರೆಸಿಕೊಂಡು ಬಂದಿರುವುದನ್ನು ಕಾಣಬಹುದು.

ಬಂಕಾಪುರ ಗ್ರಾಮದಲ್ಲಿ ದಿನನಿತ್ಯದ ಅಡುಗೆಯಾಗಿ ರೊಟ್ಟಿ, ಪಲ್ಯ, ಅನ್ನ, ಸಾರು ಉಪಯೋಗಿಸುತ್ತಾರೆ. ವಿಶೇಷ ಸಂದರ್ಭದಲ್ಲಿ ಹಬ್ಬ ಹರಿದಿನಗಳಲ್ಲಿ ತುಂಬಾ ವೈವಿಧ್ಯಮಯವಾದ

ತಿಂಡಿ–ತಿನಿಸು ಮಾಡುವುದುಂಟು. ಆಯಾ ಸಂದರ್ಭಕ್ಕೆ ತಕ್ಕಂತೆ ಒಂದೊಂದು ಹಬ್ಬಕ್ಕೂ ಒಂದೊಂದು ಬಗೆಯ ಅಡುಗೆಯನ್ನು ವಿಶೇಷವಾಗಿ ಮಾಡುವ ರೀತಿ ಮತ್ತು ರೂಢಿ ಇರುವುದನ್ನು ಕಾಣುತ್ತೇವೆ. ಹಾಗಾಗಿ ತುಂಬಾನೇ ವಿಶಿಷ್ಟವಾದ ಮತ್ತು ವೈವಿಧ್ಯಮಯವಾದ ಅಹಾರ ಪದ್ಧತಿ ಇರುವುದನ್ನು ಕಾಣುತ್ತೇವೆ.

ಹಲವು ಧರ್ಮಿಯರು ಇಲ್ಲಿ ವಾಸವಾಗಿದ್ದು, ಎಲ್ಲಾ ಜಾತಿ ಸಮುದಾಯಗಳ ನಡುವೆ ಸಾಮಾಜಿಕ ಸಾಮರಸ್ಯ ಕಂಡುಬರುತ್ತದೆ. ಊರಿನ ಜಾತ್ರೆ, ಉತ್ಸವ ಆಚರಣೆಗಳನ್ನು ಎಲ್ಲಾ ಜಾತಿಯ ಜನರು ಸೇರಿ ಒಟ್ಟೊಟ್ಟಿಗೆ ಆಚರಿಸುತ್ತಾರೆ. ಹಿಂದೆ ಮಠಗಳ ಅಡ್ಡಪಲ್ಲಕ್ಕಿ ಮಹೊತ್ಸವಗಳಿಗೆ ಮುಸ್ಲಿಂ ಬಾಂಧವರಿಂದ ಪೂಜೆಯಾಗುತ್ತಿದ್ದುದ್ದನ್ನು ಇಂದಿಗೂ ಹಿರಿಯರು ನೆನಪಿಸಿಕೊಳ್ಳುತ್ತಾರೆ.

ವೀರಶೈವ, ಬ್ರಾಹ್ಮಣ ಮಠಗಳಿದ್ದು, ಮಠಗಳಲ್ಲಿ ತಮ್ಮದೇ ಆದ ಧಾರ್ಮಿಕ ಪದ್ದತಿಗನು ಸಾರವಾಗಿ ವಿವಿಧ ಆಚರಣೆಗಳನ್ನು ನಡೆಸುತ್ತಾರೆ. ಬಾಧ್ರಪದ ಮಾಸದ ಮೂಲಾ ನಕ್ಷತ್ರದ ಸಂದರ್ಭದಲ್ಲಿ ಗಂಗಾಮತ ಸಮುದಾಯದವರು ೭ ದಿನಗಳ ಕಾಲ ಜೋಕುಮಾರನ ಪೂಜೆ ಮಾಡುತ್ತಾರೆ. ಆ ಸಂದರ್ಭದಲ್ಲಿ ಜೋಕುಮಾರನ ಕುರಿತು ಹಾಡುಗಳನ್ನು ಹೇಳುತ್ತಾರೆ. ಕೃಷಿಕರು ನಡೆಸುವ ವಿಶೇಷ ಹಬ್ಬಗಳೆಂದರೆ ಮಣ್ಣೆತ್ತಿನ ಅಮವಾಸ್ಯೆ, ಪಂಚಮಿ, ಸೀಗೆಹುಣ್ಣಿಮೆ, ಹೋಳಿಹುಣ್ಣಿಮೆ ಮುಖ್ಯವಾದವು. ಮುಸ್ಲಿಂ ಸಮುದಾಯದವರು ರಂಜಾನ್, ಈದಮಿಲಾದ್, ಹಬ್ಬವನ್ನು ಆಚರಿಸುತ್ತಾರೆ. ಮೊಹರಂ ಹಬ್ಬದ ಸಂದರ್ಭದಲ್ಲಿ ಹುಲಿವೇಷಹಾಕುವುದು, ರಿವಾಯತ ಪದ ಹೇಳುವ ವಿಶೇಷ ಆಚರಣೆಗಳಿವೆ.

**ಅಡಿಟಿಪ್ಪಣಿ**

೧. ಡಾ.ಚನ್ನಕ್ಕ ಯಲಿಗಾರ: ೧೯೯೦, 'ಬಂಕಾಪುರ ಶೋಧನ', ಚನ್ನಗಂಗಾ ಪ್ರಕಾಶನ ಧಾರವಾಡ, ಪು.ಸಂ. ೫೭.

೨. ಆರ್.ಎಸ್. ಪಂಚಮುಖಿಯವರ, 'ಕರ್ನಾಟಕ ಇತಿಹಾಸ', ಪುಟ ಸಂಖ್ಯ ೧೫೫

೩. ಡಾ.ಚನ್ನಕ್ಕ ಯಲಿಗಾರ, ೧೯೯೦, 'ಬಂಕಾಪುರ ಶೋಧನ', ಚನ್ನಗಂಗಾ ಪ್ರಕಾಶನ ಧಾರವಾಡ, ಪು.ಸಂ ೬೦.

೪. ಅದೇ, ಪು.ಸಂ ೬೧.

೫. ಶ್ರೀಪಾದರಾಯರ ಕೃತಿಗಳು, (ಸಂ.) ಡಾ. ಈ ವರದರಾಜರಾವ, ಪು.ಸಂ ೩೯.

೬. ಕವಿ ಕನಕದಾಸರು, (ಸಂ) ಕಟ್ಟಿ ಶೇಷಾಚಾರ್ಯರು, ಪು.ಸಂ ೨೯, ೩೦.

೭. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಡಾ ಸೂರ್ಯನಾಥ ಕಾಮತ್, ಪು.ಸಂ ೮೧೦, ೮೧೫.

೮. ಅದೇ ಪು.ಸಂ ೮೧೫.

## ಅಧ್ಯಾಯ : ಆರು

# ಬಂಕಾಪುರ ಗ್ರಾಮದ ದೈವಗಳ ವೈಶಿಷ್ಟ್ಯತೆ

## ಅಧ್ಯಾಯ : ಆರು

# ಬಂಕಾಪುರ ಗ್ರಾಮದ ದೈವಗಳ ವೈಶಿಷ್ಟ್ಯತೆ

ಪ್ರಾಚೀನ ಕರ್ನಾಟಕದ ದೇವಸ್ಥಾನಗಳು ಆ ಜನರ ಭಕ್ತಿ, ನಿಷ್ಠೆಯ ಪ್ರತೀಕವೆನಿಸಿದ್ದವು. ಮೋಕ್ಷ ಸಂಪಾದನೆಯ ಉದ್ದೇಶ, ಗಳಿಸಿದ ಸಂಪಾದನೆಯ ಸಾರ್ಥಕತೆ ದೇವಸ್ಥಾನ ನಿರ್ಮಾಣದ ಪ್ರೇರಣೆಗಳೆನಿಸಿದ್ದವು. ಇಂಥ ದೇವಾಲಯಗಳು ಮುಖ್ಯವಾಗಿ ಸಾಂಸ್ಕೃತಿಕ ಕೇಂದ್ರಗಳೆನಿಸಿದ್ದವು.

ಗ್ರಾಮ ದೇವತೆಗಳ ಸೃಷ್ಟಿ, ಉಗಮ ಮನುಷ್ಯ ಅಲೆಮಾರಿ ಜೀವನದಿಂದ ಒಂದು ಕಡೆ ನೆಲೆನಿಂತು ಜೀವನ ಮಾಡುವ ಸಂದರ್ಭವನ್ನು ತಿಳಿಸುತ್ತದೆ. ಗ್ರಾಮದೇವತೆ ಎಂದರೆ ಜನಪದರ ಜೀವನದ ಪ್ರತಿಬಿಂಬವಾಗಿದೆ. ಜಾತ್ರೆ, ಆಚರಣೆಗಳನ್ನು ಅಧ್ಯಯನ ಮಾಡದೆ ಜನಪದರ ಜೀವನದ ರೀತಿ ನೀತಿಗಳನ್ನು ತಿಳಿಯಲು ಸಾಧ್ಯವೇ ಇಲ್ಲ.

ಅಲೆಮಾರಿಯಾಗಿದ್ದ ಮಾನವ ಆಹಾರ ಹುಡುಕಾಟದಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆಹೋಗುತ್ತಿದ್ದ. ಆ ಕಾಲಘಟ್ಟದಲ್ಲಿ ಅವನಿಗೆ ನಿರ್ದಿಷ್ಟವಾದ ನೆಲೆ ಇರಲಿಲ್ಲ. ಜಗತ್ತೆಲ್ಲ ವಿಸ್ಮಯವಾಗಿ ಕಾಣುತ್ತಿತ್ತು. ಪ್ರಕೃತಿಯಲ್ಲಿ ನಡೆಯುವ ಘಟನೆಗಳು ಕುತೂಹಲ ವಿಷಯಗಳಾಗಿದ್ದವು. ಬಿಸಿಲು, ಮಳೆ, ಚಳಿ, ಮಿಂಚು, ಗುಡುಗು, ಬಿರುಗಾಳಿ, ಪ್ರವಾಹ, ಭೂಕಂಪ, ಕಾಡ್ಗಿಚ್ಚು ಮುಂತಾದ ಅನಿರೀಕ್ಷಿತ ಘಟನೆಗಳಿಂದ ಮನುಷ್ಯನ ಬದುಕಿಗೆ ಅಪಾಯ ಇರುವುದರ ಅನುಭವವಾಯಿತು. ಆರ್ಭಟಿಸುವ ಮಿಂಚು, ಗುಡುಗುಗಳನ್ನು ನೋಡಿ ತನಗಿಂತ ಬಲಿಷ್ಟವಾದ ಯಾವುದೋ ಅಂಶ ಇದೆ ಎಂದು ತಿಳಿದ. ಭಯಭೀತಗೊಂಡ. ಬಲಿಷ್ಟ ವ್ಯಕ್ತಿಗೆ ದುರ್ಬಲವ್ಯಕ್ತಿ, ದುಷ್ಟ ಪ್ರಾಣಿಗಳೊಡನೆ ಚಿಕ್ಕಪ್ರಾಣಿಗಳು ಹೆದರಿ ವಿನಯದಿಂದ ಒಲಿಸಿಕೊಳ್ಳುವ ವಾಸ್ತವ ಸತ್ಯ ಅರಿವಾಯಿತು. ಮನುಷ್ಯನಿಗೆ ಆಪತ್ತು ತರುವ ಪ್ರಕೃತಿಯ ವಿಶೇಷಗಳಿಗೆ ಹೆದರುವ ಅಥವಾ ಅವುಗಳನ್ನು ವಿನಯದಿಂದ ಒಲಿಸಿಕೊಳ್ಳುವ ಪ್ರಯತ್ನ ನಡೆಯಿತು.

"ಪ್ರಕೃತಿಯಲ್ಲಿ ಕಾಣಿಸಿಕೊಳ್ಳುವ ಮಳೆ, ಗುಡುಗು, ಸಿಡಿಲು, ಮಿಂಚು ಇವುಗಳ ಬಗೆಗೆ ತನ್ನದೇ ಆದ ನಿಲುವು ತಾಳಿದ. ಇವುಗಳ ಆರ್ಭಟಗಳ ಬೆಳಕಿನಲ್ಲಿ ಕಾಣದ ಶಕ್ತಿಯ ಕೈವಾಡವಿದೆ ಎಂದು ಭಾವಿಸಿದ. ಅಂಥ ಅಗೋಚರ ಶಕ್ತಿಯನ್ನು ಆರಾಧಿಸುತ್ತಾ ಬಂದ. ಕಲ್ಲು, ಮರ, ಮಣ್ಣುಗಳಲ್ಲಿ ದೈವತ್ವದ ಅಂಶವನ್ನು ಕಂಡುಕೊಳ್ಳುತ್ತಾ ಬಂದ"[1] ಪ್ರಕೃತಿಯ ವ್ಯಾಪಾರದ

ಹಿಂದೆ ಒಂದು ಶಕ್ತಿ ಇದೆ ಎಂದು ಈಚಿನ ತಜ್ಞರು ಹೇಳುವ ಮಾತು ಬಹುಶಃ ಆದಿ ಮಾನವನಿಗೆ ಹೊಳೆಯುತ್ತಿರಲಿಲ್ಲ. ದೇವರು ಎಂಬ ಕಲ್ಪನೆಯ ಹಿಂದೆ ಭಯ, ಭಕ್ತಿ, ಆಶ್ಚರ್ಯ, ರಕ್ಷಣೆಯನ್ನು ಬೇಡುವ ಮನೋವೃತ್ತಿ ಇವೆಲ್ಲವನ್ನು ಗುರುತಿಸಬಹುದು. ಅಂತು "ದೇವರನ್ನು ಎದುರು ಹಾಕಿಕೊಂಡರೆ ಅವನು ವಿಪತ್ತು ತಂದೊಡ್ಡುತ್ತಾನೆ ಎಂಬ ಭಯದಿಂದಲೇ ಸುತ್ತಲಿನ ಅಪಾಯಕರ ಪ್ರಪಂಚದ ಕೋಟಲೆಯಿಂದ ನಮ್ಮನ್ನು ಪಾರು ಮಾಡಿಯಾನು ಎಂಬ ನಿರೀಕ್ಷೆಯಿಂದಲೋ, ಅವನು ನಮ್ಮ ಉನ್ನತೋನ್ನತ ಮೌಲ್ಯಗಳ ಸಂಕೇತ ಎಂಬ ಭಾವನೆಯಿಂದಲೋ, ಒಂದಲ್ಲ ಒಂದು ಕಾರಣದಿಂದಾಗಿ ಈ ದೇವರು ಎಂಬ ಕಲ್ಪನೆ ನಮ್ಮ ಮನಸ್ಸಿನಲ್ಲಿ ಸುಳಿದಾಡುತ್ತಲೇ ಇರುತ್ತದೆ. ಸಾವಿರಾರು ವರ್ಷಗಳಿಂದ ನಮ್ಮೊಡನೆ ಇದ್ದದ್ದು ಈಗಲೂ ಇರುವುದು ಈ ಕಲ್ಪನೆ"[೨]

ಆದಿಮಾನವನಿಗೆ ಇಂದಿನ ಹಾಗೆ ಅಗಾಧವಾದ ಬುದ್ಧಿಶಕ್ತಿ ಏನೂ ಇರಲಿಲ್ಲ. ಕಾಡು ಪ್ರಾಣಿಯೋಪಾದಿಯಲ್ಲೇ ಬದುಕುತ್ತಿದ್ದನು. ಸ್ವಲ್ಪ ಬುದ್ಧಿಬಂದ ನಂತರ ಬಹುಮುಖ್ಯವಾಗಿ ಜರುಗಿದ ಪ್ರಕೃತಿಯ ಭೀಕರ ದೃಶ್ಯಗಳಾದ ಅಂದರೆ ಇದ್ದಕ್ಕಿದ್ದ ಹಾಗೆ ಮೋಡ ಆವೃತ್ತವಾಗಿ ಮಳೆಸುರಿದಿದ್ದು, ಬಿರುಗಾಳಿ, ಪ್ರವಾಹಗಳ ಆರ್ಭಟ, ಸಿಡಿಲಿನ ಬಡಿತದಿಂದ ಮನುಷ್ಯನ ಸಾವು, ಭೂಕಂಪ, ಲಾವಾರಸ ಚಿಮ್ಮಿದಾಗ ಉಂಟಾದ ಅನೇಕ ಕಾಡ್ಗಿಚ್ಚು, ಬಾಯಿಬಿಡಿಸುವಂತ ರೋಗ, ರುಜಿನಗಳು ಮನುಷ್ಯನನ್ನು ಭಯಗ್ರಸ್ತನನ್ನಾಗಿ ಮಾಡಿರುವುದು ಸಹಜ ಎಂದೇ ಭಾವಿಸಬೇಕು. ಪ್ರಕೃತಿಯ ಈ ಘೋರ ಪರಿಣಾಮಗಳು ಮುಖಾಮುಖಿಯಾಗಿ ನಿಂತು ಮನುಷ್ಯನ ಚಿತ್ತ ಸ್ವಾಸ್ಥ್ಯವನ್ನು ಕೆಣಕಿ ಮಾನಸಿಕವಾಗಿ ತಲ್ಲಣಗೊಳ್ಳುವಂತೆ ಮಾಡಿವೆ. ಭಾವನಾತ್ಮಕ ಸಂಬಂಧದೊಂದಿಗೆ ಬಾಳುವ ಬುಡಕಟ್ಟು ಜೀವನದಲ್ಲಿ ಅವರಿಗೆ ಆಪತ್ತು ಅನಾಹುತಗಳು ಎದುರಾದವು, ಭೋರ್ಗರೆಯುವ ಕಡಲಮೊರೆತ, ಇಣುಕಿ ಮಾಯವಾಗುವ ಮಿಂಚು, ಗುಡುಗು, ಸಿಡಿಲಿನ ಆರ್ಭಟ ಇದ್ದಕ್ಕಿದ್ದಂತೆ ಹಬ್ಬಿದ ಕಾಡ್ಗಿಚ್ಚು, ಸೂರ್ಯ ಚಂದ್ರರ ದೈನಂದಿನ ಕಾರ್ಯ ಚಟುವಟಿಕೆ ಇನ್ನೂ ಮುಂತಾದ ನೈಸರ್ಗಿಕ ಕ್ರಿಯೆಗಳು ಅವರಲ್ಲಿ ಭಯವನ್ನುಂಟು ಮಾಡಿದವು. ಅವರ ನೆಮ್ಮದಿಯ ಜೀವನದಲ್ಲಿ ಏರುಪೇರು ಉಂಟಾದವು. ಹೀಗೆ ಪ್ರಕೃತಿಯಲ್ಲಿ ಉಂಟಾಗುವ ಆಕಸ್ಮಿಕ ವೈಚಿತ್ರ್ಯಗಳು ಭಯ, ಆತಂಕಗಳ ಜೊತೆಗೆ ಆಶ್ಚರ್ಯವನ್ನುಂಟು ಮಾಡಿದವು.

"ಪ್ರಕೃತಿಯ ಈ ಎಲ್ಲಾ ವೈಪರಿತ್ಯಗಳ ಆಳಗರ್ಭದಲ್ಲಿ ಯಾವುದೋ ಅಗೋಚರವಾದ ಶಕ್ತಿ ಇದೆ, ಅದು ತನ್ನ ಎದುರು ಅದ್ಭುತ ಶಕ್ತಿಯನ್ನು ಪ್ರದರ್ಶಿಸುತ್ತಿದೆ. ಅದರ ಶಕ್ತಿ ಅಗಾಧ ವಾಗಿದೆ ಎಂಬುದನ್ನು ಭಯಾನಕ ಕಲ್ಪನೆಯಲ್ಲಿ ಕಲ್ಪಿಸಿಕೊಂಡು ಮಾನವ ತನಗೆ ಎಟುಕಲಾರದ ಅದ್ಭುತ ಪವಾಡಗಳ ಹಿನ್ನೆಲೆಯಲ್ಲಿ ಶಕ್ತಿ ದೇವತೆಗಳನ್ನು ವಿವಿಧ ಸ್ವರೂಪಗಳಲ್ಲಿ ಕಲ್ಪಿಸಿಕೊಂಡು ಅವುಗಳ ಎದುರು ಮೊರೆಯಿಟ್ಟು ತಾನು ತಿನ್ನುವ ಆಹಾರ ಪದಾರ್ಥಗಳಷ್ಟೇ ಆ ಶಕ್ತಿ

ದೇವತೆಗಳಿಗೆ ನೈವೇದ್ಯವಾಗಿ ಅರ್ಪಿಸಿದ ಕರಾಳ ಆಚಾರಣೆಗಳನ್ನು ಬೆಳಕಿಗೆ ತಂದ. ಹೀಗೆ ಶಕ್ತಿ ದೇವತೆಗಳು ರೂಪುಗೊಂಡವು".[೨] ಅವು ಗ್ರಾಮದೇವತೆಗಳಾಗಿ ರೂಪಗೊಂಡವು.

### ೬.೧. ದುರ್ಗಾದೇವಿ ದೇವಸ್ಥಾನ

ಬಂಕಾಪುರದ ಪಟ್ಟಣದ ತೋಪಿನ ದುರ್ಗಾದೇವಿ ಜಾತ್ರೆ ಒಂದು ವಾರದ ಕಾಲ ನಡೆಯುತ್ತದೆ. ಬನದ ಹುಣ್ಣಿಮೆ ದಿನದಂದು ಚವ್ಹಿ ಮನೆತನದವರಿಂದ ಉಡಿ ತುಂಬುವ ಮೂಲಕ ಈ ಜಾತ್ರೆಗೆ ಚಾಲನೆ ಸಿಗುತ್ತದೆ. ಪ್ರಾಣಿಬಲಿ ಕೈಬಿಟ್ಟಿರುವ ಈ ಜಾತ್ರೆಯಲ್ಲಿ ಸುತ್ತಲಿನ ಹತ್ತಾರು ಹಳ್ಳಿಗಳ ಜನರು ಪಾಲ್ಗೊಳ್ಳುತ್ತಾರೆ

**ಹಿನ್ನೆಲೆ:** ದುರ್ಗಾದೇವಿ ಬಂಕಾಪುರಕ್ಕೆ ಬಂದು ನೆಲೆಸಿದ ಬಗ್ಗೆ ಒಂದು ಪೌರಾಣಿಕ ಕಥೆಯೇ ಇದೆ. ದುರ್ಗಾದೇವಿ ಮಗುವಾಗಿದ್ದಾಗ ಬಿಸನಳ್ಳಿ ಗ್ರಾಮದ ಬಳಿ ಅಳುತ್ತಾ ನಿಂತಿದ್ದಳು. ಆಗ ಅಲ್ಲಿಗೆ ಬರುತ್ತಿದ್ದ ಬಂಕಾಪುರದ ಛವ್ಹಿ ಎಂಬ ಮನೆತನದ ಹಿರಿಯರೊಬ್ಬರು. ಅಳುತ್ತ ನಿಂತಿದ್ದ ಮಗುವನ್ನು ಹೆಗಲ ಮೇಲೆ ಹೊತ್ತು ಮನೆಯತ್ತ ಹೊರಟರು ಬಂಕಾಪುರ, ಮುನವಳ್ಳಿ ದಾರಿ ನಡುವಣ ಕೇದಿಗೆ ವನದ ಬಳಿಬಂದಾಗ ಮಗುವಿನ ಭಾರ ತಡೆಯಲಾಗದೇ ಅಲ್ಲಿಯೇ ಮಗು ಕೆಳಗಿಸಿದರು. ಕೂಡಲೇ ಮಗು ಮಾಯವಾಯಿತು. ಕೇದಿಗೆ ವನದ ಬಳಿ ತನ್ನನ್ನು ಪ್ರತಿಷ್ಠಾಪಿಸುವಂತೆ ಆದೇಶದ ವಾಣಿ ಕೇಳಿ ಬಂದಿತು. ಹೀಗೆ ಪ್ರತಿಷ್ಠಾಪನೆಗೊಂಡ ದೇವಿಯ ಜಾತ್ರೆ ವರ್ಷವೂ ನಡೆಯುತ್ತ ಬಂದಿದೆ. ಇಂತಹ ವಿಶೇಷಯುತ ಜಾತ್ರೆಗಳು ಹಲವಾರು ನಡೆಯುತ್ತವೆ. ಅವುಗಳ ಅಧ್ಯಯನದ ಅವಶ್ಯಕತೆ ಇದೆ. ಈ ಜಾತ್ರೆಯ ಪ್ರಯುಕ್ತ ಬಂಕಾಪುರ ಪಟ್ಟಣದಲ್ಲಿ ೩ ದಿನಗಳ ಕಾಲ ಕುಸ್ತಿ ಪಂದ್ಯಾವಳಿ ನಡೆಯುತ್ತವೆ. ಸಾಂಗ್ಲಿ ಮಹಾರಾಷ್ಟ್ರ ರಾಜ್ಯದ ವಿವಿಧ ಜಿಲ್ಲೆಗಳಿಂದ ಖ್ಯಾತ ಪೈಲ್ವಾನರು ಅಖಾಡಕ್ಕಿಳಿದು ಸಾಮರ್ಥ್ಯ ಪ್ರದರ್ಶಿಸುತ್ತಾರೆ. ಡೊಳ್ಳು ಮೇಳಗಳು, ಗೀಗಿ ಪದಗಳು ದೊಡ್ಡಾಟ ಸೇರಿದಂತೆ ಹಲವು ಜನಪದ ಕಾರ್ಯಕ್ರಮಗಳು ಜಾತ್ರೆಯ ಪ್ರಯುಕ್ತ ಜರುಗುತ್ತವೆ.(ವಕ್ತೃ ವಿವರ: ಸುಮಂತ ಪೂಜಾರ ಅರ್ಚಕರು ದುರ್ಗಾದೇವಿ ದೇವಸ್ಥಾನ, ಬಂಕಾಪೂರ)

### ೬.೨. ಹನುಮಂತ ದೇವಸ್ಥಾನ

ಇಲ್ಲಿಯ ಕೋಟೆ ಆವರಣದಲ್ಲಿರುವ ಮತ್ತು ರಘುನಿಧಿ ತೀರ್ಥರ ವೃಂದಾವನ ಹತ್ತಿರ ಒಂದೊಂದು ದೊಡ್ಡ ಆಂಜನೇಯ ಮೂರ್ತಿಗಳಿವೆ. ಮರದ ರಂಭೆಯನ್ನು ಹಿಡಿದ ಎಡಗೈಯನ್ನು ಸೊಂಟದ ಮೇಲಿಟ್ಟು, ಹೊಡೆಯಲು ಬಲಗೈನ್ನೆತ್ತಿ ಅಡಿಗೆ ಬಿದ್ದ ರಾಕ್ಷಸರನ್ನು ತುಳಿಯುತ್ತಾ ಮುಂದೆ ಹೋಗುತ್ತಿರುವ ಭಂಗಿಯಲ್ಲಿ ಹನುಮಂತನನ್ನು ತೋರಿಸುವುದು ಸರ್ವೇಸಾಮಾನ್ಯ. ಇಲ್ಲಿಯ ಕೋಟೆಯಹನುಮ, ಶಿಖಾ ಹಾಗೂ ಯಜ್ಞೋಪವೀತಧಾರಿ. ಕೇವಲ ಲಂಗೋಟಿಯನ್ನು ಧರಿಸಿದಂತೆ ಇದೆ. ಉಡದಾರಕ್ಕೆ ಮುಂಬದಿಯಲ್ಲಿ ಕುಚ್ಚಗಳಿವೆ. ಸರ, ಕೈಬಳೆ, ವಕ್ಷಬಂಧ, ಕಾಲ್ಗಡಗವು ಅಲಂಕರಿಸಿವೆ. ಆಕರ್ಷಕ ದೃಢಕಾಯ ಹೊಂದಿದ ಇದು ೧೫ನೇ ಶತಮಾನದ ಶಿಲ್ಪ.

### ೬.೩. ಬೀರಲಿಂಗೇಶ್ವರ ದೇವಸ್ಥಾನ

ಬಂಕಾಪುರದ ಪರಿಸರದಲ್ಲಿ ಬರುವ(ಅಂದರೆ ಬಂಕಾಪುರದಿಂದ ಸುಮಾರು ೨ಕಿ.ಮಿ ಅಂತರದಲ್ಲಿ) ಮಣ್ಣೂರು ಗ್ರಾಮದ ಹತ್ತಿರ ಬರುವ ರೇವಣಶಿದ್ದೇಶ್ವರ ದೇವಸ್ಥಾನವನ್ನು ಹೊಸದಾಗಿ ನಿರ್ಮಿಸಲಾಗಿದೆ. ಪದ್ಮಗೌಡ ಮತ್ತು ಚಿಮಲಾದೇವಿಯ ವಿವಾಹ ಸ್ಥಳವೆಂಬ ನಂಬಿಕೆ ಇಲ್ಲಿನ ಗ್ರಾಮವಾಸಿಗಳಲ್ಲಿದೆ. ಪ್ರತಿವರ್ಷ ರೇವಣಶಿದ್ದೇಶ್ವರ ಜಯಂತಿ ಉತ್ಸವವನ್ನು ವಿಜೃಂಭಣೆಯಿಂದ ಆಚರಿಸಲಾಗುತ್ತದೆ. ಉತ್ಸವದ ಅಂಗವಾಗಿ ಸಾಂಸ್ಕೃತಿಕ ಆಚರಣೆಗಳು ನಡೆಯುತ್ತವೆ. ರುದ್ರಾಭಿಷೇಕ ಸಾಲಿದುರ್ಗಾದೇವಿ ಪಲ್ಲಕ್ಕಿ ಮತ್ತು ಹಾಲಿನ ಕೊಡಗಳ ಆಗಮನ ಹೀಗೆ ಹಲವಾರು ಕಾರ್ಯಕ್ರಮಗಳನ್ನು ಮತಬಾಂಧವರು ಉತ್ಸಾಹದಿಂದ, ಭಕ್ತಿಭಾವದಿಂದ ಆಚರಿಸುತ್ತಾರೆ. ಕುರಿಯ ಹಾಲಿನಿಂದ ನಿರ್ಮಿಸಿದ ಈ ದೇವಸ್ಥಾನಕ್ಕೆ ದರ್ಶನ ಪಡೆಯಲು ಬಂಕಾಪುರದ ಸುತ್ತಮುತ್ತಲ ಗ್ರಾಮಗಳಿಂದ ಆಗಮಿಸಿ ಪಾರಂಪರಿಕವಾಗಿ ನಡೆದುಕೊಂಡು ಬರುತ್ತಿರುವುದು ಉಲ್ಲೇಖನಿಯವಾಗಿದೆ.

**ಮೂಲನೆಲೆ:** ಬಂಕಾಪುರವು ಹಾಲುಮತದ ಅತೀ ಪ್ರಾಚೀನ ನೆಲೆಗಳಲ್ಲಿ ಒಂದಾಗಿದ್ದು ಸರೂರಿನಷ್ಟೆ ಪ್ರಾಮುಖ್ಯತೆ ಪಡೆದ ಕ್ಷೇತ್ರವಾಗಿದೆ. ಕುರುಬ ಕುಲದ ಮೂಲ ಪುರುಷರಾದ ಮುದ್ದವ್ವ ಮುದ್ದುಗೊಂಡರ ಮೂಲ ನೆಲೆ ಎಂದು ಕೆಲವು ಕಾವ್ಯ ಪುರಾಣಗಳು ತಿಳಿಸಿದರೆ, ಕೆಲವು ಶಾಪಗ್ರಸ್ಥ ರಾಕ್ಷಸಿಯರ ಸ್ಥಳವೆಂದು ವರ್ಣಿಸುತ್ತವೆ. ಹೀಗೆ ಎಲ್ಲ ಕಾವ್ಯ ಪುರಾಣಗಳು ಒಂದೇ ಕಥೆಯನ್ನು ಹೇಳದೇ ವಿಷಯ ನಿರೂಪಣೆಯಲ್ಲಿ ಭಿನ್ನತೆ ಹೊಂದಿವೆ.

> "ವೀರಣ್ಣ ದಂಢೆ ಅವರ ಜನಪದ ಹಾಲುಮತ ಮಹಾಕಾವ್ಯದ ಕೈಲಾಸದ ಹಾಡಿಕೆಯಲ್ಲಿ ಕೈಲಾಸದ ಭೃಂಗಿಯನ್ನು ಕಂಡು ಅಪಹಾಸ್ಯ ಮಾಡಿದ ಗಂಧರ್ವರು ಶಾಪಗ್ರಸ್ಥವಾಗಿ ಕುರಿಗಳಾಗಿ ಜನ್ಮ ತಾಳಿ ಬ್ರಹ್ಮ, ವಿಷ್ಣು ಕಾಯ್ದು ಸುಸ್ತಾಗಲು ಪಾರ್ವತಿಯು ಕಾಯಲು ಪ್ರಾರಂಭಿಸುತ್ತಾಳೆ."[೪]

> "ಸ್ವರ್ಗದ ಬಾಗಲ ತಗೆದಾಳೆ ಮರ್ತ್ಯಾಕ ಇಳಸುತ್ತಾಳೇನ
> ಮರ್ತ್ಯಕ ಇಳಸುತ್ತಾಳೇನ ಬಂಕಾಪುರದ ಭೂಮ್ಯಾಗ
> ಬಂಕಾಪುರ ಭೂಮ್ಯಾಗ ಕುರಿಯ ಇಳಸುತಾಳೇನ
> ಮೂರುಕಣ್ಣೀನ ಹುತ್ತಿನೊಳಗೆ ಕುರಿಯ ಹೊಗಸುತಾಳೇನ
> ಕುರಿಯ ಹೊಗಸುತಾಳೇನ ಹುತ್ತ ಮುಚ್ಚತಾಳೇನ
> ಮುತ್ತಲ ಮರವೆಂದು ಮಾಡ್ಯಾಳೆ ಹುತ್ತಿನ ಗಡ್ಡಿಗ ಉರ್ರ್ಯಾಳ"[೫]

ಅಲ್ಲಿಯ ಪ್ರಕೃತಿ ಸೌಂದರ್ಯಕ್ಕೆ ಮನಸೋತ ಪಾರ್ವತಿ ವಿಶ್ರಮಿಸಿಕೊಳ್ಳುತ್ತಿರುವ ಸಮಯದಲ್ಲಿ ಶಿವನು ಪಾರ್ವತಿಗಾಗಿ ಹುಡುಕುತ್ತ ಕೈಲಾಸ ಬಿಟ್ಟಾನೆ. ಪಾರ್ವತಿಗೆ ಹುಡುಕುತ್ತಾ

> "ಸ್ವರ್ಗದ ಬಾಕಲ ತೆರದಾನೆ ಬಂಕಾಪುರದ ಭೂಮ್ಯಾಗ
> ಬಂಕಾಪುರದ ಭೂಮ್ಯಾಗ ಮಹಾದೇವ ಇಳಿಯುತ್ತಾನೇನ"[೬]

ಪಾರ್ವತಿ ಹಾಲಿನಿಂದ ತಯಾರದ ಎರಡು ಮಣ್ಣಿನ ಮುದ್ದೆಗಳಿವೆ. ಶಿವನು ಪ್ರಾಣವನ್ನು ಪ್ರತಿಷ್ಠಾಪನೆ ಮಾಡುತ್ತಾನೆ.

ಸತ್ಯ ಧರ್ಮುರ ಹಾಡೇನ ಬಂಕಾಪುರ ಮ್ಯಾಲೇನ
ದೇವಿ ಧರ್ಮುರ ಹಾಡೇನ ಬಂಕಾಪುರ ಮ್ಯಾಲೇನ
ಬಂಕಾಪುರದ ಬಳಗೇನೆ ಮುದ್ದವ್ವ ಮುದಗೊಂಡನ
ಮುದ್ದವ್ವ ಮುದಗೊಂಡನ ಹೊಸ್ತಲ ಮ್ಯಾಲಕ ಬಂದಾನ

ಹೀಗೆ ಹಾಲಿನಿಂದ ನಿರ್ಮಾಣಗೊಂಡ ಮುದ್ದವ್ವ ಮುದ್ದುಗೊಂಡರು ಹಾಲುಮತದ ಆದಿ ವ್ಯಕ್ತಿಗಳಾಗಿ ಬಂಕಾಪುರದಲ್ಲಿ ಜೀವಿಸುತ್ತಿರುತ್ತಾರೆ. ಆದ್ದರಿಂದ ಕುರುಬರಿಗೆ ಹಾಲುಮತದವರೆಂದು ಕರೆಯಲಾಗುತ್ತದೆ. ಅವರ ನಾಲ್ಕನೆಯ ಮಗ ಪದುಮಗೊಂಡ ಹೊಲವನ್ನು ಹಸನು ಮಾಡುವ ಸಮಯದಲ್ಲಿ ಕುರಿಯ ಹುತ್ತವು ಒಡೆಯುತ್ತದೆ. ಹುತ್ತಿನಿಂದ ಅಸಂಖ್ಯಾತ ಕುರಿಗಳು ಹೊರಬರುತ್ತವೆ. ಗಾಬರಿಗೊಂಡ ಪದುಮಣ್ಣ ಹುತ್ತದ ಬಾಯಿಗೆ ಬೆಂಕಿ ಹಚ್ಚುತ್ತಾನೆ.

ಸತ್ಯ ಧರ್ಮುರ ಹಾಡೇನ ಯಾವಲಿ ಇರುವುತಾವೇನ
ಬಂಕಾಪುರದ ಭೂಮ್ಯಾಗ ಹನ್ನೇರಡು ಕೂರಗಿ ಹೊಲದಾಗ
ಹನ್ನೆರಡು ಕೂರಗಿ ಹೊಲದಾಗೆ ಪದುಮಗೊಂಡನಿದ್ದಾನ
ಕರೀಯ ಕುರಿಗೋಳು ಅದಾವೇ ಸುಟ್ಟ ಕರಿಯಾನಾದವ
ಕರಗ ಬಿಳಿಯಾನಾದವೆ ಹಂಡ ಬಿಳಿಯನಾದವ

ಹೀಗೆ ಬಂಕಾಪುರದ ಭೂಮಿಯು ಶಿವ ಪಾರ್ವತಿಯರ ಕೈಲಾಸವಾಗಿ, ವಿರಾಮತಾಣವಾಗಿ 'ಹಾಲುಮತದ ಮೂಲನೆಲೆಯಾಗಿ' ಹೀಗೆ ವಿಭಿನ್ನ ದೃಷ್ಟಿಕೋನಗಳಿಂದ ತೊಡಗಿಸುವ ಸ್ಥಳವಾಗಿ ಚಿತ್ರಿಸಲ್ಪಟ್ಟಿದೆ. ಬಂಕಾಪುರದ ಹುತ್ತಿನಿಂದ ಹೊರಬಂದ ಕುರಿಗಳನ್ನು ಪದುಮಗೊಂಡ ಕಾಯ್ದು ಕೊಂಡಿರುವ ಕಥೆ ಮುಂದುವರಿಯುತ್ತದೆ.

೨. ತಗರ ಪವಾಡದ ಆರನೇ ಸಂಧಿಯಲ್ಲಿ ಬಂಕಾಪುರವು ಕುರಿಗಾರರ ಊರಾಗಿದೆ.

ಅಂಕನಹಳ್ಳಿಯ ಆದಿಗೊಂಡ ರೇವಣ್ಣನು
ಬಂಕಾಪುರದ ಭದ್ರಗೌಡ
ಶಂಕರಪೂರದ ರಾಮಣ್ಣಗೌಡನು ಸಹ
ಒಂದಾಗಿ ನಡೆದಗೊಗ್ಗದಿನಲಿ

ಅಂಕನಹಳ್ಳಿ ಬಂಕಾಪುರ ಮತ್ತು ಶಂಕರಪುರದಿಂದ ರೇವಣ್ಣ ಭದ್ರಗೌಡ ಮತ್ತು ರಾಮಣ್ಣಗೌಡ್ರು ಶಾಂತಮುತ್ತಯ್ಯನ ತಗರ ಪವಾಡ ವೀಕ್ಷಿಸಲು ಕಲ್ಯಾಣಕ್ಕೆ ಬರುತ್ತಾರೆ.

೩. ಹಾಲು ಮತೋತ್ತೇಜಕ ಪುರಾಣದ ಎಳನೇಯ ಸಂಧಿಯಲ್ಲಿ ಎರಡರಿಂದ ಎಳನೇಯ ಷಟ್ಪದಿಗಳಲ್ಲಿ ಬಂಕಾಪುರ ಕ್ಷೇತ್ರದ ಪ್ರಸ್ತಾಪವನ್ನು ಹೊಂದಿದೆ.

ಹರಪದ್ಮ ಬಾವನ್ನ ಬಿರಿದುಗಳೈದು ಬಂ
ದುರದಿಂದ ಬಂಕಾಪುರದೊಳಿಟ್ಟ ಬಂದಿತ್ತ
ಕುರಿಗಳನ್ನು ಪೊರೆಯುತ್ತ ಹೆಗ್ಗಾಡಿಗನೊಳ್ಪಖಿಸುತಿರಲತ್ತ ಕೈಲಾಸದಿ(೭-೭)

ಶಿವ ಪದ್ಮ ಶಾಪಗ್ರಸ್ಥಳಾದ ರಾಕ್ಷಸಿಯನ್ನು ಕೊಂದು ಅವಳ ಅಂಗಾಂಗಳಿಂದ ಬಾವನ್ನ ಬಿರುದಾವಳಿ(ವಾದ್ಯ) ಗಳನ್ನ ತಯಾರಿಸಿ ಬಂಕಾಪುರದಲ್ಲಿಡುತ್ತಾನೆ.

ನಾರದ ಮುನೀಶ್ವರಂ ಬಂದ ಶಂಕರನ ಪಾದ
ವಾರಿಜಕ್ಕೆರಗಿ ಶಿವ ಪದ್ಮ ಬಂಕಾಪುರದ
ಕ್ರೂರದಾನವಿಯ ಶಿರಪರಿದವಯಂಗಳು ಬಾವನ್ನ ಬೀರುದು ಮಾಡಿ

ನಾರದ ಮುನಿಯಿಂದ ಶಿವಪದ್ಮನ ಸಾಹಸವನ್ನು ತಿಳಿದು ಶಿವನು ಸಂತೋಷಭರಿತನಾಗಿ ಬಿರುದಾವಳಿಗಳ ರಕ್ಷಣೆಗಾಗಿ ಬಾಗಿ ಬಂಕನಾಥನನ್ನು ಬಂಕಾಪುರಕ್ಕೆ ಹೋಗಲು ಹೀಗೆ ಆಜ್ಞಾಪಿಸು ತ್ತಾನೆ. "ಹಾಳು ಬಂಕಾಪುರಕ್ಕೆ ಪೋಗಿ ಪದ್ಮನ ಬಿರಿದ ಮೇಳದಿಂದಿಟ್ಟು ಪಾಲಿಸು ಮುದ್ದೆ ಶಿವಸಿದ್ಧ ಬಿರನುದ್ಭವಿಸುತಿಹನು.

ಕೇಳಿ ಪುತ್ರನ ಮಹಿಮೆ ಪಂಚಾನನು ಹರುಷ
ತಾಳಿ ಬಂಕಾಪುರದೊಳಿರುವ ಬಾವನ್ನ ಬಿರುದಾಳಿಯ ರಕ್ಷಣೆಗೆ
ಕಳಿಸಲಿನ್ನಾರನೆಂದಾಲೋಚಿಸುತ ಮನದೊಳು
ಪೇಳಿದನು ಬಾಗಿ ಬಂಕಣ್ಣನಂ ಕರಿಸುತ್ತ
ಹಾಳು ಬಂಕಾಪುರಕೆ ಪೋಗಿ ಪದ್ಮನ ಬಿರಿದ
ಮೇಳದಿಂದಿಟ್ಟು ಪಾಲಿಸು ಮುಂದೆ ಶಿವಸಿದ್ದ ಬೀರನುದ್ಭವಿಸುವನು
ಆ ಮಹಾ ಬಿಂದುಗಳ ಸಿದ್ದಬೀರಂ ಪೊರೆವ
ನಾ ಮೇಲೆ ನೀನಿತ್ತ ಬರ್ಪುದೆಂದಪ್ಪಣೆಯ
ನಾ ಮಾರಾರಿಪು ಕೊಟ್ಟು ಬಾಗಿ ಬಂಕಣ್ಣ ಬಂಕಾಪುರಕೆ ಕಳಿಸಿದಂ

ಹೀಗೆ ಬಿರುದಾವಳಿಗಳ ರಕ್ಷಣೆಗಾಗಿ ಶಿವನು ಬಾಗಿ ಬಂಕನಾಥನನ್ನು ಬಂಕಾಪುರಕ್ಕೆ ಕಳಿಸುವ ವಿಷಯ ಹೊಸತಾಗಿದೆ.

೪. ಚನ್ನಬಸವ ಕವಿಯ ಹಾಲುಮತ ಪುರಾಣವು ಕೃತಿಯ ಐದನೆಯ ಸಂಧಿಯಲ್ಲಿ ಶಿವ ಪದ್ಮನು ರೇವಣಶಿದ್ದರ ಸಾಮೀಪ್ಯ ಬಯಸಿ ಅವರೊಂದಿಗೆ ತಾನು ಹೊರಡಲು ಸಿದ್ದ ನಾಗುತ್ತಾನೆ.

ಆಗ ರೇವಣಶಿದ್ದ ಅವನನ್ನು ಸಂತೈಸಿ ನೊಂದಕೊಳ್ಳಲಿ ಬೇಡ ಕಂಡ ಕೇಳ್ಕುರಿಗಳಾ/ ನಂದದಿ ಕಾಯುತಲಾಗ ಮುಂದೆ ಬಂಕಾಪುರದಡವಿ ಸಮೀಪಕ್ಕೆ ಬಂದಾಗ ನಾನಿನ್ನ ಬಳಿಗೆ ಬಂದು ರಕ್ಷಿಪನೆಂದು ಬರವಸೆವಿಯತ್ತಾ ಕಥೆಯು ಮುಂದುವರೆದು ಎರಡನೇ ಸಂಧಿಯಲ್ಲಿ ಜಾಗೃತಿ ಪುರದರಸನ ಮಗಳು ಚಿಮಲೆಯನ್ನು ರಾಕ್ಷಸಿ ಒಯ್ದು ಸಾಕುತ್ತಾಳೆ.

ಬಂಕಾಪುರದ ಕಾಡಿಗೆ ಚಿಮುಲೆಯ ರಥ ಶಂಕೆಯಿಲ್ಲದೆ ಬರೆದನು ಜೆ
ಹೂಂಕರಿಸುತ ಪಲ್ಲರಿಯ ಗರ್ಜಿಸುತಾಗ/ಭೋಂಕನೆ ರಥಕರ ಕುಪ್ಪಳಿಸಿ

ರೇಣುಕರು ಶಿವಪದ್ಮನು ಸ್ವಪ್ನದಲ್ಲಿ ಕಾಣಿಸಿಕೊಂಡು ಬಂಕಾಪುರದ ಕಾಡಿನಲ್ಲಿ ವಾಸವಾಗಿರುವ ರಾಕ್ಷಸಿಯ ಮನೆಗೆ ಹೋಗಿ ಬರಲು ಆಜ್ಞಾಪಿಸುತ್ತಾರೆ. ಶಿವಪದ್ಮ ಗುರುವಾಜ್ಞೆಯನ್ನು ಪಾಲಿಸುತ್ತಾನೆ.

ಶಿವನ ವೈಭವದ ಒಡ್ಡೋಲಗದಲ್ಲಿ ಮುನಿಯೊಬ್ಬನನ್ನು ಕಂಡು ಮೂರು ಜನ ಗಂಧರ್ವರು ನಗಾಡಲು ಕೋಪಗೊಂಡ ಮುನಿಯು ಭೂ ಲೋಕದಲ್ಲಿ ರಾಕ್ಷಸಿ, ಕಾಗಿ ಮತ್ತು ಕಂಚಿವಾಳದ ಮರವಾಗಿ ಹುಟ್ಟಲು ಶಾಪ ಕೊಡುತ್ತಾನೆ. ಶಾಪಕ್ಕೆ ಹೆದರಿ ಬೇಡಿಕೊಳ್ಳಲು ಮುನಿಯು ನಿಶ್ಯಾಪ ವನ್ನು ತಿಳಿಸಿ ಈ ಕಾರ್ಯ ಕುರಿ ಕಾಯುವ ಶರಣ ಶಿವಪದ್ಮನಿಂದ ಮಾತ್ರ ಸಾದ್ಯ ಎಂಬ ಹೇಳಿಕೆಯಂತೆ ಶಿವಪದ್ಮ ಕಾರಣಾಂತರಗಳಿಂದ ರಾಕ್ಷಸಿಯನ್ನು ಕೊಂದು ಜ್ಞಾಪಕಾರ್ಥವಾಗಿ ಅವಳ ಅವಯವಗಳಿಂದ ಬಾವನ್ನ ಬಿರುದಾವಳಿಗಳನ್ನು ಮಾಡಿ ಬಂಕಾಪುರದಲ್ಲಿ ಇಡುತ್ತಾನೆ. ಇಲ್ಲಿ ಬಂಕನಾಥನ ಪ್ರಸ್ಥಾಪ ಬರುವುದಿಲ್ಲ. ಯಲ್ಲನಗೌಡ ಅತ್ತಿಕೊಳ್ಳ ಅವರ ಹಾಲುಮತ ಚರಿತ್ರೆ ಯಲ್ಲಿ ಪಾರ್ವತಿಯು ತಿಮ್ಮಾಪುರದ ಆದಿಗೊಂಡನಿಂದ ಐದು ಮೊಳ ಭೂಮಿಯನ್ನು ಪಡೆದು ಹಟ್ಟಿ ಹಾಕಿ ಕುರಿ ಸಾಕುವ ಪ್ರಸಂಗವು ಇತರ ಪುರಾಣ ಕಾವ್ಯಗಳಿಂದ ಭಿನ್ನವಾಗಿದೆ.

ಅಪ್ಪಣ ವಾಸುದೇವರಾಯ ಮುತ್ತುರರ ಹಾಲುಮತ ಶ್ರೀ ಶಿದ್ದಬೀರೇಶ್ವರ ಅರ್ಥಾತ ಕರಿಸಿದ್ದೇಶ್ವರ ಪುರಾಣವು ಪಾರ್ವತಿ ಕುರಿಗಳನ್ನು ಕಾಯ್ದು ಸುಸ್ತಾಗಿ ಕಲ್ಯಾಣದ ಹುತ್ತದಲ್ಲಿ ಹೊಗಿಸುವ ವಿಚಾರವನ್ನು ತಿಳಿಸುತ್ತದೆ.

ಶಿದ್ದರಾಮನ ಕುರಿತಾಗಿ ಬಸವಣ್ಣೆಪ್ಪ ನೀಲಪ್ಪ ಹಳವಳ್ಳಿ ಅವರ ಹಾಲುಮತ ಚರಿತ್ರೆ (ಮರುಳಸಿದ್ದ ಚರಿತೆ) ಮತ್ತು ಸಿದ್ದಮಂಕ ಚರಿತೆಗಳಲ್ಲಿ ಬಂಕಾಪುರದ ಪ್ರಸ್ತಾಪ ಬರುವುದಿಲ್ಲ. ಬಸವರಾಜ ಬೋನಾ ಅವರ ಹಾಲುಮತದ ಹುಟ್ಟು ಶಂಕನಾರನಂದಪ್ಪ ವಿರಚಿತ ಹಾಲುಮತ ಪುರಾಣ ಅಥವಾ ಮುದ್ದಲಿಂಗೇಶ್ವರ ಚರಿತ್ರೆಗಳಲ್ಲಿ ಶಿವಪದ್ಮನ ಪ್ರಸ್ತಾಪ ಬಂದರು ಬಂಕಾಪುರದ ವಿಷಯವನ್ನು ಚರ್ಚಿಸಿಲ್ಲ.

ಹೀಗೆ ಅನೇಕ ಕಾವ್ಯ ಪುರಾಣಗಳು ಭಿನ್ನ ಬಿನ್ನ ಕಥೆಗಳನ್ನು ಹೊಂದಿದ್ದರೂ ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ಕಥಾಹಂದರದಲ್ಲಿ ಬಂಕಾಪುರವು ಪ್ರಾಚೀನ ಸ್ಥಳವಾಗಿದೆ ಎಂಬುದನ್ನು ಗುರುತಿಸಬಹುದಾಗಿದೆ.

೧. "ನಿಮ್ಮಲ್ಲೋರ್ವನು ಪೋಗಿ ಬಂಕಾಪುರದಲಿರ್ದ ತಾಮಸದಕ್ಕಯ ದೈತ್ಯರೊಳು ಪ್ರೇಮದಿಂದೊಸಿಯೆ ಕೆಲಕಾಲ ಬಾಳೆಂದು ನೇಮಿಸಿ ಮರ್ತ್ತೋರ್ವನಿಗೆ ಕಾಕನಾಗೆಂದು ಮರ್ತ್ತೋರ್ವನಿಗೆ ನೀನು ಸಾಕು ಕಾಂಚಾಲ ಮರವಾಗು ಕಾಕನೆ ಕಾಂಚಾಲ ಮರದಗ್ರ ದೊಳು ಗೂಡ ಶೇಖರಿಸಿಕೊಂಡು ಬಾಳು" ಹೀಗೆ ಮೂರು ರಾಕ್ಷಸರ ಪ್ರಾಣಗಳು ಪರಸ್ಪರ

ಹೊಂದಿಕೊಂಡಿರುತ್ತವೆ. ರಾಕ್ಷಸಿಯ ಶಿರದಿಂದ ಮಾಯಾಮೂರ್ತಿ ಕೈ ಬೆರಳಿನಿಂದ ಹೆಗ್ಗಾಳಿ, ಕರ್ನಿಕೆ, ಕಹಳೆ, ಬರುಗುನಪುರಿ ಮತ್ತು ಘನಡೊಕ್ಕೆಯ ಡೊಳ್ಳು ಮುಂತಾದ ಬಿರುದಾವಳಿಗಳನ್ನು ತಯಾರಿಸುತ್ತಾನೆ. ಹೀಗೆ ಬಂಕಾಪುರವನ್ನು ರಾಕ್ಷಸಿಯಿಂದ ರಕ್ಷಿಸು ತ್ತಾನೆ. ಭಕ್ತನ ಸಾಧನೆಯಿಂದ ಪ್ರಸನ್ನನಾದ ಶಿವನು ಬಾಗಿ ಬಂಕನಾಥನನ್ನು ಬಿರುದಾ ವಳಿಗಳ ರಕ್ಷಣೆಗಾಗಿ ಕಳುಹಿಸುತ್ತಾನೆ. ಹೀಗೆ ರಾಕ್ಷಸಿಯ ಅವಯವಗಳು ಪೂಜೆಗೆ ಅರ್ಹವಾಗುತ್ತವೆ. ಒಟ್ಟಿನಲ್ಲಿ ಪಶ್ಚಾತ್ತಾಪಕ್ಕೆ ಮಿಗಿಲಾದ ಕ್ಷಮೆಯಿಲ್ಲ ಮತ್ತು ದುಷ್ಟಶಿಕ್ಷೆ ಶಿಷ್ಟರಕ್ಷೆಯಿಂದ ಸಮಾಜದಲ್ಲಿ ಎಲ್ಲರೂ ಗೌರವದಿಂದ ಬಾಳಲು ಅರ್ಹರೆಂದು ಹುಲಿಗೆಮ್ಮಾ ಬಿ ಅಭಿಪ್ರಾಯಪಟ್ಟಿದ್ದಾರೆ.

### ೬.೪. ಕೋಟೆ ಯಲ್ಲಮ್ಮನ ದೇವಸ್ಥಾನ

ಡಾ. ಚನ್ನಕ್ಕ ಯಲಿಗಾರ ಅವರು ಹೇಳಿದಂತೆ ಕೋಟೆ ಯಲ್ಲಮ್ಮ ದೇವಾಲಯದಲ್ಲಿ ಪೂಜೆಗೊಳ್ಳುತ್ತಿರುವ ಶ್ರೀ ಯಲ್ಲಮ್ಮ ದೇವತೆ ಮೂರ್ತಿ ಲಕ್ಷಣಗಳನ್ನು ನಾನು ಪರಿಶೀಲಿಸಿದಾಗ ಆ ಮೂರ್ತಿಯೂ ಮಲ್ಲಾರಿ ಶಿವನೆಂದು ತಿಳಿಯಿತು ಎಂದು ಹೇಳಿದ್ದಾರೆ. ಸಾಮಾನ್ಯವಾಗಿ ಮಲ್ಲಾರಿ ಶಿವನು ದ್ವಿಭುಜನಾಗಿದ್ದು ಖಡ್ಗ ಪಾನ ಪತ್ರಿಗಳನ್ನು ಹಿಡಿದಿರುತ್ತಾನೆ. ಇವನ ವಾಹನ ಬಿಳಿ ಕುದುರೆ, ಜೊತೆಗೆ ಏಳು ನಾಯಿಗಳಿರುತ್ತವೆ. ಈ ರೀತಿ ಶಿವನನ್ನು 'ಮಲ್ಲಾರಿ ಮಹಾತ್ಮೆ' ಎಂಬ ಗ್ರಂಥದಲ್ಲಿ ವರ್ಣಿಸಲಾಗಿದೆ.

### ೬.೫. ಮಾರೆಮ್ಮನ ದೇವಸ್ಥಾನ

ಮಣಿಹ ಕೃತಿಯಲ್ಲಿ ಶಿರಸಿ ಮಾರೆಮ್ಮದೇವರ ಕೈಫಿಯತ್ತಿನಲ್ಲಿ ಒಂದು ಕುತೂಹಲಕಾರಿ ವಿಷಯ ಕಂಡುಬರುತ್ತದೆ. ಅದೆಂದರೆ ಇಂದು ಶಿರಸಿಯಲ್ಲಿ ವಿಜೃಂಭಣೆಯಿಂದ ಪೂಜೆಗೊಳ್ಳುತ್ತಿರುವ ಮಾರಿಕಾಂಬೆಯ ವಿಗ್ರಹದ ಬಗೆಗೆ ಸಿಗುವ ವಿವರ. ಈ ಕೈಫಿಯತ್ತಿನಲ್ಲಿ ಕಂಡುಬರುವ ವಿಷಯದ ಸಾರಾಂಶ ಹೀಗಿದೆ "ಒಮ್ಮೆ ಮೊಗಲರ ದಂಡು ಬಂಕಾಪುರದ ಕಿಲ್ಲೆಗೆ ಧಾಳಿ ಇಟ್ಟಿತು. ಆಗ ಅಲ್ಲಿಯ ಜನರೆಲ್ಲ ಮೊಗಲರ ಆಜ್ಞೆಯಂತೆ ಗಡಿಪಾರಾಗಬೇಕಾಯ್ತು. ಆ ಸಮಯಕ್ಕಾಗಲೇ ಅಲ್ಲಿದ್ದ ಮಾರಿ ದೇವತೆಯನ್ನು ಪೆಟ್ಟಿಗೆಯಲ್ಲಿ ಹಾಕಿ ಅರಗಿನ ಸೀಲು ಹಾಕಿದ್ದರು. ಗಡಿಪಾರಾದ ಜನರ ಪೈಕಿ ಒಬ್ಬನು ಕೋಟೆಯಿಂದ ಹೊರಬರುವಾಗ ಆ ಪೆಟ್ಟಿಗೆಯನ್ನು ಏನೋ ಬೆಲೆ ಬಾಳುವ ವಸ್ತು ಇರಬೇಕೆಂದು ಹೊತ್ತು ತಂದ. ಈ ಜನರೆಲ್ಲ ಶಿರಸಿಯ ಕೋಟೆಕೆರೆಯ ಮೇಲೆ ಇಳಿದುಕೊಂಡರು. ಆ ಸಮಯದಲ್ಲಿ ಮಾರಿದೇವಿ ಅಲ್ಲಿದ್ದ ಹುಡುಗನೊಬ್ಬನ ಮೈಮೇಲೆ ಬಂದು 'ನಾನು ಬಂಕಾಪುರದ ಮಾರಿ, ನನಗೆ ಇಲ್ಲಿ ಇರಲು ಸ್ಥಳ ಮಾಡಿಕೊಡಿ' ಎಂಬ ಅಪ್ಪಣೆಯಾಯ್ತು. ಆ ಪ್ರಕಾರ ಶಿರಸಿಯ ಊರಿನ ಜನರೆಲ್ಲ ಕೂಡಿ ವಿಜೃಂಭಣೆಯಿಂದ ಆ ದೇವತೆಯನ್ನು ಪೇಟೆಯೊಳಗೆ ತಂದು ಸ್ಥಾಪಿಸಿದರು. ಪೂಜೆ ಪುರಸ್ಕಾರಗಳಿಗೆ ಹಲವು ಜಮೀನುಗಳನ್ನೂ

ಬಿಟ್ಟುಕೊಟ್ಟರು. ಅದೇ ಸಮಯಕ್ಕೆ ಮೂರು ವರ್ಷಕ್ಕೊಮ್ಮೆ ಹಬ್ಬ ಮಾಡಬೇಕೆಂದು ಅಪ್ಪಣೆಯೂ ಆಯ್ತು. ಪೂಜೆಗೆ ಸಂಬಾಳ ನರಸಣ್ಣನೆಂಬವನನ್ನು ನೇಮಿಸಲಾಯಿತು. ಈಗಲೂ ಶಿರಸಿಯ ಮಾರೆಮ್ಮ ಈ ಕಡೆಗೆ ಪ್ರಸಿದ್ಧ ದೇವತೆಯಾಗಿರುವಳು." ಹೀಗಾಗಿ ಮೂಲ ಬಂಕಾಪುರದ ಮಾರಿದೇವತೆ ಶಿರಸಿಯಲ್ಲಿ ಪೂಜೆಗೊಳ್ಳಬೇಕಾಗಿ ಬಂದುದು ಇತಿಹಾಸದ ವೈಚಿತ್ರ್ಯ

### ೬.೬. ನಗರೇಶ್ವರ ದೇವಸ್ಥಾನ

ನಕರರು ಎಂದರೆ ವ್ಯಾಪಾರಸ್ಥರು ಎಂದರ್ಥ, ಈ ನಕರರಿಂದ ರಚಿತಗೊಂಡ ದೇವಸ್ಥಾನ ನಕರೇಶ್ವರ ದೇವಸ್ಥಾನ ಅಥವಾ ನಗರೇಶ್ವರ ದೇವಸ್ಥಾನ. ಕನ್ನಡ ನಾಡಿನ ಉದ್ದಕ್ಕೂ ಈ ವ್ಯಾಪಾರಿ ಬಳಗ ನಗರೇಶ್ವರ ನಿರ್ಮಾಣ ಕಾರ್ಯ ಕೈಗೊಂಡಿದ್ದಾರೆ. ಬಂಕಾಪುರದ ನಗರೇಶ್ವರ ದೇವಸ್ಥಾನ ಇಂಥ ಪ್ರಮುಖ ವ್ಯಾಪಾರಸ್ಥರ ನೆರವಿನಿಂದ ರಚಿತವಾದದು. ಕ್ರಿಶ ೧೧೯೩ರ ಸುಮಾರಿಗೆ ಈ ದೇಗುಲದ ಉಲ್ಲೇಖವಿದೆ. ಇಲ್ಲಿಂದ ಸುಮಾರು ೧೩ನೆಯ ಶತಮಾನದ ವರೆಗೆ ಸಾಂಸ್ಕೃತಿಕವಾಗಿ ಮೆರೆದ ವೈಭವಪೂರ್ಣ ದೇವಾಲಯವಿದು.

ಬಂಕಾಪುರದ ಹೆದ್ದಾರಿಯ ಮೇಲಿನ ಕೋಟೆಯ ಒಳಭಾಗದಲ್ಲಿ ಈ ನಗರೇಶ್ವರ ದೇವಸ್ಥಾನವಿದ್ದು ಪಶ್ಚಿಮಾಭಿಮುಖವಾಗಿದೆ. ಭೂಮಿಯ ಸಮಪಾತಳಿಯಿಂದ ಸುಮಾರು ೩.೦ ಮೀಟರ ತಗ್ಗಿನ ಸಮಭೂಮಿಯ ಮೇಲೆ ಈ ದೇವಾಲಯ ನಿರ್ಮಾಣಗೊಂಡಿದೆ. ಕರಿಯ ಕಲ್ಲಿನಿಂದ ಕೆತ್ತನೆ ಹಾಗೂ ಸೂಕ್ಷ್ಮ ಕಲೆಗಳಿಂದ ರಚನೆಗೊಂಡಿದೆ.

ಚಾಲುಕ್ಯ ಶಿಲ್ಪದಿಂದೊಡಗೂಡಿದ ಈ ನಗರೇಶ್ವರ ದೇವಸ್ಥಾನದ ವಿಶಾಲ ಸಭಾಮಂಟಪದಲ್ಲಿ ೬೦ ಕ್ಕೂ ಹೆಚ್ಚು ಕಂಬಗಳಿರುವದರಿಂದ ರೂಢಿಯಲ್ಲಿ ೬೦ ಕಂಬದ ಗುಡಿ ಎಂದು ಜನರು ಕರೆಯುತ್ತಾರೆ.

ನಗರೇಶ್ವರ ಗಾತ್ರದಿಂದ ಭವ್ಯವಾದಂತೆ ಶಿಲ್ಪದಿಂದಲೂ ಕಲಾಪೂರ್ಣವಾಗಿದೆ. ಪಶ್ಚಿಮ ದಿಕ್ಕಿಗೆ ಮುಖ್ಯದ್ವಾರ ದಕ್ಷಿಣೋತ್ತರವಾಗಿಯು ದ್ವಾರಗಳನ್ನು ಹೊಂದಿದ. ಈ ದೇವಾಲಯದ ಪೂರ್ವ ಭಾಗದಲ್ಲಿ ಗರ್ಭಗೃಹವಿದೆ. ಗರ್ಭಗೃಹ, ನವರಂಗ, ರಂಗಮಂಟಪ, ಇಕ್ಕೆಡೆಗಳಲ್ಲಿ ವಿಶಾಲವಾದ ಅಂಗಣವನ್ನು ಈ ದೇವಸ್ಥಾನ ಒಳಗೊಂಡಿದೆ. ಗರ್ಭಗುಡಿಯ ಕೆತ್ತನೆ, ತುಂಬಾ ಸುಂದರವಾಗಿದೆ. ಗುಡಿಯಲ್ಲಿ ದೇವರಿಲ್ಲ ಗರ್ಭಗುಡಿಯ ದ್ವಾರದ ಚೌಕಟ್ಟು ಕಲಾಪೂರ್ಣವಾಗಿದೆ. ಇದರ ಅಕ್ಕ-ಪಕ್ಕಗಳಲ್ಲಿ ಎರಡು ಕಿರಿಯ ಬಾಗಿಲು ವಾಡಗಳಿದ್ದು ಸುಂದರ ವಿಗ್ರಹಗಳನ್ನು ಒಳಗೊಂಡಿವೆ. ದೇವಸ್ಥಾನದ ಆವರಣ ಕಲಾಪೂರ್ಣತೆಯಿಂದ ಕೂಡಿದ್ದು, ನಯನಾಜೂಕಿನ ಜಾಲಂಧ್ರಗಳನ್ನು ಹೊಂದಿದೆ. ದೇವಾಲಯದ ಕಂಬಗಳ ವಿನ್ಯಾಸ ಶಿಲ್ಪಿಯ ಕೈ ಚಳಕದಿಂದ ಹೆಚ್ಚು ಸುಂದರವಾಗಿವೆ. ಮೇಲ್ಛಾವಣಿಯಲ್ಲಿ ಸುಂದರವಾದ ಕಮಲದ ವಿನ್ಯಾಸವನ್ನು ಒಳಗೊಂಡ ವೈಭವವಿದೆ. ದೇವಾಲಯದ ಸುತ್ತಲಿನ ಆವರಣದ ಮೇಲೆ ಸಾಲು-ಸಾಲಾಗಿ ಅನೇಕ ಪೌರಾಣಿಕ ಕಥೆಗಳನ್ನು ಕೆತ್ತಿದ್ದಾರೆ.

ರಾಮಾಯಣ, ಮಹಾಭಾರತದ ಸುಂದರವಾದ ಚಿತ್ರಪಟ್ಟಿಕೆಗಳಿದ್ದು ಕೆಲವು ಹಾಳಾಗಿವೆ, ಕೆಲವು ಉಳಿದಿವೆ.

೧೧ನೇ ಶತಮಾನದಲ್ಲಿ ಆಚಾರ್ಯ ಚಂದ್ರಭೂಷಣ ದೇವರು ಈ ದೇವಾಲಯದ ಅಧಿಪತಿಗಳಾಗಿದ್ದರು. ಇವರನ್ನು 'ಶಿವಯೋಗ ಸುಧೆಯೆಂಬ ಸಮುದ್ರದಲ್ಲಿ ಪ್ರವಹಿಸಬಲ್ಲ ಗಂಧಸಿಂಧೂರ' ಎಂದು ಕರೆದಿರುವರು. ಇವರ ಅಧಿಕಾರ ಅವಧಿಯಲ್ಲಿ ನಗರೇಶ್ವರ ಧಾರ್ಮಿಕ ತಾಣವೆನಿಸಿತ್ತು. ತಪೋಧನರ ಆಶ್ರಯವೆನಿಸಿತು. ಧಾರ್ಮಿಕ ಚಿಂತನಶೀಲರು ಇಲ್ಲಿ ನೆಲೆಯೂರಿ ಚಂದ್ರಭೂಷಣರ ಸಮರ್ಥ ಮಾರ್ಗದರ್ಶನದಲ್ಲಿ ತಮ್ಮ ಹೊಸ ಬದುಕನ್ನು ರೂಪಿಸಿಕೊಳ್ಳುತ್ತಿದ್ದರು.

ಬನವಾಸಿ ಕದಂಬರ ಕಾಲದಲ್ಲಿಯೂ ವಿಮಳಶಕ್ತಿಗಳು ಷಡಕ್ಷರ ಮಂತ್ರ ಶಿದ್ಧರೆನಿಸಿ ತಮ್ಮ ಸ್ವಾತಿಕ ತೇಜಸ್ಸು, ಕರ್ತೃತ್ವ ಶಕ್ತಿಯಿಂದ ಇದನ್ನು ಪುಣ್ಯದ ತಾಣವನ್ನಾಗಿಸಿರುವರು.

ಕ್ರಿ.ಶ ೧೧೭೦ ರಿಂದ ಮುಂದೆ ಬರುವ ಶಾಸನಗಳು ವಿಮಳಶಕ್ತಿಯನ್ನ ಹೊಗಳಿವೆ. ಇವನ ಅಧಿಕಾರದ ಅವಧಿಯಲ್ಲಿ ಕದಂಬ ಕೀರ್ತಿ ದೇವ 'ನಗರೇಶ್ವರ ವಿಚಿತ್ರಕೂಟ ಪ್ರಸಾದ ಮಾಟ, ನಾನಾಪ್ರಕಾರದ ನೈವೇದ್ಯ, ಶಿಷ್ಯ ಅನಾಥರಿಗಿಕ್ಕುವ ವಾರಿಸತ್ರ' ಗಳನ್ನ ಮಾಡಿಕೊಡುವಲ್ಲಿ ಮುಂದಾಗಿರುವನು. ಇದಕ್ಕೆ ಹಾನಗಲ್ಲ ೫೦೦ ಕಂಪಣ ಮುವತ್ತರ ಬಳಿಯ ಗಾವುಂಡವಳ್ಳಿ ಗ್ರಾಮವನ್ನು ಆದಾಯ ಸಹಿತ ಬಿಟ್ಟುಕೊಟ್ಟಿರುವನು. ಕೀರ್ತಿ ದೇವನ ವಿಭಿನ್ನ ಆಸಕ್ತಿಯನ್ನು ಮನಗಂಡರೆ ನಗರೇಶ್ವರ ಕಾಲಕಾಲದಲ್ಲಿ ಬರಿಯ ಧಾರ್ಮಿಕ ಕೇಂದ್ರವೆನಿಸದೆ, ವಿದ್ಯಾಕೇಂದ್ರ, ಅನಾಥ ರಕ್ಷಣಾ ಕೇಂದ್ರವಾಗಿ, ವಾರಿಸತ್ರವಾಗಿ, ಕಾರ್ಯ ಕೈಕೊಂಡಿದೆ. ತಪೋಧನರ ಆಹಾರ ಕೇಂದ್ರವಾದ ಇದು ಪರಸ್ಥಳೀಯ ತಪಸ್ವಿಗಳನ್ನು, ಜ್ಞಾನಪಿಪಾಸುಗಳನ್ನು, ಆಧ್ಯಾತ್ಮ ಚಿಂತಕರನ್ನು ಆಕರ್ಷಿಸುತ್ತಾ ಬಂದಿದೆ. ವೇದ, ಪುರಾಣ, ದರ್ಶನಾದಿಗಳ ವಿದ್ಯಾಸ್ಥಾನವಾಗಿ, ದೀನಮ ಅನಾಥ, ಅಂಧ, ಬದರಿಗಾಯಕರಾದಿ ನಾನಾ ಭಿಕ್ಷುಗಳಿಗೆ ದಾನಸ್ಥಾನವಾಗಿ ಅನಾಥ ರೋಗಿಗಳಿಗೆ ಭೈಷಜ್ಯ ಸ್ಥಾನ(ವೈದ್ಯ ಶಾಲೆ)ವಾಗಿ ಸಕಲ ಪ್ರಾಣಿಗಳಿಗೆ ಅಭಯ ಸ್ಥಾನವಾಗಿ ಬೆಳೆದು ಬಂದಿದೆ.

ಇಷ್ಟೊಂದು ಬಹುಮುಖ ಚಟುವಟಿಕೆಗಳ ಕೇಂದ್ರವಾಗಿದ್ದುದು, ನಗರೇಶ್ವರ ಇಂದಿಗೂ ಅದು ಬಂಕಾಪುರದ ಒಂದು ಆಕರ್ಷಣೀಯ ತಾಣವೆನಿಸಿದೆ.

### ೬.೭. ಸಿದ್ದೇಶ್ವರ ದೇವಸ್ಥಾನ

ಹೊಯ್ಸಳೇಶ್ವರ ಅಥವಾ ಸಿದ್ದೇಶ್ವರ ಎಂದು ಕರೆಯುವ ಈ ದೇವಸ್ಥಾನ ಗಾತ್ರದಿಂದ ಚಿಕ್ಕದಾದರೂ ಕಲಾಕುಸುರಿ, ವಾಸ್ತುಶಿಲ್ಪದ ವಿಭಿನ್ನ ಕಲೆಗಳನ್ನು ಹೊಂದಿ ಗಮನಾರ್ಹ ಸ್ಥಾನ ಪಡೆದಿದೆ. ಗರ್ಭಗೃಹ, ಸುಖನಾಸಿ, ರಂಗಮಂಟಪಗಳನ್ನು ಹೊಂದಿದ ಈ ದೇವಸ್ಥಾನದ ನಿರ್ಮಾಣವೇ ವಿಶಿಷ್ಟವೆನಿಸಿದೆ. ಕದಂಬ ನಾಗರಶೈಲಿಯ ಗೋಪುರ ಇದಕ್ಕಿದ್ದು ಅದರ ಮುಂಭಾಗದಲ್ಲಿಯ ಕೀರ್ತಿ ಮುಖ ತುಂಬಾ ಗಂಭೀರ ಶಿಲ್ಪಕಲೆಯಿಂದ ಒಡಗೂಡಿದೆ. ಸಿಂಹ ಲಲಾಟವಿದ್ದ ಈ ಶಿಲ್ಪದಲ್ಲಿ ದೇವಗಣಂಗಳಿಂದ ಆವೃತಗೊಂಡ ನೃತ್ಯ ಶೈಲಿಯಲ್ಲಿದ್ದ ನಟರಾಜನ

ವಿಗ್ರಹ ನಯನಮನೋಹರವಾಗಿದೆ. ಅದರ ಸುತ್ತಲೂ ಚಕ್ರಾಕಾರವಾಗಿ ಹಬ್ಬಿನಿಂತ ಎಳೆಬಳ್ಳಿ ಹೂ ಗೊಂಚಲುಗಳು ಮೇಣದಲ್ಲಿ ಅರಳಿದಂತಹ ಸೂಕ್ಷ್ಮ ಕಲಾಕುಸುರನ್ನು ಹೊಂದಿದೆ.

ದೇವಸ್ಥಾನದ ಒಳಭಾಗವು ಅಷ್ಟೇ ಕಲಾಪೂರ್ಣವಾಗಿದೆ. ನಾಲ್ಕು ಕಂಬಗಳ ಮೇಲ್ಛಾವಣಿಯ ಮೇಲೆ ನಿಂತ ಈ ಸುಂದರ ದೇಗುಲ ಪುಟ್ಟದಾದ ಗರ್ಭಗೃಹ ಹೊಂದಿದ್ದು, ಒಳಗಿದ್ದ ಲಿಂಗ ಮಧ್ಯಮ ಗಾತ್ರದಿದೆ. ಗರ್ಭಗೃಹದ ಮೇಲ್ಭಾಗದಲ್ಲಿದ್ದ ಗಜಲಕ್ಷ್ಮಿ ಇಕ್ಕೆಲ್ಲಗಳ ಬಾಗಿಲುವಾಡದ ಮೇಲಿನ ಸುಂದರ ಕಲೆಗಾರಿಕೆ ಮೇಲಿನ ಮಕರ ತೋರಣ ಪಟ್ಟಿಕೆ ಸುಂದರವಾಗಿದೆ.

ಗರ್ಭಗೃಹದ ಬಲಭಾಗದಲ್ಲಿಯೇ ಗೂಡೊಂದರಲ್ಲಿ ಸ್ವಯಂಭೂ ಶಿವನ ಪ್ರತಿಮೆಯಿದೆ. ನಂದಿಯ ಮೇಲೆ ಪದ್ಮಾಸನದಲ್ಲಿ ಮಂಡಿಸಿದ ಶಿವ ತ್ರಿಶೂಲ ದಂಡಧಾರಿಯಾಗಿ ತಪದ ಭಂಗಿಯಲ್ಲಿದ್ದಾನೆ. ಎಡಗೈಯಲ್ಲಿ ಯಾವುದೋ ಚಿತ್ರವಿದ್ದು ಜಿಂಕೆಯಾಕಾರದ ಮುಖ ಕಾಣಿಸುತ್ತದೆ. ನಂದಿವಿಗ್ರಹ ತುಂಬಿಕೊಂಡಂತೆ ಚಿತ್ರಿತವಾಗಿದ್ದು. ತುಂಬಾ ಗಂಭೀರ ಸ್ಥಿತಿಯಲ್ಲಿದೆ. ಈ ಪ್ರತಿಮೆಯನ್ನು ನೋಡಿದರೆ ಲಕ್ಷ್ಮೇಶ್ವರದ ಸ್ವಯಂಭೂ ಸೋಮೇಶ್ವರ ನೆನಪಾಗುತ್ತದೆ. ಅಲ್ಲಿ ನಂದಿಯ ಮೇಲೆ ಕಾಲುಗಳನ್ನು ಇಕ್ಕೆಲ್ಲಗಳಲ್ಲಿ ಇಳಿಬಿಟ್ಟು ಕುಳಿತ ಶಿವನ ವಿಗ್ರಹವಿದ್ದರೆ, ಇಲ್ಲಿ ನಂದಿಯ ಒಂದು ಮಗ್ಗಲಿಗೆ ಶಿವ ಕುಳಿತ ಚಿತ್ರ ಅಪರೂಪದ್ದಾಗಿದೆ.

ಗರ್ಭಗೃಹದ ಬಲಭಾಗದಲ್ಲಿ ಪದ್ಮಾಸನಾಸ್ಥ ಗಣಪತಿ ವಿಗ್ರಹವಿದೆ. ವಿಭಿನ್ನ ಆಭರಣಗಳಿಂದ ಅಲಂಕೃತನಾದ ಗಣಪತಿ ಪ್ರಸನ್ನ ಮುಖದಿಂದ ಕೂಡಿಕೊಂಡಿದ್ದಾನೆ. ಅದರಂತೆ ದೇವಸ್ಥಾನದ ಇನ್ನೂ ಕೆಲವು ಚಿಕ್ಕ ಪುಟ್ಟ ವಿಗ್ರಹಗಳು ಆಕರ್ಷಕವಾಗಿವೆ. ದೇವಸ್ಥಾನದ ಒಳಭಾಗದ ಎಡಮಗ್ಗಲಿನ ಗೋಡೆಯ ಮಧ್ಯದ ಎರಡು ಪಟ್ಟಿಕೆಗಳ ಮೇಲೆ ಶಾಸನವನ್ನು ಕಂಡರಿಸಲಾಗಿದ್ದು. ಇನ್ನೂವರೆಗೆ ಅಪ್ರಕಟಿತವಾದ ಈ ಶಾಸನ ಈ ಕೃತಿಯ ಶಾಸನ ವಿಭಾಗದಲ್ಲಿ ಪ್ರಕಟಿತಗೊಂಡಿದೆ. ಇಂದಿಗೂ ಕೂಡಾ ಈ ದೇವಸ್ಥಾನದಲ್ಲಿ ಪೂಜೆ ಪುನಸ್ಕಾರಗಳು ನೆರವೇರುತ್ತಿದ್ದು ಸಾವಿರ ವರ್ಷಗಳ ದೀರ್ಘ ಅಂತರದಲ್ಲಿಯೂ ಇದು ಸುಸ್ಥಿತಿಯಲ್ಲಿದೆ. ಆದರೂ ಘನ ಸರಕಾರ, ಪ್ರಾಚ್ಯ ವಸ್ತು ಸಂರಕ್ಷಣಾಲಯ, ಊರಿನ ಭಕ್ತಾದಿಗಳು ಈ ದೇವಸ್ಥಾನದ ರಕ್ಷಣೆಗೆ ಹೆಚ್ಚು ಆದ್ಯತೆಕೊಡುವುದು ತುಂಬ ಅವಶ್ಯವಿದೆ.

**೬.೮. ಒಂಟಿಕಾಲಿನ ಗಣಪತಿ**

ಇಲ್ಲಿಯ ಮುಖ್ಯರಸ್ತೆಗೆ ಹೊಂದಿ ಗಣಪತಿ ದೇವಸ್ಥಾನ ಒಂದಿದೆ. ಅಖಂಡ ಶಿಲೆಯಲ್ಲಿ ರಚಿತವಾದ ಇಲ್ಲಿಯ ಗಣಪತಿ ವಿಗ್ರಹ ಗಂಭೀರವಾಗಿದೆ. ಭವ್ಯ ಗಾತ್ರದ ನಯನಾಜೂಕ ರಹಿತ ವಿನಾಯಕನಿಗೆ ಕಾಲುಗಳಿಲ್ಲ. ದೇಹದ ಅರ್ಧಭಾಗವಿದ್ದು ಬಲಗೈ ತುಂಡಾಗಿದೆ. ಎರಡು ಕೈ ಎರಡು ಕಾಲುಗಳನ್ನು ಕಳೆದುಕೊಂಡ ಗಣಪ ಇವನಾಗಿದ್ದರು ಇವನನ್ನು ಒಂಟಿಕಾಲಿನ ಗಣಪತಿ ಎಂದು ಕರೆಯುವದು ವಿಚಿತ್ರವೆನಿಸಿದೆ. ಕಿರೀಟ ಧಾರಿಯಾಗಿ ನಿಂತ ಗಣಪತಿ ಸುಂದರ ಕಲಾಕುಸುರಿನ ನುಡಿ ಆಭರಣ ಧರಿಸಿದ್ದಾನೆ. ನಡಕ್ಕೆ ನಡುಪಟ್ಟಿ, ಎಡಭಾಗಕ್ಕೆ ಹೊರಳಿದ ದಪ್ಪ

ಸೊಂಡೆ, ದೊಡ್ಡ ಗಾತ್ರದ ಹೊಟ್ಟೆಯಿದೆ. ಸುಮಾರು ೩ ಅಡಿ ಎತ್ತರದ ಈ ವಿಗ್ರಹವನ್ನು ನೋಡಿದವರಿಗೆ ಹಂಪೆಯ ಸುಪ್ರಸಿದ್ಧ ಕಡಲೆಕಾಳು, ಸಾಸಿವೆಕಾಳು ಗಣಪತಿ ನೆನೆಪಿಗೆ ಬರುತ್ತದೆ.

### ೬.೯. ವೀರಭದ್ರೇಶ್ವರ ದೇವಸ್ಥಾನ

ಅರಳೆಲೆಮಠದ ಎದುರಿಗೆ ಊರೊಳಗಿನ ಮುಖ್ಯ ರಸ್ತೆಯ ಮೇಲೆ ವೀರಭದ್ರನ ದೇವಸ್ಥಾನವಿದೆ. ಅದರ ಗರ್ಭಗೃಹದಲ್ಲಿ ವೀರಭದ್ರ ಮತ್ತು ಕಾಳಮ್ಮರ ವಿಗ್ರಹಗಳು ಭವ್ಯವಾಗಿವೆ. ವೀರಭದ್ರನ ವಿಗ್ರಹದ ಮುಖಮಂಡಲ ದುಷ್ಟರನ್ನು ಶಿಕ್ಷಿಸುತ್ತಿರುವ ದೃಶ್ಯ ಸುಂದರವಾಗಿ ಚಿತ್ರಿತವಾಗಿದೆ. ಈ ಗುಡಿಯಲ್ಲಿಯ ಮೂಲ ವೀರಭದ್ರ ವಿಗ್ರಹ ದಕ್ಕಿಗೊಳ್ಳಲು ೧೨-೦೩-೧೯೮೬ ರಂದು ಬಂಕಾಪುರದ ನಾಗರಿಕರೆಲ್ಲ ಒಂದೆಡೆ ಸೇರಿ ಹೊಸ ವೀರಭದ್ರನ ವಿಗ್ರಹ ಪ್ರತಿಷ್ಠೈದಿರುವರು.

### ೬.೧೦. ಮೈಲಾರಲಿಂಗೇಶ್ವರ ದೇವಸ್ಥಾನ

ಕರಿಯ ಕಲ್ಲಿನಲ್ಲಿ ಕಂಡರಿಸಲ್ಪಟ್ಟ ಈ ವಿಗ್ರಹ ಸುಂದರವಾಗಿದೆ. ವಿಗ್ರಹದ ಪಾದಪೀಠದಲ್ಲಿ ಓಡುತ್ತಿರುವ ಕುದುರೆಯ ಚಿತ್ರವಿದೆ. ಧ್ಯಾನ ಮುದ್ರೆಯಲ್ಲಿ ಕುಳಿತ ಮೈಲಾರಲಿಂಗನ ಎಡಗೈಯಲ್ಲಿ ಭಂಡಾರದ ಬಟ್ಟಲಿದ್ದು ಮೈಲಾರಲಿಂಗೇಶ್ವರ ಮೈಮೇಲಿನ ಆಭರಣಗಳು ಅಂದಿನ ಕಾಲದ ವೈವಿಧ್ಯತೆಯನ್ನು ಸೂಚಿಸುವಂತಿವೆ.

### ೬.೧೧. ನಾಗಪ್ರತಿಮೆ

ಪ್ರಾಚೀನ ಕಾಲದಿಂದಲೇ ಬೆಳೆದು ಬಂದಿದೆ ನಾಗೋಪಾಸನೆ, ನಾಗಪ್ರತಿಷ್ಠೆ, ನಾಗಪೂಜೆಗಳು ಅನಿಷ್ಟ ಪರಿಹಾರಕವೆಂಬ ಭಾವನೆ ಕನ್ನಡಿಗರಲ್ಲಿದೆ. ಹೀಗಾಗಿ ಇಲ್ಲಿ ನಾಗವಿಗ್ರಹಗಳು ಅಸಂಖ್ಯವಾಗಿವೆ. ಊರ ಹೊರಗಿನ ಕಲಕಟ್ಟಿ, ಹಾಗೂ ಪಂಚಮಲಕಪ್ಪನ ಬಾವಿಯ ಮೇಲ ಅಂತಸ್ತಿನ ಎಡ ಭಾಗದ ಮೇಲ್ಭಾವಣಿಯಲ್ಲಿರುವ ಏಳುಹೆಡೆಯ ಸರ್ಪ ಬಾಲ ಸುತ್ತಿಕೊಂಡು ಕುಳಿತಿರುವ ಚಿತ್ರವೇ ನೋಡುಗರನ್ನು ಆಕರ್ಷಿಸುವಂತಿದೆ. ಆಕರ್ಷಕವಾಗಿ ಹೆಣೆಯಲ್ಪಟ್ಟ ಈ ಏಳು ಹೆಡೆಯ ಸರ್ಪದ ಬಾಲವನ್ನು ಪತ್ತೆ ಹಚ್ಚುವುದೇ ಒಂದು ಪ್ರಯಾಸಕರ ಕೆಲಸ.

### ೬.೧೨. ಅಲ್ಲಾವುದ್ದೀನ ಷಾ ಖಾದ್ರಿ ದರ್ಗಾ

ಬಂಕಾಪುರದ ಸೈದಾನಭಿ ಗುಂಬಜ ಮತ್ತು ದರ್ಗಾವು, ದರ್ಗಾದ ತುಂಡು ಕಲ್ಲಿನ ಸಾದಾ ಪೌಳಿ ಗೋಡೆಯ ಹೆಬ್ಬಾಗಿಲು ಗಮನಾರ್ಹ, ಇವೆರಡು ಬಹುಶಃ ೧೮-೧೯ನೆಯ ಶತಮಾನದವು ದರ್ಗಾದ ಎರಡು ಬದಿಗಳಲ್ಲಿ ಒಂದರ ಮೇಲೊಂದರಂತೆ ಕಮಾನುಗಳು ಚಿತ್ರಗಳಿದ್ದು ಮಧ್ಯದಲ್ಲಿ ಕಮಾನಿನ ಪ್ರವೇಶ ದ್ವಾರವಿದೆ. ದ್ವಾರದ ಮೇಲಿನ ಅಂಚಿನಲ್ಲಿ ನಾಲ್ಕು ಮಿನಾರಗಳಿವೆ. ಒಳಗೆ ನಾಲ್ಕು ಕಂಬಗಳ ಮಂಟಪವಿದೆ. ಇದರ ಮೇಲಿನ ಮೂಲೆಗಳಲ್ಲಿ ಸಣ್ಣ ಸಣ್ಣ ಒಂದೊಂದು ಮಿನಾರಗಳಿವೆ.

ಹಜರತ ಸೈಯದ ಅಲ್ಲಾವುದ್ದೀನ ಷಾ ಖಾದ್ರಿ ಎಂಬ ಸಾಧುವಿಗೆ ಸಂಬಂಧಿಸಿದುದು. ಇವರು ಶಿಶುನಾಳ ಷರೀಫರ ಸಮಕಾಲೀನರು. ಸೈಯಾದನಭಿಯು ಒಬ್ಬ ಮುಸಲ್ಮಾನ ಸ್ತ್ರೀ ಸಂತರು ಬಂಕಾಪುರ ಕಾಲದಿಂದ ಕಾಲಕ್ಕೆ ಭಾವೈಕ್ಯತೆಯನ್ನು ಸಾಧಿಸಿಕೊಂಡು ಬಂದಿದೆ. ಇದು ಸರ್ವ ಧರ್ಮಗಳಿಗೆ ಆಡುಂಬೋಲವೆಂಬಂತೆ ರೂಪಿತಗೊಂಡಿದೆ. ಒಂದು ಕಾಲಕ್ಕೆ ಬಂಕಾಪುರದ ಮೇಲೆ ದಾಳಿ ಮಾಡಿ ಇದನ್ನು ಕೈವಶ ಮಾಡಿಕೊಂಡ ಮುಸ್ಲಿಮರು ಇಂದು ಬಂಕಾಪುರದವರೇ ಎಂಬಷ್ಟರ ಮಟ್ಟಿಗೆ ಈ ಪ್ರದೇಶದಲ್ಲಿ ಈ ಸಂಸ್ಕೃತಿಯಲ್ಲಿ ಒಂದಾಗಿ ಹೋದದು ಈ ನಾಡಿನ ವೈಶಿಷ್ಟ್ಯ. ಅವರ ಬಹುಕಾಲದ ಅನುಪಮ ಕುರುಹುಗಳೆಂಬಂತೆ ಇಂದು ಬಂಕಾಪುರದ ಎಲ್ಲೆಡೆ ಯಲ್ಲಿ ಕಾಣುತ್ತಿರುವ ಮಸೀದಿಗಳು, ದರ್ಗಾಗಳು ಅಲ್ಲಲ್ಲಿ ಕೇಳಿಬರುತ್ತಿರುವ ಪವಿತ್ರ ಕುರಾನದ ಮಂತ್ರ ಪಠಣ ಬಾವುಕರ ಮನಕ್ಕೆ ಶಾಂತಿಯನ್ನೀಯುತ್ತವೆ.

ಪ್ರಾಚೀನ ಕಾಲದಿಂದ ಇಲ್ಲಿ ನೆಲೆ ನಿಂತ ಶರೀಫ ಶಾವಲಿ ದರ್ಗಾ, ಹುಸೇನ ಶಾವಲಿ ದರ್ಗಾ, ನೂರುಲ್ಲಾ ಷಾ ಖಾದ್ರಿ ದರ್ಗಾ, ಹಜರತ್ ಸೈಯದ ಅಲ್ಲಾವುದ್ದೀನ ಷಾ ಖಾದ್ರಿ ದರ್ಗಾಗಳು ಭಕ್ತಿಯ ಕೇಂದ್ರಗಳಾಗಿವೆ. ಇವಲ್ಲದೇ ಬಂಕಾಪುರದಲ್ಲಿ ಇನ್ನು ಹತ್ತು ದರ್ಗಾಗಳಿವೆ. ಸುಮಾರು ಏಳು ಮಖಾನಗಳು ಇಲ್ಲಿದ್ದು ಅಲಿದೇವರ ಪೂಜಾ ಪುರಸ್ಕಾರಗಳು ವಿಜೃಂಭಣೆಯಿಂದ ಜರುಗುತ್ತಿವೆ. ಸುಮಾರು ಹತ್ತು ಮಸೀದಿಗಳಿವೆ. ಮಹಬೂಬ ಸುಬಾನಿ ಜಂಡೇ ಕಟ್ಟಿಗಳು ಅಡ್ಡೈ ಗುಮ್ಮಜಗಳು ಇಲ್ಲಿವೆ. ಸೈದಾನಬಿ, ಮಹಜಾನಬಿ, ಮಸಾಬಿ ಎಂಬ ಮೂವರು ಮುಸಲ್ಮಾನ ಶರಣೀಯರು ಇಲ್ಲಿ ಬಾಳಿ ಬೆಳಗಿದಂತೆ ಉಲ್ಲೇಖಗಳಿವೆ.

ಇಲ್ಲಿಯ ಹಜರತ ಸೈಯದ ಅಲ್ಲಾವುದ್ದೀನ ಷಾ ಖಾದ್ರಿ ದರ್ಗಾ ಪ್ರಾಚೀನ ಇತಿಹಾಸ ಹೊಂದಿದಂತೆ, ದರ್ಗಾದ ಶಿಲ್ಪ ಸುಂದರವಾಗಿದೆ. ಈ ಪರಂಪರೆಯ ಹಜರತ ಷಾ ಖಾದ್ರಿ ಇವರು ಸಿದ್ಧ ಪುರುಷರು, ಶಿಶುನಾಳ ಷರೀಫರು ಇವರ ಕರುಣೆಯ ಕಂದನೆಂಬುದು ಮರೆಯ ಲಾಗದು. ಹಯಾತ ಬಾ ಷಾವಲಿ, ವಿಷ್ಕಿನ ಷಾವಲಿಯ ಮಹಿಮರು ಜೀವಂತ ಸಮಾಧಿ ಮಾಡಿಕೊಂಡಿರುವರು. ಎಂಬುದು ಮುಸ್ಲಿಂ ಬಾಂಧವರ ಹೇಳಿಕೆ.

ಪ್ರತಿ ವರ್ಷ ಇಲ್ಲಿ ಅಸಂಖ್ಯೆಯಲ್ಲಿ ಜನಬಂದು ಉರಸ ಆಚರಿಸುತ್ತಾರೆ. ಮೂರು ದಿನ ಜಂಗೀ ಬೈಲು ಕುಸ್ತಿಗಳು ಜರುಗುತ್ತವೆ. ಪ್ರತಿ ಗುರುವಾರ ದೂರ ದೂರದಿಂದ ಭಕ್ತರು ಬಂದು ಸೇವೆ ಸಲ್ಲಿಸಿ ತಮ್ಮ ಇಷ್ಟಾರ್ಥ ಪೂರೈಸಿಕೊಳ್ಳುತ್ತಿದ್ದಾರೆ.

ಹೀಗೆ ಬಂಕಾಪುರ ಸರ್ವ-ಧರ್ಮದ ಅನುಪಮ ತತ್ವಗಳನ್ನು ಅರಗಿಸಿಕೊಂಡು ಇಂದು ಭಾವೈಕ್ಯತೆ ಸಾಧಿಸಿದೆ, ಎಲ್ಲರೂ ಒಂದೇ ತಾಯಿಯ ಮಕ್ಕಳೆಂಬ ಭಾವ ಇಲ್ಲಿ ನೆಲೆನಿಂತಿದೆ.

ಹ॥ ಸೈಯದ ಅಲ್ಲಾವುದ್ದೀನಶಾ ಕಾದರಿ, ಬಂಕಾಪುರ

ಇವರು ಸೈಯದ ಹಜರತಶಾ ಕಾದರಿಯವರ ಅಜ್ಜಂದಿರು (ತಾಯಿಯ ತಂದೆಯವರು) ಇವರ ಬಾಲ್ಯದಲ್ಲಿಯ ಸಂಗತಿಗಳನ್ನು ಅರಿಯಲು ಸುಲಭ ಸಾಧ್ಯವಿಲ್ಲ. ಇವರು ತಾರುಣ್ಯದಲ್ಲಿಯೇ ಪಂಜಾಬ ಇಲಾಖೆಯೊಳಗಿನ ಅಂಬಾಲಾದ ಹತ್ತಿರ ಇರುವ ತಮ್ಮ ಊರಾದ "ಸಡೋರಾ" ವನ್ನು ಬಿಟ್ಟು ದೇಶಸಂಚಾರ ಆರಂಭಿಸಿ ದಕ್ಷಿಣಕ್ಕೆ ಬಂದರು.

ಇವರು ಲೌಕಿಕ ಧನಸಂಪತ್ತಿನ ಲಾಲಸೆ ಹಾಗೂ ಮಾನ ಮರ್ಯಾದೆಯ ಮೋಹಕ್ಕೆ ಸಿಲುಕದೆ ದೇವರ ಧ್ಯಾನದಲ್ಲಿಯೇ ತೃಪ್ತಿ ಇದೆಯೆಂದು ನಂಬಿ, ಆ ದಿಶೆಯಲ್ಲಿ ಒಂದು ಯೋಗ್ಯ ಏಕಾಂತ ಸ್ಥಳವನ್ನು ಕಂಡುಹಿಡಿಯಲು ಅಲೆದಾಡಹತ್ತಿದರು. ಮಾರ್ಗ ಕ್ರಮಿಸುತ್ತಿರುವಾಗ ದಾರಿಯಲ್ಲಿ ಎದುರಾಗುವ ಹೊಳೆಹಳ್ಳಗಳ ಪ್ರವಾಹದ ಗಾನವನ್ನು ಕೇಳುತ್ತ, ಸರೋವರದ ಸ್ತಬ್ಧತೆ ಎದುರಿಗೆ ಕಾಣುವ ಶಂಕ್ವಾಕೃತಿಯ ಬೆಟ್ಟಗಳು ಹಾಗೂ ಸಾಲು ಸಾಲಾಗಿ ಎಡಬಲಕ್ಕೆ ಗೋಡೆಗಳಂತೆ ನಿಂತಿರುವ ಪರ್ವತಾವಳಿಗಳ ಸೊಬಗನ್ನು ವೀಕ್ಷಿಸುತ್ತ, ಅಲ್ಲಲ್ಲಿ ಅಂದಚೆಂದವಾಗಿ ಕಂಗೊಳಿಸುತ್ತಿರುವ ಹಚ್ಚ ಹಸಿರು ಹುಲ್ಲಿನ ಬೈಲುಗಳ ಹಾಸಿಗೆಯ ಮೇಲೆ ವಿಶ್ರಾಂತಿಪಡೆದು ವಸತಿ ಮಾಡುತ್ತ, ರಮಣೀಯವಾದ ಅನೇಕ ದೃಶ್ಯಗಳನ್ನು ಗಮನಿಸುತ್ತ ಆಗಾಗ್ಗೆ ಸೃಷ್ಟಿಕರ್ತನ ಲೀಲೆಯನ್ನು ಹೊಗಳುತ್ತ ಸಂತೋಷದಿಂದ ಅಲೆದಾಡುತ್ತಿದ್ದರು.

ಹೀಗೆ ಎಷ್ಟೋ ದಿವಸ ಗತಿಸಿಹೋದ ನಂತರ, ಸ್ವಾಮಿಯವರು ಬಂಕಾಪುರದಿಂದ ಉತ್ತರ ದಿಕ್ಕಿನಲ್ಲಿ ಎರಡು ಫರ್ಲಾಂಗ ಅಂತರದಲ್ಲಿ ಒಂದು ಬೈಲಿಗೆ ಬಂದು ತಲುಪಿದರು. ಅಲ್ಲಿ ತಣ್ಣೀರಿನ ಝರಿಯನ್ನು ಕಂಡು ಆನಂದಭರಿತರಾಗಿ ಅಲ್ಲಿಯೇ ಒಂದು ದಟ್ಟನೆರಳನ್ನು ಕೊಡುವ ಬೇವಿನಮರದ ಕೆಳಗೆ ತಮ್ಮ ನಿವಾಸಸ್ಥಾನವನ್ನು ಮಾಡಿ ಯಥಾಪ್ರಕಾರ ಜಪತಪದೊಳಗಿರತೊಡಗಿದರು. ಶೀಘ್ರದಲ್ಲಿಯೇ ಇವರ ಆಗಮನದ ಸುದ್ದಿ ನಾಲ್ಕೂ ಕಡೆಯಲ್ಲಿಯೂ ಮಿಂಚಿನಂತೆ ಹಬ್ಬಿತು. ಈ ಪುಣ್ಯಪುರುಷರ ದರ್ಶನಕ್ಕೋಸ್ಕರ ಹಳ್ಳಿ–ಪಟ್ಟಣಗಳಿಂದ ಗುಂಪುಗುಂಪಾಗಿ ಜನರು ಬರತೊಡಗಿದರು. ಸ್ವಾಮಿಯವರ ಅಮೃತವಾಣಿಯನ್ನು ಕೇಳಿ ಆನಂದಪಟ್ಟ ತಮ್ಮ ಸ್ಥಳಕ್ಕೆ ಹೊರಟುಹೋಗುತ್ತಿದ್ದರು.

**ಗೋಸಾವಿಯವರ ಆಕ್ರೋಶ ಮತ್ತು ಮೃದುತ್ವ:** ಅಲ್ಲಿ ಕ್ರಮೇಣ ಜನಸಮೂಹವು ಬಲಿಯುತ್ತಿರಲು ಅಲ್ಲಿಯೇ ಸಮೀಪದ ಆಶ್ರಮದಲ್ಲಿದ್ದ ಗೋಸಾವಿಯವರಿಗೆ ಅದು ಸರಿದೋರಲಿಲ್ಲ. ಹೇಗಾದರೂ ಮಾಡಿ ಈ ನವಫಕೀರನನ್ನು ಇಲ್ಲಿಂದ ಹೊರಡಿಸಬೇಕೆಂದು ಬಯಸಿ ಜಾದು ವಿದ್ಯೆಯಲ್ಲಿ ನಿಪುಣರಾದ ಇವರು ತತ್‌ಕ್ಷಣವೇ ತಾಂತ್ರಿಕ ಬಲದಿಂದ ಒಂದೊಂದು ಮಣ ಭಾರವುಳ್ಳ ಕಲ್ಲುಗಳನ್ನು ಸ್ವಾಮಿಯವರ ತಲೆಯ ಮೇಲೆ ಹಾರಾಡಿಸಿದರು. ಪರಂತು ಸ್ವಾಮಿಯವರು ಇತ್ತಕಡೆಗೆ ಎಳ್ಳಷ್ಟೂ ಲಕ್ಷ್ಯಕೊಡದೆ ಶಾಂತತೆಯಲ್ಲಿ ಲೀನವಾಗಿದ್ದರು.

ಜಿಸ್ಕು ಹೋತಾಹೈ ಖುದಾಸೆ ಕಾರಭಾರ।
ಹೈ ಇಧರ ಗಾಫಿಲ್ ಉಧರ್ಕು ಹುಷ್ಯಾರ ॥

**ಅರ್ಥ**: ಯಾರಿಗೆ ದೇವರಿಂದ ಪಾರುಪತ್ಯ ಇರುತ್ತದೆಯೋ ಅವರು ಇಲ್ಲಿ ಅಜ್ಞಾನಿಯಾದರೂ ಅಲ್ಲಿ ಸುಜ್ಞಾನಿಯಾಗಿರುತ್ತಾರೆ.

ಕಲ್ಲುಗಳು ಸ್ವಾಮಿಯವರ ಮೇಲೆ ಬೀಳದೆ ಅತ್ತಿತ್ತ ಬೀಳುತ್ತಿದ್ದವು. ಈ ದೃಶ್ಯವನ್ನು ಕಂಡು ಗೋಸಾವಿಯವರು ಹೌಹಾರಿದರು. ಇಷ್ಟಕ್ಕೆ ಬಿಡದೆ ಬೇರೊಂದು ಉಪಾಯ ಯೋಚಿಸಿದರು. ಅವರ ಸ್ವಾಧೀನದಲ್ಲಿದ್ದ ಭೂತ ಪಿಶಾಚಿಗಳಿಗೆ ಸ್ವಾಮಿಯವರನ್ನು ಹಿಡಿತರಲು ಆಜ್ಞಾಪಿಸಿದರು. ಕ್ಷಣಾರ್ಧದಲ್ಲಿ ಭೂತಗಳು ವರ್ತುಳಾಕಾರವಾಗಿ ಸ್ವಾಮಿಯವರನ್ನು ಸುತ್ತುಗಟ್ಟಿದವು. ಪರಂತು ಅವರ ಹತ್ತಿ ಹೋಗುವುದು ಯಾರಿಂದಲೂ ಸಾಧ್ಯವಾಗಲಿಲ್ಲ, ಅವು ಹಿಂತಿರುಗಿದವು. "ಯಾವ ನೌಕೆಯಅಂಬಿಗನು ಸಾಕ್ಷಾತ್ ಪರಮಾತ್ಮನೆ ಇರುವನೋ ಅದಕ್ಕೆ ಬಿರುಗಾಳಿಯ ಭಯವೇನು?" ಈ ದಿಶೆಯಲ್ಲಿಯೂ ಗೋಸಾವಿಯವರ ಕಾರ್ಯ ಸಫಲವಾಗಲಿಲ್ಲ; ಈ ಅಭ್ಯಂತರ ಕಂಡು ಅವರು ಭಯಭೀತರಾದರು.

ಫಕೀರನು ಮಾತ್ರ ಬ್ರಹ್ಮಜ್ಞಾನಿ, ಮಹಾಯೋಗಿ ಕಾಣಿಸುತ್ತಾನೆ; ಏನೇ ಇರಲಿ, ಇದೊಂದು ಕೊನೆಯ ಸಾಹಸ ಮಾಡಲೇಬೇಕೆಂದು ನಿಶ್ಚಯಿಸಿ ವಾಯುವೇಗವಾಗಿ ಅಡವಿಗೆ ಹೋಗಿ ವನಸ್ಪತಿ ತಂದು ಸ್ವಾಮಿಯವರು ಪ್ರತಿನಿತ್ಯ ಮುಖತೊಳೆಯಲು(ವಜು) ಹೋಗುವ ಬಾವಿಯ ಮೇಲಿದ್ದ ಒಂದು ಕಲ್ಲಿನ ಮೇಲೆ ಕೈಯಿಂದ ಅದರ ರಸವನ್ನು ಹಿಂಡಿದರು. ಕೂಡಲೆ ಅದು ಸಳಮಳ ಕುದಿಯತೊಡಗಿತು ಅದು ಬಂಗಾರದ ಘಟ್ಟಿಯಾಯಿತು. ಗೋಸಾವಿಯವರು ನಿಶ್ಚಿಂತರಾಗಿ ಸ್ವಾಮಿಯವರ ಮೇಲೆ ಅಪರಾಧ ಹೊರಿಸುವ ಉದ್ದೇಶದಿಂದ ಅಲ್ಲಿಂದ ತೆರಳಿದರು. ವಾಡಿಕೆಯಂತೆ ಕೆಲ ಹೊತ್ತಿನ ಮೇಲೆ ಸ್ವಾಮಿಯವರು ಅಲ್ಲಿಗೆ ಆಗಮಿಸಿದರು. ಬಾವಿಯ ಮೇಲೆ ಲಕಲಕ ಹೊಳೆ ಯುತ್ತಿರುವ ಬಂಗಾರದ ಘಟ್ಟಿಯನ್ನು ನೋಡಿ ಅದನ್ನು ಕಾಲಿನಿಂದ ಬಾವಿಯಲ್ಲಿ ನೂಕಿದರು.

ಸ್ವಾಮಿಯವರು ಮುಖತೊಳೆದುಕೊಂಡು ಹೊರಡುವ ಸಿದ್ದತೆಯಲ್ಲಿದ್ದಾಗ ಗೋಸಾವಿಯವರು ಎದುರಿಗೆ ಬಂದು ನಾನು ಇಲ್ಲಿ ಇಟ್ಟುಹೋದ ಬಂಗಾರದ ಘಟ್ಟಿ ಏನಾಯಿತು, ನಿಮ್ಮ ಹೊರತು ಇಲ್ಲಿ ಯಾರು ಬಂದಿಲ್ಲ, ನೀವೇ ತಕ್ಕೊಂಡಿದ್ದೀರಿ, ಕೊಡ್ರಿ ಎಂದು ಕೇಳಿದರು. ಸ್ವಾಮಿಯವರು ಶಾಂತ ಸ್ವರದಿಂದ ಅಂದದ್ದೇನೆಂದರೆ– ನಾನು ಅದನ್ನು ತಕ್ಕೊಳ್ಳಲಿಲ್ಲ; ಮತ್ತು ಅದರ ಆಶೆಯೂ ನನಗಿಲ್ಲ, ಬೇಕಾದರೆ ತಕ್ಕೊಳ್ಳಿರಿ ಎಂದು ಪಕ್ಕದಲ್ಲಿದ್ದ ಕಲ್ಲಿನ ಮೇಲೆ ಉಗುಳಿದರು. ಅದು ಕೂಡಲೆ ಬಂಗಾರದ ಸ್ವರೂಪ ಧರಿಸಿತು. ಈ ಅದ್ಭುತ ಕಾರ್ಯ ಕಣ್ಣಾರೆ ಕಂಡು ಗೋಸಾವಿಯವರು ಆಶ್ಚರ್ಯ ಚಕಿತರಾಗಿದ್ದಲ್ಲದೆ, ಆ ಸಮಯದಲ್ಲಿ ಸಂಕುಚಿತಭಾವನೆ ಮತ್ತು ಅಪಕ್ವ ವಿಚಾರಗಳನ್ನು ಬಿಟ್ಟು ಮನದಲ್ಲಿ ಮರುಗತೊಡಗಿದರು.

ಏಕಾನಾ ಏಕ್‌ದಿನ್ ಸರಜನಹಾರಕು ಮುಖ್ ದಿಖಾನಾ ಹೈ ಮೈ ಮೇರಾ ಆದರ್ ಔರ ಪ್ರತಿಷ್ಠಾಬಡೆ ಇಸ್ ಹೇತುಸೆ ಏಕ ಸಜ್ಜನ ಮನುಷ್ಯ ಪರ ಸಮಝು ಬೂಝುಕೆ

ಫೇರಪಾರಸೆ ಅತ್ಯಾಚಾರ ರವಾರಖ್ಬಾ ಇಸ್ಕಾ ಮುಖಮಂಡಲ್ ಅಮಿತ್ತ ತೇಜಸೆ ಚಮಕ್ತೆ ಹುವೆ ದೇಖಕರಭಿ ಇನ್ಕೆ ಸ್ವರೂಪಕಾ ಮರ್ಮ ನಾಜಾನಾ ಏ ಮುಝುಸೆ ಮಹಾ ಅಪ್ರಾಧ ಹುವಾ ಇಸ್ ದೇಶಕಾ ನಿವಾರಣ ಔರ ಇಸ್ ಮಹರ್ಷಿಕು, ಪ್ರಸನ್ನ ಕರ್ನೆಕಾ ಉಪಾಯ ವಹಿ ಹೊಸಕ್ತಾಹೈಕೆ ಸಾತ್ವಿಕ ಭಾವನಸೆ ನಿರಂತರ ಇನ್ಕಾ ಸೇವಾ ಕರುಂ, ಜಬಹಿತೊ ಇಸ್ ಸಂಕೋಚಸೆ ಬಚೂಂಗಾ.

**ಭಾಷಾಂತರ** : ಒಂದಾನೊಂದು ದಿವಸ ಸೃಷ್ಟಿಕರ್ತನಿಗೆ ಮೋರೆ ತೋರಿಸಬೇಕಾಗುತ್ತದೆ. ನಾನು ನನ್ನ ಮಾನ ಮರ್ಯಾದೆಯ ಹೆಚ್ಚಳದ ಉದ್ದೇಶದಿಂದ ಒಬ್ಬ ಸಂಭಾವಿತ ಮಾನವನ ಮೇಲೆ ತಿಳುವಳಿಕೆಯ ಬದಲಾವಣೆಯಿಂದ ಅನ್ಯಾಯಕ್ಕೆ ಎಡೆಕೊಟ್ಟೆ. ಇವರ ಮುಖಮುದ್ರೆ ಅಪಾರ ಕಾಂತಿಯಿಂದ ಮಿಂಚುತ್ತಿದ್ದುದ್ದನ್ನು ನೋಡಿಯೂ ಇವರ ನಿಜರೂಪದ ರಹಸ್ಯ ತಿಳಿಯಲಿಲ್ಲ. ಇದು ನನ್ನಿಂದ ದೊಡ್ಡ ದೋಷವಾಗಿದೆ. ಈ ಪಾಪದ ತಡೆ ನತ್ತು ಬ್ರಹ್ಮಜ್ಞಾನಿಯಾದ ಇವರಿಗೆ ಸಂತೋಷಪಡಿಸುವ ಸುಲಭ ಸಾಧನ ಏನೆಂದರೆ, ನಿಚ್ಚಳ ಮನದಿಂದ ಯಾವಾಗಲೂ ಇವರ ಸೇವೆ ಮಾಡಬೇಕು, ಆವಾಗ್ಗೆ ನಾನು ಈ ಮುದುರುವಿಕೆಯಿಂದ ಮುಕ್ತನಾಗುವೆ. ಮತ್ತು ಅಂದಿನಿಂದ ಗೋಸಾವಿಯವರು ಸ್ವಾಮಿಯವರ ಸಂಗಡ ಸ್ನೇಹ ಸೌಹಾರ್ದದಿಂದ ವರ್ತಿಸ ತೊಡಗಿದರು. ಸ್ವಾಮಿಯವರಾದರೂ ಅವರನ್ನು ಸನ್ಮಾನದಿಂದ ಬರಮಾಡಿಕೊಳ್ಳುತ್ತಿದ್ದರು. ಹೀಗೆ ಸದಾನಂದದಿಂದ ಈರ್ವರು ಕಾಲಕಳೆಯುತ್ತಿದ್ದರು. ಜಾತಿ, ಮತ, ಪಕ್ಷ, ಮತ್ತು ಪಂಗಡಗಳ ಗಾಳಿಯು ಅವರಿಗೆ ತಗಲಲಿಲ್ಲ. ಈ ದಿಶೆಯಲ್ಲಿ ಕೆಳಗೆ ವಿವರಿಸಿದ ಸಾಧು ಸಂತರ ವಚನಗಳು ಮತ್ತು ವೇದದ ಆಧಾರ ಜಾತೀಯತೆಯನ್ನು ಹೊಡೆದು ಹಾಕಿದ ಬಗೆಗೆ ಗಮನಾರ್ಹವಾಗಿದೆ.

ಜಾತ ಪಾತ ಪೂಛನಕೋಯಿ ।
ಹರಕು ಭಜಸೊ ಹರಕಾಹೋಯೇ॥

**ಅರ್ಥ**: ಜಾತಿಯನ್ನು ವಿಚಾರಿಸಬೇಡ; ಶಿವನನ್ನು ಭಜಿಸುವವನು ಶಿವನಾಗುವನು.

– ತುಳಸಿದಾಸ

ಕೋಣ ಶೂದ್ರ ಕೋಣ ಪಾಂಡೆ ।
ಸಬ್ ಏಕ್ ಮಿಟ್ಟೀಕೆ ಭಾಂಡೆ ॥

**ಅರ್ಥ**: ಯಾರು ಕರ್‍ರಗೆ ಯಾರು ಬೆಳ್ಳಗೆ ಎಲ್ಲರೂ ಒಂದೇ ಮಣ್ಣಿನ ಗಡಿಗೆಗಳು.

–ಗುರು ಬಾಬಾ ನಾನಕ

ಅವ್ವಲ ಅಲ್ಲಾಹ ನೂರ ಉಪಾಯ
ಕುದರತಕೇ ಸಬ್ ಬಂದೇ
ಏಕನೂರಸೆ ಸಬ್ ಜಗ ಉಪಜಾ ।
ಕೌನಭಲೆ ಕೊ ಮಂದೆ. ।

**ಅರ್ಥ:** ಪ್ರಥಮದಲ್ಲಿ ಪರಮಾತ್ಮನ ಪ್ರಕಾಶ ಬೀರಿತು. ಅದರಂತೆ ಮಾನವ ಜಾತಿಯ ಉತ್ಪತ್ತಿಯಾಯಿತು. ಎಲ್ಲರ ಹೃದಯದಲ್ಲಿದ್ದವನೇ ಆತನು. ಇದರಲ್ಲಿ ಯಾರು ದೊಡ್ಡವರು, ಒಳ್ಳೆಯವರು ಅವರವರ ಕೃತಿ ಮೇಲಿಂದಲ್ಲವೇ ಉಚ್ಚನೀಚ ಅನ್ನುವದು.

– ಶ್ರೀ ಶಂಕರಾಚಾರ್ಯರು

ಹೂವಲ್ಲವಲು, ಹೂವಲ್ಲಾಖಿರು, ಹೂವಜ್ಯಾಹಿರು, ಹೊವಲ್ಬಾತಿಸು,

**ಅರ್ಥ:** ದೇವರೂ ಆದಿಯೂ, ಅಂತ್ಯನೂ, ಅವ್ಯಕ್ತನೂ ಇದ್ದಾನೆ. – ಕುರಾನ

ಜಾತಿಯಾ ಜಾತಿಯೆನಬೇಡಾ ।
ಶಿವನೊಲಿದಾತನೆ ಜಾತ ಸರ್ವಜ್ಞ ॥

**ಅರ್ಥ:** ಜಾತಿ ಜಾತಿ ಎಂದು ಅನ್ನಬೇಡಾ; ಶಿವನ ಅನುಗ್ರಹವಿದ್ದವನೇ ಉತ್ತಮ ಜಾತಿಯವನು. – ಸರ್ವಜ್ಞ

ಭಾರತವು ಅನಾದಿಕಾಲದಿಂದ ಸಾಧು–ಸಂತರ ನಾಡು ಆಗಿದ್ದಲ್ಲದೆ "ಹಿಂದುಸ್ಥಾನ ಜನ್ನತ ನಿಶಾನ, ಘರ ಘರ ರೋಟ ಘರ ಘರ ತಾನ" ಎಂದು ಹೆಸರಾದ ಸುಖ ಶಾಂತಿಯ ಬೀಡು. ಈ ನವೀನ ವಾತಾವರಣದಲ್ಲಿ ಶಿವಶರಣರ ಮಾತೆಂದರೆ ಮುನ್ನಡೆಗೆ ಅಡ್ಡಿಯಾಗುವ ಕಾಲ್ತೊಡಕು ಎಂದು ತಿಳಿದು, ಅಜ್ಞಾನಕ್ಕೆ ಜ್ಞಾನ, ವೈರತ್ವಕ್ಕೆ ವೈರಾಗ್ಯ ಕಾಮವೇ ಭಕ್ತಿ, ಇದರಿಂದಲೇ ಮುಕ್ತಿ, ಇದೇ ನಮ್ಮ ಶಕ್ತಿ ಎಂದು ಎದೆಯುಬ್ಬಿಸಿ ಆರ್ಭಟೆಯಿಂದ ಸ್ವರ್ಗ ಮೂರೇ ಗೇಣಿನಲ್ಲಿ ಎಂದು ನಡೆಯುವದು ಸರಿಯಲ್ಲ. ಇದು ಮೂಢ ಭಾವನಾ, ಚಂಚಲ ಸ್ವಭಾವ. ಶಿಶರಣರ ವಚನಗಳು ಎಂದಿಗೂ ಅಳಿಯುವುದಿಲ್ಲ, ಅಜರಾಮರವಾಗಿ ಉಳಿಯುವವು. ಇದರಂತೆ ನಡೆದಾತನಿಗೆ ಸುಖ ಶಾಂತಿ ಸಿಗುವುದು ಖಂಡಿತ. ಆದ್ದರಿಂದ ಸಾರಾಸಾರ ವಿಚಾರ ಮಾಡಿ ಮನುಷ್ಯನು ಮನುಷ್ಯತ್ವಕ್ಕಾಗಿ ಪ್ರಯತ್ನಿಸಬೇಕು. ಅಂದರೇನೇ ಅವನಿಗೆ ತೃಪ್ತಿಸಿಗುವುದು, ಸನ್ಮಾರ್ಗ ಲಭಿಸುವದು ನಿರ್ವಾಣಸುಖ ಪ್ರಾಪ್ತವಾಗುವುದು.

ಪಿರಿಷ್ತೆಸೆ ಬೆಹತರ ಹೈ ಇನ್ಸಾನ ಬನನಾ ।
ಮಗರ ಇಸ್ಮೆ ಲಗ್ತಿ ಹೈ ಮೆಹನತ್ ಜಿಯಾದಾ ॥

**ಅರ್ಥ:** ದೇವದೂತತ್ವಕ್ಕಿಂತಲೂ ಅತಿ ಯುಕ್ತವಾದುದು ಮನುಷ್ಯತ್ವವು. ಇದನ್ನು ಸಂಪಾದಿಸಲು ಬಹಳ ಪ್ರಯತ್ನಪಡಬೇಕಾಗುವದು.

**ಹಸ್ಸುಮಿಯ್ಯಾ ಕಿಲ್ಲೇದಾರ:** ಇವರು ಬಂಕಾಪುರ ಗ್ರಾಮದಲ್ಲಿಯ ಸುಪ್ರಸಿದ್ಧ ಗೃಹಸ್ಥರಲ್ಲದೆ ಧನಿಕರು, ಧರ್ಮನಿಷ್ಠರು, ಸ್ವಾರ್ಥತ್ಯಾಗಿಯು ಮತ್ತು ಸದಾಚಾರದಲ್ಲಿ ಹೇಳಿ ಕೊಡುವಂತ ಪುತ್ಥಳಿ ಯಾಗಿದ್ದರು. ಒಂದು ದಿವಸ ಗೆಳೆಯರೊಂದಿಗೆ ಕಿಲ್ಲೆಯ ಉತ್ತರ ದಿಕ್ಕಿನಲ್ಲಿರುವ ಬಾಗಿಲ ಎದುರಿಗೆ ಬಂದರು. ಅಲ್ಲಿಂದ ಸಮೀಪದಲ್ಲಿದ್ದ ಸ್ವಾಮಿಯವರ ದರ್ಶನಕ್ಕಾಗಿ ಅತ್ಯುತ್ಸುಕರಾದ ಇವರು

ಆತುರತೆಯಿಂದ ಸ್ವಾಮಿಯವರ ಆಸ್ಥಾನಕ್ಕೆ ಬಂದರು. ಅಲ್ಲಿ ಸ್ವಾಮಿಯವರು ಶಿವಧ್ಯಾನದಲ್ಲಿ ಮಂತ್ರ ಪಠಿಸುತ್ತ ಕುಳಿತುಕೊಂಡಿದ್ದರು. ಅವರ ಮುಖದ ತೇಜಸ್ಸು ಅಂತರಂಗ ಬಹಿರಂಗದ ನಿಜಸ್ವರೂಪ ವನ್ನು ತಿಳಿಸುತ್ತಿತ್ತು. "ಕೈ ಹುಣ್ಣಿಗೆ ಕನ್ನಡಿ ಬೇಕೆ?" ಎಂಬಂತೆ ಹಸ್ಸುಮಿಯ್ಯಾರವರು ದೀನಸ್ವರದಿಂದ ಸ್ವಾಮಿಯವರ ಸನ್ನಿಧಿಯಲ್ಲಿ ಹೀಗೆ ಅರಿಕೆ ಮಾಡಿಕೊಳ್ಳಹತ್ತಿದರು. ಸ್ವಾಮಿ, ನನ್ನನ್ನು ನಿಮ್ಮ ಸೇವೆಯಲ್ಲಿ ತಕ್ಕೊಳ್ಳಬೇಕು ಮತ್ತು ನನ್ನ ಚಂಚಲ ಮನಸ್ಸಿನ ವ್ಯಥೆ ತಮ್ಮ ಅನುಗ್ರಹದಿಂದ ದೂರಾಗಬೇಕು. ಇದೆ ನನ್ನ ಹಂಬಲ ಎಂದು ಗಟ್ಟಿಯಾಗಿ ಎದುರಿನಲ್ಲಿಯೇ ಕೂತುಬಿಟ್ಟರು.

ಸ್ವಾಮಿಯವರು ಅವರಿಗೆ ಸ್ವಲ್ಪ ದೂರ ಸರಿದು ನೆಮ್ಮದಿಯಿಂದ ಕೂತುಕೊಳ್ಳಲು ಆಜ್ಞಾಪಿಸಿದರು. ಪರಂತು ಹಸ್ಸುಮಿಯಾರವರು ವಚನ ಕೊಡದೆ. ವಿನಃ ಇಲ್ಲಿಂದ ಕದಲುವದಿಲ್ಲ ವೆಂದು ಹಟತೊಟ್ಟರು. ಆವಾಗ ಇವರ ಏಕ ನಿಷ್ಠೆಯ ಭಕ್ತಿಗೆ ಸ್ವಾಮಿಯವರು ಒಲಿದು ಅವರ ಬಯಕೆಯಂತೆ ದೀಕ್ಷೆ ಕೊಟ್ಟರು, ಮತ್ತು ಆತ್ಮಶುದ್ಧಿಯ ಉಪದೇಶಪರವಾದ ಪ್ರವಚನಗಳನ್ನು ತಿಳಿಸಿಹೇಳಿದರು. ಹಸ್ಸುಮಿಯ್ಯಾರವರು ಆನಂದದ ಮಹಾಸಾಗರದಲ್ಲಿ ತೇಲಾಡಿದರು. ಯಾಕೆಂದರೆ ಯೋಗ್ಯ ಪ್ರಧಾನ ಧರ್ಮಗುರು ಸಿಗುವುದು ದುರ್ಲಭವಲ್ಲದೆ ಕಠಿಣ; ಪ್ರತಿಯೊಂದು ಹಳದಿ ಬಣ್ಣದ ವಸ್ತು ಸುವರ್ಣವಾಗಲಾರದು. ಪ್ರತಿಯೊಬ್ಬ ಗುರುವಿನ ಗುರುತು, ವಿದ್ಯ, ಗುಣ, ವಿಚಾರ, ವರ್ತನೆ ಮುಂತಾದವುಗಳಲ್ಲಿರುವ ನ್ಯೂನ್ಯತೆಗಳನ್ನು ನೋಡಬೇಕಾಗುತ್ತದೆ. ಬರಿ ಒಣ ಆಡಂಬರದ ಮೇಲೆ ಪವಿತ್ರ ಗುರುವೆಂದು ತಿಳಿಯಲು ಬಾರದು. ಹಸ್ಸುಮಿಯ್ಯಾರವರಿಗೆ ಮನಸ್ಸಿನ ತಕ್ಕ ಗುರುಗಳು ಸಿಕ್ಕರು. ಅಂದಿನಿಂದ ಅವರ ಸಾತ್ವಿಕ ವೃತ್ತಿಯು ಬೆಳೆಯತೊಡಗಿತು. ಸಾಧಕನಿಗೆ ಮೋಕ್ಷದ ದಾರಿಗಳೆಂದರೆ ವಿವೇಕ, ವೈರಾಗ್ಯ. ಭಕ್ತಿ, ಜ್ಞಾನ ಎಂಬುವದನ್ನು ಹಸ್ಸುಮಿಯ್ಯಾ ಅರಿತವರಾಗಿರಬೇಕು. ಹಸ್ಸುಮಿಯ್ಯಾ ಸ್ವಾಮಿಯವರ ಸೇವೆ ಎಡೆಬಿಡದೆ ಮಾಡುತ್ತಿದ್ದರು. ಮತ್ತು ಅನೇಕ ಪರಮ ಭಕ್ತಿಯುಳ್ಳವರು ಸ್ವಾಮಿಯವರ ದರ್ಶನಕ್ಕೆ ಬಂದು ದೀಕ್ಷೆ ಪಡಕೊಂಡು ಶಿಷ್ಯರ ಗುಂಪಿನಲ್ಲಿ ಸೇರುತ್ತಿದ್ದರು. ಸ್ವಾಮಿಯವರಾದರೂ ಪ್ರವಚನಗಳಿಗೆ ರಹಸ್ಯವನ್ನು ಹೇಳಿ ಸಂತುಷ್ಟಗೊಳಿಸುತ್ತಿದ್ದರು. ಒಟ್ಟಿನ ಮೇಲೆ, ಒಳ್ಳೆಯದರಲ್ಲಿ ವಿಶ್ವಾಸವಿರುವ ಆತ್ಮವೇ ಪ್ರಬಲವಾದ ಆತ್ಮ ಎಂದು ಘಂಟಾಘೋಷವಾಗಿ ಹೇಳಬಹುದು.

**ಆಶ್ಚರ್ಯಕರ ಘಟನೆ:** ಒಂದು ದಿವಸ ಸೈಯ್ಯದ ಅಲ್ಲಾವುದ್ದೀನ ಕಾದರಿಯವರು ತಮ್ಮ ಪೀಠದ ಮೇಲೆ ಕುಳಿತಿರಲು ಅನೇಕ ವಿಶ್ವಾಸಿಕ ಶಿಷ್ಯರು ಮತ್ತು ಹಸ್ಸುಮಿಯ್ಯಾ ಕಿಲ್ಲೇದಾರರು ಎದುರಿನಲ್ಲಿ ಬಂದು ವಿನಯದಿಂದ ನಮಸ್ಕರಿಸಿ ಕೂತುಕೊಂಡರು ಮತ್ತು ಧರ್ಮೋಪದೇಶದ ಮಾತುಗಳನ್ನು ಕೇಳತೊಡಗಿದರು. ಸ್ವಾಮಿಯವರು ಮಾತುಮಾತಿನಲ್ಲಿ ಮನಸ್ಸನ್ನು ಅಲ್ಲಾಡಿಸುವಂತಹ ಮಾತುಗಳನ್ನಾಡಿದರು. ಶಿಷ್ಯರೇ, ನನ್ನ ಮರಣವು ಶುಕ್ರುವಾರ ದಿವಸ ಮುಂಜಾನೆ ಆಗುವುದು. ಮತ್ತೆ ಶಿಷ್ಯರಲ್ಲಿ ಹಾಹಾಕಾರದ ಧ್ವನಿ ಏರತೊಡಗಿತು. ಸ್ವಾಮಿಯವರು ಎಲ್ಲರಿಗೆ ಸಮಾಧಾನ ಮಾಡಿ ಹೇಳಿದ್ದೇನೆಂದರೆ–

ಯಾವಾಗ ನನ್ನ ಪ್ರಾಣಪಕ್ಷಿ ಹಾರಿಹೋಗುವದೋ ಆವಾಗ್ಗೆ ನೀವು ನನ್ನ ಕಳೇಬರಕ್ಕೆ ಸ್ನಾನಮಾಡಿಸಬಾರದು, ಪ್ರೇತವಸ್ತ್ರ ಧರಿಸಬಾರದು. ನಾನು ಉಟ್ಟ ಬಟ್ಟೆಯಿಂದಲೇ ಧಪನಮಾಡಬೇಕು. ಇದು ನನ್ನ ಕಟ್ಟಪ್ಪಣೆಯು–ಇದನ್ನು ನೀವು ಪಾಲಿಸಬೇಕಾವುದು ಎಂದರು . ಈ ಮಾತನ್ನು ಮಂಗಳವಾರ ಹೇಳಿದ್ದರು. ಶಿಷ್ಯರೆಲ್ಲರೂ ವ್ಯಸನದಲ್ಲಿ ಅರಿವು ಚೇತರಿಸದೆ ಮರೆತು ಬಿಟ್ಟಿದ್ದರು. ಇದೇ ಉಹಾಪೋಹದಲ್ಲಿ ಶುಕ್ರುವಾರ ಬಂದೇ ಬಿಟ್ಟಿತು. ಇನ್ನೂ ಸೂರ್ಯ ಉದಯವಾಗಿದ್ದಿಲ್ಲ, ಸ್ವಾಮಿಯವರ ಪ್ರಾಣ ಪಕ್ಷಿಯು ಹಾರಿಹೋಯಿತು. ಶಿಷ್ಯರೆಲ್ಲರೂ ಗೋಳಿಟ್ಟರು. ಕಣ್ಣುಗಳಿಂದ ಕಂಬನಿಗಳನ್ನು ಸುರಿಸುತ್ತಿದ್ದರು. ಈ ದುಃಖದಾಯಕ ಸುದ್ದಿ ಮಿಂಚಿನಂತೆ ಎಲ್ಲ ಕಡೆಗೆ ಹರಡಿತು. ಸಣ್ಣವರು, ದೊಡ್ಡವರು, ವಿದ್ವಾಂಸರು ಮತ್ತು ಪಂಡಿತರು ಕೂಡಿದರು. ಅಸಂಖ್ಯಾತ ಜನರು ನೆರೆದಿದ್ದರು. ಪರಂಪರೆಯಂತೆ ಪಾರ್ಥಿವ ಶರೀರದ ಅಂತ್ಯಕ್ರಿಯೆ ಶಾಸ್ತ್ರೋಕ್ತ ವಿಧಿಗಳಿಂದ ಮಾಡತೊಡಗಿದರು. ಇದಕ್ಕೆ ಪ್ರತಿಯಾಗಿ ಸ್ವಾಮಿಯವರು ವಚನ ಎಲ್ಲರ ಮುಂದಿಟ್ಟರು. "ನಖ್ಖಾರ ಖಾನೆಮೆ ತೋತೀ ಕಿ ಆವಾಜ ಕೋನ ಸುನ್ತಾ ಹೈ?"(ನಖ್ಖಾರ ಖಾನೆಯಲ್ಲಿ ಗಿಳಿಯ ಧ್ವನಿ ಕೇಳುವವರಾರು?) ಅವರ ಮಾತು ಉಲ್ಲಂಘಿಸಿ ಧರ್ಮ ಪಂಡಿತರು ಪದ್ಧತಿ ಪ್ರಕಾರ ಕೆಲಸ ನಡಿಸಿಯೇಬಿಟ್ಟರು.

ಶಿಷ್ಯರು ಪರಿಪರಿಯಿಂದ ಕೇಳಿಕೊಂಡರೂ ಅವರ ಕಡೆಗೆ ಯಾರೂ ಲಕ್ಷ್ಯ ಕೊಡಲಿಲ್ಲ. ಶಿಷ್ಯರಿಗೆ ಬಹಳ ಅನುತಾಪವಾಯಿತು. ಜನಾಜಾ (ಶವದ ಪೆಟ್ಟಿಗೆ) ತಕ್ಕೊಂಡು ನಡೆದರು. ಶವವನ್ನು ಕುಣಿಯಲ್ಲಿ ಇಳಿಸಿದರು, ಮತ್ತು ಎದೆಯ ಮೇಲಿನ ಕಫನಿಯಲಾಳಿ ಬಿಚ್ಚಲಾಯಿತು. ಸ್ವಾಮಿಯವರು ಎದ್ದು ಕೂತರು; ಮತ್ತು ಕುಣಿಯಿಂದ ಹೊರಗೆಬಂದು ಅಡವಿಯ ದಾರಿ ಹಿಡಿದರು. ಜನರು ಹೌಹಾರಿ ಒಬ್ಬರನ್ನೊಬ್ಬರು ನೋಡುತ್ತ ನಿಂತುಬಿಟ್ಟರು. ಎಷ್ಟು ಮುಖಗಳೋ ಅಷ್ಟು ಮಾತಾದವು. ಈ ದೃಷ್ಟಾಂತ ನೋಡಿ ಶಿಷ್ಯರೆಲ್ಲರೂ ಅಳುತ್ತ ಸ್ವಾಮಿಯವರನ್ನು ಹಿಂಬಾಲಿಸಿದರು. ಸ್ವಾಮಿ, ತಪ್ಪಾಯಿತು ಕ್ಷಮಿಸಿರಿ ಎಂದು ಅಂಗಲಾಚಿದರು. ಹಸ್ಸುಮಿಯ್ಯಾರವರ ಸ್ಥಿತಿ ಹೇಳಲಾಸಲ್ಲ. ಬಹಳ ಪ್ರಯಾಸಪಟ್ಟು ಏಳುತ್ತ ಬೀಳುತ್ತ ಹಾಗೂಹೀಗೂ ಮುಂದೆ ಬಂದು ಸ್ವಾಮಿಯವರ ಪಾದಗಳನ್ನು ಗಟ್ಟಿಯಾಗಿ ಹಿಡಕೊಂಡರು. ಸ್ವಾಮಿ, ಕ್ಷಮಿಸಬೇಕು ಉದ್ದರಿಸಬೇಕು ಎಂದು ಅಳುವ ಧ್ವನಿಯಲ್ಲಿ ಕೇಳಿಕೊಂಡರು. ಆಗ ಸ್ವಾಮಿಯವರು ಶಿಷ್ಯರ ಗೋಳಾಟವನ್ನು ನೋಡಿ ಕನಿಕರಪಟ್ಟು, ಭಕ್ತರ ಇಷ್ಟಾರ್ಥದಂತೆ ಹಿಂತಿರುಗಿದರು. ಮತ್ತು ತಮ್ಮ ಮೊದಲಿನ ಸ್ಥಾನಕ್ಕೆ ಬಂದು ಯಥಾ ಪ್ರಕಾರ ಈಶನಾಮಸ್ಮರಣೆಯಲ್ಲಿ ತೊಡಗಿದರು. ಶಿಷ್ಯರೆಲ್ಲರೂ ಸ್ವಾಮಿಯವರ ಪುನರಾಗಮನದಿಂದ ಹರ್ಷಭರಿತರಾದರು.

**ವಿವಾಹ:** ಹಸ್ಸುಮಿಯ್ಯಾ ಕಿಲ್ಲೇದಾರರಿಗೆ ತಮ್ಮ ಪ್ರಧಾನ ಗುರುವಿನ ಮದುವೆ ಮಾಡಬೇಕೆಂಬುವದು ಬಹಳ ದಿವಸದ ಬಯಕೆ. ಆದರೆ ಸ್ವಾಮಿಯವರನ್ನು ವಿಚಾರಿಸುವುದು ಬಹು ದುಸ್ತರವಾಗಿತ್ತು. ಈ ವಿಚಾರ ಎಷ್ಟೋ ದಿವಸ ಗತಿಸಿಹೋದವು. ಒಂದು ದಿನ ಧೃಡನಿಶ್ಚಯ ಮಾಡಿ ವಿನಯದಿಂದ

ಕೇಳಿಬಿಟ್ಟರು. ಗುರುಗಳೇ! ನನ್ನ ಹೃದಯದಲ್ಲಿ ಒಂದು ಮಾತು ಬಹು ದಿವಸದಿಂದ ಕಳವಳಗೊಳಿಸುತ್ತಲಿದೆ. ಅದಕ್ಕೆ ತಾವು ಮನ್ನಣೆಕೊಟ್ಟರೆ ಬಿಚ್ಚುಮನಸ್ಸಿನಿಂದ ಹೇಳುತ್ತೇನೆ ಅಂದರು. ಸ್ವಾಮಿಯವರು ಅಪ್ಪಣೆ ದಯಪಾಲಿಸಿದರು. ಯಾಕೆಂದರೆ ಹಸ್ಸುಮಿಯ್ಯಾರವರ ಮೇಲೆ ಮೊದಲಿನಿಂದಲೂ ಬಹಳ ಪ್ರೇಮ ಮತ್ತು ಸಂಪೂರ್ಣ ವಿಶ್ವಾಸ ಇತ್ತು. ಹಸ್ಸುಮಿಯ್ಯಾ ಹೇಳಿದರು–ಸ್ವಾಮಿ, ನಿಮ್ಮ ಮದುವೆ ಮಾಡಬೇಕೆಂಬುವದೇ ನನ್ನ ಹಿರಿ ಆಶೆಯು ಮತ್ತೆನಿಲ್ಲ ಅಂದರು. ಆಗ ಸ್ವಾಮಿಯವರು ಹೀಗೆ ಹೇಳಿದರು.

ಹಸ್ಸುಮಿಯ್ಯಾ, ನನ್ನದೊಂದು ಹೊಟ್ಟೆ ತುಂಬಿಕೊಳ್ಳುವುದು ಕಷ್ಟವಾಗಿದೆ. ಮತ್ತೊಬ್ಬರನ್ನು ತಂದರೆ ನಮ್ಮಿಬ್ಬರಗತಿಯೇನಾದೀತು.

ಹಸ್ಸುಮಿಯ್ಯಾರವರು ಒಳ್ಳೇ ನಿಪುಣರು. ಕೂಡಲೆ ಅವರು ಮಹಾಸ್ವಾಮಿ, ತಾವು ಬಲ್ಲವರು, ನಾನು ಅಜ್ಞಾನಿ ನಿಮ್ಮ ಮುಂದೆ ಮಾತನಾಡುವ ಸಾಮರ್ಥ್ಯವು ನನ್ನಲ್ಲಿಲ್ಲ. ಆದರೂ ಇಷ್ಟುಮಾತ್ರ ಹೇಳಬಲ್ಲೆನು, ದೇವರ ದರ್ಬಾರಿನಲ್ಲಿ ಯಾವ ಮಾತಿನ ಕುಂದು ಕೊರತೆ ಇದೆ.

ರಾಜಿಕೆ ಮುತಲಕ್ ಜೊ ಹೈ ರೋಜಿರಸಾಂ ।
ರಿಜಕದೇವತಾ ಹೈ ಓ ಬೇಷುಬ್ಹೋಗುಮಾಂ ॥

**ಅರ್ಥ:** ಸಂರಕ್ಷಣೆ ಮಾಡುವವನು ಪರಮೇಶ್ವರನು. ಯಾವ ಶಂಕೆ ಇಲ್ಲದೆ ಹಾಗೂ ನಮಗೆ ತಿಳಿಯದಂತೆಯೂ ಆತನು ಆಹಾರವನ್ನು ಒದಗಿಸಿಕೊಡುತ್ತಾನೆ.

ಕಾದರಿಯವರು ಹಸ್ಸುಮಿಯ್ಯಾರವರ ಮಾತನ್ನು ಕೇಳಿ ಮೌನ ತಾಳಿದರು. ಇದರ ಮೇಲಿಂದ ಹಸ್ಸುಮಿಯ್ಯಾರವರು ಕಾದರಿಯವರು ಒಪ್ಪಿದ್ದಾರೆಂದು ಗ್ರಹಿಸಿ ನಿಶ್ಚಿಂತರಾಗಿ ಕನ್ಯ ಹುಡುಕುವದಕ್ಕೋಸ್ಕರ ಊರಿಂದೂರಿಗೆ ಪ್ರಯಾಣ ಬೆಳೆಸಿದರು. ಕಡೆಗೆ ಬಳ್ಳಾರಿ ಜಿಲ್ಲೆಯೊಳಗಿನ ಚಿಪ್ಪಗೇರಿ ಎಂಬ ಗ್ರಾಮಕ್ಕೆ ಹೋಗಿ ಮುಟ್ಟಿದರು. ಅಲ್ಲಿ ಸೈಯ್ಯದ ವಂಶದವರ ಮನೆತನವನ್ನು ಪತ್ತೆಮಾಡಿ ಕಾದರಿಯವರ ಸಂದೇಶ ತಿಳಿಸಿದರು. ಅವರಾದರೂ ಕನ್ಯ ಕೊಡಲು ಸಿದ್ದರಾದರು. ಹಸ್ಸುಮಿಯ್ಯಾರವರಿಗೆ ಆಗ ಹೇಳಕೂಡದಷ್ಟು ಆನಂದವಾಯಿತು. ಅಲ್ಲಿಂದ ಹರ್ಷಿತರಾಗಿ ಹಿಂತಿರುಗಿ ನೆಟ್ಟಗೆ ಕೆಲವು ದಿವಸದ ನಂತರ ಬಂಕಾಪುರಕ್ಕೆ ಬಂದು ಸ್ವಾಮಿಯವರಿಗೆ ಶುಭವಾರ್ತೆ ತಿಳಿಸಿದರು. ನಂತರ ಸ್ವಾಮಿಯವರ ಲಗ್ನದ ಸಾಮಾನು ಸರಂಜಾಮುಗಳನ್ನು ಸಿದ್ದಪಡಿಸಿಕೊಂಡು ನಿಬ್ಬಣವನ್ನು ಹೊರಡಿಸಿದರು. ಕೆಲವು ದಿವಸದ ನಂತರ ಸುರಕ್ಷಿತವಾಗಿ ಚಿಪ್ಪಗೇರಿ ಗ್ರಾಮಕ್ಕೆ ಹೋಗಿ ಮುಟ್ಟಿದರು. ಕಾದರಿಯವರನ್ನು ನೋಡಲು ಊರ ಜನರು ನೆರೆದರು. ಪ್ರವಾಸದ ಮಾತುಕತೆಗಳು ಹೊರಟವು, ಊಟ ಉಪಚಾರವಾಯಿತು. ಎಲ್ಲರೂ ಆನಂದದಿಂದ ಅಂಗಳದಲ್ಲಿಬಂದು ಕೂತುಕೊಂಡರು. ಆಗಿಹೋದ ಸಾಧು ಸತ್ಪುರುಷರ ಸುದ್ದಿ ಸಮಾಚಾರ ನಡೆಯಿತು.

**ಸೈಯ್ಯದ ಆಗುವ ಸತ್ಯತೆ:** ಚಿಪ್ಪಗೇರಿಯ ಸಜ್ಜಾದೆ(ಫಕ್ಕೀರರ ಪೀಠದ ಒಡೆಯರು) ಮಾತು ಮಾತುಗಳಲ್ಲಿ ಸ್ವಾಮಿಯವರಿಗೆ ಪ್ರಶ್ನಿಸಿದರು. ನೀವು ಸೈಯ್ಯದ ಆಗಲು ಯಾವ ಆಧಾರ ಮುಂದೆ

ಮಾಡುತ್ತೀರಿ? ಅದರಿಂದ ನಮಗೆ ಪೂರ್ಣ ವಿಶ್ವಾಸ ಆಗುವಂತಹದು! ಇಲ್ಲಿ ತಡವಾದರೂ ಏನಾಯ್ತು ಆ ಮಾತಿನ ಸತ್ಯತೆಗೆ ಅಗ್ಗಷ್ಟಿಗೆ ತಕ್ಕೊಂಡು ಬರ್‍ರಿ ಇದೇ ಈಗ ನಿರ್ಣಯವಾಗಿ ಹೋಗುವುದು ಎಂದರು.

ಆಜ್ಞೆಯ ಪ್ರಕಾರ ಅಗಿಷ್ಟಿಗೆ ತರಲಾಯಿತು. ನೆರೆದ ಜನರು ಬೆರಗಾಗಿ ಮುಂದೇನಾಗುವುದೆಂದು ಯೋಚಿಸತೊಡಗಿದರು. ಸ್ವಾಮಿಯವರು ತಮ್ಮದೊಂದು ಮೀಶಿಯ ಕೂದಲು ಕಿತ್ತು ಧಗಧಗಿಸುತ್ತಿರುವ ಬೆಂಕಿಯಲ್ಲಿ ಹಾಕಿದರು. ಅದು ವಕ್ರವಾಗಿ ಕೆಂಪಾಯಿತು. ಚಿಪ್ಪಗೇರಿಯ ಗುರುಗಳು ತಿಳಿದುಕೊಂಡರು. ಇವರು ಸತ್ಕುಲದ ಒಬ್ಬ ಗಣ್ಯವ್ಯಕ್ತಿಯಾಗಿದ್ದಾರೆ. ಅದೇ ಕಾಲಕ್ಕೆ ತಮ್ಮದೊಂದು ಮೀಶಿಯ ಕೂದಲು ಕಿತ್ತು ಅದೆ ಬೆಂಕಿಯಲ್ಲಿ ಹಾಕಿದರು. ತಕ್ಷಣ ಅದು ಡೊಂಕಬಿದ್ದು ಕೆಂಪಾಗಿ ಮೊದಲನೆಯ ಕೂದಲಿಗೆ ಸುತ್ತಿಕೊಂಡಿತು. ಹೊರಗೆ ತೆಗೆಯಲು ಅವು ಮೊದಲಿದ್ದ ಸ್ಥಿತಿಯಲ್ಲಿ ಇದ್ದವು. ಅಲ್ಲಿ ಉಪಸ್ಥಿತರಿದ್ದವರೆಲ್ಲರೂ ಈ ಗಾಢವಾದ ಮತ್ತು ಗೂಢವಾದ ಕಾರ್ಯ ಕಣ್ಣಾರೆ ಕಂಡು ವಿಸ್ಮಯಗೊಂಡರು. ಮತ್ತು ತಮ್ಮ ತಮ್ಮೊಳಗೆ ಚಮತ್ಕಾರದ ಘಟನೆಯ ಬಗ್ಗೆ ಪಿಸಿಗುಟ್ಟುತ್ತಿದ್ದರು. ಈ ಈರ್ವರ ಪ್ರಭಾವವು ಜನಸಮೂಹದ ಮೇಲೆ ಪರಿಣಾಮಕಾರಿಯಾಗಿ ಪರಿಣಮಿಸಿತು. ಮತ್ತು ಇವರ ಬಗ್ಗೆ ಆದರಭಾವ ಅವರಲ್ಲಿ ಮನೆಮಾಡಿಕೊಂಡಿತು.

**ಶ್ರೀ ಬಸವಣ್ಣನವರು:** ಹೇಳಿದಂತೆ "ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ." ವಸ್ತುತಃ ಹೂವುಗಳಿಗೆ ಪನ್ನೀರಿನ ಅವಶ್ಯಕತೆಯೇನು? ಕಸ್ತೂರಿಯು ತನ್ನಿಂದ ತಾನೇ ಸುವಾಸನೆ ಕೊಡುತ್ತದೆ. ಸುಗಂಧದ ವ್ಯಾಪಾರಿ ಹೇಳುವುದು ಬೇಕಾಗಿಲ್ಲ. ಒಟ್ಟಿನ ಮೇಲೆ ಕಾದರಿಯವರ ಲಗ್ನ ಧರ್ಮಶಾಸ್ತ್ರದ ಪ್ರಕಾರ ಯಾವ ವ್ಯತ್ಯಾಸವಿಲ್ಲದೆ ಸುಖರೂಪವಾಗಿ ಕೊನೆಗೊಂಡಿತು. ಹಸ್ಸುಮಿಯ್ಯಾ ಹರ್ಷದಿಂದ ಮನದಲ್ಲಿ ಹಿರಿಹಿರಿ ಹಿಗ್ಗುತ್ತಿದ್ದರು. ನವದಂಪತಿಗಳು ಅಲ್ಲಿಂದ ಹೊರಟು ಕೆಲವು ದಿವಸದ ತರುವಾಯ ಸುರಕ್ಷಿತವಾಗಿ ಬಂಕಾಪುರಕ್ಕೆ ಬಂದುಮುಟ್ಟಿದರು. ಆನಂದ ಸದಾನಂದದ ಆ ಘಳಿಗೆಗಳು ಬಂದೇಬಿಟ್ಟವು.

**ಮಗುವಿನ ಜನನ:** ಸೈಯ್ಯದ ಅಲ್ಲಾವುದ್ದೀನ ಕಾದರಿಯವರ ಪತ್ನಿಯವರು ಗರ್ಭಿಣಿಯಾಗಿ ಒಂಭತ್ತು ತಿಂಗಳ ತುಂಬಿದ ನಂತರ ಗಂಡು ಕೂಸು ಹೆತ್ತರು. ದೇವರು ಈ ಕೂಸಿಗೆ ಚಂದ್ರಕಾಂತಿಯಂತೆ ಸೌಂದರ್ಯವನ್ನು ದಯಪಾಲಿಸಿದ್ದನು. ತಂದೆ ತಾಯಿ ಆನಂದಮಯರಾಗಿ ಬಾಲಕನಿಗೆ "ವಲಿಮುಹಮ್ಮದ ಹಯಾತ" ಎಂದು ನಾಮಕರಣ ಮಾಡಿದರು. ಹೆಸರಿನತಕ್ಕ ಗುಣಗಳಿದ್ದವು. ಇವರು ಹುಟ್ಟಿದ ಐದನೆಯ ದಿವಸ ತಾಯಿಯವರ ಸಂಗಡ ಹೀಗೆ ಮಾತನಾಡಿದರು–ಅಮ್ಮ ನನ್ನ ಸಲುವಾಗಿ ತೊಟ್ಟಿಲವೂ ಮತ್ತು ನಿಮ್ಮ ಉಡಿಯೂ ಬೇಕಾಗಿಲ್ಲ; ಒಂದು ಪ್ರತ್ಯೇಕ ಕೋಣೆಯಲ್ಲಿ ನನಗೆ ಮಲಗಿಸಿಬಿಟ್ಟರಾಯಿತು. ಯಾವಾಗ ನನಗೆ ಹಸಿವು ಆಗುವದೋ ಆವಾಗ್ಗೆ ನಾನು ಧ್ವನಿಮಾಡುತ್ತೇನೆ; ನೀವು ಬಂದು ಮೊಲೆ ಉಣಿಸಿ ಹೋಗಬೇಕು. ಮತ್ತು ಹೋಗುವಾಗ ಕೋಣೆಯ ಬಾಗಿಲ ತಪ್ಪದೆ ಇಕ್ಕಿಕೊಂಡು ಹೋಗಬೇಕು. ಹೀಗೆ

ಬಾಲಕನ ಮಾತುಕೇಳಿ ಮಾತೃಶ್ರೀಯವರಿಗೆ ಬಹಳ ಆಶ್ಚರ್ಯವಾಯಿತು. ತುಟಿಯ ಮೇಲೆ ಬೆರಳನ್ನಿಟ್ಟುಕೊಂಡು ದೇವರೇ! ಇದೇನು ರಹಸ್ಯ ! ನೀನು ಸರ್ವವ್ಯಾಪಿ ಎಲ್ಲವೂ ಬಲ್ಲವನು ಎಂದುಕೊಂಡು ಅಲ್ಲಿಂದ ಬೇಗನೆ ಸ್ವಾಮಿಯವರ ಹತ್ತಿರ ಬಂದು ವಿಸ್ಮಯದಿಂದ ನಡೆದೆಲ್ಲ ಸಮಾಚಾರವನ್ನು ತಿಳಿಸಿದರು. ಅದಕ್ಕೆ ಸ್ವಾಮಿಯವರು ಪ್ರತ್ಯುತ್ತರವಾಗಿ ಹೇಳಿದ್ದೇನೆಂದರೆ ಅವನು ವಲಿ (ಸಂತ) ಇದ್ದಾನೆ. ಅವನ ಆಜ್ಞೆಯನ್ನು ನಾವು ಪಾಲಿಸಬೇಕಾಗುವುದು.

ಸ್ವಾಮಿಯವರು ಕೊನೆಯಲ್ಲಿ ಪನ್ನೀರನ್ನು ಚಿಮುಕಿಸಿ ಮಗುವಿನ ಅಪೇಕ್ಷೆಯಂತೆ ಅಲ್ಲಿ ಮಲಗಿಸಿದರು. ಯಾವಾಗ ಬಾಲಕನು ಧ್ವನಿಮಾಡುತ್ತಿದ್ದನೋ ಆವಾಗ್ಗೆ ತಾಯಿಯವರು ಹೋಗಿ ಮೊಲೆಉಣಿಸಿ ಬರುತ್ತಿದ್ದರು. ಈ ಪ್ರಕಾರ ಏಳು ದಿವಸ ಗತಿಸಿಹೋದವು. ಕಾಲಚಕ್ರ ತಿರುಗಿತು. ಆನಂದದ ದಿನಗಳು ದುಃಖದಲ್ಲಿ ಪರಿವರ್ತನೆಯಾದವು.

ಹತ್ತನೆಯ ದಿವಸ ಬೆಳಗು ಮುಂಜಾನೆ ಸ್ವಾಮಿಯವರು ದೇವತಾ ಪ್ರಾರ್ಥನೆ ಮುಗಿಸಿಕೊಂಡು ಮಂತ್ರಪಠಣ ಮಾಡುತ್ತ ಕೂತಿದ್ದರು. ಇವರ ಪತ್ನಿಯವರು ಎಚ್ಚರವಾಗಿ ಹಾಸಿಗೆಯ ಮೇಲೆ ಮಲಗಿದ್ದರು. ಆಕಸ್ಮಾತ್ತಾಗಿ ಬಾಗಿಲ ತೆರೆಯುವ ಸದ್ದು ಕೇಳಿಸಿತು. ತಾಯಿಯು ಕಕ್ಕಾವಿಕ್ಕಿಯಾಗಿ ಏನೋ ಘಟನೆ ಸಂಭವಿಸಿರಬೇಕೆಂದು ಅತಿವೇಗದಿಂದ ಬಾಗಿಲದ ಕಡೆಗೆ ಧಾವಿಸಿದರು. ಮಗು ಕಾಣಿಸಲಿಲ್ಲ. ತಾಯಿಯ ಮಮತೆ ಜಗತ್ಪ್ರಸಿದ್ಧವಿದೆ. ಕೂಗಾಡಿದರು, ಮತ್ತು ಬಿಕ್ಕಿ ಬಿಕ್ಕಿ ಅಳತೊಡಗಿದರು; ಅಷ್ಟರಲ್ಲಿ ಸ್ವಾಮಿಯವರು ಬಂದು ನೋಡುತ್ತಾರೆ. ಮಗು ಕಾಣಿಸಲಿಲ್ಲ. ಯಾವ ಸ್ಥಳದಲ್ಲಿ ಮಗು ಮಲಗಿತ್ತೊ ಆ ಸ್ಥಳದಲ್ಲಿ ಹೂವಿನ ಗುಂಪೆ ಮಾತ್ರ ಇತ್ತು. ತಾಳ್ಮೆ ಇತ್ತು, ಆದರೂ ಸಹನವಾಗಲಿಲ್ಲ. ತಡವಿಲ್ಲದೆ ಕಣ್ಣುಗಳಲ್ಲಿ ಕಂಬನಿಗಳು ಹೊರಹೊಮ್ಮಿದವು.

ಚುಪ್ ಥೆ ಜಬ್‌ತಕ್‌ಥಿ ಜಬ್ತ್‌ಕಿ ತಾಕತ್
ರೋ ಪಡೆ ದಿಲ ಜೊ ಬಹುತ್ ಭರ ಆಯಾ

**ಅರ್ಥ:** ಸಹನ ಶಕ್ತಿ ಇರುವವರೆಗೆ ಮೌನದಿಂದಿದ್ದರು. ಯಾವಾಗ ಹೃದಯವು ತುಂಬಿ ಬಂತು ಆಗ ಅಳತೊಡಗಿದರು.

ಆ ಕಾಲಕ್ಕೆ ಸ್ವಾಮಿಯವರ ದುಖಿ:ತ ಹೃದಯದಿಂದ ಮನಸ್ಸನ್ನು ತಳಮಳಿಸುವಂತ ಶಬ್ದಗಳು ಹೊರಟವು– "ವಲಿ" (ಸಂತ), ನಿನಗೆ ನಮ್ಮ ಹತ್ತಿರ ಇಷ್ಟ ಇರಲಿಲ್ಲ. ದೇವರು ಮಾಡಿದ್ದಕ್ಕೆ ಉಪಾಯವಿಲ್ಲ. ಸ್ವಾಮಿಯವರಿಗೆ ಈ ಮನಸ್ಸನ್ನು ಸೀಳುವಂತ ಘಟನೆಯ ನೆನಹು ಬಹು ಕಾಲದವರೆಗೆ ಇತ್ತು. ಕಡೆಗೆ ಆ ಹೂವಿನ ಕುಪ್ಪೆಯನ್ನು ಆ ಸ್ಥಳದಲ್ಲಿಯೇ ಕಣ್ಣೀರು ಸುರಿಸುತ್ತ ಹುಗಿದರು. ಈಗಲೂ ಆ ಸ್ಥಳದ ಕುರುಹು ನೋಡಲು ಸಿಗುತ್ತದೆ.

ಒಂದು ದಿವಸ ಸ್ವಾಮಿಯವರು ಏಕಾಂತದಲ್ಲಿ ಮಗುವಿನ ಅಗಲುವಿಕೆಯಿಂದ ಉದಾಸೀನ ರಾಗಿದ್ದು ದೇವರಲ್ಲಿ ಹೀಗೆಂದು ಪ್ರಾರ್ಥಿಸಿದರು– ದೇವರೇ! ನಿನ್ನ ಒಡ್ಡೋಲಗದಲ್ಲಿ ಏನು

ಕಡಿಮೆ ಇದೆ? ನನಗೆ ಸಂತಾನವನ್ನು ದಯಪಾಲಿಸು. ಈ ಪ್ರಾರ್ಥನೆ ಮನ್ನಣೆ ಸಿಕ್ಕಿರಬಹುದು. ಅವರ ಮನ ಇಚ್ಚೆ ಈಡೇರಿತು.

**ಸಂತಾನ:** ಇವರಿಗೆ ನಾಲ್ವರು ಗಂಡುಮಕ್ಕಳು, ಇಬ್ಬರು ಹೆಣ್ಣು ಮಕ್ಕಳು ಹುಟ್ಟಿದರು.

೧ನೆಯ ಮಗುವಿನ ಹೆಸರು ಸೈಯ್ಯದ ವಲಿ ಮಹಮ್ಮದ ಹಯಾತ. ಇವರು ನಿಜವಾಗಿ ಸಂತರಾಗಿದ್ದರು, ಚಿಕ್ಕಂದಿನಲ್ಲಿಯೇ ಶಿವಾಧೀನರಾದರು. ಇವರ ವಿಷಯವಾಗಿ ಹಿಂದೆ ವಿವರಿಸಲಾಗಿದೆ. ೨ ಸೈಯ್ಯದ ಅಬ್ದುರ್‌ರಜಾಕ ಕಾದರಿ. ೩ ಸೈಯ್ಯದ ಅಹ್ಮದ ಕಾದರಿ ೪ ಸೈಯ್ಯದ ಮುಹಮ್ಮದ ಯಾಸೀನ ಕಾದರಿ.

ಪುತ್ರಿಯರಲ್ಲಿ ೧ ಸೈಯ್ಯಿದಾ ವಲಿಮಾಬೀಬಿ. ೨ ಸೈಯ್ಯಿದಾ ಫಾತಿಮಾಬೀಬಿ.

ಸೈಯ್ಯದಾ ವಲಿಮಾಬೀಬಿಯವರ ಲಗ್ನ ಕೀರ್ತಿಪಡೆದ ಸೈಯ್ಯದ ಮನೆತನದ ಮೂಲ ಪುರುಷರಾದ ಸೈಯ್ಯದ ಹಮಜಾ ಹುಸೇನಿ ಬಿಜಾಪುರ ಇವರ ವಂಶದಲ್ಲಿಯ ಸೈಯ್ಯದ ಖಾದರ ಬಾಶ್ಯಾಕಾದರಿ ಇವರ ಸಂಗಡ ಬಂಕಾಪುರ ಗ್ರಾಮದಲ್ಲಿ ಆಯಿತು. ದಂಪತಿಗಳು ಬಂಕಾಪುರದಲ್ಲಿ ಕೆಲವು ದಿವಸ ಸುಖಶಾಂತಿಯಿಂದಿದ್ದು ಬಿಜಾಪುರಕ್ಕೆ ಹೋಗಿ ಅಲ್ಲಿಯೇ ಇರತೊಡಗಿದರು. ಸ್ವಾಮಿಯವರ ಚಿಕ್ಕಸುಪುತ್ರಿಯ ಲಗ್ನ ಆಜನ್ಮ ಆಗಲಿಲ್ಲ. ಇವರ ಸಂಬಂಧವಾಗಿ ದುಃಖದಾಯಕ ಸಂಗತಿಯನ್ನು ಮುಂದೆ ಬರೆಯಲಾಗುವುದು; ಅದರಿಂದ ಸುಖದುಃಖ ಯಾವಾಗಲೂ ಒಂದೇ ಸ್ಥಿತಿಯಲ್ಲಿ ಇರುವುದಿಲ್ಲೆಂದು ವ್ಯಕ್ತವಾಗುತ್ತದೆ. ಒಮ್ಮೆ ಸುಖ ಪ್ರಾಪ್ತವಾದರೆ ಮತ್ತೊಮ್ಮೆ ದುಃಖ ಲಭಿಸುವುದು.

ರಂಜರಾಹತ್ಕಾ ನಹಿ ಎಕ್ಸಾಂ ಕಿಯಾಮ ।
ತಘರ ಕಾ ಪರವಾಜ ಹೈ ಹರ ಸುಬ್ಹೊ ಶಾಮ॥

**ಅರ್ಥ:** ಸುಃಖದುಃಖಗಳು ಯಾವಾಗಲೂ ಒಂದೇ ಸ್ಥಿತಿಯಲ್ಲಿರುವದಿಲ್ಲ. ಏನಾದರೊಂದು ವ್ಯತ್ಯಾಸ ಪ್ರತಿ ಮುಂಜಾನೆ ಸಂಜೆಗೆ ಆಗುತ್ತಿರುವದು

**ಸಮಾಗಮ:** ಸೈಯ್ಯದ ಅಲ್ಲಾವುದ್ದೀನಶ್ಹಾ ಕಾದರಿಯವರು ತಮ್ಮ ವಯಸ್ಸಿನ ಬಹುಭಾಗ ಬಂಕಾಪುರದಲ್ಲಿಯೇ ಕಳೆದರು. ಹಸ್ಸುಮಿಯ್ಯಾ ಕಿಲ್ಲೇದಾರರಂತೂ ಹಗಲೂ ಇರುಳೂ ಸ್ವಾಮಿಯವರ ಸೇವೆಯಲ್ಲಿಯೇ ನಿರತರಾಗಿದ್ದರು. ಒಂದು ದಿವಸ ಸ್ವಾಮಿಯವರು ಮಾತು ಮಾತುಗಳಲ್ಲಿ ಹೀಗೆ ಹೇಳಿದರು. ಹಸ್ಸುಮಿಯ್ಯಾ, ನೀವು ನನ್ನ ಅಂತ್ಯಸೇವೆ ಮಾಡುತ್ತಿರುವಿರಿ. ನನಗೆ ಇಲ್ಲಿಂದ ಕದಲಬೇಕಾಗಿದೆ! ಈ ಶಬ್ದಗಳನ್ನು ಕೇಳಿದೊಡನೆಯೇ ಶಿಷ್ಯರೆಲ್ಲರು ಅತ್ತುಬಿಟ್ಟರು, ಎಚ್ಚರ ತಪ್ಪಿದಂತಾಯಿತು. ಸ್ವಾಮಿಯವರು ಯಥಾಪ್ರಕಾರ ಉಪದೇಶಿಸುತ್ತಿದ್ದರು–ನೋಡಿರಿ! ನನ್ನ ಮರಣದ ನಂತರ ನೀವೆಲ್ಲರೂ ಕೂಡಿ ನನ್ನ ಕಳೆಬರಹವನ್ನು ಮೊಟ್ಟಮೊದಲು ಅಗದಿದ್ದ ಕುಣಿಯಲ್ಲಿಯೇ

ದಫನ ಮಾಡಬೇಕು. ಅದರಲ್ಲಿ ಯಾವ ತರದ್ದು ಹೆಚ್ಚು ಕಡಿಮೆ ಆಗಕೂಡದು. ಹೀಗೆ ಹೇಳಿ ಪ್ರೀತಿಯ ಜೇಷ್ಠ ಪುತ್ರರಾದ ಸೈಯ್ಯದ ಅಬ್ದುಲರಜಾಕ ಖಾದ್ರಿಯವರನ್ನು ಕರೆಯಿಸಿದರು. ಅವರು ಬಂದು ಕೂಡಲೆ ಆಲಿಂಗನಮಾಡಿ ಹೀಗೆಂದರು– ಮಗನೇ, ನನಗೆ ಯುಗಾಂತರದ ಪ್ರವಾಸ ಎದುರಿಸುವ ವೇಳೆ ಸ್ವಲ್ಪ ಉಳಿದಿದೆ, ಪ್ರಾಣ ತಕ್ಕೊಳ್ಳುವ ದೇವದೂತನು ಬರಲಿದ್ದಾನೆ. ಆದ್ದರಿಂದ ಈಗ ನನ್ನ ಹತ್ತಿರ ಇದ್ದ ಅಮಾನತ್ತು ನಿನಗೆ ಒಪ್ಪಿಸುತ್ತೇನೆ ಎಂದು ಹೇಳಿ ಖಿಲಾಫತ್ (ದೀಕ್ಷೆ) ಕೊಟ್ಟರು. ಪರಂಪರಾಗತವಾದ ವಿದ್ಯೆಯನ್ನು ಅವಸಾನದ ವೇಳೆಯವರೆಗೆ ತಿಳಿಸಿಹೇಳಿದರು: ತದನಂತರ ಪ್ರಾಣಪಕ್ಷಿ ಹಾರಿಹೋಗಿ ಸ್ವರ್ಗ ಸೇರಿತು.

ಸ್ವಾಮಿಯವರ ಮರಣದ ತರುವಾಯ ಕೆಲವೇ ದಿವಸಗಳಲ್ಲಿ ಇವರ ಧರ್ಮಪತ್ನಿಯವರು ಇಹಲೋಕವನ್ನು ಬಿಟ್ಟು ಪರಲೋಕ ವಾಸಿಯಾದರು. ತಾಯಿ ತಂದೆ ಈರ್ವರು ತೀರಿಕೊಂಡದ್ದರಿಂದ ಅವರ ಮಕ್ಕಳಿಗೆ ಅತೀವ ದುಃಖವಾಯಿತು.(ವಕ್ತೃ ವಿವರ, ಸೈಯದ ಅಹ್ಮದ ಬಾಷಾ ಸಾಹೇಬ ಖಾದ್ರಿ, ಪೀರಜಾದೆ, ಖಾದ್ರಿ ದರ್ಗಾ ಬಂಕಾಪುರ)

**೬.೧೩. ಚಾಮುಂಡೇಶ್ವರಿ ದೇವಸ್ಥಾನ**

ಕ್ರಿ.ಶ ೧೦೫೫ರ ಶಿಗ್ಗಾಂವಿ ಶಾಸನದಲ್ಲಿ ಬಂಕಾಪುರದ ಕಂದಬೇಶ್ವರ ದೇವರಿಗೆ ಬಿಟ್ಟ ದೇವರಪುರದ ಉದ್ಯಾನದ ಸೀಮೆಯನ್ನು ಸೂಚಿಸುತ್ತಾ 'ವಾಯುವ್ಯಕ್ಕೆ ಚಾಮುಂಡೇಶ್ವರಿ' ಎಂಬ ವಾಕ್ಯವಿದೆ. ಬಂಕಾಪುರದ ವಾಯುವ್ಯ ದಿಕ್ಕಿಗೆ ಇತ್ತಿಚೆಗೆ ಸರಕಾರಿ ಆರೋಗ್ಯ ಕೇಂದ್ರವನ್ನು ಕಟ್ಟಿಸಲು ನೆಲ ಅಗೆಯುತ್ತಿದ್ದಾಗ ಈ ಚಾಮುಂಡೇಶ್ವರಿ ಭೂಗರ್ಭದಿಂದ ಬೆಳಕಿಗೆ ಬಂದಿರುವಳು.

ಸುಮಾರು ಮೂರುಪೂಟು ಎತ್ತರ ಎರಡು ಪೂಟು ಅಗಲದ ಈ ಕರಿಯ ಕಲ್ಲಿನ ಸುಂದರ ಕೆತ್ತನೆಯ ಶಿಲ್ಪ ಮಹಿಷಾಸುರನನ್ನು ಮರ್ದಿಸುವ ಭಂಗಿಯಲ್ಲಿದೆ. ನಿಂತ ನಿಲುವಿನ ಈ ಅಷ್ಟಭುಜಾಕೃತಿ, ಸಾಮ್ಯಮುಕಮಂಡಲ ದುಷ್ಟ ಮಹಿಷನನ್ನು ನಾಶಪಡಿಸಲೇಬೇಕೆಂಬ ಛಲ ಮುಖದ ಮೇಲೆ ಗಟ್ಟಿಗೊಂಡಂತೆ ಭಾಸವಾಗುತ್ತದೆ. ನೋಡುಗರ ಕಣ್ತುಂಬುವ ಭಾವಪೂರ್ಣ ವಿಗ್ರಹವಿದೆ. ಅಷ್ಟವಿಧ ಆಯುಧಧಾರಿ ಚಾಮುಂಡಾಂಬೆ ಎಡಗಾಲಿನಿಂದ ಕೋಣವನ್ನು ತುಳಿದು ಬಲಗಾಲನ್ನು ನೆಲದ ಮೇಲೆ ಊರಿ ನಿಂತಿರುವ ದೃಶ್ಯ ಭವ್ಯವಾಗಿದೆ. ವಿಗ್ರಹದ ರೂಪ, ಶಾಂತಿ, ಹಾವಭಾವ ವಿನ್ಯಾಸಗಳು ಮನಸೆಳೆಯುವಂತಿದೆ. ಶಿಲ್ಪದ ರೂಪ ರಚನೆ ಶೈಲಿಯನ್ನು ಗಮನಿಸಿದರೆ ಕಲ್ಯಾಣಿ ಚಾಲುಕ್ಯರ ಕೊನೆಯ ಕಾಲದ ಶಿಲ್ಪಕಲೆಯನ್ನು ಹೋಲುವಂತಿದೆ.

**೬.೧೪. ವೆಂಕಟೇಶ್ವರ ದೇವಸ್ಥಾನ**

ವೆಂಕಟೇಶ ದೇವಾಲಯದ ವೆಂಕಟೇಶ ಮೂರ್ತಿಯು ಸುಮಾರು ೧.೦ ಮೀ ಎತ್ತರ. ಸಮಭಂಗದಲ್ಲಿಯ ಚತುರ್ಭುಜ ವಿಷ್ಣುವಿನ ಬಲಗೈಯು ವರದ ಮುದ್ರೆಯಲ್ಲಿದೆ. ಎಡಗೈಯನ್ನು ಸೊಂಟದ ಮೇಲಿಟ್ಟಿದ್ದಾನೆ. ಹಿಂದಿನ ಬಲ ಎಡಗೈಗಳಲ್ಲಿ ಕ್ರಮವಾಗಿ ಚಕ್ರ ಮತ್ತು ಶಂಖಗಳಿವೆ.

ಕರಂಡ ಮಕುಟ, ಚಕ್ರ ಕುಂಡಲ, ಅಡ್ಡಿಗೆ, ವಕ್ಷಹಾರ, ವೈಜಯಂತಿ ಮೊದಲಾದ ಆಭರಣಗಳು ಮೂರ್ತಿಯನ್ನಲಂಕರಿಸಿವೆ. ಪಾರ್ಶ್ವಗಳಲ್ಲಿ ಭೂದೇವಿ ಶ್ರೀದೇವಿಯರ ಸಣ್ಣ ಸಣ್ಣ ಉಬ್ಬು ಶಿಲ್ಪಗಳಿವೆ. ಸರಳ ಪ್ರಭಾವಳಿಯ ತುದಿಯಲ್ಲಿ ಸಿಂಹಮುಖ ವಿಷ್ಣುವಿನ ವಾಹನ ಗರುಡನನ್ನು ಮೂಡಿಸಿಲ್ಲದಿರುವುದು ಮತ್ತು ಮುಂದಿನ ಕೈಗಳ ಮುದ್ರೆಗಳು, ಈ ಲಕ್ಷಣಗಳಿಂದ ಈ ಮೂರ್ತಿಯು ವಿಷ್ಣುವಿನ ವೆಂಕಟೇಶ (ಅಥವಾ ವರದರಾಜ)ನ ರೂಪವೆಂದು ಗುರುತಿಸಬಹುದು. ಶಂಖ ಚಕ್ರಗಳ, ಆಭರಣ ಹಾಗೂ ಮೈಮಾಟ ಲಕ್ಷಣದಿಂದ ಈ ಮೂರ್ತಿಯ ಕಾಲಮಾನವು ೧೫ನೆಯ ಶತಮಾನವೆಂದು ನಿರ್ಧರಿಸಬಹುದು.

**೬.೧೫. ಬಂಕಾಪುರದ ಪ್ರಸಿದ್ಧ ಮಠಗಳು**

ಐತಿಹಾಸಿಕವಾಗಿ ಪ್ರಸಿದ್ಧಿಯನ್ನ ಪಡೆದ ಬಂಕಾಪುರ ಹಾವೇರಿ ಜಿಲ್ಲೆಯ ಶಿಗ್ಗಾಂವ ತಾಲೂಕಿನ ಒಂದು ಊರು. ಅಷ್ಟೇ ಅಲ್ಲದೆ ಧಾರ್ಮಿಕವಾಗಿ ಧರ್ಮ ಸಮನ್ವಯತೆಯನ್ನು ಬಂಕಾಪುರ ಉಳಿಸಿಕೊಂಡಿದೆ. ೨೦ನೇ ಶತಮಾನದಲ್ಲಿಯೂ ಅನೇಕ ಮಹಾ–ಮಹಿಮರು ಈ ನಾಡಿನ ಸರ್ವತೋಮುಖ ಬೆಳವಣಿಗೆಗೆ ಶ್ರಮಿಸಿರುವರು. ಜಗತ್ತಿನ ಪುಣ್ಯದ ಸಾಕಾರ ರೂಪ ವೆಂಬಂತೆ ಹುಟ್ಟಿ ಬಂದ ರೇಣುಕ, ಬಸವಾದಿ ಪ್ರಮಥರ ಅಪಾರ ಶಿಷ್ಯ ಬಳಗ ಇಲ್ಲಿದೆ.

ಪಂಚಪೀಠಗಳಲ್ಲಿ ಬಾಳೆಹೊನ್ನೂರ ಪೀಠ ಒಂದು. ಜಗದ್ಗುರು ರೇಣುಕ ಗಂಗಾಧರರು ಈ ಭಾಗಕ್ಕೆ ಒಂದು ದಿವ್ಯ ಶಕ್ತಿ. ಈ ಪೀಠ ಪರಂಪರೆ ಇಲ್ಲಿದೆ. ಅವುಗಳಲ್ಲಿ ಅರಳೇಲೆಹಿರೇಮಠ, ಮುತ್ತಿನಕಂತಿಮಠ, ಹಿರೇಮಠ ಮುಂತಾದ ಮಠಗಳಿವೆ. ಅಷ್ಟೇ ಅಲ್ಲದೇ ಕಾಶೀ ಪೀಠದ ಶಾಖಾಮಠಗಳು, ಶಿರಹಟ್ಟಿ ಫಕ್ಕೀರಸ್ವಾಮಿ ಶಾಖಾ ಮಠಗಳು, ಹಾಲುಮತ ಸಮುದಾಯಕ್ಕೆ ಸಂಬಂಧಿಸಿದ ಕೆಂಡದಮಠ ಈ ಮಠಗಳ ಕೆಲವು ತಪೋಜೀವಿಗಳು ತಮ್ಮ ಭಕ್ತಿ, ಜ್ಞಾನ, ವೈರಾಗ್ಯದ ಬಲದಿಂದ ಈ ನಾಡಿನ ಪುಣ್ಯ ಬೆಳಗಿರುವರು.

**ಅರಳೇಲೆ ಹಿರೇಮಠ:** ಪರಮುಜ್ಯ ಶ್ರೀ ಷ.ಬ್ರ. ಚಿದ್ಘನಲಿಂಗ ಚಕ್ರವರ್ತಿ ರುದ್ರಮುನಿ ಶಿವಾಚಾರ್ಯ ಪಟ್ಟಾಧ್ಯಕ್ಷರು ಇಲ್ಲಿಯ ಕೇಂದ್ರ ಶಕ್ತಿ. ಲಿಂಗಪೂಜಾನಿಷ್ಠರೂ, ಚಾರಿತ್ರ್ಯ ನಿಷ್ಠರೂ, ಅನುಭಾವಿಗಳೂ ಆಗಿ ನೂರಾಐದು ವರ್ಷಗಳ ತುಂಬು ಜೀವನ ನಡೆಸಿದ ಮಹಾಮಹಿಮರಿವರು. ಮಾನವ ಧರ್ಮಕ್ಕೆ ಜಯವನ್ನು ಸಾರಿದ ದಿವ್ಯ ಚೇತನ, ಅವರ ತಪಸ್ಸಿನ ಫಲವೆಂಬಂತೆ ಇಂದು ಇಲ್ಲಿ ಬೆಳೆದುದು ಅಪಾರ ಭಕ್ತ ವರ್ಗ, ಶ್ರೀಗಳು ೧೯೭೪ ರವರೆಗೆ ಜಗತ ಕಲ್ಯಾಣ ಸಾಧನೆಮಾಡಿ ಇಂದು ಜನಮನದಲ್ಲಿ ನೆಲೆಸಿರುವರು. ಈ ಪೀಠಪರಂಪರೆ ಇಂದು ಅನೂಚಾನವಾಗಿ ಮುಂದುವರಿಯುತ್ತಿದೆ. ಅರಳೆಲೆಮಠದ ಆವರಣದಲ್ಲಿ ಪೂಜ್ಯರ ಗದ್ದುಗೆ ಇದ್ದು ಈ ಮಠಕ್ಕೆ ಹೊಂದಿಯೇ ರೇಣುಕ ಮಂದಿರವಿದೆ. ಇತ್ತೀಚಿಗೆ ಗಜಾನನ ದೇವಸ್ಥಾನ ಕೂಡ ನಿರ್ಮಿಸಲಾಗಿದೆ. ಅಲ್ಲದೇ ಮಠದ ಆವರಣದಲ್ಲಿ ವಿಸ್ತಾರವಾದ ಸಭಾಮಂದಿರವಿದ್ದು ಅನೇಕ ಮಂಗಲಕಾರ್ಯಗಳು ಈ ಮೂಲಕ ನಡೆದು ಬರುತ್ತಿವೆ. ಒಟ್ಟಾರೆಯಾಗಿ ವಿಶಾಲವಾದ ಈ ಮಠ ಭಕ್ತಿಯ ತಾಣವೆನಿಸಿದೆ.

ಪ್ರಸ್ತುತ ಮಠದ ಪಠ್ಯಾಧಕ್ಷ್ಯರಾಗಿರುವ ಶ್ರೀ.ಷ.ಬ್ರ,ರೇವಣಸಿದ್ದೇಶ್ವರಶಿವಾಚಾರ್ಯ ಮಹಾಸ್ವಾಮಿಯವರು ಇದ್ದು, ಶ್ರೀಗಳು ಕೃಷಿ ಪರಂಪರೆಯ ಕಾಯಕದಲ್ಲಿ ನಿಷ್ಟರಾಗಿರುದರ ಜೊತೆಗೆ ಮಠದಲ್ಲಿ ಅನೇಕ ಮಂಗಲ ಕಾರ್ಯಗಳನ್ನು ನಡೆಸಿಕೊಂಡು ಬಂದು ಅನೇಕರಿಗೆ ಮಾದರಿ ಯಾಗಿದ್ದಾರೆ.

**ಪವಾಡ ಪುರುಷ ಶ್ರೀ ರುದ್ರಮುನೀಶ:** " 'ಪವಾಡ' ಎಂಬ ಶಬ್ದವನ್ನು ಆಂಗ್ಲ ಭಾಷೆಯ ಮಿರಾಕಲ್ (Miracle) ಶಬ್ದಕ್ಕೆ ಸಂವಾದಿಯಾಗಿ ಬಳಸಾಲುಗತ್ತದೆ. Miracle is generally difined by the etymology of the world us that which causes wounder and astonishment being extrodinary in itself and incpil by normal standard of and sign of Indicating something other than itself".[7] (Encyclopedia Britanica,(Vol-16) ಪವಾಡ ಎಂದರೆ ಅಸಾಮಾನ್ಯ ಘಟನೆ ಅಥವಾ ನಿಸರ್ಗದ ಯಾವುದೇ ನಿಬಂಧನೆಗಳಿಂದ ವಿವರಿಸಲಾಗುವ ಕಾರ್ಯಕಾರಣ ಸಂಬಂಧವಲ್ಲದ ಮತ್ತು ನಿಸರ್ಗದ ನಿಯಮಗಳಿಗೆ ಮೀರಿದ ಅಲೌಖಿಕ ಶಕ್ತಿಯ ಕಾರ್ಯ ಎನ್ನುವ ಅರ್ಥವಾಗಿದೆ.

"ಪವಾಡ 'ಪ್ರಮಾದ' ಎಂಬ ಸಂಸ್ಕೃತದ ವಾದ ಪದಕ್ಕೆ ಪ ಉಪಸರ್ಗ ಸೇರಿ ಶ್ರವಣ ಆಗುತ್ತದೆ. ವಾದ ಎಂದರೆ ಚರ್ಚೆ, ತರ್ಕ ,ಮಾತು ಸಂಭಾಷಣೆ ಎಂಬ ಅರ್ಥ ವಿವರಣೆ ಬರುತ್ತದೆ".[೮] ಪವಾಡ ಎಂಬ ಪದಕ್ಕೆ ನಿರ್ದಿಷ್ಟವಾದ ಒಂದು ಮಿತಿಯೊಳಗೆ ಸೇರಿಸಲು ಕಷ್ಟಸಾಧ್ಯ. ಏಕೆಂದರೆ ಅಲೌಕಿಕತೆಯ ಅದರ ಅಂತರಾಳ. ನಿರ್ಲಿಪ್ತವಾದ ಜೀವನದ ಗುರಿಯನ್ನು ದಾಟಿದ ಪರಕಾಷ್ಠೆಯೇ ಶಿಬಿರದೊಳಗೆ ಪೂಜಿಸುವ ದೀವಿಗೆಯಂತಹ ಅಧ್ಯಾತ್ಮಕತೆಗೆ ಪ್ರತೀಕವಾಗಿದೆ.

**ವೇದಾಂತದ ಪ್ರಕಾರ:** "ಪವಾಡಗಳು ಒಬ್ಬ ಮಹಾಪುರುಷನಿಗೆ ಧಾರ್ಮಿಕ ಮುಂದಾಳುತ್ವವನ್ನು ದೊರಕಿಸಿಕೊಂಡ ಯೋಗ್ಯತಾ ಪತ್ರಗಳಂತೆ ಅಥವಾ ಪ್ರತ್ಯೇಕ ಒಂದು ದೇವರ ಶ್ರೇಷ್ಠವಾದ ಶಕ್ತಿಯ ಪ್ರದರ್ಶನಕ್ಕೆ ದೃಷ್ಟಾಂತವಾಗಿ ಇಲ್ಲಿನ ಒಂದು ನಿರ್ದಿಷ್ಟವಾದ ಧರ್ಮದ ಸತ್ಯದ ಸಾಕ್ಷಿಯನ್ನಾಗಿಸುವ ಸಾಧಕಗಳಾಗಿ ಕಾರ್ಯ ನಿರ್ವಹಿಸುವುದು."[೯]

**ಕೀ.ರಂ. ನಾಗರಾಜ:** "ಕಲ್ಪನೆಯೇ ಉನ್ನತ ಪವಾಡ. ಅದಕ್ಕೆ ದೊಡ್ಡ ರೂಪಗಳ ಶಕ್ತಿಯಾಗಿದೆ. ಭಿನ್ನಮತ ಮತ್ತೊಂದು ಸಹಮತ ನಂಬಿಕೆ ಮತ್ತು ಅಪನಂಬಿಕೆ ಇವುಗಳ ಮಧ್ಯ ಪವಾಡಗಳು ಸರಪಳಿಯ ಕೊಂಡಿಯಂತೆ ಬೇರ್ಪಡಿಸಲು ಸಮಾಜ ಧಾರ್ಮಿಕ ಪಲ್ಲಟಗಳಿಗೆ ಸವಾಲೊಡ್ಡಿ ನಿಲ್ಲುತ್ತದೆ.

ದೊಡ್ಡ-ದೊಡ್ಡ ಶರಣರು ಪವಾಡಗಳನ್ನು ಬರೆದಿದ್ದಾರೆ ಮತ್ತು ಮೆರೆದಿದ್ದಾರೆ. ದೊಡ್ಡವರ ಪವಾಡಗಳನ್ನು ನೋಡಿ ದೊಡ್ಡವರಾಗ ಬಯಸುವ ಸಣ್ಣತನದ ರುದ್ರುಗುರುಗಳು ಇಲ್ಲದಿಲ್ಲ. ದುಡಿದು ದೊಡ್ಡವನು ಮೌಢ್ಯವಾಗುವಂತಹ ದುಡಿದು ಶಕ್ತಿಯನ್ನು ಪಡೆದ ಶಕ್ತಿಯನ್ನು ಹೇಗೆ ಬೇಕೋ

ಹಾಗೆ ಹಾಳು ಮಾಡುವ ಸ್ವಾರ್ಥಕ್ಕಾಗಿ ದುರುಪಯೋಗ ಪಡಿಸುವ ಸ್ವಾಮಿಗಳ ರೂಪದಲ್ಲಿರುವ ಕಾಮಿಗಳು, ಯೋಗಿಗಳ ರೂಪದಲ್ಲಿರುವ ಬೋಗಿಗಳು ಬೇಕಾದಷ್ಟು ಜನ ಕಣ್ಣಿಗೆ ಕಾಣುತ್ತಾರೆ."[೨೦]

ಪವಾಡಗಳು ವರ್ಣನೆಯ ಪುರಾಣಗಳಲ್ಲಿ ಹೇರಳವಾಗಿ ಬರುತ್ತವೆ. ಶ್ರೀಶಂಕರಾಚಾರ್ಯರ ಪರಕಾಯ ಪ್ರವೇಶ ಮಾಡಿದ್ದಾಗಲೀ ಶ್ರೀ ಮದ್ವಾಚಾರ್ಯರು ಹಡುಗು ಮುಳುಗುವಾಗ ತಮ್ಮ ಕಾವಿಯ ಶಾಲೆಯನ್ನು ಜಾಡಿನ ಹಡಗನ್ನು ನಿಲ್ಲಿಸುವರು. ರಾಮದಾಸ ಸ್ವಾಮಿಗಳು ಗಂಡ ಸತ್ತವಳಿಗೆ ಅಷ್ಠ ಪುತ್ರ ಸೌಭಾಗ್ಯವತಿ ಎಂದು ಆಶೀರ್ವಾದ ಮಾಡಿದ್ದಾಗಲೀ, ಜ್ಞಾನ ದೇವರುಕೋಣದಿಂದ ವೇದಗಳನ್ನು ಅಡಗಿಸಿದ್ದಾಗಲೀ, ಏಸು ಕ್ರಿಸ್ತರನು ಸತ್ತವರನ್ನು ಬದುಕಿಸಿದ್ದಾಗಲೀ ಇದರಂತೆಯೇ ಸ್ರಸಿ ಮಧ್ಯಮವೀರ ಪೈಗಂಬರೇ ಮೊದಲಾದ ಮಹಾನುಭಾವರ ಚರಿತ್ರೆಗಳಲ್ಲಿ ನಾವು ಬೇಕಾದಷ್ಟು ಪವಾಡಗಳನ್ನು ಕಾಣಬಹುದು. ಕಬೀರದಾಸರು ಸತ್ತ ಮೇಲೆ ಅವರ ಹೆಣದ ಸಲುವಾಗಿ ಹಿಂದೂಗಳು, ಮುಸಲ್ಮಾನರೂ ಹೀಗೆ ಎಂದೇ ಹೇಳಬೇಕಾದರೆ ಧಾರ್ಮಿಕ ಪರಿಕಲ್ಪನೆ ಯಲ್ಲೂ ಮನುಷ್ಯನ ಸಾಮಾನ್ಯವಾದ ರೂಪದ ಮತ್ತು ಅಸಹಜವಾದ ರೂಪದ ಮತ್ತು ಅಸಹಜವಾದ ಘಟನೆ, ಕ್ರಿಯೆ ಮತ್ತು ಹೇಳಿಕೆಗಳು ಈ ದಾಖಲೆಗಳನ್ನು ಪವಾಡಗಳೆಂದು ಅರ್ಥ. ಈ ಪವಾಡಗಳು ಸಾಮಾನ್ಯವಾಗಿ ಅತೀಂದ್ರೀಯ ಶಕ್ತಿಯನ್ನು ದೈವೀಕತೆಯನ್ನು ಪರಿಪೂರ್ಣ ಗೊಳಿಸುವ ಪ್ರಣಾಳಿಕೆಗಳಾಗಿ ಧಾರ್ಮಿಕ ಚರಿತ್ರೆಯಲ್ಲೂ ಬಳಕೆಗೊಂಡಿವೆ. ಅಂದರೆ ತಾಂತ್ರಿಕ ವಿದ್ಯೆಗಳಿಗೆ ದೈವೀಕತೆಯ ಸ್ಥಾನವನ್ನು ದೊರಕಿಸಿಕೊಡವ ಕೆಲಸವಾಗಿದೆ. ಯಾರು ತನ್ನ ಪ್ರಜ್ಞೆಯನ್ನು ದರ್ಶನಗಳ ಕನಸುಗಳ ಅಥವಾ ಅಭ್ಯಾಸದ ಮೂಲಕ ನಿಯಂತ್ರಣದಲ್ಲಿಟ್ಟುಕೊಂಡಿರುತ್ತಾನೆ. ಅವರು ಪವಾಡ ಪುರುಷರೆನಿಸಿಕೊಳ್ಳುತ್ತಾರೆ.

ಶಿಶುನಾಳ ಷರೀಪ್, ಸಿದ್ಧಾರೂಡರು, ಶಿರಹಟ್ಟಿ ಫಕೀರೇಶ್ವರರು, ಯಡಿಯೂರು ಸಿದ್ದಲಿಂಗ ಸೊನ್ನಲಿಗೆ ಸಿದ್ದರಾಮ, ಮುಳುಗುಂದದ ಬಾಲಲೀಲ ಮಹಾಂತ ಶಿವಯೋಗಿಗಳು ಮುಂತಾದವರು ತಮ್ಮ ಪವಾಡಗಳನ್ನು ತೋರಿದ್ದಾರೆ. ಅಷ್ಟೇ ಅಲ್ಲದೆ ಮಧ್ಯಕಾಲೀನ ಸ್ಥಿತಿಯಲ್ಲಿ ಸೂಫಿಗಳು ಅವಧೂತರು ನೂರೊಂದು ವಿರಕ್ತರು ಆರೂಢರು ಸಿದ್ದರನ್ನು ಪುರುಷರೆಂದು ಕರೆಯಲಾಗಿದೆ.

ಪವಾಡಗಳು ಆಯಾಕಾಲ ಪ್ರದೇಶದ ಸ್ಥಿತಿಗೆ ಗಂಭಿರ ಪರಿಣಾಮ ಬೀರುತ್ತವೆ. ಕೆಲವರು ಪವಾಡಗಳನ್ನು ತಿರಸ್ಕರಿಸಿದರೆ. ಬಹುತೇಕರು ಇವುಗಳ ಬಗ್ಗೆ ಅಪಾರ ನಂಬಿಕೆ ಇರಿಸಿಕೊಂಡಿದ್ದಾರೆ. ಪವಾಡಗಳು ಬದುಕಿನೊಂದಿಗೆ ಹಾಸುಹೊಕ್ಕಾಗಿ ಹಿಂದಿನ ವೈಚಾರಿಕ ಜಗತ್ತಿಗೆ ಸವಾಲೊಡ್ಡುವಂತೆ ಮೈದಳಿದು ನಿಂತಿವೆ. ಒಂದೆಡೆ ಅವಮಾನ ಮತ್ತೊಂದೆಡೆ ಅಭಿಮಾನ ಅಷ್ಟೇ ಅಲ್ಲ ಸ್ವಾಮಿ ವಿವೇಕಾನಂದ ಬಸವಾದಿ ಪ್ರಮಥರ ಧ್ಯೇಯೋದ್ದೇಶಗಳು ಕೂಡ ಈ ಹಿನ್ನೆಲೆಯಲ್ಲಿ ಸೃಷ್ಟಿಯಾಗಿರಬೇಕು. ಏಕೆಂದರೆ ನಿಮಗೆ ನೀವೆ ದಾರಿ ದೀಪಗಳು ನಿಮ್ಮನ್ನು ನೀವೇ ರೂಪಿಸಿಕೊಳ್ಳಿ ಎನ್ನುವಂತಹ ಸಂದೇಶ ಒಡ ಮೂಡಿರಬೇಕು. ಕ್ರಿಸ್ತನದು ಜನಮುಖಿಯಾದ ದೋರಣೆ

ಎಂಬುದು. ಆತನು ತನ್ನ ಶಿಷ್ಯರಿಗೆ ಹೇಳಿದ ಸಂದೇಶದಿಂದ ತಿಳಿಯಬಹುದೇನೆಂದರೆ ನೀವು ಭೂಲೋಕದ ಕಟ್ಟ ಕಡೆಗೆ ಹೋಗಿ ನನ್ನ ನಾಮದಲ್ಲಿ ದೆವ್ವಗಳನ್ನು ಬಿಡಿಸಿರಿ, ರೋಗಗಳನ್ನು ವಾಸಿ ಮಾಡಿರಿ, ಬಂಧನದಲ್ಲಿರುವವರಿಗೆ ಬಿಡುಗಡೆ ಮಾಡಿರಿ, ಕುಷ್ಠರೋಗಗಳನ್ನು ಗುಣಪಡಿಸಿರಿ ಮತ್ತು ಎಲ್ಲಾ ದೇಶಗಳಿಗೆ ಹೋಗಿ ಸಾಕ್ಷಿಗಳಾಗಿರಿ (ಬೈಬಲ್ ಹೊಸ ಒಡಂಬಡಿಕೆ ಮತ್ತಾಯನು ಬರೆದ ಸುವಾರ್ತೆ ಗಮನಿಸಬಹುದು) ಎನ್ನುವ ಚಿಂತನೆಯಿಂದಲೇ ಇಂದು ಪ್ರಪಂಚದ ಮೂಲೆ ಮೂಲೆಗಳಲ್ಲಿ ಕ್ರಿಸ್ತನ ಗಾಳಿ ಬೀಸಿರುವುದನ್ನು ಕಾಣಬಹುದು. ವಿಶ್ವದ ಜನಗಣತಿಯನ್ನು ಪರಿಗಣನೆಗೆ ತೆಗೆದುಕೊಂಡರೆ ಕ್ರೈಸ್ತರು ಅತಿ ಹೆಚ್ಚು ಎಂಬುದು ಗಮನಾರ್ಹವಾಗಿದೆ.

ಪರಸ್ಪರ ಹಲವು ಧರ್ಮಗಳಲ್ಲಿನ ಪವಾಡ ಸದೃಶ್ಯವಾಗಿವೆ. ವೈರುಧ್ಯವಿದ್ದರೂ ದೃಷ್ಟಿಯಲ್ಲಿ ಭಿನ್ನತೆ ಇದ್ದರೂ ಅಂತರದ ಗುರಿ ಸಾಧನೆಗೆ ಇಂಬುಗೊಡುತ್ತದೆ. ಆಚರಣೆಯಲ್ಲಿ ಅಗಾಧ ವ್ಯತ್ಯಾಸ ವಿದ್ದರೂ ಅವರ ಗುರಿಸಾಧನೆಗೆ ಇಂಬುಗೊಳಿಸುತ್ತವೆ. ಕಟ್ಟಕಡೆಯ ಮೂಲ ತಿರುಳು ಒಂದೇ ಆಗಿದ್ದವು. ಅದಕ್ಕಾಗಿಯೇ ದೈವಕ್ಕೆ ಸಿಗುವಷ್ಟು ಮನ್ನಣೆ ಯಾವುದಕ್ಕೂ ಆಶ್ಚರ್ಯವನ್ನುಂಟು ಮಾಡುವ ಲೋಕ ವಿಲಕ್ಷಣವಾದ ಅದ್ಭುತ ಘಟನೆ ಅಥವಾ ಸಂಗತಿ ಕಾರ್ಯ ಕಾರಣವಿಲ್ಲದೆ ನಿಸರ್ಗನಿಯಮದ ವಿರುದ್ಧ ಘಟಿಸುವ ಇಂಥ ಘಟನೆ ಅಥವಾ ಸಂಗತಿಗಳನ್ನು ಮಾನವೀಯ ಶಕ್ತಿಯಿಂದ ಎಸಗುವುದು ಅಸಾಧ್ಯ. ಈ ರೀತಿ ಮಾನವೀಯ ಶಕ್ತಿಗೆ ಅಸಾಧ್ಯವೆನಿಸಿದ ಕಾರ್ಯ ಇಲ್ಲವೇ ಸಂಗತಿಗಳನ್ನು ದೇವರ ಪ್ರೀತಿಗೆ ವಿಶೇಷವಾಗಿ ಪಾತ್ರನಾದವನು ಮಾತ್ರ ದೈವೀಶಕ್ತಿಯ ಬಲದಿಂದ ಎಸಗಬಲ್ಲ. ಪವಾಡಗಳು ದೇವರ ಪ್ರತಿರೂಪವೆನಿಸಿದ ವ್ಯಕ್ತಿಯಿಂದ ಪ್ರದರ್ಶನವಾಗು ವಂತವು ಎಂದಾಯಿತು.

ವಿಶ್ವದ ಪ್ರಮುಖ ಧರ್ಮಗಳು ವಿಭಿನ್ನವಾದ ನೆಲೆಯಲ್ಲಿ ಪವಾಡಗಳನ್ನು ಅರ್ಥೈಸಿವೆ, ಯೇಸು ಕ್ರಿಸ್ತನನ್ನು ಕುರಿತು ಪವಾಡಗಳನ್ನು ಅರ್ಥೈಸಲಾಗಿದೆ. ಯೇಸು ಕ್ರಿಸ್ತನನ್ನು ಕುರಿತು ಪವಾಡಗಳು ಜನರಿಗೆ ಹತ್ತಿರವಾದ ತತ್ವವನ್ನು ಪ್ರತಿಬಿಂಬಿಸಲಾಗಿದೆ. ಬುದ್ದನು ತದ್ವಿರುದ್ದ ಎಂಬಂತೆ ಓ ಭಿಕ್ಕುಗಳೇ। ನೀವು ಜ್ಞಾನದ ಪ್ರತಿಭೆಯನ್ನು ಹೊಂದುವುದಕ್ಕೆ ಮೊದಲು ಅತಿಮಾನುಷ ಶಕ್ತಿಯ ಪ್ರದರ್ಶನಕ್ಕೆ ತೊಡಗಬೇಡಿ. ಯಾರು ಅದನ್ನು ಮಾಡುತ್ತಾರೆ ಅವರು ದುಷ್ಟತೆಯ ಬಗ್ಗೆ ಅಳುಕುಳ್ಳವರಾಗಿರುತ್ತಾರೆ. ಪವಾಡಗಳನ್ನು ಆಧರಿಸಿ ಜೀವನ ರೂಪಿಸಬೇಡಿ. ಎಂದಿಗೂ ಇರುವ ಸನಾತನ ನಿಯಮದ ಮೇಲೆ ನೀವು ನಿಮ್ಮ ಬಾಳನ್ನು ರೂಪಿಸಿಕೊಳ್ಳಿ ಎಂಬುದು ಆತನ ಧೋರಣೆಯಾಗಿತ್ತು. ಯಾವುದೇ ಒಂದು ಅದೃಷ್ಟವಾಗಲಿ ಕೂತುಕೊಳ್ಳುವುದು ಪ್ರಯತ್ನ ಶೀಲರಾಗಿ ಎಂಬುದು ಅಂಬೇಡ್ಕರವಾದ.

ಮಾನವನು ಬದುಕಿನುದ್ದಕ್ಕೂ ಅನುಭವಿಸುವ ಅನಿಶ್ಚಿತ ಸಂಕಷ್ಟಗಳಿಂದ ಬಿಡುಗಡೆ ಹೊಂದಲು ತನಗಿಂತ ಅಗಮ್ಯ ಶಕ್ತಿಯೊಂದಕ್ಕೆ ಮೊರೆಹೊಗುತ್ತಾನೆ. ಈ ಅಗಮ್ಯ ಶಕ್ತಿಯೇ ಧರ್ಮ, "ಪ್ರಾಚೀನರು

ಧಾರಣಾತ್ ಧರ್ಮ ಇತ್ಯಾಪು" ಎಂದರು. ಅಂದರೆ ಧರ್ಮವು ಮನುಷ್ಯನನ್ನು ಧರಿಸುತ್ತದೆ ಎನ್ನುವರು. ಧರ್ಮವು ಮನುಷ್ಯನ ಜೊತೆ-ಜೊತೆಗೆ ಹುಟ್ಟಿ ಬೆಳೆದು ನಿಂತಿದ್ದು, ಅದು ಅವನ ಅಂತರಂಗದ ನಿಧಿಯಂತಿರುವುದು.

ಪ್ರಪಂಚದಲ್ಲಿ ಯಾವುದೇ ಮನುಷ್ಯನು ಧರ್ಮವನ್ನು ತ್ಯಜಿಸಿ ಬಾಳಲಾರ. ಧರ್ಮವು ಸದಾ ಲೋಕಕಲ್ಯಾಣವನ್ನೇ ಬಯಸುವಂತದ್ದು. ಮಾನವನನ್ನು ಪಾರಮಾರ್ಥಿಕ ಕಡೆಗೆ ಕೈ ಹಿಡಿದು ಮುನ್ನಡೆಸುತ್ತದೆ. ಜೀವನದ ಬಗೆಗೆ ಗೌರವ ಆದರಗಳನ್ನು ಹುಟ್ಟಿಸಿ, ಅವನ ಹೋರಾಟಕ್ಕೆ ಸಾರ್ಥಕತೆಯನ್ನು ನೀಡುತ್ತದೆ. ಆತನ ಬದುಕಿನಲ್ಲಿ ಶ್ರದ್ಧೆಯನ್ನು ಒಡಮೂಡಿಸುವುದು. ಇಂತಹ ಧರ್ಮಮಾರ್ಗದಲ್ಲಿ ನಡೆದು ಸಾದು ಸಂತರು, ಅಂತರ್ಮುಖಿಗಳೂ, ಚೈತನ್ಯ ಮೂರ್ತಿಗಳೂ ಆಗಿದ್ದು, ಗೌರವ ಆದರಗಳಿಗೆ ಒಳಪಡುವರು. ಅಂತಹ ಸಾಧು, ಸತ್ಪುರುಷರು, ಸಂತರು, ಶರಣರು, ಭಾರತದಂತೆಯೇ ಕರ್ನಾಟಕದಲ್ಲಿಯೂ ಅಸಂಖ್ಯಾತರಿದ್ದಾರೆ. ಅವರ ಬದುಕು ನಡೆ- ನುಡಿಗಳು ಮಾನವನಿಗೆ ದಾರಿದೀಪವಾಗಿದೆ."

ಭಾರತವು ಅನಾದಿ ಕಾಲದಿಂದಲೂ ಆಧ್ಯಾತ್ಮಿಕ ತತ್ವಗಳಿಗೆ ಪ್ರಾಮುಖ್ಯ ನೀಡಿದೆ. ಆದ್ದರಿಂದ ಅದು ಉತ್ಕೃಷ್ಟ ಸಂಸ್ಕೃತಿಯನ್ನು ಬೆಳೆಸಿಕೊಂಡು ಬಂದಿದೆ. ಧಾರ್ಮಿಕ ತೊಟ್ಟಿಲೆನಿಸಿದ ಕರ್ನಾಟಕವು ಅನೇಕ ಧರ್ಮಗಳಿಗೆ ದಾರಿ ತೋರಿದ ಆಧ್ಯಾತ್ಮಿಕ ರಂಗಭೂಮಿ ಎನಿಸಿದೆ. ಈ ರಂಗಭೂಮಿಯಲ್ಲಿ ಸಂತರು. ಸತ್ಪುರುಷರು ಶಿವಶರಣರು, ಶರಣೆಯರು ಆಗಿ ಹೋಗಿರುವರು. ಅಂಥವರಲ್ಲಿ ಭಕ್ತಿ ಭಂಡಾರಿ ಬಸವಣ್ಣ, ಶೂನ್ಯ ಸಿಂಹಾಸನಾಧಿಪತಿ ಅಲ್ಲಮ, ಮಹಾಜ್ಞಾನಿ ಚೆನ್ನಬಸವಣ್ಣ, ಅಕ್ಕಮಹಾ ದೇವಿ, ಪುರಂದರದಾಸರು, ಕನಕದಾಸರಂತಹ ಮಹಾನ್ ದೈವಿಪುರುಷರನ್ನು ಪಡೆದ ಪುಣ್ಯಭೂಮಿ ನಮ್ಮದು. ಇವರೆಲ್ಲರೂ ಧರ್ಮಮಾರ್ಗದಲ್ಲಿ ನಡೆದು. ಸಮಸ್ತ ಕುಲಕೋಟಿಯನ್ನು ಭಕ್ತಿ ಮಾರ್ಗದಲ್ಲಿ ನಡೆಸಿದರು. ಅವರು ಮಾನವ ಕೋಟಿಗೆ ಆಧ್ಯಾತ್ಮಿಕ ಅಮೃತವನ್ನುಣ್ಣಿಸಿದರು. ಈ ಅನುಭವಿಗಳು ಪರಮಾತ್ಮನಲ್ಲಿ ಅನನ್ಯ ಪ್ರೇಮದ ಬಗ್ಗೆ ಸೇವಾಕಾರ್ಯಗಳ ಬಗ್ಗೆ ಮನುಕುಲದ ಐಕ್ಯತೆಯ ಬಗ್ಗೆ ಬೋಧಿಸಿ ಭಾರತೀಯರ ಜೀವನದಲ್ಲಿ ಸಂಜೀವಿನಿ ಶಕ್ತಿಯನ್ನು ಪ್ರವಹಿಸಿ, ಅಧ್ಯಾತ್ಮಿಕತೆಗೆ ಭದ್ರವಾದ ತಳಹದಿಯನ್ನೊದಗಿಸಿದರು.

ಎಲ್ಲಾ ಧರ್ಮಗಳ ಮೂಲ ಉದ್ದೇಶ. 'ಸರ್ವೆ ಜನಾಃ ಸಖಿ ನೋ ಭವಂತು' ಎಂಬುದಾಗಿದೆ. ಅಂದರೆ ಭೂಮಿಯ ಮೇಲೆ ಎಲ್ಲಾ ಜೀವಿಗಳ ಒಳಿತನ್ನು ಹಾರೈಸುವುದಾಗಿರುತ್ತದೆ. ಪ್ರತಿಯೊಂದು ಧರ್ಮ ಸಂಸ್ಥಾಪಕರೂ ತಮ್ಮದೇ ಆದ ತತ್ವ ಆಚರಣೆಗಳ ಮೂಲಕ ಸಮುದಾಯದ ಒಳಿತಿಗಾಗಿ ಪ್ರಯತ್ನಿಸಿರುವುದನ್ನು ಇತಿಹಾಸದುದ್ದಕ್ಕೂ ಕಾಣುತ್ತಾ ಬಂದಿದ್ದೇವೆ, ಭಾರತ ಅನೇಕ ಧರ್ಮಗಳಿಗೆ ಜನ್ಮವಿತ್ತ ದೇಶ. ಅಷ್ಟೇ ಅಲ್ಲ ಜಗತ್ತಿನ ಹಲವು ಧರ್ಮಗಳಿಗೆ ಅದು ಆಶ್ರಯವಿತ್ತಿದೆ. ಪ್ರಾಚೀನ ಪರಂಪರೆಯುಳ್ಳ ಭರತ ಖಂಡವು ಕಾಲ ಕಾಲಕ್ಕೆ ಅನೇಕ ಏರಿಳಿತಗಳನ್ನು ಕಂಡಿದ್ದರು

ಅದು ಭವ್ಯವು ಸಂಪದ್ಭರಿತವೂ ಆಗಿ ರೂಪಾಂತರಗೊಂಡಿದೆ. ನಮ್ಮ ದೇಶವು ಹಲವು ಧರ್ಮಗಳ ನೆಲೆಬೀಡಾಗಿದೆ. ಇಲ್ಲಿರುವಷ್ಟು ಧರ್ಮಗಳು ಮತ್ತು ಧಾರ್ಮಿಕ ಪ್ರಪಂಚ ಬೇರ್‍ಯಾವ ರಾಷ್ಟ್ರದಲ್ಲಿಯೂ ಕಂಡುಬರುವುದಿಲ್ಲಾ. ಆದರೆ ಅನೇಕತೆಯಲ್ಲಿ ಏಕತೆಯನ್ನು ಮೈಗೂಡಿಸಿಕೊಂಡು ಸಮಷ್ಠಿ ಸಂಸ್ಕೃತಿಯಾಗಿ ಹೊರಹೊಮ್ಮಿದ್ದರಿಂದ ಜಗತ್ತಿನ ಸಂಸ್ಕೃತಿಗಳೆಲ್ಲಾ ಇಲ್ಲಿವೆ. ಭಾರತೀಯ ಸಂಸ್ಕೃತಿಗೆ ಶ್ರೇಷ್ಠ ಸ್ಥಾನಮಾನವಿದೆ. ಇಷ್ಟೊಂದು ಬಗೆಯ ವೈವಿಧ್ಯಪೂರ್ಣವಾದ ಭಾರತದ ಚರಿತ್ರೆಯನ್ನು ವಸ್ತುನಿಷ್ಠವಾಗಿ ಕಟ್ಟಿಕೊಡುವ ಕಾರ್ಯಸರ್ಮಕವಾಗಿ ನಡೆಯಬೇಕಾದುದರ ಅವಶ್ಯಕತೆ ಕಂಡುಬರುತ್ತದೆ.

"ಭಾರತ ಪರ್ಯಾಯ ದ್ವೀಪದ ಹೃದಯಭಾಗದಲ್ಲಿರುವ ದಕ್ಷಿಣ ಭಾರತವು ಐತಿಹಾಸಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಹಾಗೂ ಕಲಾಪರಂಪರೆಯಲ್ಲಿ ಅನನ್ಯವಾದ ಸ್ಥಾನಮಾನಗಳನ್ನು ಉಳಿಸಿಕೊಂಡು ಬಂದಿದೆ. ಅಲ್ಲದೆ ಅದು ತನ್ನದೇ ಆದ ಪುಣ್ಯ ಧಾರ್ಮಿಕ ಕ್ಷೇತ್ರಗಳನ್ನು, ಅಂಶಗಳನ್ನು ಹೊಂದಿದೆ. ಭಾರತದ ಚೌಕಟ್ಟಿನಲ್ಲಿ ಸುಂದರವಾಗಿ ಅರಳಿರುವ ಸಾಂಸ್ಕೃತಿಕ ಕುಸುಮಗಳಲ್ಲಿ ಕರ್ನಾಟಕದ ಸ್ಥಾನ ಹಿರಿದಾದುದು ಮತ್ತು ವಿಶಿಷ್ಟವಾದುದು. ಅದು ಸರ್ವಧರ್ಮಗಳ ತೊಟ್ಟಿಲು ಎಂದು ಹೆಸರು ಪಡೆದಿದ್ದಲ್ಲದೇ ವಿಫುಲವಾದ ನೈಸರ್ಗಿಕ ಸಂಪನ್ಮೂಲಗಳನ್ನು, ಧಾರ್ಮಿಕ ಪುಣ್ಯ ತಾಣಗಳನ್ನು ಒಳಗೊಂಡಿದೆ. ಒಟ್ಟಿನಲ್ಲಿ ಕರ್ನಾಟಕ ಸಂಸ್ಕೃತಿಯ ಸಾರ-ಸರ್ವಸ್ವವನ್ನು ಸಂಗ್ರಹಿಸಿ ಹೇಳುವುದಾದರೆ ಅದು ಇಹ-ಪರಗಳಲ್ಲಿ ಭಕ್ತಿ-ಜ್ಞಾನ-ಕರ್ಮಗಳಲ್ಲಿ ವ್ಯಕ್ತಿ-ಸಮಾಜಗಳಲ್ಲಿ, ಒಳಿತು-ಕೆಡುಕುಗಳಲ್ಲಿ, ಹಳತು-ಹೊಸತರಲ್ಲಿ ಒಳಗೂ ಹಾಗೂ ಹೊರಗಿನವು ಗಳಲ್ಲಿ ಸಮನ್ವಯತೆಯನ್ನು ಸಾಧಿಸಿರುವುದೊಂದು ಅದರ ವೈಶಿಷ್ಟ್ಯವಾಗಿದೆ.

ಆಧ್ಯಾತ್ಮಿಕ ಜೀವನವೇ ಭಾರತದ ಸಹಜ ಪ್ರವೃತ್ತಿ. ಈ ದೇಶದ ಪ್ರತಿಯೊಂದು ಭಾಗದಲ್ಲಿಯೂ ಪ್ರತಿ ತಲೆಮಾರಿನಲ್ಲಿಯೂ ಅತ್ಯುತ್ತಮರಾದ ಅಧ್ಯಾತ್ಮ ಯೋಗಿಗಳು ಇದ್ದರೆಂಬುದು ಚರಿತ್ರೆಯಿಂದ ತಿಳಿದುಬರುತ್ತದೆ. ಇವರು ಜನತೆಯ ಅಜ್ಞಾನ, ಅಂಧಕಾರವನ್ನು ಕಳೆದು ಜ್ಞಾನದ ಬೆಳಕನ್ನು ಬೆಳಗಿದ ಭವರೋಗ ವೈದ್ಯರಾಗಿದ್ದಾರೆ. ಸಮಾಜದ ಎಲ್ಲಾ ವರ್ಗದವರನ್ನು ಸಮಾನವಾಗಿ ನೋಡಿ ಕಾಪಾಡಿ ಲೋಕೋಪಕಾರಕ್ಕಾಗಿ ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿದ್ದಾರೆ, ಬದುಕಿನ ಸಂಘರ್ಷದಿಂದ ದೂರವಾಗಿದ್ದ ಇವರು ಆಧ್ಯಾತ್ಮಿಕ ಶಕ್ತಿಯನ್ನು ತಮ್ಮ ಸಾಧನೆಯ ಸಿದ್ಧಿಯಿಂದ ಪಡೆದುಕೊಂಡಿರುತ್ತಾರೆ. ಅಧಿಕಾರ, ಅಹಂಕಾರ, ಐಶ್ವರ್ಯ, ವೈಭವ, ಸಂಸಾರ, ಮೋಹ ಇವೆಲ್ಲವುಗಳನ್ನು ತ್ಯಜಿಸಿ, ವೈರಾಗ್ಯ ತಾಳಿ, ಲೌಕಿಕ ಬಂಧನದಿಂದ ಸಂಪೂರ್ಣ ಬಿಡುಗಡೆ ಹೊಂದಿರುತ್ತಾರೆ. ಏಕಾಂಗಿಯಾಗಿ ಊರೂರು ಅಲೆದಾಡುವುದು ಇವರ ವಿಶೇಷ ಗುಣವಾಗಿರುತ್ತದೆ. ಇವರು ಬೆಟ್ಟ- ಗುಡ್ಡ ಗುಹೆಗಳಲ್ಲಿ ಯೋಗ ಸಾಧನೆ ಮಾಡಿ, ಅವ್ಯಕ್ತ ಶಕ್ತಿಯನ್ನು ಪಡೆದಿರುತ್ತಾರೆ. ಮುಂದೆ ಮೋಕ್ಷ ಕಾಣಲು ಗುರುಗಳನ್ನು ಹುಡುಕುತ್ತಾ, ಗುರು ದೊರೆತ ಮೇಲೆ ಗುರುಕೃಪೆ ಮತ್ತು ಗುರೂಪದೇಶ ಪಡೆದು ಜೀವನ್ಮುಕ್ತ ಸ್ಥಿತಿಯನ್ನು ಪಡೆದಿರುತ್ತಾರೆ. ಆಗ ಜ್ಞಾನ ಸನ್ಯಾಸಿಗಳಾಗಿ,

ವಿಭೂತಿಪುರುಷರಾಗಿ, ಅನೇಕ ಅದ್ಭುತ ಅತ್ಯಾಶ್ಚರ್ಯ ಭರಿತವಾದ ಊಹಾತೀತವಾದ ಪವಾಡಗಳನ್ನು ಸಹಜವಾಗಿಯೇ ತೋರಿದ್ದಾರೆ. ಇಂಥವರನ್ನು ಜೀವನ್ಮುಕ್ತ ಪರಬ್ರಹ್ಮ, ಪರಮಹಂಸ, ಪರಮರೂಢ, ಸಂತ, ಸೂಫೀ, ಅವಧೂತರೆಂದೂ ಕರೆಯಲಾಗಿದೆ.

ಇಂತಹ ಸಂತರು ಅವಧೂತರು, ಸೂಫಿಗಳು, ಸಮುದಾಯ, ಮತ ಪಂಥಗಳೆನ್ನದೆ ಭಕ್ತಿಪೂರ್ವಕ ಗೌರವ ಮನ್ನಣೆ ಪಡೆದು ಸಮಾಜಕ್ಕೆ ಕೋಮು ಸೌಹಾರ್ದತೆಯನ್ನು, ಭಾವೈಕ್ಯತೆ ಯನ್ನು ಸಾರಿದ್ದಾರೆ. ತಮ್ಮನ್ನು ನಂಬಿದ್ದ ಭಕ್ತರ ವೈಯಕ್ತಿಕ ಹಾಗೂ ಸಮುದಾಯಿಕ ಜೀವನದಲ್ಲಿ ಎದುರಾಗುವ ಕಷ್ಟ-ನಷ್ಟಗಳಿಗೆ ಸಮಸ್ಯೆಗಳಿಗೆ ಪರಿಹಾರ ನೀಡುತ್ತಾರೆ.

ಸೂಫಿ ಸಂತರು, ಆರೂಢರು, ಅವಧೂತರು, ಸಿದ್ದರು, ತತ್ವಪದಕಾರರು, ಧರ್ಮವನ್ನು ಸಮುದಾಯ, ಮತ್ತು ಲಿಂಗಾತೀತವಾಗಿ ನೋಡಿದರು. ಖಾಜಾ ಅಂಇನಾಹೀನ್, ಶಿರಹಟ್ಟಿ ಫಕಿರೇಶ, ತಿಂತಣಿಮೋನಪ್ಪ, ಕಡಕೋಳ ಮಡಿವಾಳಪ್ಪ, ಶಿಶುನಾಳ ಶರೀಫ್, ಶಿಲವೇರಿ ಶಿವಪ್ಪ, ಕೈವಾರ ತಾತಯ್ಯ, ಹುಬ್ಬಳ್ಳಿಯ ಸಿದ್ಧಾರೂಢರು, ನವಲುಗುಂದದ ನಾಗಲಿಂಗ, ಗಂಗರ ಮಡಿವಾಳಪ್ಪ ಮೊದಲಾದವರು ಎಲ್ಲ ಜಾತಿಯ ಮರಗಳನ್ನು ಹೊಟ್ಟೆಯಲ್ಲಿಟ್ಟುಕೊಂಡು ಒಂದು ಕಾಡು ಇದ್ದಂತೆ. ಒಟ್ಟಾರೆ ಶರಣರಿಗೂ ಸೂಫಿಗಳಿಗೂ ಅವಧೂತರಿಗೂ ಹರಿದಾಸರಿಗೂ ಸಮಾನ ಅಂಶವಿರುವುದು. ಸಾಂಸ್ಥಿಕ ಧರ್ಮಗಳನ್ನು ವಿರೋಧಿಸುವ ವಿಷಯದಲ್ಲಿ, ಇವರೆಲ್ಲಾ ಸಮುದಾಯ, ಮತ, ಲಿಂಗಭೇದಗಳನ್ನು ಮುಖ್ಯವಾಗಿಸದೆ ಪ್ರಾಮಾಣಿಕ ಭಕ್ತಿ ಸಾಧನೆಯನ್ನು ಮೆರೆದವರಾಗಿದ್ದಾರೆ. ಮೌಖಿಕ ಪಂಥಗಳ ಅವಧೂತರು, ಆರೂಡರು, ಸಿದ್ದರು, ನಾಥರು ಎಂದು ಕರೆಸಿಕೊಳ್ಳುವ ಸಂತರು ಅನುಭಾವಿಗಳು.

೧೭-೧೮ನೇ ಶತಮಾನದಲ್ಲಿ ತಮ್ಮ ಅನುಭಾವಿಕ ವ್ಯಕ್ತಿತ್ವದಿಂದಲೇ ಜನ-ಸಾಮಾನ್ಯರನ್ನು ಆಕರ್ಷಿಸಿದರು. ಸಮಾಜದಲ್ಲಿ ತುಂಬಿದ್ದ ಅರಾಜಕತೆಯನ್ನು ಕಡಿಮೆ ಮಾಡಲು ಇವರು ಪರೋಕ್ಷವಾಗಿ ಕಾರಣರಾದರು. ಹಾಗೆ ನೋಡಿದರೆ ಈ ಸಂತ ಪರಂಪರೆಯನ್ನು ವ್ಯಕ್ತಿಗತವಾಗಿ ದೇವರನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂದು ನಂಬದ್ದರು. ಅಂಥ ಅನುಭವಕ್ಕಾಗಿ ತನ್ಮಯತೆಯನ್ನು ಪಡೆಯಲು ಲೌಕಿಕದ ಕಟ್ಟುಪಾಡುಗಳನ್ನು ಬದಿಗೊತ್ತಿ, ತಮ್ಮ ಒಳ ದನಿಗೆ ಮಾತ್ರ ಓಗೊಡುವ ಸ್ಥಿತಿಗೆ ಬದ್ಧರಾದರು. ತಾವು ಸಾಧನೆಯಿಂದ ರಕ್ಷಿಸಿಕೊಳ್ಳಲು ಅನುಭಾವಿಕ ಶಕ್ತಿಗೆ ಶರಣಾಗಿ ಅದರ ಜೊತೆ ಮೌನಸಂಧಾನವನ್ನು ನಿರಂತರವಾಗಿ ನಡೆಸಿ, ಅನುಭವದ ಆತ್ಯಂತಿಕ ಗತಿಗೆ ಯತ್ನಿಸಿದರು. ತಮ್ಮ ಸಾಧನೆಗೆ ಆರಂಭದಲ್ಲಿ, ಗುರುವಿಗೆ ನೆರವನ್ನು ಉತ್ಕಟವಾಗಿ ಬಯಸಿದರು. ವ್ಯಕ್ತಿಗತವಾಗಿ ತಮ್ಮ ಆತ್ಮೋನ್ನತಿಗಾಗಿ ಧ್ಯಾನಯೋಗದಲ್ಲಿ ನಿರತರಾಗಿ ಲೌಕಿಕದ ವ್ಯಾಮೋಹವನ್ನು ಕಳೆದುಕೊಂಡು ಯೋಗಿಗಳಾದರು. ಇಂಥ ಯೋಗಿಗಳು ಯಾವುದೇ ಧರ್ಮವನ್ನು ಪ್ರತಿಪಾದಿಸಿದ ವರಲ್ಲ. ಅವರು ಪ್ರಚಾರ ಯಾವುದೇ ಸಮುದಾಯದಲ್ಲಿ ಹುಟ್ಟಿರಬಹುದು. ಆ ಸಮುದಾಯ

ಧರ್ಮವನ್ನು ಅವರು ಪ್ರಚಾರ ಮಾಡುವ ಯಾವುದೇ ಕೆಲಸಕ್ಕೆ ಕೈ ಹಾಕಿದವರಲ್ಲ. ಅಧಿಕಾರ, ಸಂಪತ್ತು ಹಾಗೂ ಭೋಗಸುಖವನ್ನು ಖಂಡಿಸಿದವರು.

೧೭ನೇ ಶತಮಾನ ಹಲವು ಬಗೆಯ ಸಂಕೀರ್ಣಗಳ ಆಗರ. ಕನ್ನಡದ ನೆಲದಲ್ಲಿ ಹಲವು ಬಗೆಯ ಚಿಂತನೆಗಳು ನಡೆಯುತ್ತಿದ್ದ ಕಾಲ. ಸೂಫಿಗಳ, ದಾಸರು, ತತ್ವಪದಕಾರರು, ಜಾನಪದಕಾರರು, ಅವಧೂತರು, ಸಿದ್ಧರು, ಇಂಥವರೆಲ್ಲ ಒಂದೇ ಕಾಲದಲ್ಲಿ ಇದ್ದುದನ್ನು ನೆನಪಿಸಿಕೊಳ್ಳಬೇಕು. ಇದು ಆ ಕಾಲದ ಸಂದರ್ಭ. ಈ ಸಂದರ್ಭವು ಪರಸ್ಪರ ಕೊಳು ಕೊಡುಗೆಗಳ ಮೂಲಕ ತಾನು ಮೈವೆತ್ತುಕೊಳ್ಳುತ್ತಿದ್ದುದನ್ನು ಗಮನಿಸಬೇಕಾದರೆ, ಇಲ್ಲಿ ಯಾವೊಂದು ಮತದ ಗೆಲುವು ಸೋಲುಗಳಲ್ಲ, ಅವೆಲ್ಲವು ಸಾಮರಸ್ಯದ ಕೊಂಡಿಗೆ ಬೆಸೆದುಕೊಂಡ ಸಂದರ್ಭ.

೧೮-೧೯ನೇ ಶತಮಾನದ ಕಾಲವನ್ನು ಅವಲೋಕಿಸಿದರೆ. ಭಾರತದ ಸ್ವಾತಂತ್ರ್ಯ ಸಂಗ್ರಾಮದ ಕಾಲಘಟ್ಟದ ಯದ್ಧದ ಭೀತಿ, ಬರಗಾಲ, ಕಗ್ಗತ್ತಲು, ಕಾರ್ಮೋಡ ತುಂಬಿದ ಸಂದರ್ಭ ಪರಕೀಯರ ಆಕ್ರಮಣದಿಂದ ಸಾಮಾಜಿಕ ಮತ್ತು ಧಾರ್ಮಿಕ ಜೀವನ ತತ್ತರಿಸಿತ್ತು. ಬ್ರಿಟಿಷ್ ಮಿಶನರಿಗಳು ಹಿಂದೂ ಧರ್ಮವನ್ನು ಮನಸಾರೆ ತೆಗಳಿ, ಜನರನ್ನು ಆ ಧರ್ಮದಿಂದ ವಿಮುಖರನ್ನಾಗಿ ಮಾಡಬಯಸಿದವರು. ಆದರೆ ಜನರಲ್ಲಿ ಪುರಾತನ ಮತತತ್ವ, ಪರಂಪರೆಗಳಲ್ಲಿ ಅಭಿಮಾನ ಹೆಚ್ಚುತ್ತಾ ನಡೆಯಿತು. ಮುಂದಿನ ರಾಜಕೀಯ ಆಂದೋಲನಕ್ಕೆ ನೆಲವನ್ನು ಹರಗಿ ಸಜ್ಜುಗೊಳಿಸಿತ್ತು. ಜನತೆಗೆ ಅದೊಂದು ಉಪಕೃತಿಯಾಗಿ ಪರಿಣಮಿಸಿತು. ಪೂರ್ವಬಾರವೂ, ಭಕ್ತಿ-ಶ್ರದ್ದೆಗಳೂ ಸಡಿಲವಾದವು. ಅಭಿವ್ಯಕ್ತಿಯಲ್ಲಿ ವೈಯಕ್ತಿಕ ವಿಚಾರ ಸರಣಿ, ತಾರ್ಕಿಕ ದೃಷ್ಟಿ ಮತ್ತು ವಾಸ್ತವತೆಯ ಪ್ರಜ್ಞೆ ಇವು ಒಡಮೂಡಿದ್ದವು. ಒಟ್ಟಾರೆ ದೇಶದಲ್ಲಿ ವಿಷಯ ಪರಿಸ್ಥಿತಿ ತಲೆದೋರಿತ್ತು. ಇಂತಹ ಪರಿಸ್ಥಿಯಲ್ಲಿ ನಾಡಿನಾದ್ಯಂತ ಹಲವಾರು ಶಿವಯೋಗಿಗಳು, ಆರೂಢರು ಅವಧೂತರು ಅನುಭಾವಿಗಳು ತತ್ವಪದಕಾರರು ಅವತರಿಸಿದರು. ನಂತರ ಅವರು ಜನತೆಯ ಬದುಕಿನಲ್ಲಿ ಕವಿದ ಕತ್ತಲೆಯನ್ನು ಹೋಗಲಾಡಿಸಿದರು. ಇವರುಗಳ ಯೋಗದಲ್ಲಿ, ಆಚರಣೆಯಲ್ಲಿ ವಿವಿಧತೆ ಇರಬಹುದು. ಸಾಧಿಸಿದ ಸಿದ್ಧಿಯಲ್ಲಿ ತಾರತಮ್ಯ ಇರಬಹುದು, ಆದರೆ ಅವರೆಲ್ಲರ ಗುರಿ ಮಾತ್ರ ಒಂದೇ ಅಗಿತ್ತು. ಹಾಗಾಗಿ ಇವರೆಲ್ಲಾ ಸದಾ ಅಭಿವಂದ್ಯರಾಗಿ ಮಹಾತ್ಮರಾಗಿದ್ದಾರೆ.

ಆಧ್ಯಾತ್ಮಿಕ ಜೀವನದಲ್ಲಿ ಜೀವನ್ಮುಕ್ತಿ ಸ್ಥಿತಿ ಅತ್ಯುತ್ತಮವಾದ ಆದರ್ಶ, ಈ ಸ್ಥಿತಿ ಮುಟ್ಟಿದವರು ಲೌಕಿಕ ಸಂಘರ್ಷಗಳಿಂದ ದೂರವಾಗಿ ಆಶಾಪಾಶಗಳಿಂದ ಮುಕ್ತರಾಗುತ್ತಾರೆ. ಮನುಷ್ಯರೇ ಸೃಷ್ಟಿಸಿ ಕೊಂಡ ದುಃಖಗಳಿಂದ ತಾಪತ್ರಯಗಳಿಂದ ಮುಕ್ತರಾಗಿದ್ದು ಶಾಂತ ಚಿತ್ತರಾಗಿರುತ್ತಾರೆ. ಇವರುಗಳ ಮುಖ್ಯ ಸ್ವಭಾವಗಳು ನಿರಹಂಕಾರಿಗಳು, ದ್ವೇಷರಹಿತರು, ಸಮುದಾಯಾತೀತರು, ಅತಿವರ್ಣಶ್ರಮಿಗಳು, ನಿಷ್ಪಕ್ಷಪಾತರು, ಭಯರಹಿತರು, ವಿಶಾಲ ಹೃದಯವುಳ್ಳವರು, ಪೂರ್ಣ ಪರಿಶುದ್ಧರು. ಇವರುಗಳ ವರ್ತನೆ ಲೌಕಿಕ ನೋಟಕ್ಕೆ ವಿಚಿತ್ರವಾಗಿ ಕಂಡರೂ, ಅಂತರಂಗದಲ್ಲಿ ಪರಶಿವನನ್ನು ಸಾಕ್ಷಾತ್ಕರಿಸಿ

ಕೊಂಡವರು. ಆಧ್ಯಾತ್ಮ, ವೇದಾಂತ ಮುಂತಾದ ವಿಷಯಗಳನ್ನು ಜನರಿಗೆ ತಮ್ಮ ನಡೆ-ನುಡಿಗಳಿಂದ ಸಮಾಜದಲ್ಲಿ ಜನಜಾಗೃತಿಯನ್ನುಂಟು ಮಾಡುವಲ್ಲಿ ಶ್ರಮಸಿದವರಾಗಿದ್ದಾರೆ.

ಪ್ರತಿಯೊಬ್ಬ ಮಾನವನು ಮುಕ್ತಿಗಾಗಿ, ಶಾಂತಿ-ನೆಮ್ಮದಿಗಾಗಿ ಪರಿತಪಿಸುವುದು ಸಹಜ. ಅಂತಹ ಮುಕ್ತಿ ಪಡೆಯಲು ಭಕ್ತಿಯಿಂದ ಸಾಧ್ಯವೆಂದು ಅನೇಕ ಅನುಭಾವಿಗಳು ಜಗತ್ತಿನಾದ್ಯಂತ ಸಾರಿದ್ದಾರೆ. ಸಂತರು, ಶರಣರು, ದಾಸರು, ಸೂಫಿಗಳು ಮುಂತಾದ ಅನುಭಾವಿಗಳು ಜಗತ್ತಿನಾದ್ಯಂತ ಸಾರಿದ್ದಾರೆ. ಸಂತರು, ಶರಣರು, ದಾಸರು, ಸೂಫಿಗಳು ಮುಂತಾದ ಅನುಭಾವಿಗಳು ಮುಕ್ತಿ ಮಾರ್ಗದ ಮಹತ್ವ ಪಡೆದು ನುಡಿದಂತೆ ನಡೆದು ಜೀವನ್ಮುಕ್ತಿಯ ಸ್ಥಿತಿ ಪಡೆದಿದ್ದಾರೆ. ಆಧ್ಯಾತ್ಮಿಕ ಜೀವನದಲ್ಲಿ ಜೀವನ್ಮುಕ್ತಿಯು ಅತ್ಯುತ್ತಮವಾಗಿದ್ದು, ಇದರಲ್ಲಿ ನೆಲೆನಿಂತುಕೊಂಡು ಲೌಕಿಕ ಸಂಘರ್ಷಗಳಿಂದ ದೂರವಾಗಿ ಎಲ್ಲಾ ಆಶಾಪಾಶಗಳಿಂದ ಮುಕ್ತರಾಗಿರುತ್ತಾರೆ. ಸಮುದಾಯ, ಮತ, ಧರ್ಮ ಅಂತಸ್ತುಗಳನ್ನು ಮೀರಿ ನಿರಂಹಕಾರ ಮತ್ತು ದ್ವೇಷರಹಿತರಾಗಿದ್ದಾರೆ. ತಮ್ಮನ್ನು ನಂಬಿದ ಎಲ್ಲ ವರ್ಗದ ಜನತೆಯ ಮೇಲೆ ಪ್ರೀತಿ-ದಯೆ-ತೋರುತ್ತಾ ಮಾನವೀಯತೆ ಮೆರೆದಿದ್ದಾರೆ.

ಅವಧೂತರು ಸಂತರು ಹಾಗೂ ಸೂಫಿಗಳು ಮತ್ತು ಶರಣರ ಮಾರ್ಗದಲ್ಲಿ ಗುರುವಿಗೆ ಅಗ್ರಸ್ಥಾನವಿದೆ. ಪರಮಾತ್ಮನು ಗುರುವಿನ ರೂಪದಲ್ಲಿ ಬಂದಿರುವನೆಂದು ನಂಬಿರುತ್ತಾರೆ. ಶರಣರ ಸಂಗದಲ್ಲಿ ಬೆರೆತರೆ ಅವಧೂತರು ಸಂತರು ಏಕಾಂಗಿಗಳು, ಶರಣರ ಧರ್ಮವೀರಶೈವ ಧರ್ಮವಾದರೆ ಸಂತರದೇ ಒಂದು ಮಾರ್ಗವಾಗಿ ಬೆಳೆಯಿತು.

ಭರತನ ಈ ಪುಣ್ಯಭೂಮಿಯಲ್ಲಿರುವ ಯಾವುದೇ ಧರ್ಮದ ಹುಟ್ಟಿನ ಮೂಲ ಧ್ಯೇಯೋದ್ಧೇಶ ಆಯಾ ಜನಸಮುದಾಯದ ಸಂಸ್ಕೃತಿಯನ್ನು ವಿಕಾಸಗೊಳಿಸುವುದೇ ಆಗಿದೆ ಹೊರತು ವಿಕಾರಗೊಳಿಸುವುದಕ್ಕಲ್ಲ. ಆದರ್ಶತೆಯನ್ನು ಮನುಷ್ಯನಿಗೆ ಧರ್ಮ ಕಲಿಸಿಕೊಟ್ಟರೆ, ನಿಜ ಬದುಕಿನ ವಾಸ್ತವಿಕಾಂಶವನ್ನು ಸಂಸ್ಕೃತಿಯು ತಿಳಿಸಿಕೊಡುತ್ತದೆ. ಮಾನವ ಜೀವನದ ಜೀವಾಳ ಧರ್ಮ. ಇಹ ಮತ್ತು ಪರದಲ್ಲಿ ಸಿದ್ಧಿಯನ್ನು ನೀಡುವುದೇ ಧರ್ಮ. ಜೀವಾಳ ಧರ್ಮ. ಆಧ್ಯಾತ್ಮಿಕ ಪ್ರವೃತ್ತಿಗಳು, ಸನ್ಮಾರ್ಗದ ಸನ್ನಡತೆಗಳು ಧರ್ಮ ಸಾಧನೆಯ ಅಡಿಗಲ್ಲು. ಅಂತೆಯೇ ಉಪನಿಷತ್ತು "ಧರ್ಮಂಚರ" ಎಂದು ಸಾರಿದೆ.

ಧರ್ಮದಿಂದ ದೂರವಾದ ಅರ್ಥ, ಕಾಮನೆಗಳು ಊರ್ಜಿತಗೊಳ್ಳಲಾರವು. ಇವು ಧರ್ಮದ ಚೌಕಟ್ಟಿನಲ್ಲಿ ಬೆಳೆದಾಗ ನಿಜವಾದ ಶ್ರೇಯಸ್ಸು ಪ್ರಾಪ್ತವಾಗುತ್ತದೆ. ಬದುಕನ್ನು ತಿದ್ದುವ, ಬಾಳನ್ನು ಹಸನುಗೊಳಿಸುವ, ಜೀವನವನ್ನು ಸಾರ್ಥಕಗೊಳಿಸಿ ಕೊನೆಗೆ ಮುಕ್ತಿ ಕರುಣಿಸುವ ಹಿರಿ ಕೆಲಸ ಧರ್ಮದ್ದು. ಇಂತಹ ಗುಣಧರ್ಮ, ಗುಣಾದರ್ಶತೆ ಇರುವ ಧರ್ಮ ಯಾರಿಗೆ ಬೇಡ, ಅಹಿಂಸಾದಿ ಧ್ಯಾನ-ಪರ್ಯಂತರ ದಶ ಧರ್ಮ ಸೂತ್ರಗಳನ್ನು ಬೋಧಿಸಿದ ಶ್ರೀ ಜಗದ್ಗುರು

ರೇಣುಕ ಭಗವತ್ಪಾದರ ಸಂದೇಶ ಭೂಮಿ-ಆಗಸದಷ್ಟು ವಿಶಾಲತೆ ಮತ್ತು ವ್ಯಾಪಕತೆಯನ್ನು ಹೊಂದಿದೆ. ಈ ಮಾತನ್ನು ಮನುವೂ ಸಹ ಸ್ಪಷ್ಟೀಕರಿಸಿದ್ದು ಉಲ್ಲೇಖನಾರ್ಹವಾದದ್ದು.

ಆ ದ್ರೋಹಃ ಸರ್ವಭೂತೇಷು ಕರ್ಮಣಾ ಮನಸಾ ಗಿರಾ/
ಅನುಗ್ರಹಶ್ಚದಾನಂ ಚ ಸತಾಂ ಧರ್ಮಃ ಸನಾತನಃ//

ಅಂದರೆ ಕೈಯಿಂದಾಗಲಿ, ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ ಯಾವ ಪ್ರಾಣಿಗೂ ಅಹಿತವನ್ನು ಬಯಸದಿರು. ಕೈಲಾದಷ್ಟು ಒಳ್ಳೆಯದನ್ನು ಮಾಡು. ಇಲ್ಲವೇ ಮಾಡಲು ಪ್ರಯತ್ನಿಸು. ಇತರರೊಟ್ಟಿಗೆ ಅಹಂಭಾವ ಬಿಟ್ಟು ಸ್ನೇಹಭಾವದಿಂದ ಬದುಕು. ದೂಡಿ ಬಾಳುವುದನ್ನು ಬಿಡು, ಕೂಡಿ ಬಾಳುವುದನ್ನು ಕಲಿ. ಹಂಚಿ ತಿನ್ನುವ ಮನೋಧರ್ಮ ನಿಜವಾದ ವ್ಯಕ್ತಿತ್ವವನ್ನು ಸಾರುತ್ತದೆ.

ಮನುಷ್ಯನಿಗೆ ತನ್ನ ಬದುಕಿನ ಬವಣೆಗಳನ್ನು ಕಳೆದುಕೊಂಡು, ಭವ ಸಾಗರವನ್ನು ದಾಟಲು ಪರಮಾತ್ಮನ ಆಶೀರ್ವಾದ, ಗುರುವಿನ ಕರುಣೆಯ ಬೆಳಕು ಬೇಕು. ಇದನ್ನು ಅರಿಯುವುದಕ್ಕಾಗಿ ವೀರಶೈವ ಧರ್ಮಸಿದ್ಧಾಂತದ ಸಾಧನೆಯಲ್ಲಿ ದ್ವೈತವನ್ನು, ಅಂತ್ಯದಲ್ಲಿ ಅದ್ವೈತವನ್ನು ಸಾರುತ್ತದೆ. ಜ್ಞಾನ ಮತ್ತು ಕ್ರಿಯೆಗಳ ಆಚರಣೆಯಿಂದ ಜೀವನದ ಉನ್ನತಿ ಸಾಧ್ಯವೆಂದು ಸಾರಿದ ಶ್ರೇಯಸ್ಸು ಮತ್ತು ವರ್ಚಸ್ಸು ವೀರಶೈವ ಧರ್ಮಕ್ಕೆ ಸಲ್ಲುತ್ತದೆ. ಸನಾತನ ವೀರಶೈವ ಧರ್ಮದಲ್ಲಿ ಒಡೆದು ಆಳುವ, ಸ್ವಾರ್ಥ ಮತ್ತು ಸಂಕುಚಿತ ಮನೋಭಾವನೆಯಿಂದ ಬೇರ್ಪಡಿಸುವ ವ್ಯರ್ಥ ಪ್ರಯತ್ನಗಳು ಹಿಂದಿನಿಂದಲೂ ನಡೆದು ಬಂದಿದ್ದಾಗ್ಯೂ ಸನಾತನ ಪಂಚಪೀಠಗಳು ಸಮಾಜವನ್ನು ಒಗ್ಗೂಡಿಸಿಕೊಂಡು ಬೆಸೆಯುವ ಕಾರ್ಯಗಳನ್ನು ಮಾಡಿಕೊಂಡು ಬಂದಿವೆ.

ಶ್ರೀ ಪೀಠಪರಂಪರೆಯಲ್ಲಿ ಬರುವ ಶಾಖಾನುವರ್ತಿಗಳೂ ಸಹ ಇಬ್ಬಗೆಯನ್ನು ಒಮ್ಮುದ್ದಿಗೆ ತಂದು ಜನಸಾಮಾನ್ಯರ ಅನೇಕ ಕಷ್ಟ ಕೋಟಲೆಗಳನ್ನು ಕಳೆದಿದ್ದಾರೆ. ಬದುಕಿ ಬಾಳುವ ಮಾನವ ಜನಾಂಗಕ್ಕೆ ಬೆಳಕಿನ ಸಂಸ್ಕೃತಿಯನ್ನು ಕರುಣಿಸಿದ್ದಾರೆ. ನೊಂದವರ ಕಣ್ಣೊರೆಸಿದ್ದಾರೆ. ನೆಮ್ಮದಿಯ ಬದುಕು ರೂಪಿಸಿ, ಆ ಬದುಕಿಗೆ ಸಾಫಲ್ಯ ಮತ್ತು ಸಾರ್ಥಕತೆಯ ಚಿಗುರಾಗಿದ್ದಾರೆ. ಅಂತಹ ಮಹಿಮಾನ್ವಿತರ ಸರಿಸಾಲಿನಲ್ಲಿ ಬರುವ ಬಂಕಾಪುರ ಅರಳೆಲೆ ಹಿರೇಮಠಾಧ್ಯಕ್ಷರಾದ ಶ್ರೀ ಷ. ಬ್ರ. ರುದ್ರಮುನಿ ಶಿವಾಚಾರ್ಯರು ಕಷ್ಟವೆಂದು ಬಂದವರ ಸಂಕಷ್ಟಗಳನ್ನು ಕಳೆದು, ಅವರ ಬದುಕಿನಲ್ಲಿ ನೆಮ್ಮದಿಯ ಪರಿಪೂರ್ಣತೆಯನ್ನು ತಂದಿದ್ದಾರೆ. ಬದುಕಿನ ಆಶಾಕಿರಣಗಳು ಎಲ್ಲೆಡೆಗೂ ಪಸರಿಸಿ ಬೆಳಕು ಸುರಿಯುವಂತೆ ಮಾಡಿದ್ದಾರೆ. ಅದೆಷ್ಟೋ ಜನರ ಕ್ಲಿಷ್ಟತೆಗಳನ್ನು ಅವರ ತಪಶ್ಶಕ್ತಿಯಿಂದ ದೂರೀಕರಿಸಿದ್ದಾರೆ. ಅಂತಹ ಕೆಲವು ಅಮೃತದ ಕ್ಷಣಗಳನ್ನು ನಾವಿಲ್ಲಿ ಕಾಣಬಹುದು. ಹೌದು ಗುರುಗಳ ಕ್ರಿಯಾ ಕರ್ತೃತ್ವ ಶಕ್ತಿಯೇ ಅಂತಹದು. ತಮ್ಮ ವಾಕ್ಸಿದ್ದಿಯ ಪ್ರಭಾವದಿಂದಾಗಿ ಜಗದ ಅಭಿವೃದ್ಧಿಗೆ, ಭಕ್ತರ ಕಷ್ಟಗಳಿಗೆ ಧ್ವನಿಯಾಗಿ ಸಾಧಿಸಿದ ಸತ್ಯ-ಸಂಗತಿಗಳು ಅನೇಕ. ಆದರೆ ಕೆಲವನ್ನು ಮಾತ್ರ ತಮ್ಮೆದುರಿಗೆ ಬಿಚ್ಚಿಡುವ ಪ್ರಯತ್ನವವನ್ನು ಇಲ್ಲಿ ಮಾಡಲಾಗಿದೆ.

**ಆಶೀರ್ವಾದದ ಬಲದಿಂದ ಮೇಲೆದ್ದವರು:** ಬದುಕು ಬಂಧುರಗೊಳ್ಳಲು ಶ್ರೀಗುರುವಿನ ಪರಮಾಶೀರ್ವಾದ ಬೇಕು. ಈ ಮಾತಿಗೆ ಸಾಕ್ಷೀಕರಿಸುವುದಾದರೆ, ಕ್ರಿ.ಶ. ೧೯೫೬ರಲ್ಲಿ ಹಾನಗಲ್ಲಿನ ಕೊಂಡೋಜಿ ಮನೆತನದವರಿಗೆ ಅಭಯಾಶೀರ್ವಾದ ಕರುಣಿಸಿ ಶ್ರೀ ಷ.ಬ್ರ. ರುದ್ರಮುನಿ ಶಿವಾಚಾರ್ಯರು ಅವರ ಮನೆತನದ ಗುರುಗಳಾಗಿದ್ದರು. ಆ ಮನೆತನದ ಎಲ್ಲ ಶಿಷ್ಯರುಗಳಿಗೆ ದೀಕ್ಷಾ ಸಂಸ್ಕಾರಗಳನ್ನು ನೀಡಿ ಹರಸಿರುವರು. ಬಡತನದ ಸ್ಥಿತಿಯಲ್ಲಿದ್ದ ಕೊಂಡೋಜಿಯವರ ಮನೆತನದ ಹಿರಿಯರಿಗೆ ಹೊಸ ಉದ್ದಿಮೆಯನ್ನು ಆರಂಭಿಸುವ ಸಂದರ್ಭದಲ್ಲಿ ಹಿರಿಯ ಗುರುಗಳು ಕಾಲಿಗೆರಗಿದನು. ಆಗ ಗುರುಗಳು ಅವರ ಬದುಕು ಮತ್ತು ಮನೆತನ ಏಳ್ಗೆಗಾಣುವಂತೆ 'ಏಳು' ಎಂಬ ಆಶೀರ್ವಾದ ಮಾಡಿದುದರ ಫಲವಾಗಿ, ಇಂದು ಆ ಮನೆತನ ಸಿರಿವಂತಿಕೆಯ ಶಿಖರ ದಲ್ಲಿದೆ. ಇಷ್ಟಲ್ಲದೇ ಹೊಸ ವಾಹನವನ್ನು ಖರೀದಿಸುವಂತಹ ಸಂದರ್ಭದಲ್ಲಿ ಈ ಮನೆತನದ ಹಿರಿಯರ ಮರಣದ ದುರಂತವನ್ನರಿತು, ಆಗಬಹುದಾದ ದೊಡ್ಡ ಅನಾಹುತದಿಂದ ಪಾರುಮಾಡಿದ್ದು ಇವರ ಅಂತಃಶಕ್ತಿಯ ಸಾಫಲ್ಯತೆ ಹಾಗೂ ದೂರದೃಷ್ಟಿತ್ವಕ್ಕೆ ಹಿಡಿದ ಕನ್ನಡಿ.

**ಬೇಡದ ಬದುಕಿಗೆ ಬೆಳಕು ನೀಡಿದ ಶ್ರೀ:** ಸನ್ ೧೯೬೨ರಲ್ಲಿ ಬಂಕಾಪುರಕ್ಕೆ ಹತ್ತಿರದ ಚಾಕಾಪೂರ ಗ್ರಾಮದ ಹೈಬತ್ತಿ ವೀರಪ್ಪನವರಿಗೆ ಅಂಟಿಕೊಂಡಿದ್ದ ನರಶೂಲೆ ರೋಗವನ್ನು ಎಷ್ಟೇ ವೈದ್ಯಕೀಯ ಚಿಕಿತ್ಸೆಗೊಳಪಡಿಸಿದ್ದರೂ ಆ ರೋಗ ಕಡಿಮೆಯಾಗದೇ, ದಿನದಿಂದ ದಿನಕ್ಕೆ ಹೆಚ್ಚಾಗುತ್ತಲೇ ಇತ್ತು. ಕಡಿಮೆಯಾಗುವ ಯಾವುದೇ ಲಕ್ಷಣಗಳೂ ಸಹ ಗೋಚರಿಸಲಿಲ್ಲ. ರೋಗ ವೀರಪ್ಪನವರನ್ನು ಸಂಪೂರ್ಣವಾಗಿ ಆವರಿಸಿಕೊಂಡಿತ್ತು. ದಿನಗಳೆದಂತೆ ಅವರಲ್ಲಿ ಬದುಕುವ ಆಶೆಯೇ ಬತ್ತಿ ಹೋಗಿತ್ತು. ಕೊನೆಗೆ ಬೇರೆ ಯಾವುದೇ ವಿಧಿ ತೋರದೇ ಆತ್ಮಹತ್ಯೆ ಮಾಡಿಕೊಳ್ಳಲು ಮುಂದಾದರು. ಆದರೆ ರುದ್ರಮುನಿ ಶ್ರೀಗಳ ಅತಃಕರುಣದ ಆಶೀರ್ವಾದದಿಂದ, ಶ್ರೀ ಜಗದ್ಗುರು ರೇಣುಕಾಚಾರ್ಯರ ಜಯಂತಿಯಂದು ಗುರುಗಳ ಮಾತಿಗನುಗುಣವಾಗಿ ಅಲ್ಲಿನ ಪ್ರಸಾದ ಸ್ವೀಕರಿಸಿದುದರ ಫಲವಾಗಿ ಕೆಲವೇ ದಿನಗಳಲ್ಲಿ ರೋಗಮುಕ್ತರಾದರು. ಇದೆಲ್ಲ ಸಾಧ್ಯವಾಗಿದ್ದು ಗುರುಗಳು ತಪೋಬಲ ಮತ್ತು ಸಾಧನೆಯ ಸತ್ವಲದಿಂದ. ಒಬ್ಬ ವ್ಯಕ್ತಿ ಬದುಕೇ ಬೇಡವೆಂದು ಈ ಜಗತ್ತಿನಿಂದಲೇ ದೂರವಾಗ ಹೊರಟವನಿಗೆ ಉಪಚರಿಸಿ, ರೋಗವನ್ನು ನಾಶಗೊಳಿಸಿದ್ದಲ್ಲದೇ ಅವನಲ್ಲಿ ಬದುಕುವಾಸೆಯನ್ನು ಜೀವಂತಗೊಳಿಸಿದ ಶ್ರೀಗಳ ದಿವ್ಯ ಶಕ್ತಿಗೆ ನಾವೆಲ್ಲರು ತಲೆಬಾಗಲೇಬೇಕು.

**ಸಾತ್ವಿಕರಿಗೆ ಸಂತಾನ ಭಾಗ್ಯವಿತ್ತ ಶ್ರೀ:** ಇದೇ ರೀತಿ ಅದೇ ಗ್ರಾಮದವರೇ ಆದ ಪರಸಪ್ಪ ಮಾತನವರ ದಂಪತಿಗಳಿಗೆ ಸಂತಾನ ಭಾಗ್ಯವಿದ್ದರೂ ಸಹ. ಸ್ಥಿರ ಸಂತಾನವಿರಲಿಲ್ಲ. ಹುಟ್ಟಿದ ಒಂದು ವರ್ಷದೊಳಗಾಗಿ ಆ ಹಸುಳೆಗಳು ಸಾವನ್ನಪ್ಪುತ್ತಿದ್ದವು. ಮನನೊಂದು ಪರಸಪ್ಪನವರು ಬೇರೆ ದಾರಿ ತೋಚದೆ ಮನೆ ಬಿಟ್ಟು ಹೊರಡಲು ಸಿದ್ಧರಾದರು. ಮಾರ್ಗಮಧ್ಯದಲ್ಲಿ ರುದ್ರಮುನಿ

ಶ್ರೀಗಳನ್ನು ಕಂಡು ತಮ್ಮ ನೋವಿನ ಕಾರಣವನ್ನು ಹೇಳಿಕೊಂಡರು. ಸಮಯ ಮತ್ತು ಸಂದರ್ಭಗಳನ್ನರಿತ ಶ್ರೀಗಳು ಸಮಸ್ಯೆಗೆ ಸೂಕ್ತ ಪರಿಹಾರವನ್ನು ತಿಳಿಸಿ, ಆ ದಂಪತಿಗಳಿಗಿದ್ದ ದೋಷವನ್ನು ತಮ್ಮ ತಪಶ್ಯಕ್ತಿಯಿಂದ ಕಳೆದರು. ಇದಾದ ಒಂದು ವರ್ಷವಾಗುವಷ್ಟರಲ್ಲಿ ಸ್ಥಿರಸಂತಾನ ಪ್ರಾಪ್ತವಾಗುವುದು ಹಾಗೂ ಆ ಕೂಸುಗಳೆಲ್ಲಾ ದೀರ್ಘಾಯುಷಿಗಳಾಗಿ ಬದುಕಿ ಬಾಳುತ್ತಾರೆಂದು ಮಂಗಲಕ್ಷತೆಯನ್ನು ನೀಡಿ ಆಶೀರ್ವದಿಸಿದರು. ಜೊತೆಗೆ ಶ್ರೀ ರಂಭಾಪುರಿ ಪೀಠದ ಭೂಗರ್ಭ ಸಂಜಾತ ಶ್ರೀ ಜಗದ್ಗುರು ರುದ್ರಮುನಿ ಶಿವಾಚಾರ್ಯ ಭಗವತ್ಪಾದರು, ಕಾಂಚಿಯ ಏಕಾಮ್ರೇಶ್ವರ ಲಿಂಗದೆದುರಿನ ಭುವಿಯಿಂದ ಅವತರಿಸುತ್ತಿರುವ ಚಿತ್ರಪಟವನ್ನು ನೀಡಿ ಪೂಜಿಸುವಂತೆ ತಿಳಿಸಿ, ಕಳುಹಿದರು ಈ ಘಟನಾವಳಿ ನಡೆದ ಒಂದು ವರ್ಷದೊಳಗೆ ಗಂಡು ಮಗುವಾಯಿತು. ಈ ಮಗುವಿನ ನಂತರ ಮೂರು ಗಂಡು ಹಾಗೂ ಎರಡು ಹೆಣ್ಣುಮಕ್ಕಳಿಗೆ ಜನ್ಮವಿತ್ತರು. ಇದು ರುದ್ರಮುನಿ ಶ್ರೀಗಳ ಅಪ್ರತಿಮ ಪವಾಡ.

ಶ್ರೀ ಜಗುದ್ಗುರು ರೇಣುಕ ಭಗವತ್ಪಾದರು ಪರಶಿವನಾದೇಶದಂತೆ ಕಲಿಯುಗಾರಂಭದಲ್ಲಿ ಕಾಂಚಿಯ ಶ್ರೀ ಏಕಾಮ್ರೇಶ್ವರ ಲಿಂಗದ ಮುಂದಿನ ಭೂಭಾಗವನ್ನು ಸ್ಪರ್ಶಿಸಲು ಅಲ್ಲಿ ಶ್ರೀ ಜಗದ್ಗುರು ರುದ್ರಮುನಿ ಶಿವಾಚಾರ್ಯ ಭಗವತ್ಪಾದರು ಭೂತಾಯಿಯ ಒಡಲು ಕುಡಿಯಾಗಿ ಜನಿಸಿದರು. ಈ ಸಂದರ್ಭದ ಅವರ ಚಿತ್ರಪಟವನ್ನು ಯಾರು ಭಕ್ತಿ-ಶ್ರದ್ಧೆಯಿಂದ ಪೂಜಿಸುವರೋ ಅವರಿಗೆ ಸಂತಾನ ಪ್ರಾಪ್ತಿಯಾಗುವುದು. ಇದು ಇಂದಿಗೂ ಸತ್ಯ.

ಮಾನವ ಜನ್ಮದ ಹಿರಿಮೆ ಅರಿತಾಗ ಬದುಕು ಬಹಳಷ್ಟು ವಿಸ್ತಾರಗೊಳ್ಳುತ್ತದೆ. ಅರಿಯದೇ ಮಗ್ಗುರಿಸಿದರೆ ಬಾಳ ಬಾಂದಳಕ್ಕೆ ಗೆಲಿವಿಲ್ಲ; ನಿಲುವಿಗೆ ಬಲವಿಲ್ಲದಂತಾಗುತ್ತದೆ. ಇದನ್ನು ಬೋಧಿಸಲೆಂದೇ ಅನಾದಿ ಕಾಲದಿಂದ ಅನಂತ ಯೋಗಿವರೇಣ್ಯರು ಅವತರಿಸಿ ಜ್ಞಾನದ ಹಸಿವನ್ನು ನೀಗಿಸಿರುವರು. ಈ ದೇಹ ಶಿವನಿರುವ ದೇವಾಲಯ. ಅರಿವಿಗೆ ಆಶ್ರಯ ಕೊಟ್ಟ ಪವಿತ್ರ ತಾಣ. ಮಹದೇವನ ಮಹಾಮನೆ. ಈ ಮನೆ ಎಂದೆಂದೂ ಆರದ ಜ್ಞಾನದ ಬೆಳಕಿನಿಂದ ಬೆಳಗಬೇಕು ಎಂಬ ಸದಾಶಯದಿಂದ ರುದ್ರಮುನಿ ಶ್ರೀಗಳು ನಿತ್ಯ-ನೂತನವಾಗಿ ಶ್ರೀಮಠದಲ್ಲಿ ಹೋಮ-ಹವನಗಳನ್ನು ಯಾವಾಗಲೂ ಮಾಡಿಸುತ್ತಿದ್ದರು. ಲೋಕಕಲ್ಯಾಣಾರ್ಥವಾಗಿ ವಿಶೇಷ ಪೂಜೆಗಳನ್ನೂ ಸಹ ನೆರವೇರಿಸುತ್ತಿದ್ದರು. ಇಂತಹ ಕ್ರಿಯಾತ್ಮಕ ಚಟುವಟಿಕೆಗಳಿಂದಾಗಿ ಶ್ರೀಗಳ ತೇಜಸ್ಸು, ಮನಸ್ಸು ಮತ್ತು ಅಂತಶ್ಯಕ್ತಿಗಳು ಇಮ್ಮಡಿಗೊಂಡು ವೃದ್ಧಿಸುತ್ತ ಸಾಗಿದ್ದವು. ಮುಖಭಾವ ಸಂಪೂರ್ಣ ಸಂಪನ್ನತೆಯಿಂದ ತುಂಬಿಕೊಂಡಿತ್ತು. ಶ್ರೀಗಳ ಕೀರ್ತಿ ಸಾಧನೆಗಳು ಎಲ್ಲರ ನಾಲಿಗೆಯ ಮೇಲೆ ನಲಿದಾಡುತ್ತಿತ್ತು. ಇದರ ಜೊತೆ ಜೊತೆಗೆ ಧರ್ಮಪರ ಕಾರ್ಯಗಳು, ಕೃಷಿ ಕಾಯಕ, ಜನಜಾಗೃತಿ ಸಮಾವೇಶಗಳು ಬಹಳಷ್ಟು ಸುದೀರ್ಘವಾಗಿ ಮತ್ತು ಸಮರ್ಥವಾಗಿ ಎಲ್ಲರಿಗೂ ಸಂತೃಪ್ತಿ ನೀಡುವ ನಿಟ್ಟಿನಲ್ಲಿ ಸಾಗಿದ್ದವು. ಸರ್ವರನ್ನೂ ಸಮಚಿತ್ತದಿಂದ ಕಾಣುವ

ಪ್ರವೃತ್ತಿ ಇವರಲ್ಲಿ ಹೆಚ್ಚಾಗಿ ಬೆಳೆದಿತ್ತು. ಇವರ ಹೃದಯ ವೈಶಾಲ್ಯತೆ ತಾಯಿಯನ್ನು ಮೀರಿಸುವಂತಹದ್ದಾಗಿತ್ತು.

**ಗುರುಸೇವೆಗೆ ದೊರಕಿದ ಸತ್ಫಲ:** ಇವರ ವಾಕ್ ಸಿದ್ದಿಗೆ ಕನ್ನಡಿ ಹಿಡಿದಂತೆ ಹಾವೇರಿಯಲ್ಲೊಂದು ಅದ್ಭುತ ಘಟನೆ ಜರುಗಿತು. ನಾಗನೂರು ನಾಗಮ್ಮನವರ ಮನೆಯ ಗುರುಗಳಾಗಿದ್ದ ರುದ್ರಮುನಿ ಶ್ರೀಗಳು ಪ್ರತಿ ತಿಂಗಳಿಗೊಮ್ಮೆ ಇವರ ಮನೆಯಲ್ಲಿ ವಿಶೇಷ ಪೂಜೆ ನೇರವೇರಿಸುತ್ತಿದ್ದರು. ಇಂತಹ ಭಕ್ತಿ ಶ್ರದ್ಧೆಯ ಮನೋಧರ್ಮವುಳ್ಳ ಇವರಿಗೆ ಬಟ್ಟೆ ಸೆಳೆಯುವ ಸಂದರ್ಭದಲ್ಲಿ ಅಪರೂಪದ ಚೇಳೊಂದು ಕೈಕಚ್ಚಿತು. ಗಾಯ ವಿಪರೀತವಾಗಿ ಕೈಬೆರಳನ್ನು ಕತ್ತರಿಸುವ ಸ್ಥಿತಿ ಒದಗಿ ಬಂತು. ಎಷ್ಟೇ ಚಿಕಿತ್ಸೆ ನೀಡಿದರೂ ಫಲಕಾರಿಯಾಗಲಿಲ್ಲ. ಕೊನೆಗೆ ವಿಧಿ ಕಾಣದೇ ತಮ್ಮ ಕುಲಗುರುಗಳಾದ ಶ್ರೀ ರುದ್ರಮುನಿ ಶಿವಾಚಾರ್ಯರಲ್ಲಿ ನಡೆದ ವಿಚಾರವಾಗಿ ಅರಿಕೆ ಮಾಡಿಕೊಳ್ಳಲು, ಶ್ರೀಗಳು ಸಸ್ಯದ ಬೇರೊಂದನ್ನು ಅವರ ಮಗನ ಕೈಗಿತ್ತು ಉಪಚಾರ ಮಾಡಲು ತಿಳಿಸಿದರು. ಕೆಲ ದಿನಗಳ ನಂತರ ಸಾವಧಾನವಾಗಿ ನೋವು ಕಡಿಮೆಯಾಯಿತು. ಕತ್ತರಿಸಿದ್ದ ಕೈಬೆರಳುಗಳು ನಿಧಾನವಾಗಿ ಯಥಾ ಸ್ಥಿತಿಗೆ ಬೆಳೆದುಕೊಂಡು ನೋವು ವಾಸಿಯಾಯಿತು. ಇದು ನಡೆದ ಸತ್ಯ ಸಾಕ್ಷಿ. ಶ್ರೀಗಳ ಪರಮಾಶೀರ್ವಾದದ ಫಲದಿಂದಾಗಿ ನಾಗನೂರರವರ ಕುಟುಂಬ ಇಂದು ಚೆಂದವಾಗಿ ಅಂದದ ಬದುಕು ಸಾಗಿಸುತ್ತಿದೆ. ಇವರ ಮನೆ ಮಕ್ಕಳೆಲ್ಲ ಅತ್ಯುನ್ನತ ವಿದ್ಯೆ ಕಲಿತು, ದೊಡ್ಡ ದೊಡ್ಡ ಮಟ್ಟದ ಉದ್ಯೋಗಗಳಲ್ಲಿ ತೊಡಗಿ ಸದ್ಧರ್ಮ ಸದಾಚಾರಯುತ ಬದುಕು ಸವೆಸುತ್ತಿದ್ದಾರೆ. ಈ ಕುಟುಂಬ ಗುರುಪಾದ ಸೇವಾ ಬಲದಿಂದಾಗಿ ಪ್ರಸ್ಥುತ ಶ್ರೀಗಳ ಮಾರ್ಗದರ್ಶನದಲ್ಲಿ ಮುನ್ನಡೆಯುತ್ತಿದೆ.

ಜಗದಲ್ಲಿ ವಂದಿಸುವವರೂ ಉಂಟು, ನಿಂದಿಸುವವರೂ ಉಂಟು. ನಾವು ವಂದಿಸಲಿ, ವಂದಿಸದೇ ಇರಲಿ, ನಾವು ಅರ್ಚಿಸಲಿ, ಅರ್ಚಿಸದೇ ಇರಲಿ ಆದರೆ ಆತ ಮಾತ್ರ ಸದಾ ಹಸನ್ಮುಖಿ. ಸದಾ ಶಾಂತ. ದಯಾ ಸಾಗರನಾದ ಪರಮಾತ್ಮನು ಯಾವಾಗಲೂ ನಮ್ಮನ್ನು ಕಾಪಾಡುವ. ಅಂತಹ ದಯಾನಿಧಿಯಾದ ದೇವರು ನಮ್ಮೆಲ್ಲರ ಅಂತರಂಗದಲ್ಲಿ ನೆಲೆಸಿದ್ದಾನೆ. ಅವನನ್ನು ಗುರುತಿಸಿ ಕೊಡಬಲ್ಲಾತನೇ ನಿಜವಾದ ಪರಮಗುರು. ಪರಶಿವನ ಸಾಕಾರ ಸ್ವರೂಪವೇ ಶ್ರೀಗುರು ಎಂದು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಹೇಳಿದ್ದಾರೆ. ಅಂತಹ ರೂಪ ಹೊತ್ತಿರುವ ಶ್ರೀ ರುದ್ರಮುನಿ ಶಿವಾಚಾರ್ಯರು ದಯಾಗುಣ ಸಂಪನ್ನರು. ಒಮ್ಮೆ ಶ್ರೀ ಮಠದಲ್ಲಿಯೇ ನಡೆದ ಘಟನೆಯನ್ನು ಇಲ್ಲಿ ಪಸ್ತುತ ಪಡಿಸಲಾಗಿದೆ.

**ಕಳ್ಳನಿಗೆ ಕರುಣೆ ತೋರಿದ ಕಾರುಣ್ಯಮೂರ್ತಿ:** ಸರಿಸುಮಾರು ಸನ್ ೧೯೬೮ರಲ್ಲಿ ಒಬ್ಬ ಅನಾಮಧೇಯ ಕಳ್ಳ ರಾತ್ರಿ ಸಮಯದಲ್ಲಿ ಶ್ರೀಮಠದ ಆವರಣ ಪ್ರವೇಶಿಸಿ, ನೇರವಾಗಿ ಗುರುಗಳು ಪೂಜಾ ಮಂದಿರಕ್ಕೆ ಯಾವುದನ್ನೂ ಲೆಕ್ಕಿಸದೇ ನುಗ್ಗಿದ. ಅಲ್ಲಿದ್ದ ಶ್ರೀಗಳ ವಿಶೇಷ ಪೂಜಾ ಸಾಮಗ್ರಿಗಳನ್ನು, ಅಂದರೆ ಬಂಕರಸರಿಂದ ಬಳುವಳಿಯಾಗಿ ಬಂದಿದ್ದ ಬೆಳ್ಳಿ, ತಾಮ್ರ,

ಹಿತ್ತಾಳೆಗಳ ಪೂಜಾ ಸಾಮಾನುಗಳನ್ನು ನುಜ್ಜು-ಗುಜ್ಜಾಗಿಸಿ ಒಂದು ಚೀಲದಲ್ಲಿ ತುಂಬಿಕೊಂಡು ಹೊರಡಲು ಸಿದ್ಧನಾಗಿ, ಅವಸರವಸರವಾಗಿ ಪೂಜಾ ಕೋಣೆಯಿಂದ ಹೊರಬಂದು ಓಡುವ ಸಮಯದಲ್ಲಿ ಮಠದ ಎತ್ತರದ ಕಟ್ಟೆಯ ಮೇಲಿನಿಂದ ಕೆಳಗೆ ಬಿದ್ದ. ಅಷ್ಟರಲ್ಲಿ ನಿದ್ರೆಗೆ ಜಾರಿದ್ದ ಶ್ರೀಗಳು ಕೂಡಲೇ ಎಚ್ಚರಗೊಂಡು, ಈತನನ್ನು ಕಂಡು ನಸುನಕ್ಕರು. 'ಅಯ್ಯೋ ದಡ್ಡ, ನೀನು ಬೆಳಿಗ್ಗೆ ಬಂದು ಇವುಗಳನ್ನೆಲ್ಲ ಕೇಳಿದ್ದರೆ ನಾವೇ ನಿನಗೆ ಆರ್ಶಿರ್ವಾದ ಮಾಡಿ ಕೊಟ್ಟು ಕಳುಹುತ್ತಿದ್ದೆವು. ನೀನ್ಯಾಕೆ ತ್ರಾಸು ತಗೋಲೋಕೆ ಹೋದೆ' ಎನ್ನುತ್ತಲೇ ಬಿದ್ದಿದ್ದ ಕಳ್ಳನನ್ನು ಉಪಚರಿಸಲು ಮುಂದಾದಾಗ, ಕದ್ದ ಕಳ್ಳನಿಗೆ ತಾನು ಮಾಡಿದ ಮಹಾ ತಪ್ಪಿನ ಅರಿವಾಗಿ ಗುರುವಿಗೆ ಶರಣುಹೋದ. ಅಂದು ರಾತ್ರಿ ಎಲ್ಲಾ ಆ ಮಠದಲ್ಲಿಯೇ ಇರಿಸಿಕೊಂಡು ಪ್ರಸಾದವನ್ನು ಮಾಡಿಸಿ, ಮರುದಿನ ಬೆಳಿಗ್ಗೆ ಅವನನ್ನು ಕಂಡು ಆ ಎಲ್ಲಾ ವಸ್ತುಗಳನ್ನು ಅವನಿಗೇ ನೀಡಿ, ಹೊರಟು ಹೋಗುವಂತೆ ಆದೇಶಿಸಿದರು. ಪಶ್ಚಾತ್ತಾಪ ಪಟ್ಟ ಕಳ್ಳ ಕದ್ದ ವಸ್ತುಗಳನ್ನು ಒಯ್ಯಲು ಒಪ್ಪಲಿಲ್ಲ. ಆದರೆ ಗುರುಗಳು ಆತನನ್ನು ಸಮಾಧಾನಪಡಿಸಿ ಆ ಎಲ್ಲ ವಸ್ತುಗಳನ್ನು ಕೊಟ್ಟು ಜೊತೆಗೆ ದಾರಿಯ ಖರ್ಚನ್ನು ಸಹ ನೀಡಿ ಆಶೀರ್ವದಿಸಿ ಕಳುಹಿದರು.

ಇದಾದ ಮರುದಿನ ಊರ ಜನರಿಗೆ ಕಳ್ಳನ ವಿಚಾರ ಗುರುಗಳ ಶಿಷ್ಯನಿಂದ ಗೊತ್ತಾಗಿ ಮಠದಲ್ಲಿ ಬೆಳಿಗ್ಗೆಯೇ ಜಮಾಯಿಸಿದ್ದರು. ನಡೆದ ವೃತ್ತಾಂತವನ್ನು ಶ್ರೀಗಳಿಂದ ತಿಳಿದು ಆತನನ್ನು ಹಿಡಿದು ತಂದು ದಂಡಿಸಲು ಮುಂದಾದಾಗ ಗುರುಗಳು ಬಿಡಿಸಿ, ಭಕ್ತರಿಗೆ ಬುದ್ಧಿಯನ್ನು ಹೇಳಿ ಸುಮ್ಮನಾಗಿಸಿದರು. ಇತ್ತ ಸದ್ಭಕ್ತರು ಗುರುಗಳ ಉದಾರತೆಗೆ ಶರಣಾಗಿ ತಲೆಬಾಗಿದರು.

**ಪೂಜೆಯಿಂದ ಕಷ್ಟ ಕಳೆದ ಧೀವ್ಯಶಕ್ತಿ:** ಮನುಷ್ಯನಿಗೆ ಎಷ್ಟಿದ್ದರೂ ತೃಪ್ತಿಯಿಲ್ಲ; ಸಮಾಧಾನ-ಶಾಂತಿಯಿಲ್ಲ. ಸಂಪತ್ತಿನಿಂದ ಮನುಷ್ಯನಿಗೆ ಶಾಂತಿಯು ಸಿಗುವುದಿಲ್ಲ. ಅಧಿಕಾರ-ಅಂತಸ್ಥಿನಿಂದ ಸಂತೃಪ್ತಿ ದೊರಕುವುದಿಲ್ಲ. ಮನುಷ್ಯನಿಗೆ ಆಶೆಯ ದಾಹ ಬೆನ್ನತ್ತಿದಂತೆ, ಬೇಕು-ಬೇಕೆನ್ನುತ್ತಾನೆ ವಿನಃ ಸಾಕೆನ್ನುವುದನ್ನೆ ಆತ ಮರೆಯುತ್ತಾ ಸಾಗುತ್ತಾನೆ. ಹಸಿದ ಹೊಟ್ಟೆಯನ್ನು ಯಾರಾದರೂ ತುಂಬಿಸಬಹುದು, ಆದರೆ ಆಸೆಯ ಹೊಟ್ಟೆಯನ್ನು ಯಾರಿಂದಲೂ ತುಂಬಲೂ ಸಾಧ್ಯವಿಲ್ಲ ಎಂಬ ಮಾತಿಗೆ ನಿದರ್ಶನ ಎನ್ನುವಂತೆ, ಹುಬ್ಬಳ್ಳಿ ತಾಲೂಕಿನ ಕಡಪಟ್ಟಿ-ಹಳ್ಯಾಳ ಗ್ರಾಮದಲ್ಲಿ ಒಂದು ಘಟನೆ ಜರುಗಿತು. ಅತಿಯಾದ ಆಶೆಯಿಂದ ಜಂಗಮ ವಂಶಸ್ಥರ ಮನೆಯನ್ನು ಒತ್ತುಗೋಲು ಮಾಡಿಕೊಂಡಿದ್ದ ಆ ಊರಿನವರೇ ಆದ, ಜಿ.ಕೆ ಎನ್ನುವವರು ತಮ್ಮ ಅತಿಯಾದ ಆಶೆಯಿಂದಾಗಿ ಶಿವಲಿಂಗಯ್ಯ ಹಿರೇಮಠ ಇವರ ಮನೆಯನ್ನು ಕಡಿಮೆ ದರ ನೀಡಿ ತಮ್ಮಂತೆ ಮಾಡಿಕೊಂಡಿದ್ದರು. ಬಡತನದ ಬೇಗೆಯಲ್ಲಿ ಬೇಯುತ್ತಿದ್ದ ಆ ಜಂಗಮಾರ್ಯರು ತಮ್ಮ ಕಷ್ಟವನ್ನು ಬಂಕಾಪುರದ ಶ್ರೀಗಳವರಲ್ಲಿ ನಿವೇದಿಸಿಕೊಂಡರು

ಇದಕ್ಕೆ ಪರಿಹಾರವಾಗಿ ಶ್ರೀಗಳು ಅವರ ಮನೆಯಲ್ಲಿ ವಿಶೇಷ ಪೂಜೆಯೊಂದನ್ನು ನೆರವೇರಿಸಿ, ಶ್ರೀ ಜಗದ್ಗುರು ರೇವಣಸಿದ್ದ ಭಗವತ್ಪಾದರಲ್ಲಿ ಅವರ ಕಷ್ಟಕಳೆಯುವಂತೆ ಪ್ರಾರ್ಥಿಸಿ ಕೊಂಡರು.

ಕೆಲವೇ ದಿನಗಳಲ್ಲಿ ಶಿವಲಿಂಗಯ್ಯನವರ ವ್ಯಾಜ್ಯ ಕಳೆದು, ಆನಂದದ ದಿನಗಳು ಬಂದಿದ್ದವು. ಇದಾದ ನಂತರ ದಿಕ್ಕು ತೋಚದ ಜಿ.ಕೆ.ಯವರಿಗೆ ಸಂಕಷ್ಟ ಬಂದೊದಗಿತು. ಶ್ರೀಗಳವರ ಬಳಿ ಬಂದು ಅವರ ದರ್ಶನಾಶಿರ್ವಾದ ಪಡೆದು, ತಮ್ಮ ತಪ್ಪೊಪ್ಪಿಕೊಂಡು ತಪ್ಪಿಗೆ ದಂಡವನ್ನು ನೀಡಿದರು. ಪಶ್ಚಾತ್ತಾಪದ ಫಲವಾಗಿ ಎರಡೂ ಮನೆತನದವರಿಗೂ ಶಾಂತಿ ಸದ್ಗತಿಗಳು ದೊರೆತು, ಯಾವುದೇ ತಂಟೆ-ತಕರಾರುಗಳಿಲ್ಲದೆಯೇ ಇಂದಿಗೂ ನಿರಾತಂಕವಾಗಿ ಬದುಕು ಸವೆಸುತ್ತಿರುವರು. ಇಂತಹ ಅನೇಕ ಸಾಧಕ-ಬಾಧಕಗಳನ್ನು ರುದ್ರಮುನಿ ಶ್ರೀಗಳು ತಮ್ಮ ಅಪ್ರತಿಮ ಸಾಧನೆಯ ಸತ್ವಲದಿಂದಾಗಿ ಸಮಾಜವನ್ನು ಬೆಸೆಯುವಂತಹ ಕಾರ್ಯಗಳನ್ನು ಮಾಡುತ್ತಲೇ ಸಾಗಿದ್ದರು. ಈ ಕಾರ್ಯಗಳೇ ಅವರ ಹಿರಿಮೆಗೆ ಗರಿಮೆಯನ್ನು ತಂದಿದ್ದವು.

**ಅಡಿ ಟಿಪ್ಪಣಿ**

೧. ಹಂಪ ನಾಗರಾಜಯ್ಯ, ಕರ್ನಾಟಕ ಜಾತ್ರೆಗಳು, ಪುಟ.೯

೨. ಎ.ಎನ್.ಮೂರ್ತಿರಾವ್, ದೇವರು, ಪುಟ.೧೨

೩. ಡಾ. ಬಿ.ಪಿ.ಪಾಟೀಲ, ಗ್ರಾಮದೇವತೆಗಳು, ಪು.ಸಂ ೩

೪. ವೀರಣ್ಣ ದಂಢೆ ಅವರ ಜನಪದ ಹಾಲುಮತ ಮಹಾಕಾವ್ಯದ ಪು.ಸಂ ೧೦

೫. ಅದೇ ಪು.ಸಂ ೧೧

೬. ಅದೇ ಪು.ಸಂ ೧೨

೭. Encyclopedia Britanica,(Vol-16

೮. ಕಸಾಪ ನಿಘಂಟು ಪುಸಂ ೭೬೨

೯. ಶಾಂತವ್ವಾ ನಾಗಪ್ಪ ಲಕ್ಷ್ಮೇಶ್ವರ, ಯಮನೂರು ಗ್ರಾಮ: ಸಾಂಸ್ಕೃತಿಕ ಸಂಕಥನ, ೨೦೧೩, ಪು.೨೨

೧೦. ಅದೇ ಪು.ಸಂ ೩೩

## ಅಧ್ಯಾಯ : ಏಳು

# ಬಂಕಾಪುರ ಗ್ರಾಮದ ಸಾಹಿತ್ಯ

## ಅಧ್ಯಾಯ : ಏಳು

# ಬಂಕಾಪುರ ಗ್ರಾಮದ ಸಾಹಿತ್ಯ

ಪರಂಪರಾಗತವಾಗಿ ಬಾಯಿಂದ ಬಾಯಿಗೆ ಬಂದ ಶಾಬ್ದಿಕ ಅಭಿವ್ಯಕ್ತಿಯನ್ನು ಜನಪದ ಸಾಹಿತ್ಯ ಎಂದು ಕರೆಯುವರು ಸರಳವೂ ಸುಂದರವೂ ಆದ ಈ ಸಾಹಿತ್ಯ ಶಿಷ್ಟ ಸಾಹಿತ್ಯಕ್ಕಿಂತ ಬೇರೆಯಾದುದು. ಶಿಷ್ಟಸಾಹಿತ್ಯ ವ್ಯಕ್ತಿಯೊಬ್ಬನಿಂದ ರಚಿತವಾಗಿ ಬರವಣಿಗೆಯ ಮೂಲಕ ಉಳಿಯುವಂತದ್ದು. ಕಾಲದ ಮೂಲಕ ಯಾವುದೇ ವ್ಯತ್ಯಾಸಕ್ಕೆ ಗುರಿಯಾಗದಿರುವಂತದ್ದು. ಆಯಾ ಕಾಲದ ಸಾಮಾಜಿಕ ಪ್ರವೃತ್ತಿಗಳಿಗೆ ಮತ್ತು ಪರಿವರ್ತನೆಗಳಿಗೆ ಶಿಷ್ಟಸಾಹಿತ್ಯ ನಾಲಗೆಯಾಗುತ್ತದೆ. ಆದ್ದರಿಂದ ಇದಕ್ಕೆ ಇತಿಹಾಸವೊಂದನ್ನು ರೂಪಿಸಲು ಸಾಧ್ಯವಾಗುತ್ತದೆ. ಆದರೆ ಜನಪದ ಸಾಹಿತ್ಯ ಮೂಲತಃ ವ್ಯಕ್ತಿಯೊಬ್ಬನಿಂದ ಸೃಷ್ಟಿಯಾದರೂ ಬೆಳವಣಿಗೆಯಲ್ಲಿ ಸಾಮೂಹಿಕವಾದುದು. ಆದ್ದರಿಂದ ಯಾರೊಬ್ಬರ ಕರ್ತೃತ್ವದ ಅಧಿಕಾರವನ್ನು ಇದರ ಮೇಲೆ ಸ್ಥಾಪಿಸಲಾಗುವುದಿಲ್ಲ. ಇದು ಕಂಠಸ್ಥ ಸಂಪ್ರದಾಯವಾದ್ದರಿಂದ, ತಲೆಮಾರುಗಳ ಮೂಲಕ ಹರಿಯುವಾಗ ಅನೇಕ ರೂಪಾಂತರಗಳಿಗೆ ಗುರಿಯಾಗುವುದು ಸಹಜವಾಗುತ್ತದೆ. ಇದರಲ್ಲಿ ಸಾಮಾಜಿಕ ಸ್ಥಿತ್ಯಂತರಗಳು ಪ್ರತಿಫಲಿಸದಿರುವುದರಿಂದ, ಇತಿಹಾಸವನ್ನು ಹೇಳಲು ಕಷ್ಟವಾಗುತ್ತದೆ. ಜನಪದ ಮತ್ತು ಶಿಷ್ಟ ಸಾಹಿತ್ಯಗಳಿಗೆ ವ್ಯತ್ಯಾಸವಿರುವಂತೆ, ಸಂಬಂಧವೂ ಇದೆ. ಶಿಷ್ಟಸಾಹಿತ್ಯಕ್ಕೆ ಜನಪದ ಸಾಹಿತ್ಯವೇ ಮೂಲ, ಪ್ರೇರಕಶಕ್ತಿ. ಜನವಾಣಿ ಬೇರು, ಕವಿವಾಣಿ ಹೂವು ಎಂದು ಬಿ.ಎಂ.ಶ್ರೀ ಹೇಳಿದ್ದು ಈ ಅರ್ಥದಲ್ಲಿ. ಜನಪದ ಮತ್ತು ಶಿಷ್ಟಸಾಹಿತ್ಯಗಳೆರಡೂ ಅಕ್ಕಪಕ್ಕದಲ್ಲಿ ಗಂಗೆಯಮುನೆಯಂತೆ ಹರಿದಿವೆ. ಪ್ರವಾಹ ಬಂದಾಗ ಒಂದರ ನೀರು ಮತ್ತೊಂದಕ್ಕೆ ತುಳುಕುವಂತೆ, ಜನಪದ ಮತ್ತು ಶಿಷ್ಟಸಾಹಿತ್ಯಗಳೆರಡೂ ಪರಸ್ಪರ ತುಳುಕಿವೆ, ಬೆರೆತಿವೆ.

ಜನಪದ ಸಾಹಿತ್ಯ ಸಾಮಾಜಿಕ ನಿಯಂತ್ರಣ ಶಕ್ತಿಯಾಗಿ ಮತ್ತು ಸಾಮಾಜಿಕ ವಿಧಾಯಕ ಶಕ್ತಿಯಾಗಿ ಕೂಡ ಕೆಲಸಮಾಡುತ್ತದೆ. ಸಾಂಸ್ಕೃತಿಕ ಮೌಲ್ಯಗಳನ್ನು ಮತ್ತು ಸಾಮಾಜಿಕ ವರ್ತನೆಗಳನ್ನು, ಅವುಗಳಿಂದ ಜನತೆ ತಪ್ಪಿಹೋಗದ ಹಾಗೆ ನೋಡಿಕೊಳ್ಳುತ್ತದೆ. ಈ ಸಾಮಾಜಿಕ ಕಟ್ಟುಪಾಡುಗಳಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಿದಾಗ ಗಾದೆಗಳು, ಗೀತೆಗಳು, ಒಗಟುಗಳು ಮತ್ತು ಕಥೆಗಳು ಕೂಡ ಅದನ್ನು ವಿಮರ್ಶಿಸಲು ತೊಡಗುತ್ತವೆ. ಸಮಾಜ ವ್ಯಕ್ತಿಯ ಮೇಲೆ ಹೇರಲಾದ ನಿರ್ಬಂಧಗಳಿಂದ ಮಾನಸಿಕವಾಗಿ ವ್ಯಕ್ತಿ ಬಿಡುಗಡೆ ಪಡೆಯಲು ಜನಪದ ಸಾಹಿತ್ಯ ಸಹಾಯ ಮಾಡುತ್ತದೆ.

ಇವುಗಳ ಜೊತೆಯಲ್ಲಿಯೇ ಸಾಂಸ್ಕೃತಿಕ ನಿರಂತರತೆ ಮತ್ತು ಸ್ಥಿರತೆಯನ್ನು ನಿರ್ವಹಿಸುವ ಕಾರ್ಯವನ್ನು ಕೂಡಾ ಇದು ಮಾಡುತ್ತದೆ. ವ್ಯಕ್ತಿಗಳಲ್ಲಿ ನೈತಿಕಮಟ್ಟಗಳನ್ನು ಕಾಪಾಡಿಕೊಂಡು ಬರಲು ನೆರವಾಗಿದೆ. "ಪ್ರೌಢ ಕಾವ್ಯಗಳಲ್ಲಿ ಜನತೆಯ ಸಂಸ್ಕೃತಿ ಸ್ಪಷ್ಟವಾಗಿ ಗೋಚರಿಸುತ್ತಿರಲಿಲ್ಲ. ಆದುದ್ದರಿಂದ ಸಾಮಾನ್ಯರು ಸೃಷ್ಟಿಸಿರುವ ಜನಪದ ಸಾಹಿತ್ಯದ ಕಡೆಗೆ ಕಣ್ಣು ಹೊರಳಿಸಬೇಕಾಗುತ್ತದೆ. ಅಲ್ಲಿ ನಮಗೆ ಜನ ಜೀವನದ ಉಸಿರಿನ ಸ್ಪಂದನ ಕಂಡು ಬರುತ್ತದೆ. ಜನಪದರ ಸಂಸ್ಕೃತಿಯ ಪರಿಚಯವಾಗುತ್ತದೆ."[೧]

## ೭.೧. ಜನಪದ ಸಾಹಿತ್ಯ

ಜನಪದರ ಬದುಕಿನಲ್ಲಿ ಸಾಹಿತ್ಯ ಎಂಬುದು ಬಹಳ ಮುಖ್ಯವಾಗಿರುತ್ತದೆ. ಅಂದರೆ ಸಾಹಿತ್ಯವೆಂಬುದು ನಿಂತ ನೀರಲ್ಲ. ಅದು ವ್ಯಕ್ತಿಯ ಜೀವನದಲ್ಲಿ ಸದಾ ಇರುತ್ತದೆ. ಅಲ್ಲದೆ ಸಾಹಿತ್ಯವೆಂಬುದು ಪರಿವರ್ತನೆಯ ನಿಯಮ ಹೊಂದಿರುತ್ತದೆ. ಜನಪದ ಸಾಹಿತ್ಯವು ಸಾಹಿತ್ಯದ ಭದ್ರ ಬುನಾದಿ ಇದ್ದ ಹಾಗೆ.

ಸಾಹಿತ್ಯ ಮಾನವನು ತನ್ನ ದೈನಂದಿನ ಬದುಕಿಗೆ ಸೃಷ್ಟಿಸಿಕೊಂಡಿರುವ ಒಂದು ಸಾಧನವಿದ್ದಂತೆ. ಇದೊಂದು ಸಾಮಾಜಿಕ ಬದುಕಿಗೆ ಉತ್ತಮ ಸಾಧನವಾಗಿದೆ. ಜನಪದ ಸಾಹಿತ್ಯ ವ್ಯಕ್ತಿಯ ಬದುಕಿನಲ್ಲಿ ತುಂಬಾ ಪ್ರಧಾನತೆ ಹೊಂದಿರುತ್ತದೆ.

ವ್ಯಕ್ತಿಯ ಅನಿಸಿಕೆ, ವಿಚಾರಗಳನ್ನು, ತನ್ನ ಭಾವನೆಗಳನ್ನು ಕೂಗಿ, ಚೀರಿ, ಚಪ್ಪಾಳೆ ತಟ್ಟುವುದರ ಮೂಲಕ, ಕಣ್‌ಸನ್ನೆ, ಕೈ ಸನ್ನೆಯ ಮೂಲಕ ಅಭಿವ್ಯಕ್ತಿಗೊಳಿಸುತ್ತಾನೆ. ಸಾಮೂಹಿಕವಾಗಿ ತಮಗೆ ತಿಳಿದ ಚರಿತ್ರೆ, ಪರಾಕ್ರಮ, ಶೌರ್ಯ, ಬಲಿದಾನ, ತಾವು ನೋಡಿದ ಸಾಮಾಜಿಕ, ಧಾರ್ಮಿಕ ಬಲಿದಾನ, ಕೌಟುಂಬಿಕ, ಸುಖ–ದುಃಖ ಸಂದರ್ಭಗಳಿಗೆ ಸಹಜವಾಗಿ ಸ್ಪಂದಿಸುವ ಅಂತಹ ಘಟನೆಗಳನ್ನು ವಿವರಿಸಲು ಸಾಹಿತ್ಯವೆಂಬುದು ತುಂಬಾ ಪ್ರಮುಖ ಪಾತ್ರ ನಿರ್ವಹಿಸುತ್ತದೆ.

ಜನಪದ ಸಾಹಿತ್ಯವು ಹಾಡುಗಳ ರೂಪದಲ್ಲಿ, ಭಜನೆಯ ರೂಪದಲ್ಲಿ, ಕಥೆಗಳು, ಗಾದೆಗಳ, ಒಡಪುಗಳು ಮುಂತಾದ ರೂಪದಲ್ಲಿ ಸದಾ ಬೆಳಗುತ್ತಿರುತ್ತದೆ. ಸಾಹಿತ್ಯವು ಸಾವಿರಾರು ವರ್ಷಗಳ ಜೀವನ ಪರ್ಯಂತ ಅನುಭವಗಳನ್ನು ತಿಳಿಸುತ್ತದೆ. ಈ ಸಾಹಿತ್ಯವು ಸಾಹಿತ್ಯದಲ್ಲಿ, ಕಲಾತ್ಮಕತೆ, ಸಾಮಾಜಿಕ, ಭಾಷಿಕ, ಇತಿಹಾಸ, ಚಾರಿತ್ರಿಕ, ದಾಖಲೆ, ಮನೋವೈಜ್ಞಾನಿಕ ಇತ್ಯಾದಿ ಪ್ರಜ್ವಲಿತವಾಗಿರುತ್ತದೆ. ಒಟ್ಟಿನಲ್ಲಿ ಸಾಮಾಜಿಕ ಮೌಲ್ಯಗಳಲ್ಲಿ ಜನಪದ ಸಾಹಿತ್ಯ ಬಹಳ ಮುಖ್ಯಪಾತ್ರ ನಿರ್ವಹಿಸುತ್ತದೆ. ಸಮಷ್ಟಿ ಮನೋಧರ್ಮದಲ್ಲಿ ಎಲ್ಲಿಯವರೆಗೆ ಸಮಷ್ಟಿ ಪ್ರಜ್ಞೆ ಜನಪದದಲ್ಲಿ ಪ್ರಧಾನವಾಗಿರುತ್ತದೆಯೋ ಅಲ್ಲಿಯತನಕ ಜನಪದ ಸಾಹಿತ್ಯ ಜೀವನದಿಯಾಗಿ ಹರಿದು ಬರುತ್ತದೆ.

ಜನಪದ ಸಾಹಿತ್ಯ ಹೆಸರಿಲ್ಲದೆ ತಮ್ಮ ರಚನೆಯ ಮಹತ್ವವನ್ನು ತಾವೇ ಅರಿಯುವ ಮುಗ್ಧ ಜನತೆಯ ಸೊತ್ತು. ಸರಳತೆ, ಮುಗ್ಧತೆ ಮತ್ತು ಪ್ರಕೃತಿ ಸಾಮ್ಯತೆ ಅದರ ಪ್ರಧಾನ

ಗುಣಗಳು. ಈ ಸಾಹಿತ್ಯಿಕ ರಚನಾ ಪ್ರವೃತ್ತಿ ಹಕ್ಕಿಯ ಹಾಡಿನಂತೆ ಸಹಜ ಮತ್ತು ಸರಳ. ನೆಲದಲ್ಲಿ ಹಸಿರು ಮೂಡುವಷ್ಟು ಮೋಡದಲ್ಲಿ ಹನಿಯೊಡೆಯುವಷ್ಟು, ಗಿಡದಲ್ಲಿ ಹೂ ಅರಳುವಷ್ಟು ಸಾಮಾಜಿಕ ಮೌಲ್ಯಗಳಿಗೆ ಜನಪದ ಸಾಹಿತ್ಯದಲ್ಲಿ ಪ್ರಾಧಾನ್ಯತೆಯಿದೆ. ಜನಪದ ಸಾಹಿತ್ಯ ಸೃಷ್ಟಿಕರ್ತರು ಅನಕ್ಷರಸ್ಥ ಸಮುದಾಯವೆಂಬುದು ಅಕ್ಷರಶಹ ಸತ್ಯ ಅವರ ದೃಷ್ಟಿಯ ವೈವಿಧ್ಯತೆ ಬೆರಗು ಗೊಳಿಸುವಂತಿದೆ. ಕೆಲವು ವಿದ್ವಾಂಸರು ಭಾರತದಂತಹ ದೇಶದಲ್ಲಿ ರಾಮಾಯಣ, ಮಹಾಭಾರತಗಳಿಗೆ ಜನಪದ ಸಾಹಿತ್ಯವೇ ಪ್ರೇರಣೆ ನೀಡಿದೆ ಎಂದು ಹೇಳುತ್ತಾರೆ. ಸಂಸ್ಕೃತಿಯ ಸಾರ ರೂಪವಾದ ಜನಪದ ಸಾಹಿತ್ಯವು ಒಂದು ದೇಶದ ಬಹುಸಂಖ್ಯಾತ ಜನಪದರ ಆಶೋತ್ತರಗಳ ಪ್ರತೀಕವಾಗಿರುತ್ತದೆ. ಜನಸಂಸ್ಕೃತಿಯ ಅಂತರಾಳದಲ್ಲಿ ಅವುಗಳ ಬೇರುಗಳಿರುತ್ತವೆ. ಕಂಠಸ್ಥ ಸಂಪ್ರದಾಯದಲ್ಲಿ ಬೆಳೆದು ಬಂದು ಸದಾ ಜೀವಂತಿಕೆಯನ್ನು ಉಳಿಸಿಕೊಂಡಿರುತ್ತಾರೆ.

ಜನಪದ ಸಾಹಿತ್ಯ ಮನುಷ್ಯನು ಬೆಳೆದಂತೆಲ್ಲ, ಅನಕ್ಷರಸ್ಥರ ಪರಿದಿಯಲ್ಲೇ ಉಳಿದು ರಕ್ಷಣೆಗಾಗಿ ಪರಂಪರೆಯಲ್ಲಿ ಬಾಯಿಂದ–ಬಾಯಿಗೆ, ಕಿವಿಯಿಂದ ಕಿವಿಗೆ ಹರಿದು ಪರಾಕಾಷ್ಠತೆಯನ್ನು ಏರುವಂತದ್ದು. ಜನಪದರ ಒಂದು ಪ್ರಕಾರವಾದ ಜನಪದ ಸಾಹಿತ್ಯದ ಪ್ರಾಚೀನತೆ ಮನುಷ್ಯನಷ್ಟೇ ಪ್ರಾಚೀನವಾಗಿದೆ. ಶಿಷ್ಠ ಸಾಹಿತ್ಯ ಕವಿ? ಕಾವ್ಯದ ಸೂತ್ರಗಳ ನೆರವಿನಿಂದ ಶುದ್ಧ ಸಾಹಿತ್ಯವಾಗಿ ಜನಪದ ಸಾಹಿತ್ಯಕ್ಕಿಂತ ಭಿನ್ನವಾಗಿ ಬೆಳೆದು ನಂತರ ಸಾಹಿತ್ಯ. ಆದರೆ ಶಿಷ್ಠ ಸಾಹಿತ್ಯ ಏಕಮಾತ್ರ ಸಾಹಿತ್ಯವಾಗಿ ಸಾಹಿತ್ಯ ಚರಿತ್ರೆಯನ್ನು ರೂಪಿಸಿಕೊಂಡು ಅಕ್ಷರ ಲೋಕವನ್ನು ವ್ಯಾಪಿಸಿದ ಅನೇಕ ವರ್ಷಗಳ ಬಳಿಕ ಜನಪದ ಸಾಹಿತ್ಯದ ಕಡೆಗೆ ನೋಟವನ್ನು ಹರಿಸಲಾಯಿತು. ಪಾಶ್ಚಾತ್ಯರ ಪ್ರೇರಣೆಯನ್ನು ಪಡೆದ ಭಾರತೀಯರು ಜನಪದ ಸಾಹಿತ್ಯದ ಕಡೆಗೆ ಗಮನಹರಿಸಿ, ಕಳೆದ ೫೦ ವರ್ಷಗಳಿಂದೀಚೆಗೆ ಸಂಗ್ರಹಣೆ, ವಿವರಣೆ, ವಿಶ್ಲೇಷಣೆಗಳು ಮತ್ತು ವ್ಯಾಖ್ಯಾನಗಳು ಹಾಗೂ ಹಲವು ಸಿದ್ಧಾಂತಗಳು ಜನಪದ ಸಾಹಿತ್ಯಕ್ಕೆ ಸಂಬಂಧಿಸಿಂತೆ ಹೊರಬಂದಿವೆ. ಮಾನವ ಸಮಾಜ, ಸಂಸ್ಕೃತಿಗಳನ್ನು ನಿರ್ವಹಿಸುವ ಕ್ರಿಯಾಭಿವ್ಯಕ್ತಿಯಾಗಿ ಮೂಡಿ ಬಂದಿದೆಯಾದುದರಿಂದ ಹಲವು ರೀತಿಯ ಜೀವನ ದರ್ಶನಗಳು ಜನಪದ ಸಾಹಿತ್ಯದಿಂದ ಒದಗಿಬರುತ್ತವೆ.

ಜನಪದ ಸಾಹಿತ್ಯ ಜನಪದರ ಬದುಕಿನ ಅವಿಭಾಜ್ಯ ಅಂಗವಾಗಿದೆ. ಹಾಗೆಯೇ ಜನಪದ ಸಾಹಿತ್ಯವು ಕಾಯಕದೊಡನೆ ಸೃಷ್ಟಿಯಾಗಿದೆ. ಮನುಷ್ಯ ತನ್ನ ಅಂತರಂಗವನ್ನು ಅಭಿವ್ಯಕ್ತಿಗೊಳಿಸುವುದೇ ಸಾಹಿತ್ಯ ಮನುಷ್ಯ ಹುಟ್ಟಿನೊಂದಿಗೆ ಅವರ ಜನಪದ ಸಾಹಿತ್ಯದೊಂದಿಗೆ ಮೂಡಿಬರುತ್ತವೆ. ಜನಪದ ಸಾಹಿತ್ಯ ಕೇವಲ ಪ್ರಾದೇಶಿಕವಾಗಿ ವೈವಿಧ್ಯವಾಗಿ ಬೆಳೆದುಕೊಂಡು ಬರುವುದನ್ನು ನಾವು ಕಾಣ ಬಹುದಾಗಿದೆ. ಅಂದಿನ ಜನತೆಯ ಅಂತರಾಳದಲ್ಲಿ ಜೀವನ ಸಾಹಿತ್ಯ ಪ್ರಮುಖವಾದುದು. ಕಥೆ, ಗೀತೆ, ಗಾದೆ, ಒಗಟು, ಇವೇ ಆ ಬೇರುಗಳೆಂದು, ಜನಪದ ರಂಗದಲ್ಲಿ ಇವುಗಳಿಗೆ ನಿಕಟ ವಾದಂತಹ ಸಂಬಂಧ ಹೊಂದಿರುವಿಕೆಯನ್ನು ಕಾಣಬಹುದಾಗಿದೆ.

ಶಿಷ್ಟ ಸಾಹಿತ್ಯಕ್ಕಿಂತ ಭಿನ್ನವಾಗಿ ಜನಪದ ಸಾಹಿತ್ಯ ಬೆಳೆದುಬಂದುದಾಗಿದೆ. ಜನಪದ ಸಾಹಿತ್ಯ ಕೇವಲ ಪ್ರಾದೇಶಿಕವಾಗಿ ವೈವಿಧ್ಯವಾಗಿ ಬೆಳೆದು ಬಂದಿಲ್ಲ. ಅಲ್ಲಿನ ಪರಿಸರ ಬದುಕು, ವ್ಯಕ್ತಿ, ಭಾಷೆ, ಸಂಸ್ಕೃತಿ ಮುಂತಾದವುಗಳ ಕಾರಣವಾಗಿ ವಿಶಿಷ್ಟತೆಯಿಂದ ಮೂಡಿ ಬಂದಿದೆ. ಪ್ರಸ್ತುತ ಬಂಕಾಪುರ ಗ್ರಾಮದಲ್ಲಿ ಮುಸ್ಲಿಂ ಸಮುದಾಯ ಹೆಚ್ಚಾಗಿದ್ದರು ಪ್ರಭಾವ ಅದರ ಇಲ್ಲಿನ ಸಾಹಿತ್ಯದ ಮೇಲೆ ಆಗಿಲ್ಲ. ಜನ ಸಂಸ್ಕೃತಿಯ ಅಂತರಾಳದಲ್ಲಿ ಅವುಗಳ ಬೇರುಗಳಿರುತ್ತವೆ. ಕಂಠಸ್ಥ ಸಂಪ್ರದಾಯದಲ್ಲಿ ಬೆಳೆದು ಸದಾ ಜೀವಂತಿಕೆಯಿಂದ ಉಳಿದು ಕೊಂಡಿರುತ್ತವೆ.

**೭.೨. ಜನಪದ ಗೀತೆಗಳು**

ಜನಪದ ಸಾಹಿತ್ಯದಲ್ಲಿ ಹೆಣ್ಣುಮಕ್ಕಳದೆ ಪ್ರಧಾನ ಪಾತ್ರ. ಜನಪದ ಸಾಹಿತ್ಯದ ಬಹು ಭಾಗವನ್ನು ಹೆಣ್ಣು ಮಕ್ಕಳ ಹಾಡುಗಳೇ ತುಂಬಿದೆ. ಹೆಣ್ಣು ಜನಪದ ಸಾಹಿತ್ಯದ ಜೀವನಾಡಿ ಯಾಗಿದ್ದಾಳೆ. ಮಡದಿಯಾಗಿ, ಸೊಸೆಯಾಗಿ, ಮಗಳಾಗಿ, ಅಕ್ಕ–ತಂಗಿಯಾಗಿ ಅನೇಕ ರೂಪಗಳಲ್ಲಿ ಬಾಳು ಬೆಳಗುವ ಇವಳು ಜನಪದ ಸಾಹಿತ್ಯದ ಮುಖ್ಯ ವಸ್ತುವಾಗಿದ್ದಾಳೆ. ತೊಟ್ಟಿಲು ತೂಗುವಾಗ, ಹೊಲದಲ್ಲಿ ಕೆಲಸ ಮಾಡುವಾಗ, ಹೆಣ್ಣುಮಗಳು ಋತುಮತಿಯಾದಾಗ ಹುಟ್ಟು ಸಾವಿನ ನಡುವಿನ ಬದುಕು ಜನಪದ ಸಾಹಿತ್ಯದ ವಸ್ತುವಾಗುತ್ತದೆ. ಸಂಸ್ಕೃತಿಯ ಹಿರಿಮೆ–ಗರಿಮೆ ಜೀವನದ ಅನುಭವಗಳ ಕುರಿತು ಸ್ತ್ರೀಯರು ಹಾಡುವ ಈ ಹಾಡುಗಳನ್ನು ಇವರೇ ಕಟ್ಟಿ ಹಾಡಿದ್ದಾರೆ. ಈ ಹಾಡುಗಳನ್ನು ವ್ಯಕ್ತಿ ಜೀವನದ ಸಂಗೀತವಾದ್ಯಗಳು, ಸಾಂಪ್ರದಾಯಿಕ ಹಾಡುಗಳಲ್ಲಿ ಹೆಣ್ಣಿನ ಶೀಲ, ಚಾರಿತ್ರ್ಯ, ತ್ಯಾಗ, ಕಷ್ಟ, ಸಹಿಷ್ಣತೆ, ಪಾವಿತ್ರತೆಯನ್ನು ಮೆರೆಸಿ ಸ್ತ್ರೀಯರ ಜೀವನ ಚಿತ್ರಣ ಕೊಡುತ್ತವೆ. ಬಂಕಾಪುರ ಪರಿಸರದಲ್ಲಿ ಜನಪದ ಕಥೆಗಳ ಸಂಖ್ಯೆಯನ್ನು ಮೀರಿಸುವಷ್ಟು ಗೀತೆಗಳ ಸಂಖ್ಯೆ ಹೆಚ್ಚಾಗಿದೆ. ರಾಜ್ಯದ ಇತರೆ ಭಾಗದಲ್ಲಿ ದೊರೆಯುವಂತಹದಕ್ಕಿಂತ ಹಲವು ಅಪರೂಪವಾಗಿವೆ. ಗಂಡ ಹೆಂಡ್ತಿರು ಹಾಲು ಜೇನಿನಂತಹ ಮಧುರ ಬಾಂಧವ್ಯದ ಒಂದು ಗುಂಪು, ತವರಿನ ಕಳ್ಳು ಬಳ್ಳಿ ಸಂಬಂಧವನ್ನು ಮನೋಜ್ಞವಾಗಿ ತಿಳಿಸುವಂತಹ ಮತ್ತೊಂದು ಗುಂಪು ಮತ್ತು ತಮ್ಮ ನೆಚ್ಚಿನ ಗುರುಗಳಿಗೆ ಧನ್ಯವಾದ ಭಾವನಾ ತೋರುವ ಗೀತೆಗಳು. ಹೇಗೆ ಇಲ್ಲಿನ ಜನಪದ ಸಂಸ್ಕೃತಿಯನ್ನು ಪರಿಚಯ ಮಾಡಿಕೊಟ್ಟು ಇಲ್ಲಿನ ಸಂಸ್ಕೃತಿ ಮನಸ್ಸಿನ ಮೂಲಕ ಜನಪದರ ಶ್ರೀಮಂತ ಸಾಹಿತ್ಯವನ್ನು ಅತ್ಯಂತ ಮನಮೋಹಕವಾಗಿ ಪ್ರತಿಬಿಂಬಿಸಿದ್ದಾರೆ.

**ದೇವರ ಸ್ತುತಿ ಪದಗಳು:** ಈ ದೇವರ ಸ್ತುತಿ ಹಾಡುಗಳು ತಾವು ನಂಬಿದಂತಹ ದೇವರನ್ನು ಕುರಿತು ಜನಪದರು ಹಾಡುವ ಹಾಡುಗಳು. ದೇವರು ಜನಪದರಿಗಿರುವ ಸಂಬಂಧ, ದೇವರ ಕುರಿತಾದ ಜನರ ಕಲ್ಪನೆ, ಭಾವನೆ, ನಂಬಿಕೆ, ವಿಶ್ವಾಸ, ಭಕ್ತಿ, ಭಾವಗಳು ಇವೆ. ಈ ಹಾಡುಗಳು ಊರಿನಲ್ಲಿರುವ ದೇವ ದೇವಿಯರ ವಿವರ ಸ್ವರೂಪ ಸೌಂದರ್ಯವನ್ನು ಸ್ಥಳ ಮೂಲ ಆಚರಣೆ ಮಹಿಮೆಗಳು ವರ್ಣನೆಯನ್ನು ಸಹ ಅವರ ಗ್ರಾಮದಲ್ಲಿ ಕೆಲಸ ಕಾರ್ಯಗಳ

ಜೊತೆಗೆ ದೇವರ ಪೂಜೆಗಳಲ್ಲಿ. ಉತ್ಸವ ,ಆಚರಣೆ ಜಾತ್ರೆಗಳಲ್ಲಿ ಈ ಹಾಡುಗಳ ನಿರೂಪಣೆ ರೂಪದಲ್ಲಿ ಕಥನ ಕಾವ್ಯಗಳ ಆರಂಭದ ಆಚರಣೆ ಪೂಜೆಗಳ ಜೊತೆ ಹಾಡುವ ಹಾಡುಗಳ ರೂಪದಲ್ಲಿ ಇವು

ಮಾಡುವೆ ನಮಸ್ಕಾರ ಶಿವನ ಸದರಿಗೆ
ನೆನೆದ ಗಣಪತಿಗೆ
ಚಿತ್ತಗೊಟ್ಟು ಕೇಳರಿ ಚಿಗರಿ ಬಾಳೆವನ
ಚಂದಾಗಿ ಕೇಳರಿ ಚಿಗರಿ ಬಾಳೆವನ

**ಭೂಮಿ ತಾಯಿ ನೆನೆಯುವುದು** : ತಮ್ಮ ದಿನನಿತ್ಯದ ಬದುಕಿನಲ್ಲಿ ಬರುವಂತಹ ಸನ್ನಿವೇಶ ಜನಪದರು ಎದ್ದ ತಕ್ಷಣವೇ ಭೂಮಿ ತಾಯಿಯನ್ನು ನೆನೆಯುತ್ತಾರೆ. ತಮಗೆ ಅನ್ನ ನೀಡುವ ಭೂಮಿ ತಾಯಿಯನ್ನು ಎದ್ದು ಅರೆ ಕ್ಷಣವಾದರೂ ನೆನೆಯದೇ ಹೋದರೆ ನಮಗೆ ಅನ್ನ ಸಿಗುವುದಿಲ್ಲ. ಪ್ರಕೃತಿಯ ಜೊತೆಗಿನ ಹೊಂದಾಣಿಕೆಯಿಂದಾಗಿ ಜನರಿಗೆ ಯಾವ ತೊಂದರೆ ಬರುವುದಿಲ್ಲ.

**ಜೋಳ ಬೀಸುವಾಗ ಹೇಳುವ ಹಾಡು:** ಮಹಿಳೆಯರು ಯಾವುದೇ ಕೆಲಸ ಮಾಡಬೇಕೆಂದರೆ ಸಹಜವಾಗಿ ಹಾಡುತ್ತಲೆ ಮಾಡುತ್ತಾರೆ. ಬೆಳಗಿನ ಜಾವ ಕೋಳಿ ಕೂಗುವ ಮುನ್ನವೇ ಹಳ್ಳಿಯ ಹೆಂಗಸರು ಎದ್ದು ಜೋಳ ಬೀಸುತ್ತಾ ತಮ್ಮೆಲ್ಲ ಕಷ್ಟಗಳನ್ನು ಮರೆತು ಹೊಸ ಮನಸ್ಸಿನಿಂದ ಮತ್ತೆ ದಿನದ ಜೀವನಕ್ಕೆ ಕಾಲು ಇಡುತ್ತಾಳೆ.

ಬೆಳಗಾಗುತ್ತಲೇ ಬೀಸುವ ಕಲ್ಲು ಹಿಡಿದು ಜೋಳ ಬೀಸುವುದು ತವರು ಮನೆಯ ಸಂಕೇತ ವಾದರೆ ಅಕ್ಕಿ ಬೀಸುವ ಕಲ್ಲು ಮಾವನ ಮನೆಯ ಸಿರಿವಂತಿಕೆ ಅಲ್ಲಿ ತವರು ಮನೆಗಿಂತಲೂ ಮಾವನ ಮನೆಯವರು ಸ್ಥಿತಿವಂತರೆಂಬ ಭಾವನೆ ವ್ಯಕ್ತವಾಗುತ್ತದೆ.

ಎದ್ದು ನೆನೆದೇನೋ ಯಾರ್‍ಯಾರ ನೆನೆದೇನು
ಅತ್ತೆ ಮಾವನ ಪಾದ, ಮತ್ತೆ ಗುರುವಿನ ಪಾದ
ಐವತ್ತೊಂದು ಕೋಟಿ ಶರಣಾರು । ಪಾದವ
ಎದ್ದು ಅರಗಳಿಗೆ ನೆನೆದೇನು

**ಗುರುಗಳ ಮೇಲಿನ ಪದ:** ಜನಪದರಲ್ಲಿ ತಂದೆ-ತಾಯಿ ಮತ್ತು ಗುರುಗಳಲ್ಲಿ ಎಲ್ಲಿಲ್ಲದ ಪ್ರೀತಿ ಗೌರವ ದಾರಿಯಲ್ಲಿ ಬರುವ ಗುರುಗಳನ್ನು ನೋಡಿಯೂ ನೋಡದಂತೆ ಹೋಗಬಾರದು ಇವರು ಅವರ ಬಗ್ಗೆ ಇಟ್ಟಿರುವ ಭಕ್ತಿಯನ್ನು ತೋರುವುದನ್ನು ಕಾಣುತ್ತೇವೆ. ಹಾಡುಗಳು ಈ ಗ್ರಾಮದ ಜನರ ಸಂಸ್ಕೃತಿಯ ಪರಿಚಯ ಮಾಡಿಕೊಡುವ ಮೂಲಕ ಇಲ್ಲಿನ ಜನರ ಶ್ರೀಮಂತ ಸಾಹಿತ್ಯವನ್ನು ಪ್ರತಿ ಬಿಂಬಿಸುತ್ತವೆ.

ತಾಯಿ ತಂದೆ ಪಾದ ಮ್ಯಾಲೆ ಗುರುವಿನ ಪಾದ
ಅರವತ್ತೊಂದು ಕೋಟಿ ಶರಣಾರು । ಪಾದವ
ಎದ್ದೊಂದರಗಳಿಗೆ ನೆನೆದೇನು

**ಮೈನೆರೆದಾಗ ಹೇಳುವ ಹಾಡು:** ಹುಡುಗಿ ಋತುಮತಿಯಾದಾಗ ಐದು ಅಥವಾ ಹನ್ನೊಂದು ಇಲ್ಲವೆ ಹದಿನಾರು ದಿನಗಳವರೆಗೆ ಕೂಡಿಸಿ ಆರತಿ ಮಾಡುವ ಕಾರ್ಯ ಮಾಡಲಾಗುತ್ತದೆ. ಇಂತಹ ಸಂದರ್ಭದಲ್ಲಿ ಹಾಡುವ ಹಾಡನ್ನು ಸೋಬಾನದ ಗೀತೆ/ಹಾಡು ಎಂದು ತಿಳಿಯಬಹುದು. ಇಲ್ಲಿ ಸೋಬಾನೆ ಹಾಡುಗಳಿಗೆ ಕೊರತೆ ಇಲ್ಲ.

ನೆರೆತು ಕುಂತಾಳ ಗೌರಿ ಹೆರಳು ಬಂಗಾರ ಚವರಿ
ಆಕಿ ಬಣ್ಣದ ಬೈತಾಲಿ ಬಿಡಿ ಮುತ್ತಾ ಸೋ
ನಾಕ ಕೊಪ್ಪರಿಗೆ ನೀರು

ಹೀಗೆ ಸಂಮೃದ್ಧವಾಗಿ ಮದುವೆಯ ಸಂದರ್ಭದಲ್ಲಿ ಹಾಗೆಯೇ ಹಲವು ರೀತಿಯಾದ ಸೋಬಾನ ಹಾಡುಗಳನ್ನು ಎಲ್ಲ ಸಮುದಾಯದವರು ಹಾಡುವುದನ್ನು ಕಾಣಬಹುದು.

**ಅಣ್ಣ ತಂಗಿಯರ ಗೀತೆ:** ಜನಪದರಲ್ಲಿ ಅಣ್ಣ ತಂಗಿಯರ ಜೀವನ ಹೃದಯ ಸ್ಪರ್ಶಿಯಾಗಿದೆ. ಅವರಾಡುವ ಮಾತುಗಳು ಭಾವನಾತ್ಮಕವಾದಂತಹ ಲೋಕಕ್ಕೆ ಕರೆದೊಯ್ಯುತ್ತವೆ. ಇಲ್ಲಿ ತಂಗಿಗೆ ಅಣ್ಣ ತರುವ ಉಡುಗೊರೆಯೂ ಅಷ್ಟೇ ಚೆನ್ನಾಗಿದೆ.

ಹಡದವ್ವ ಅದಾಳೆಂದು ದಡ ದಡ ನಾ ಬಂದೆ
ನಡದಾರ‍್ಯಾಗ ಅಣ್ಣ ಇದರಿಗೆ ಹೇಳ್ಯಾನ ನಡಿ ತಂಗಿ ಮನೆಗೆ ಮಡದಿ ಅದಾಳ ॥ಪ॥

ಆರಿದ ಬಾಣವ ನೀಡ ಕಾದ ಹಾಲುವನಹಾಕ
ಬೇಗನೆ ತಂಗೆವ್ವಗ ಉನನೀಡ ॥೧॥

**ಜೋಗುಳ ಹಾಡು:** ಜೋಗುಳ ಹಾಡುಗಳಲ್ಲಿಯೂ ನಾವು ವೈವಿಧ್ಯತೆಯನ್ನು ಕಾಣಬಹುದು. ಈ ಜೋಗುಳ ಹಾಡಿನಲ್ಲಿ ದೇವರನ್ನು ನೆನೆಯುವಾಗ ಜೊತೆಗೆ ಕಂದನ ವರ್ಣನೆಯನ್ನು ವಿವಿಧ ರೀತಿಯಲ್ಲಿ ಮಾಡಿ ಕಂದನ ಸ್ವರೂಪ ಸೌಂದರ್ಯವನ್ನು ಹಾಡಿ ತಮ್ಮ ತಾಯಿಯರು ತಮ್ಮ ಕಂದನ ಸೌಂದರ್ಯವನ್ನು ಹೆಚ್ಚಿಸಿದ್ದಾರೆ.

ಕುಂಚಿಗಿ ಕುಲಾಯ ಗೊಂಚಲ ಬಿಡಿಮುತ್ತ
ತೀಡಿ ತೀಡಿ ಕಟ್ಟಿದರ
ಕೊಡಿ ಕೊಡವಿ ಒಗಿತಾನ್ರಿ ಜೋ ಜೋ ॥೧॥

**ಸೀಮಂತ ಗೀತೆ:** ಮಹಿಳೆಗೆ ಮೀಸಲಾದ ಕೆಲವು ಹಾಡುಗಳಿವೆ. ಮನೆಯಲ್ಲಿ ಮಗು ಹುಟ್ಟುವ ಪೂರ್ವದಿಂದ ಹಿಡಿದು ಹೆಣ್ಣು ಗರ್ಭಿಣಿಯಾದಾಗ ಆಕೆಯ ಜೀವನದಲ್ಲಿ ಹೊಸ

ಹೊಸ ರೀತಿಯಾದಂತಹ ಅನುಭವಗಳನ್ನು ಮೈದಳೆಯುತ್ತವೆ. ಏನೇನೋ ತನ್ನ ಬೇಕೆನಿಸುತ್ತದೆ. ಆಗ ಆಕೆಯ ನಾಲ್ಕು ತಿಂಗಳಲ್ಲಿ ಕಳ್ಳ ಕುಬುಸ ಮಾಡುವುದರ ಮೂಲಕವೇ ಆಕೆಯ ಬಯಕೆ ತೀರಿಸಲು ವಿವಿಧ ಬಗೆಯ ಭಕ್ಷ್ಯ ಭೋಜನವನ್ನು ಮಾಡಿಕೊಡುತ್ತಾರೆ. ಹಾಗೆಯೇ ಉಡಿಗೆ ತೊಡುಗೆ ಗಳನ್ನು ಸಹ ಇಟ್ಟು ಅವಳಿಗೆ ಹೂ ಮುಡಿಸಿ ಆರತಿಯನ್ನು ಮಾಡುವುದನ್ನು ಕಾಣುತ್ತೇವೆ.

ಪುಟ್ಟೆದ ಹಿಟ್ಟ ಕುಟ್ಟಿ ಕುಟ್ಟಿ
ತೊಯ್ದ ಗೋದಿ ಬೀಸಿ ಬೀಸಿ
ಸೂರಂಗದ ಹೋಳಿಗಿ ಮಾಡುಂಡನೆಂದಾಳ
ಬಾಲನ ಬಯಕೀಲಿ ಬಗಸ್ಯೇನೆಂದಾಳ

**ಶಿಶು ಗೀತೆ:** ಈ ಹಾಡುಗಳು ಪ್ರಾಯಶಃ ಕರ್ನಾಟಕದಲ್ಲಿ ತುಂಬಾನೇ ಪ್ರಚಲಿತವಿರುವುದಾಗಿವೆ. ಈ ಹಾಡುಗಳನ್ನು ಮಕ್ಕಳನ್ನು ತೊಡೆಯ ಮೇಲೆ ಕೂಡಿಸಿಕೊಂಡು ಹೇಳಲು ಪ್ರಾರಂಭಿಸಿದರು. ಆರಂಭಿಸಿದರೆ ಇನ್ನು ಚಿಕ್ಕ ಚಿಕ್ಕ ಮಕ್ಕಳು ಅಂದರೆ ಕೂಸು ಕೂಡಾ ತನ್ನ ಶರೀರವನ್ನೆಲ್ಲವನ್ನು ಅಲ್ಲಾಡಿಸುತ್ತದೆ.

ಆನಿ ಬಂತ್ ಆನಿ ಇದ್ಯಾವ ಊರ ಆನಿ
ಬಿಜಾಪುರ ಆನಿ ಇಲ್ಲಿಗ್ಯಾಕ ಬಂದಿತ್ತು
ಹಾದಿ ತಪ್ಪಿ ಬಂತು ಹಾದಿಗೊಂದುಡ್ಡು
ಬೀದಿಗೊಂದುಡ್ಡು ಸೇರಕೊಬ್ರಿ ತಂದು
ಲಟ ಲಟ ಮುರಿದು ಹುಡುಗರ ಕೈಯಿಗೆ ಕೊಟ್ಟು

ಮಳೆಬಾರದ ಬರಗಾಲ ಬಿದ್ದಂತ ಸಂದರ್ಭದಲ್ಲಿ ಹುಟ್ಟಿಕೊಂಡ ಈ ಹಾಡುಗಳು ಮಕ್ಕಳ ಕೈ ಕೈ ಹಿಡಿದುಕೊಂಡು ಎದರು ಬದರುಹಾಡುವಂತಹ ಹಾಡು ಇದಾಗಿದೆ.

ಕಳ್ಳೆ ಮಳ್ಳೆ ಕಪಾಟ ಮಳ್ಳೆ
ಸುಣ್ಣಾ ಕೊಡತೆನಿ ಸುರಿಯಲೆ ಮಳೆಯೆ
ಬಣ್ಣ ಕೊಡತೆನಿ
ಬಾರಲೆ ಮಳೆಯೆ
ಸುರಿ ಮಳೆ ಸುರಿ ಮಳೆ

ಇದನ್ನು ಆಟದ ಜೊತೆ ಜೊತೆಗೆ ಹಾಡುವುದು. ಈಗಲೂ ಬಂಕಾಪುರ ಗ್ರಾಮದಲ್ಲಿ ಜೀವಂತವಾಗಿದೆ.

**ಕೋಲಾಟದ ಹಾಡು**

೧) ಕೋಲು ಕೋಲಣ್ಣ
ಕೋಲು ಕೋಲಣ್ಣ ಕೋಲೆ
ಕೋಲು ಕೋಲಣ್ಣ ಕೋಲೆ

**ಬೀಸುವ ಹಾಡು:** ಆಧುನಿಕತೆಯ ಪ್ರಭಾವ ಹಾಗೂ ಇಂದಿನ ಯಂತ್ರ ಜಗತ್ತಿನ ದಾಳಿಯಿಂದಾಗಿ ಬೀಸುವ ಕುಟ್ಟುವ ಕೆಲಸ ಕಡಿಮೆಯಾಗ ತೊಡಗಿದೆ. ಅದರ ಜೊತೆಗೆ ಬೀಸುವ ಕುಟ್ಟುವ ಹಾಡುಗಳೂ ಸಹ ಮರೆಯಾಗತೊಡಗಿವೆ. ಬೀಸುವ ಕಾಳು ಮುಗಿದರೂ ಹಾಡು ಇನ್ನೂ ಉಳಿಯುತ್ತವೆ. ಇಂದು ಇಂತಹ ಹಾಡುಗಳು ಕೇವಲ ಕೆಲವು ಸಂದರ್ಭಗಳಿಗೆ ಮಾತ್ರ ಸೀಮಿತವಾಗಿವೆ.

ಸೆರಗಾ ಬೀಸಿದನವ್ವ/ಶಿವನಾ ಸದರಿನ ಮ್ಯಾಲೆ
ಕಲ್ಲಿಗೆ ಮುಕ್ಕಾಕಿ ಎಲ್ಲಾ ದೇವರ ನೆನೆದೆ
ಎಲ್ಲವ್ವ ನನ್ನ ಮನಿದೇವಿ
ಸೆರಗಾ ಬೀಸಿದನವ್ವ/ಶಿವನ ಸದರಿನ ಮ್ಯಾಲೆ

**ಜೋಕುಮಾರನ ಹಾಡು:** ಈ ಹಾಡನ್ನು ಭಾದ್ರಪದ ಮಾಸದಲ್ಲಿ ಮಳೆ ಇಲ್ಲದೆ ಪೈರು ಒಣಗುತ್ತಿರುವಾಗ ಜೋಕುಮಾರನ ಹಬ್ಬವನ್ನು ಆಚರಿಸುವ ರೂಢಿ ಇಂದಿಗೂ ಇದೆ. ಈ ಹಬ್ಬವನ್ನು ಆಚರಣೆ ಮಾಡಿದರೆ ಮಳೆ ಬರುತ್ತದೆ ಎಂಬುದು ಇಲ್ಲಿನ ಜನರ ನಂಬಿಕೆಯಾಗಿದೆ. ಮನೆ ಮನೆಗೆ ಹೋಗಿ ಪೂಜೆ ಸಲ್ಲಿಸಿ ಅವನ ಕಥೆಯನ್ನು ಹಾಡುತ್ತಾರೆ. ಆ ಹಾಡು ಈ ರೀತಿಯಾಗಿದೆ.

ಜೋಕುಮಾರ ಹುಟ್ಯಾನ ಯಾಕಲ್ಲಾ ನನದೇವಿ
ಕಾಕದ ಮಸರ ಕಡಿಯಾಲೇ। ಜೋಕುಮಾರ
ಕಾಕದ ಮಸರ ಕಡಿಯಾಲೇ। ತಾಯವ್ವ
ಬೆಣ್ಣೆ ಕೊಡು ನನ ಕಮರಾಗ ಜೋಕುಮಾರ

## ೭.೩. ಜನಪದ ಕಥೆಗಳು

ಜನಪದ ಸಾಹಿತ್ಯದ ಬಹುಮುಖ್ಯ ಪ್ರಕಾರ ಜನಪದ ಕಥೆಗಳು. ನಮ್ಮ ಸಮಾಜದಷ್ಟೇ ಪ್ರಾಚೀನತೆಯನ್ನು ಪಡೆದುಕೊಂಡಿರುವ ಈ ಕಥೆಗಳನ್ನು ಹೇಳುವ ಮತ್ತು ಕೇಳುವ ಕ್ರಿಯೆ ಯಾವುದೊಂದು ಪ್ರದೇಶ ಮತ್ತು ಕಾಲಕ್ಕೆ ಸೀಮಿತವಾಗಿಲ್ಲ. ಎಲ್ಲಾ ಕಾಲಕ್ಕೂ ಪ್ರಪಂಚದ ಎಲ್ಲಾ ಭಾಗಗಳಿಗೂ ಅದು ಹರಡಿರುವಂಥದ್ದು ಜಗತ್ತಿನಾದ್ಯಂತ ಜನಪದ ಕಥೆಗಳಲ್ಲಿ ಕಂಡುಬರುತ್ತದೆ. ಪ್ರದೇಶದಿಂದ ಪ್ರದೇಶಕ್ಕೆ ಕಥೆಯಲ್ಲಿ ಕಂಡುಬರುವ ವ್ಯತ್ಯಾಸಗಳು ಜನಪದ ಕಥೆಯ ವಿಶಿಷ್ಟ ಲಕ್ಷಣವಾಗಿದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಪ್ರದೇಶದಲ್ಲಿ ಹರಿದಾಡುತ್ತಿರುವಂತ ಜನಪದ ಕಥೆಗಳನ್ನು ನೋಡಿದಾಗ ವಿವಿಧ ಮುಖಗಳು ಅನಾವರಣಗೊಳ್ಳುತ್ತವೆ. ಮಾನವ ಹೇಗೆ ಬದುಕಬೇಕು, ಲೋಕದಲ್ಲಿ ಅವನು ಹೇಗೆ ವರ್ತಿಸಬೇಕು ಎಂಬ ರೀತಿಯ ಶಿಕ್ಷಣಾತ್ಮಕ ದೃಷ್ಟಿ ಅಲ್ಲಿನ ಬಹುಪಾಲು ಕಥೆಗಳಲ್ಲಿ ಕಂಡುಬರುತ್ತದೆ. ಇವು ಆಯಾ ಜನಾಂಗದ ಸಂಸ್ಕೃತಿಯನ್ನು ರೂಪಿಸುವ

ನೀತಿಪ್ರಧಾನ ಕಥೆಗಳೆಂದರೂ ಆಗುತ್ತದೆ. ಇಲ್ಲಿನ ಕಥೆಗಳು ವಸ್ತು, ಜೀವನದೃಷ್ಟಿ, ಪರಿಸರ, ಸಾಹಸ, ಬುದ್ಧಿಶೀಲತೆ, ತಂತ್ರಗಾರಿಕೆ, ಲೋಕನೀತಿ, ರೂಪಾಂತರನೀತಿ ಮುಂತಾದ ವೈವಿಧ್ಯಮಯ ಕ್ಷೇತ್ರಗಳನ್ನು ಒಳಗೊಂಡಿವೆ. ಈ ಕಥೆಗಳ ವೈವಿಧ್ಯತೆ, ಅನನ್ಯತೆ, ವ್ಯಾಪಕತೆ ಹಾಗೂ ವಿಶಿಷ್ಟತೆಗಳು ಅಧ್ಯಯನಕ್ಕೆ ಪ್ರೇರಣೆಯನ್ನು ಒದಗಿಸುತ್ತವೆ. ಜನಪದ ಕಥೆಗಳನ್ನು ಹೇಳುವ ಮತ್ತು ಕೇಳುವ ಪರಿಪಾಠವಿದೆ. ಇದೊಂದು ಪ್ರಜ್ಞಾಪೂರ್ವಕ ಮನರಂಜನಾಕಲೆ, ಧಾರ್ಮಿಕವಾಗಿ ಕಥೆಗಳು ಕೆಲವೊಮ್ಮೆ ಪಾತ್ರವಹಿಸಿದರೂ ಅಪ್ಪಟ ಮನರಂಜನೆಯೇ ಇದರ ಮುಖ್ಯ ಉದ್ದೇಶ. ಇಲ್ಲಿನ ಕಥೆಗಳು ವಯಸ್ಸಿನ ಸ್ಥಾನದ ಪರಿವೇ ಇಲ್ಲದೆ ಎಲ್ಲರಿಗೂ ಕುತೂಹಲ ಸಾಧನಗಳಾಗಿವೆ.

ಜನಪದ ಸಾಹಿತ್ಯದಲ್ಲಿ ಜನಪದ ಕಥೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನಿಡುತ್ತೇವೆ. ಹೇಳುವ, ಕೇಳುವ ಕ್ರಿಯೆ ಮುಖ್ಯವಾದುದು. ಯಾವುದೊಂದು ಪ್ರದೇಶ ಮಾತ್ರವಲ್ಲದೆ ಜಗತ್ತಿನ ಸುತ್ತಲೂ ಕಥೆಗಳನ್ನು ಕಾಣಬಹುದು. ಜನಪದ ಕತೆಯಲ್ಲಿ ಅನೇಕ ರೀತಿಯಾದ ನೀತಿ ಕಥೆಗಳನ್ನು ಕಾಣಬಹುದು, ಮನರಂಜನಾ ಕಥೆಯೂ, ಧಾರ್ಮಿಕವಾದ ಕಥೆಯೂ ಆದರೂ ಅಪ್ಪಟವಾದ ಮನರಂಜನೆ ನೀಡುವುದು ಇದರ ಉದ್ದೇಶವಾಗಿದೆ. ಜನಪದ ಕಥೆ ಜನಪದ ಬದುಕಿನ ಸಾಂಪ್ರದಾಯಿಕ ಕಥೆಯಾಗಿದೆ. ಬಂಕಾಪುರ ಪ್ರದೇಶದಲ್ಲಿ ಕೇಳಲು ಮತ್ತು ಹೇಳಲು ತುಂಬಾ ನೀತಿ ಕಥೆಗಳಿವೆ. ಅವುಗಳೆಂದರೆ ಅತಿಮಾನುಷ ಶಕ್ತಿ, ಬುದ್ಧಿವಂತಿಕೆ, ಹಾಸ್ಯ ಪ್ರಧಾನವಾದ ಪ್ರಾಣಿ ಕಥೆ ಇಲ್ಲಿ ದೊರಕಿವೆ. "ಮಾನವ ಹೇಗೆ ಬದುಕಬೇಕು, ಲೋಕದಲ್ಲಿ ಅವನು ಹೇಗೆ ವರ್ತಿಸಬೇಕು ಎಂಬ ರೀತಿಯ ಶಿಕ್ಷಣಾತ್ಮಕ ದೃಷ್ಟಿ ಅಲ್ಲಿನ ಬಹುಪಾಲು ಕಥೆಗಳಲ್ಲಿ ಕಂಡು ಬರುತ್ತದೆ. ಇವು ಆಯಾ ಜನಾಂಗದ ಸಂಸ್ಕೃತಿಯನ್ನು ರೂಪಿಸುವ ನೀತಿ ಪ್ರಧಾನ ಕಥೆಗಳೆಂದರೂ ಆಗುತ್ತದೆ."[೨]

ಬಂಕಾಪುರ ಗ್ರಾಮದಲ್ಲಿ ಕಥೆಗಳು ಹೆಚ್ಚಾಗಿ ಅಜ್ಜಿಯರಿಂದಲೇ ಹೇಳಲ್ಪಡುತ್ತವೆ. ಈ ಕಥೆ ಗಳಲ್ಲಿ ಮಹಿಳೆಯರ ಸಾಮಾಜಿಕ ಸ್ಥಾನಮಾನಗಳನ್ನು ಹಾಗೂ ಅವರ ಬದುಕಿನ ವಿನೋದ ಆನಂದಕ್ಕೆ ಹಾಸ್ಯ, ಆಧ್ಯಾತ್ಮ, ಕುಂಟುಂಬ, ಮದುವೆ, ದುರಂತ, ಸಾಹಸ, ಕಷ್ಟ ಪರಂಪರೆಗಳು ಇತ್ಯಾದಿ ಸಂಗತಿಗಳನ್ನು ಸಹ ಈ ಕಥೆಗಳು ಒಳಗೊಂಡಿವೆ. ಲಾಲಸಿ–ಪಾಲಸಿ, ಮಾತೃತ್ವ, ಸಾಹಸ ರಕ್ಷಣೆ ಗುಣಗಳಿಂದ ಕೂಡಿವೆ ಸ್ತ್ರೀ ಕೇಂದ್ರಿತ ಕಥೆಗಳನ್ನು ಸಹ ನೋಡಬಹುದಾಗಿದೆ. ಪ್ರಸ್ತುತವಾಗಿ ಕಥೆಗಳಲ್ಲಿ ರೂಪ, ಭಾಷೆ, ಆಚರಣೆ ನಡೆ–ನಾಡಿಗೆ ಸಂಬಂಧಿಸಿದಂತೆ ವಿಶೇಷವಾಗಿ ಅಭಿವ್ಯಕ್ತವಾಗಿವೆ. ೩ ಜನ ಹೆಣ್ಣುಮಕ್ಕಳು ಮದುವೆಮಾಡಿಕೊಂಡು ಅವರು ಗರ್ಭಿಣಿಯರಾಗಿ ಎಲ್ಲರಿಗೂ ಸೀಮಂತ ಮಾಡಿ ಅವರ ಇಷ್ಟವಾದ ತಿಂಡಿ ತಿನಿಸುಗಳನ್ನು ಮಾಡಿ ತಿನ್ನುವುದು ಕೊನೆಗೆ ಅತ್ತೆಯ ಕಡೆಯಿಂದ ಜಯದೊರಕುವುದು. ಹೀಗೆ ಕಥೆ ಕೊನೆಗೊಳ್ಳುವುದು.

ಈ ಪ್ರದೇಶದಲ್ಲಿ ಹಬ್ಬ ಹರಿದಿನಗಳಲ್ಲಿ ಶ್ರಾವಣ ಸಂದರ್ಭದಲ್ಲಿ ಜಂಗಮ ಒಕ್ಕಲಿನವರು ಪ್ರತಿ ಹುಣ್ಣಿಮೆ ಹಾಗೂ ಅಮವಾಸ್ಯೆಯಂದು ಸ್ನಾನ ಮಾಡಿ ಐದು ಮನೆಯಾದರೂ ಭಿಕ್ಷೆ ಬೇಡಬೇಕು. ನಂತರದಲ್ಲಿ ಪೂಜೆ ಪುನಸ್ಕಾರ ಮಾಡುವುದನ್ನು ಕಾಣುತ್ತೇವೆ. ಮಾನವನ

ದೈನಂದಿನ ಜೀವನದಲ್ಲಿ ಮಾನವರು ಅನುಭವಿಸುವ, ಸುಖ-ದುಃಖ, ಅಳು-ನಗು, ಕಷ್ಟ, ತಾಪತ್ರಯ, ಅಸೂಯೆ, ಪ್ರೀತಿ, ವಾತ್ಸಲ್ಯ, ದ್ವೇಷ, ಕೋಪ ಅಪಾಯ ಇವುಗಳಿಂದ ಪಾರಾಗುವಂತಹ ಬಗೆ ಈ ಕಥೆಗಳಲ್ಲಿ ಚಿತ್ರಣಗೊಂಡಿವೆ. ಅದೇ ರೀತಿಯಾಗಿ ಒಂದು ಪಟ್ಟಣದಲ್ಲಿ ಇಬ್ಬರು ಅಣ್ಣತಮ್ಮಂದಿರು ಇದ್ದರು ಎಂದು ಕಥೆ ಪ್ರಾರಂಭವಾಗಿ ಕೊನೆಗೆ ಒಂದು ನೈತಿಕತೆಯನ್ನು ಹೇಳಿ ಕಥೆ ಕೊನೆಗೊಳ್ಳುವುದು.

ಜನಪದ ಕಥೆಗಳು ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದ್ದವು ಎಂಬುದಕ್ಕೆ ಇವು ನಿದರ್ಶನವಾಗಿವೆ. ಸಾಮಾನ್ಯವಾಗಿ ಜನಪದ ಕಥೆಗಳಲ್ಲಿ ಊರು, ವ್ಯಕ್ತಿಗಳಿಗೆ ಹೆಸರಿಲ್ಲ. ಒಂದರಲ್ಲಿ ಒಬ್ಬ ಅಜ್ಜಿ ಇದ್ದಳು. ಕಥೆಗಳಲ್ಲಿ ಪ್ರತಿಬಿಂಬಿತವಾಗುವ ಮನೋಧರ್ಮ ಅವುಗಳ ವ್ಯವಸ್ಥಿತವಾದ ಅಧ್ಯಯನದಿಂದ ರಾಕ್ಷಸರು ಮಾನವರ ನಡುವೆ ಯಾವುದೋ ಅಂತರದ ಸಂಬಂಧವನ್ನು ಕಟ್ಟಿಕೊಂಡಿದೆ ಎಂತಲೂ ಕರೆಯಲಾಗಿದೆ. ರಾಕ್ಷಸರು ಮಂತ್ರಿ ಕುಮಾರನಿಗೆ ಮಾಡಿದ ಸಹಾಯ ದುಷ್ಟ ಶಕ್ತಿಗಳಲ್ಲಿಯೂ ಒಳ್ಳೆಯ ಮಾನವೀಯತೆ ಇರುತ್ತಿದೆ, ಹುಟ್ಟಿನಿಂದ ಯಾರೂ ದುಷ್ಟರಲ್ಲ, ಈ ಕಥೆಗಳಲ್ಲಿ ಮಾನವರ ಪಾತ್ರ ಮತ್ತು ಪ್ರಾಣಿಗಳ ಪಾತ್ರಗಳು ಯೋಜಿಸಲ್ಪಟ್ಟಿರುತ್ತವೆ. ಕಥನ ಕ್ರಿಯೆ ನೀತಿಯತ್ತ ಸಾಗುವದು. ಕೊನೆಯಲ್ಲಿ ಸೂತ್ರ ಹಾಸ್ಯವೊಂದರಲ್ಲಿ, ನೀತಿ ನಿಲ್ಲುವುದು ಈ ಕಥೆಗಳ ಎರಡು ಪ್ರಧಾನ ಅಂಶಗಳು. ನೀತಿ-ಬೋಧನೆಗಾಗಿಯೇ ಕೆಲವು ನೀತಿ ಕಥೆಗಳು ಇವೆ. ಎಲ್ಲಾ ಜನಪದ ಕಥೆಗಳನ್ನು ಒಂದೆಡೆ ಸಂಗ್ರಹಿಸಿ ಒಂದನ್ನೊಂದು ಹೋಲಿಸಿ ನೋಡಿದಾಗ ಮಾನವನ ಸಂಬಂಧಗಳನ್ನು ಸಹೃದಯ ಮನಸ್ಸು ಪ್ರೀತಿ ವಿಶ್ವಾಸಗಳನ್ನು ತಿಳಿಯ ಬಹುದಾಗಿದೆ.

### ೭.೪. ಜನಪದ ಗಾದೆಗಳು

"ವೇದ ಸುಳ್ಳಾದರೂ ಗಾದೆ ಸುಳ್ಳಾಗದು" ಎಂಬ ಗಾದೆ ಮಾತು ನಮ್ಮಲ್ಲಿದೆ. ಇದು ನೂರಕ್ಕೆ ನೂರರಷ್ಟು ಸತ್ಯ. ಅದರ ಅರ್ಥ ಅನುಭವದ ಮಾತುಗಳು ಈ ಗಾದೆಗಳು ಅವು ವೇದಕ್ಕಿಂತಲೂ ಬಲಿಷ್ಠ ಮತ್ತು ಸತ್ವಯುತ. ಗಾದೆ ಸಾಹಿತ್ಯದ ಒಂದು ಪ್ರಕಾರ. ಅದರಲ್ಲಿ ಮುಖ್ಯವಾಗಿ ಒಡೆದು ಕಾಣುವ ಗುಣ ಸರಸ, ಅದು ಆಕಾರದಲ್ಲಿ ಚಿಕ್ಕದು ಕೇಳಿಕೆಯಲ್ಲಿ ಪ್ರಾಸಬದ್ಧವಾದುದು, ಸಮಾಸೋಕ್ತಿ ಅದರ ಜೀವಾಳ. ಸನ್ನಿವೇಶದ ಅನುಭಾವಕ್ಕೆ ಅದೊಂದು ಅಳತೆಗೋಲಾಗಿರುವ ಗಾದೆಯಲ್ಲಿ ಹೋಲಿಕೆಗೆ ಹೆಚ್ಚು ಪ್ರಾಶಸ್ತ್ಯ.

ಗಾದೆ ಎನ್ನುವ ಪದವು ಗಾಥಾ ಎಂಬ ಸಂಸ್ಕೃತದ ಶಬ್ದದಿಂದ ಹುಟ್ಟಿರಬಹುದು ಎನ್ನತ್ತಾರೆ. ಗಾಥಾ ಎಂದರೆ ಹಾಡು, ಸೂಕ್ತಿ ಅಥವಾ ಸೂತ್ರ. ತಲೆಮಾರಿನಿಂದ ತಲೆಮಾರಿಗೆ ಪರಂಪರಾಗತವಾಗಿ ಹರಿದುಬಂದ ಸೂಕ್ತಿಯೇ ಗಾದೆ. ಇದಕ್ಕೆ ಸಂವಾದಿಯಾಗಿ, ನಾಣ್ನುಡಿ, ಲೋಕೋಕ್ತಿ, ಸಾಮ್ಯತೆ, ಒಳ್ನುಡಿ ಮುಂತಾದ ಪದಗಳು ಇವೆ.

ಗಾದೆಗಳ ಅನುಭವ ಜಗತ್ತು ವಿಸ್ತಾರವಾದುದು, ವ್ಯಕ್ತಿಗತವಾದುದಲ್ಲ. ಇವುಗಳ ಮೂಲಕ ವ್ಯಕ್ತವಾಗುವ ವಿಚಾರ, ನೀತಿ, ವಿವೇಕ, ಸಹಜತೆ, ವಿನೋದಗಳಿಗೆ ಎಣೆಯಿಲ್ಲ. ಪ್ರಾಚೀನ

ಕಾಲದಿಂದ ಇಂದಿನವರೆಗೂ ನೂತನವಾದ ಗಾದೆಗಳು ಸೃಷ್ಟಿಯಾಗುತ್ತಲೇ ಇವೆ. ಅನಂತ ಜನ ಅನೇಕ ಕಾಲದಲ್ಲಿ ಅನೇಕ ಕಡೆಯಲ್ಲಿ ಅನುಭವಿಸಿದ ಅನುಭಾವವದು. ಪ್ರತಿಭಾವಂತ ವ್ಯಕ್ತಿ ಅದನ್ನು ಗುರುತಿಸಿ ಶಬ್ದದಲ್ಲಿ ಹಿಡಿದಿರುತ್ತಾನೆ. ಉಳಿದವರು ಅದನ್ನು ಹೇಳಿ ಹೇಳಿ ತಮ್ಮ ಜೀವನದ ಅನುಭವವನ್ನು ಪ್ರತಿನಿಧಿಸಿದರೆ, ಬಹುಕಾಲ ಜೀವಂತವಾಗಿ ಉಳಿಯುವುದು. ಇಲ್ಲದಿದ್ದರೆ ಮುಗ್ಗರಿಸಿ ಸಾಯುವುದು.

"ಬಾಯಿಂದ ಬಾಯಿಗೆ ಬರುತ್ತಿರುವ ಗಾದೆಗಳು ಮಾನವನ ಅನುಭವದ ಅತ್ಯತ್ತಮ ದಾಖಲೆಯಾಗಿವೆ. ಸಾಮಾನ್ಯವಾಗಿ ಶಿಷ್ಟಜನ ಪರಿಗಣಿಸದೆ ಬಿಟ್ಟ ಅನೇಕ ಸೂಕ್ಷ್ಮಗಳು ಇಲ್ಲಿ ಪರಿಣಾಮಕಾರಿಯಾಗಿ ಕಂಡುಬರುತ್ತವೆ. ಒಬ್ಬನೇ ವ್ಯಕ್ತಿ ಆರಂಭದಲ್ಲಿ ಅನುಭವ ವಿಶೇಷವೊಂದಕ್ಕೆ ಬೇರೊಬ್ಬನ ಮನಸ್ಸನ್ನು ತಟ್ಟುವಂತೆ ಕೊಟ್ಟ ಮಾತಿನ ರೂಪವೇ ಗಾದೆ"[೩]ಗಳಾಗಿದ್ದು, ಇವು ಸಕಲ ಜೀವನಾನುಭವ ಜನ್ಯವಾದ ಮತ್ತು ಜೀವನ ಸಾರವನ್ನು ಒಳಗೊಂಡ ರಸಗುಟ್ಟುಗಳು. ಇದರಷ್ಟು ವ್ಯಾಪಕವಾದ, ಪ್ರಭಾವಶಾಲಿಯಾದ , ಆಕರ್ಷಣೀಯವಾದ, ಪ್ರಯೋಜನಕಾರಿಯಾದ ಸಾಹಿತ್ಯ ಪ್ರಕಾರ ಮತ್ತೊಂದಿಲ್ಲ. 'ಆಡು ಮುಟ್ಟದ ಸೊಪ್ಪಿಲ್ಲ' ಎನ್ನುವಂತೆ ಗಾದೆ ಬಾರದ ಮನುಷ್ಯ ರಾಗಲಿ, ಭಾಷೆಯಾಗಲಿ ಸಿಗುವುದು ವಿರಳ. ಸೂಕ್ತ ಸಂಧರ್ಭ ಹಾಗೂ ಸನ್ನಿವೇಶಗಳು ಸಿಕ್ಕಾಗ ತನಗೆ ತಾನೇ ಗಾದೆಗಳು ನೆನಪಾಗಿ ಮಾತಿನೊಂದಿಗೆ ಹೊರಹೊಮ್ಮುತ್ತವೆ. ಎಲ್ಲರೂ ಒಪ್ಪುವಂತಹ ಅಷ್ಟೇ ಸೂಕ್ತವಾದ ನಿರ್ಣಯ ನೀಡುವಂತಹ ಶಕ್ತಿ ಗಾದೆಗಳಿಗಿವೆ.

ಗಾದೆಗಳ ಹಿಂದೆ ಅನುಭವ ಇದ್ದೇ ಇರುತ್ತದೆ. "ಬದುಕಿನ ಎಲ್ಲ ವಿಷಯಗಳಲ್ಲೂ ಗಾದೆ ಇಣುಕು ಹಾಕುತ್ತವೆ. ಚಿಕ್ಕದರಲ್ಲಿ ದೊಡ್ಡದನ್ನು ಕಾಣುವ ಮಹಾ ಸಾಹಸ ಮಾಡುತ್ತವೆ"[೪]. ಇವು ಜನಸಾಮಾನ್ಯರ ಬದುಕಿನದಾಗಿರಬಹುದು ಅಥವಾ ಇತಿಹಾಸ, ಪುರಾಣ, ಐತಿಹ್ಯ ಮುಂತಾದವುಗಳಲ್ಲಿ ಕಾಣುವ ಒಂದು ನಿದರ್ಶನವೂ ಆಗಿವೆ.

ಒಂದು ದೇಶದ ಸ್ಥಿತಿ, ಜೀವನ ಅಲ್ಲಿನ ಗಾದೆಗಳ ಮೂಲಕ ಬಯಲಾಗುತ್ತದೆ. "ಗಾದೆಗಳು ಮಾನವನ ವೈಚಾರಿಕ ಭಾವನಾತ್ಮಕ ನೆಲೆಯಲ್ಲಿ ರೂಪುಗೊಂಡ ಜೀವನಾನುಭವದ ಗಟ್ಟಿಗಳು. ಒಂದೊಂದು ಗಾದೆಯೂ ಒಂದೊಂದು ವಿಶಿಷ್ಟ ಅನುಭವದ ಹಿನ್ನೆಲೆಯನ್ನು ಪಡೆದಿರುತ್ತದೆ. ಅಂದರೆ ಪ್ರತಿಯೊಂದು ಗಾದೆಯೂ ತನ್ನೊಡಲಿನಲ್ಲಿ ಒಂದು ಕಥಾಬೀಜವನ್ನು, ಮಡುಗಟ್ಟಿ ಕೊಂಡಿರುತ್ತದೆ."[೫] ಜನಪದರು ಗಾದೆಗಳನ್ನು ಬೇಕೆಂದೇ ಬಾಯಿಪಾಠ ಮಾಡಿಕೊಂಡವರಲ್ಲ. ಉದ್ದೇಶ ಪೂರ್ವಕವಾಗಿ ಕಂಠಪಾಠ ಮಾಡಿಕೊಂಡು ಸನ್ನಿವೇಶಕ್ಕಾಗಿ ಕಾದು ಕೂತುಕೊಂಡವರಲ್ಲ. ಸಂದರ್ಭ ಸನ್ನಿವೇಶಗಳು ಅವರಲ್ಲಿ ಅಡಗಿರುವ ಅಪಾರ ಜ್ಞಾನವನ್ನು ಹೊರಹಾಕುವಂತೆ ಮಾಡುತ್ತವೆ. "ಅವನೇನು ತಾನಾಗಿಯೇ ಗಾದೆಗಳನ್ನು ಅರಗಿಸಿಕೊಂಡು ಹೋಗುವುದಿಲ್ಲ. ಉದ್ದೇಶ ವಿಟ್ಟು ಅವುಗಳನ್ನೇನೂ ಬಾಯಿಪಾಠ ಮಾಡಿಕೊಂಡಿರುವುದಿಲ್ಲ. ಅಲ್ಲಿ ಇಲ್ಲಿ ಅವನ ಕಿವಿಯ

ಮೇಲೆ ಬಿದ್ದಿರುತ್ತದೆ. ಅವನ ಸ್ಮೃತಿ ಗುಹಾಂತರದಲ್ಲೆಲ್ಲೋ ಅಡಗಿದ್ದು, ಅವುಗಳ ಅವಶ್ಯಕತೆ ಕಂಡು ಬಂದಾಗ ತಾವಾಗಿಯೇ ಹೊರಬಂದು ಬಾರಿನ ಬಿಗಿತದಂತೆ ಚಟಾರನೆ ಸಿಡಿದು ಎದುರಾಳಿಯ ಬಾಯಿ ಮುಚ್ಚಿಸಿ ಬಿಡುತ್ತವೆ, ತಬ್ಬಿಬ್ಬಾಗಿಸುತ್ತವೆ. ತಮ್ಮ ಪ್ರಭಾವವನ್ನು ಬೀರಿ ಅವನ ಬುದ್ಧಿಯನ್ನು ತಿದ್ದುತ್ತವೆ. ಅವನನ್ನು ಜಾಗೃತಗೊಳಿಸುತ್ತವೆ" ಜನರ ಮನಸ್ಸಿನಾಳದ ಅಭಿಪ್ರಾಯಗಳು ಒಬ್ಬನ ಮೂಲಕ ವ್ಯಕ್ತವಾಗಿ ಅನೇಕ ಕಣ್ಣಾಗಿ ಬಹುಜನರ ಸೂಕ್ತಿಗಳಾಗಿ ಮಾರ್ಪಾಡುತ್ತವೆ. ಆದರೆ ಆ ಗಾದೆಗಳನ್ನು ಕಟ್ಟುವ ಮೂಲ ವ್ಯಕ್ತಿಗಳು ಅಗೋಚರ ವಾಗಿಯೇ ಉಳಿದುಬಿಡುತ್ತಾರೆ.

ಗಾದೆಯ ಸ್ವರೂಪವನ್ನು ಗಮನಿಸಿಯೇ ಅವುಗಳಲ್ಲಿ ಸಾಂಸ್ಕೃತಿಕ ಅಂಶಗಳನ್ನು ಕಾಣಬಹುದು. 'ಹುಟ್ಟಿಸಿದ ದೇವರು ಹುಲ್ಲು ಮೇಯಿಸುವುದಿಲ್ಲ' ಸೃಷ್ಟಿಕರ್ತನು ಎಲ್ಲರನ್ನು ಸಲಹುವನು. ಭಗವಂತನು ಉದಾರಿ. ಅವನ ಅಪರಿಮಿತವಾದದ್ದು ದುಷ್ಟವಾದ ಜನರನ್ನು ನಂಬದೇ ದೇವರನ್ನು ನಂಬಿದರೆ ನಮಗೆ ಬಂದಿರುವ ವಿಘ್ನಗಳು ಪರಿಹಾರವಾಗಿ ದೇವರು ನಮಗೆ ಅನುಗ್ರಹಿಸುವುದರಿಂದ ಜೀವನ ಪಾವನವಾಗುವದು. ಎಲ್ಲವನ್ನು ದೇವರ ಮೇಲೆ ಹಾಕದೇ ದುಡಿಯುವ ಛಲವನ್ನು ಪಡೆದು ಬಾಳುವಂತಾಗಬೇಕು.

'ಕಳ್ಳನ ಕೈಗೆ ಕೀಲಿಕೈ ಕೊಟ್ಟಂತೆ' ಕಳ್ಳತನವನ್ನು ಮಾಡಿ ಬದುಕುವವನು ಎಲ್ಲಿ ಹೋದರೂ ತನ್ನ ಕಾಯಕವನ್ನು ಮಾಡಿ ತನ್ನ ಕೈಚಳಕವನ್ನು ತೋರಿಸುತ್ತಾನೆ. ಅಂಥವರಿಗೆ ಮನೆಯನ್ನು ಒಪ್ಪಿಸಿ ಹೋದರೆ ಹಣದ ಪೆಟ್ಟಿಗೆಯ ಬೀಗದ ಕೈಯನ್ನು ಕೊಟ್ಟು ಹೋದರೆ ಅವನು ಯಾವುದೇ ರೀತಿಯ ಭಯವಿಲ್ಲದೇ ಎಲ್ಲವನ್ನು ದೋಚಿಕೊಂಡು ಪರಾರಿ ಆಗುತ್ತಾನೆ. ಅವನನ್ನು ನಂಬಿದರೆ ಈ ರೀತಿ ನಡೆಯುವುದೆಂದು ತಿಳಿದು ಅಂಥವರನ್ನು ಎಲ್ಲಿ ಇಡಬೇಕೋ ಅಲ್ಲಿಡಬೇಕು

'ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ' ಒಂದು ಸಂಸಾರದಲ್ಲಿ ಕಿರಿಯರಾದವರು ಹಿರಿಯರ ನಡೆ ನುಡಿಗಳನ್ನು ಕಲಿತು ಪಾಲಿಸುವರು. ಹಿರಿಯರಾದವರು ಆಚಾರ ವಿಚಾರ ಧಾನಧರ್ಮ ಮುಂತಾದ ಪರೋಪಕಾರಿ ಜೀವನವನ್ನು ಮಾಡುತ್ತಿದ್ದರೆ ಕಿರಿಯವರು ಅದರಂತೆ ಕಲಿತು ಅವರೂ ಉತ್ತಮರಾಗುತ್ತಾರೆ. ಹಿರಿಯರಾದವರು ದುರ್ನೀತಿಯಿಂದ ಧರ್ಮ ದ್ರೋಹದವರಾಗಿ ಪಾಪಿಗಳಾಗಿ ಎಲ್ಲರಿಗೂ ಬೇಡವಾಗಿದ್ದಲ್ಲಿ ಚಿಕ್ಕವರು ಖಂಡಿತವಾಗಿಯೂ ಅವರ ಆದರ್ಶಗಳನ್ನು ಪಾಲಿಸುವಂಥವರಾಗುತ್ತಾರೆ. ಆದುದರಿಂದ ಸನ್ಮಾರ್ಗದಲ್ಲಿ ನಡೆದು ಸದ್ಗತಿಯನ್ನು ಪಡೆಯಿರಿ. ಎಂಬುದು ಈ ಗಾದೆಯ ಸಾರಾಂಶ

'ಹಣ್ಣೆಲೆ ಉದುರಿದಾಗ ಚಿಗುರೆಲೆ ನಕ್ಕಿದಂತೆ' ಯಾವ ಮನುಷ್ಯನು ಹುಡುಗರಾಗಿ ತರುಣರಾಗಿ ಯುವಕರಾಗಿ ಮುದುಕರಾಗುವರು. ಮನುಷ್ಯರಿಗೆ ಯಾವ ಅವಸ್ಥೆಯಲ್ಲಿ ಏನಾಗಬೇಕೋ ಆಗುತ್ತಲೇ ಇರುತ್ತದೆ. ಮುದುಕರಿಂದಲೇ ಪರಿಪಕ್ವವಾದ ಫಲ ಅನುಭವದ ಅಮೃತ ತಾಳಿ

ಬಾಳಿ ಹಿರಿತನ ಬಂದಿತಯ್ಯ ಮುದಿತನ ಮುದುಕರನ್ನು ನೋಡಿ ಯುವಕರು ಅವರಿಗೆ ಅಪಹಾಸ್ಯ ಮಾಡಿ ಅವಹೇಳನಕಾರಿ ಮಾತನ್ನಾಡಿ ಅವರ ಮನಸ್ಸನ್ನು ನೋಯಿಸುವರು. ಮುಂದೆ ಅವರಿಗೂ ಮುದುಕರಾಗುವ ಯೋಗವು ಬಂದೇ ಬರುತ್ತದೆ. ಆದುದರಿಂದ ಹಿರಿಯ ಜೀವಗಳಿಗೆ ಮಾನ ಮರ್ಯಾದೆಗಳನ್ನು ಕೊಡಬೇಕು ಎಂಬುದು ಈ ಗಾದೆಯ ಸಾರಾಂಶ.

'ಕುಂಬಳಕಾಯಿ ಕಳ್ಳ ಅಂದ್ರೆ ಹೆಗಲು ಮುಟ್ಟಿ ನೋಡಿಕೊಂಡ' ಕೆಲವು ಜನರು ಬೇರೆಯವರ ಬಾಯಲ್ಲಿ ಯಾವುದಾದರೊಂದು ಅಪರಾಧದ ಮಾತು ಕೇಳಿದೊಡನೇ ಅದು ನಮ್ಮನ್ನೇ ಕುರಿತೇ ಮಾತಾಡಿರುವರೆಂದು ತಿಳಿದು ತಮ್ಮ ನಡೆನುಡಿಗಳಿಂದ ತಮ್ಮಿಂದ ತಾವೇ ಸಿಕ್ಕುಬೀಳುತ್ತಾರೆ. ಅವರೇ ಕಳ್ಳರಾಗಿರುವದರಿಂದ ಮಾತುಗಳನ್ನು ತಿಳಿದುಕೊಂಡು ಸಂಶಯದಿಂದ ವರ್ತಿಸಿ ತಮ್ಮ ಮಾನ ಮರ್ಯಾದೆಗಳನ್ನು ಕಳೆದುಕೊಳ್ಳುತ್ತಾರೆ. ಕುಂಬಳ ಕಾಯಿಯನ್ನು ಕದ್ದು ಹೆಗಲ ಮೇಲೆ ಹೊತ್ತುಕೊಂಡು ಹೋದವನು ಎದುರು ಕುಂಬಳಕಾಯಿ ಅಂದ ತಕ್ಷಣ ಅವನು ತನ್ನ ಹೆಗಲ ಮೇಲೆ ಇರುವ ಕುಂಬಳ ಕಾಯಿಯನ್ನು ಹೊತ್ತದ್ದನ್ನು ನೋಡಿ ಇವರು ಹೇಳುತ್ತಾರೆಂದು ತಿಳಿದುಕೊಂಡು ತನ್ನ ಹೆಗಲನ್ನು ನೋಡಿಕೊಳ್ಳುತ್ತಾನೆ.

ಇನ್ನು ಹಲವಾರು ಗಾದೆಗಳು ಜನಪದರ ಜೀವನದಲ್ಲಿ ನೆರವಾಗುವ ಉಲ್ಲಾಸವಾಗಿರಲು ಅರ್ಥಪೂರ್ಣವಾದ ರಸಭರಿತ ಸಾಹಿತ್ಯವಿರುವ ಗಾದೆಗಳು ಈ ಪ್ರದೇಶದಲ್ಲಿ ಕಂಡುಬರುತ್ತದೆ. ತಮ್ಮ ಮನಸ್ಸಿನಲ್ಲಿರುವುದನ್ನು ಕೆಲಸದ ಮೂಲಕ ಅದರ ದಕ್ಷತೆ ಹೆಚ್ಚಿಸಲು ಬಳಸುತ್ತಾರೆ. ಇತರರ ಮನಸ್ಸಿಗೆ ನೋವಾಗದಂತೆ ಇವುಗಳನ್ನು ಓದಲು ಸುಲಭ. ಅವುಗಳಲ್ಲಿರುವ ಅರ್ಥ ಅಪಾರ. ಅವು ಕೇಳುಗರಿಗೆ ಉತ್ಸಾಹ ಮತ್ತು ಕುತೂಹಲಗಳನ್ನು ಉಂಟುಮಾಡುತ್ತವೆ.

**೭.೫. ಜನಪದ ಐತಿಹ್ಯ**

ಬಂಕಾಪುರದಲ್ಲಿ ಬಕಾಸುರನಿದ್ದನು. ಆತ ಜನರನ್ನು ಪೀಡಿಸಿ ಹಿಡಿದು ತಿನ್ನುತ್ತಿದ್ದ. ಈ ತೊಂದರೆಯಿಂದ ತಪ್ಪಿಸಿಕೊಳ್ಳಲು ಆತನಿಗೆ ಪ್ರತಿದಿನ ಬಂಡಿ ಅನ್ನ ಕಳುಹಿಸಲಾಗುತ್ತಿತ್ತು. ಆದರೂ ಆತನ ಹಾವಳಿ ತಪ್ಪಿರಲಿಲ್ಲ. ಒಮ್ಮೆ ಜನರೆಲ್ಲ ಕೂಡಿ ಕುಂದೂರಿನ ಕುಂದಲಮ್ಮನಿಗೆ ಈ ಆಪತ್ತಿನಿಂದ ಪಾರಾಗಲು ಬೇಡಿಕೊಂಡರು. ಕುಂದಲಮ್ಮ ದೇವತೆ ಭೀಮನ ನೇತೃತ್ವದಲ್ಲಿ ಹೋಗಿ ಬಕಾಸುರನನ್ನು ಕೊಲ್ಲಲು ಸಾಧ್ಯವೆಂದು ತಿಳಿಸುತ್ತಾಳೆ. ಅದರಂತೆ ಜನ ಭೀಮನ ನೇತೃತ್ವದಲ್ಲಿ ಹೋಗಿ ಬಂಕಾಪುರದಲ್ಲಿದ್ದ ಬಕಾಸುರನನ್ನು ಕೊಂದರಂತೆ. ಆದ್ದರಿಂದಲೇ ಬಕಾಸುರನಪುರ ಬಂಕಾಪುರವಾಯಿತಂತೆ. ಎಂಬುದು ಇಲ್ಲಿಯ ಜನರ ನಂಬಿಕೆ.

**೭.೬. ಜನಪದ ಒಗಟುಗಳು**

"ಜನಪದ ಸಾಹಿತ್ಯದಲ್ಲಿ ಕಥೆ, ಹಾಡು, ಗಾದೆಗಳ ಜೊತೆಗೆ ಒಗಟುಗಳನ್ನು ಸಹ ಕಾಣಬಹುದಾಗಿದೆ. ಜನಾಂಗವೊಂದರ ಪ್ರಾಚೀನತೆ ಮತ್ತು ಸಾಂಸ್ಕೃತಿಕ ಬದುಕಿನ ವಿವಿಧ ಹಂತಗಳ ಅಧ್ಯಯನಕ್ಕೆ ಪೂರಕವಾಗಿ ನಿಲ್ಲಬಹುದಾದಂತಹ ಒಗಟುಗಳ ಅಧ್ಯಯನವೇ

ಕುತೂಹಲವಾಗಿದೆ. ಈ ಒಗಟುಗಳಿಂದ ಜನಪದ ಬದುಕಿನ ನೋವು-ನಲಿವುಗಳ ಆಸರ ಬೇಸರಗಳಲ್ಲಿ ಅಷ್ಟು ಅಲ್ಲದೆ ಜೀವನ ತಾತ್ವಿಕ ಚಿಂತನೆಗೆ ಈ ಒಗಟುಗಳು ಮನರಂಜನೆಗಾಗಿ ಪದಗಳ ಮೇಲೆ ನಿರ್ಮಿತವಾದ ಬುದ್ಧಿಯ ಬೆಂಬಲ ವಿಮೋಚನೆಯ ವಿಲಾಸ ಮಿಂಚು ಗುಡುಗುಗಳ ಮಸೆತ. ಜೀವನಾನುಭವ ಅಭಿರುಚಿಗಳನ್ನು ಮೈಗೂಡಿಸಿಕೊಂಡಿರುವ ಭಾವುಕ ಜನತೆಯ ಹೃದಯದಲ್ಲಿ ಮೊದಲೆ ಆಡುಗೀತೆ, ಕಥೆ, ಗಾದೆಗಳು ಹುಟ್ಟಿದ ಮೇಲೆ ಒಗಟುಗಳು ಹುಟ್ಟಿವೆ."[೬]

ಸಂಕೀರ್ಣ ಪ್ರಕಾರದ ಒಗಟು ಹೆಚ್ಚು ಶ್ರೀಮಂತವಾಗಿವೆ. ಸಂಮೃದ್ಧವಾಗಿಯೂ ಇವೆ. ರಹಸ್ಯವನ್ನು ಭೇದಿಸಿಕೊಂಡು ಅನಂತರ ವೈಚಿತ್ರ್ಯ ವೈವಿಧ್ಯ ಬದುಕುಗಳಲ್ಲಿ ಬುಗ್ಗೆಯಾಗಿ ಚಿಮ್ಮ ಬಲ್ಲದು. ತನ್ನ ಮೂಲ ಗುಣದೊಂದಿಗೆ ಗೀತದ ಭಾವ ಪ್ರಾಧಾನ್ಯತೆ ಕತೆಯ ಕಲ್ಪನಾ ಪ್ರಾಮುಖ್ಯತೆ ಮತ್ತು ಗಾದೆಯ ನೀತಿ ತತ್ವ ಪ್ರಾಧಾನ್ಯತೆಗಳನ್ನು ಹೊಂದಿದೆ. ತಮ್ಮ ಆರ್ಥಿಕ ಪೊರೆಗಳನ್ನು ಬಿಚ್ಚಿಕೊಳ್ಳುವ ಇವುಗಳ ಅಂತರಂಗ ದರ್ಶನಗಳನ್ನು ನಾವು ಕಾಣಬಹುದು. ಇವು ನಿಜಕ್ಕೂ ಬೌದ್ಧಿಕ ಎಚ್ಚರಿಕೆಗೆ ಹಿಡಿದ ಕನ್ನಡಿಗಳಾಗಿವೆ. ಆ ಕಾಲಕ್ಕೆ ಒಗಟುಗಳು ಆಧ್ಯಾತ್ಮ ಚಿಂತನೆಯ ಫಲಗಳಾಗಿದ್ದರಿಂದ ಮಂತ್ರ ಸದೃಸ್ಯವೆನಿಸಿದ್ದವು. ಅನಿಷ್ಠ ನಿವಾರಣೆಗೆ ಕಾಲಾಂತರದಲ್ಲಿ ಮನರಂಜನೆ ವಿನೋದಗಳೇ ಒಗಟಿನ ಬದುಕಿನ ಲಕ್ಷಣವಾಗಿದೆ.

ಸಾವು ಬದುಕಿನ ಗಂಬೀರ ಸ್ಪರ್ಧೆ, ಪಾಂಡಿತ್ಯ ಪ್ರದರ್ಶನ ಕಲ್ಪನೆ ಶಕ್ತಿಗೆ ಸವಾಲುಗಳಾಗಿಯೂ ಪ್ರಚಲಿತದಲ್ಲಿದ್ದವು. ಪ್ರಸಿದ್ಧವಾದ ಕವಿಗಳು ಅವರು ಹಾಕಿದ ಒಗಟನ್ನು ಬಿಡಿಸಿ, ಒಗಟುಗಳನ್ನು ಬಿಡಿಸಿದವರಿಗೆ ಬಹುಮಾನವಾಗಿ ಹಣ ಐಶ್ವರ್ಯದ ಜೊತೆ ಹೆಣ್ಣುಗಳನ್ನು ಕೊಡಲಾಗುತ್ತಿತ್ತು. ಮನುಷ್ಯ ಸಾಮಾನ್ಯವಾಗಿ ಸುಖ ಸಂತೋಷ ಬಯಸುವ ವ್ಯವಸ್ಥೆಯ ಹಾಸ್ಯ, ವಿನೋದ, ಮನರಂಜನೆ ಮುಖಾಂತರ ಕೆಲವು ಅಶ್ಲೀಲತೆಯ ರೂಪಕ ಭಾಷೆಯಲ್ಲಿ ಪಾಲುಗೊಂಡಿರಬಹುದು. ಒಗಟಿನ ವಿಶೇಷ ಲಕ್ಷಣವು ಆಗಿದೆ. ಅಭಿವ್ಯಕ್ತ ಪಡಿಸುವ ಪ್ರಾಚೀನತೆ ಮತ್ತು ಸಾಂಸ್ಕೃತಿಕ ಬದುಕಿನ ಘಟ್ಟಗಳು ಅಧ್ಯಾಯ ಪೂರಕವೆ ಬದುಕಿನ ಘಟ್ಟಗಳು. ಈ ಗ್ರಾಮ ಪರಿಸರದಲ್ಲಿ ಇಂತಹ ಮಹತ್ವಪೂರ್ಣವಾದ ಒಗಟುಗಳು ಇವೆ. ಮಾನವನ ವಿವಿಧ ಭಾವನೆಗಳು ಅಭಿಪ್ರಾಯಗಳು ವಿವಿಧ ಆಲೋಚನೆಗಳ ಕಲ್ಪನಾತೀತ ಪ್ರಾಚೀನ ವೈಭವಗಳು, ಇಲ್ಲಿನ ಒಗಟುಗಳಲ್ಲಿ ಮಾನವನ ವಿವಿಧ ಭಾವನೆಗಳ ಅಭಿರುಚಿ ಇಲ್ಲಿನ ಜನರ ನಾಲಿಗೆಯ ಮೇಲೆ ನಲಿದಾಡುವುದನ್ನು ಕಾಣಬಹುದಾಗಿದೆ. ವಿಶ್ರಾಂತಿ ಸಮಯದಲ್ಲಿ ಇಂತಹ ಒಗಟುಗಳನ್ನು ಹೇಳುವುದು ಸಹಜ. ಅಂಕು ಡೊಂಕಿನ ಬಾವಿ ಶಂಕ ಚಕ್ರದ ಬಾವಿ, ಇಣುಕಿ ನೋಡಿದರೆ ಹನಿ ನೀರೂ ಇಲ್ಲ.(ಕಿವಿ), ಹಸಿರು ಗಿಡಕ್ಕೆ ಮಸುರು ಚೆಲ್ಲಿದೆ(ಮಲ್ಲಿಗೆ ಹೂ), ಗುಡ್ಡದ ಹಿಂದೆ ಗುಂಡಕಲ್ಲು ಇಟ್ಟಿದೆ(ತುರುಬು). ಎರಡು ಮನೆ ಒಂದೆ ಕಂಬ(ಮೂಗು), ಚೋಟುದ್ದ ಹುಡುಗಿ, ಮಾರುದ್ದ

ಜಡೆ(ಸೂಜಿ ದಾರ), ನೀರಿದ್ದರೂ ನದಿಯಲ್ಲ, ಜುಟ್ಟಿದ್ದರೂಭಟ್ಟನಲ್ಲ, ಮೂರು ಕಣ್ಣಿದ್ದರೂ ಮುಕ್ಕಣ್ಣನಲ್ಲ(ತೆಂಗಿನಕಾಯಿ), ಬಿಟ್ಟರೆ ಬೀದಿ ತುಂಬ ಹಿಡಿದರೆ ಹಿಡಿ ತುಂಬ(ಬಲ್ಬ). ಅಟ್ಟದ ಮೇಲೆ ಪುಟ್ಟ ಲಕ್ಷ್ಮಿ ಕೂತಿದ್ದಾಳೆ(ಕುಂಕುಮ),ಬೆಳ್ಳಿ ಚಡಿ ನೆಲಕ್ಕ ಹೊಡಿ(ಸಿಂಬಳ),

೧. ಅಲ್ಲಿ ಬುಳು ಬುಳು, ಇಲ್ಲಿ ಬುಳು ಬಳು, ಕಲ್ಯಾಣ್ತನಕ ಬುಳು ಬುಳು

ಉತ್ತರ: ಕುರಿಹಿಕ್ಕಿ

೨. ಹಸಿರು ಗಿಡದಾಗ ಮೊಸರು ಚೆಲ್ಯಾರ

ಉತ್ತರ: ಮಲ್ಲಿಗೆ ಹೂವು

೩. ತೋಟ, ತೋಟದ ಸುತ್ತ ಬೇಲಿ, ಸಾವಿರ ರೂಪಾಯಿ ಬೀಗ, ಯಾರು ಬಂದ್ರೂ ಅದನ್ನ ತೆಗೆಯೋಕ್ಕಾಗಲ್ಲ.

ಉತ್ತರ: ತಾಳಿ

೪. ಹಿಡಿದರೆ ಹಿಡಿತುಂಬ, ಬಿಟ್ಟರೆ ಮನೆತುಂಬ, ಇದ ಹೇಳುವಗೆ ಎಲ್ಲಿಲ್ಲದ ಜಂಭ

ಉತ್ತರ: ಬೆಳಕು

೫. ಕರಿಹೊಲದ ಮಧ್ಯದಲ್ಲಿ ಬಿಳಿದಾರಿ

ಉತ್ತರ: ಬೈತಲೆ

೬. ಮೂರು ಕಣ್ಣಿದ್ದರೂ ಮುಕ್ಕಣ್ಣನಲ್ಲ; ಜಡೆಯನ್ನು ಧರಿಸಿದ್ದರೂ ಶಿವನಲ್ಲ, ಜಲಾಶಯವನ್ನು ನುಂಗಿದರೂ ಅಗಸ್ತ್ಯ ಮುನಿಯಲ್ಲ ಹಾಗಾದರೆ ನಾನ್ಯಾರು?

ಉತ್ತರ: ತೆಂಗಿನಕಾಯಿ

೭. ಅಟ್ಟದ ಮೇಲೆ ಪುಟ್ಟ ಲಕ್ಷ್ಮೀ

ಉತ್ತರ: ಕುಂಕುಮ

೮. ಕರಿ ಎತ್ತು ತೇಲ್ತದ, ಬಿಳಿ ಎತ್ತು ಮುಳುಗ್ತದ

ಉತ್ತರ: ಚಹಾಪುಡಿ, ಸಕ್ಕರಿ

೯. ಹಗ್ಗ ಹಾಸಿದೆ, ಗೂಳಿ ಮಲಗಿದೆ

ಉತ್ತರ: ಕುಂಬಳಕಾಯಿ

೧೦. ತಾಯಿ ಚೋಟುದ್ದ ಇದ್ರೆ ಮಗಳು ಮಾರುದ್ದ ಇದ್ದಾಳೆ.

ಉತ್ತರ: ಸೂಜಿದಾರ

ಇಂತಹ ಹಲವಾರು ಒಗಟುಗಳು ಜನಪದ ಸಾಹಿತ್ಯದಲ್ಲಿ ತನ್ನದೇ ಆದ ಸ್ಥಾವನ್ನು ಪಡೆದಿವೆ. ಗ್ರಾಮೀಣರು ತಮ್ಮ ಸಮಸ್ತಭಾವವನ್ನು ಒಗಟಿನಲ್ಲಿ ಹಿಡಿದಿಟ್ಟಿದ್ದಾರೆ. ಇವುಗಳಲ್ಲಿ ನಮ್ಮ ಸಂಸ್ಕೃತಿ ಸಂಪೂರ್ಣ ದರ್ಶನವಿದೆ. ಭಾವೈಕ್ಯದ ಪ್ರಜ್ಞೆ ಇದೆ. ಆಧುನಿಕ ಶಾಸ್ತ್ರಜ್ಞರಿಗೆ

ಹಾಕುವ ಎಲ್ಲ ಮೌಲಿಕ ಅಂಶಗಳು ಈ ಒಗಟುಗಳಲ್ಲಿ ಅಡಗಿವೆ. ಜನಪದರಿಗೆ ಶೀಲ-ಅಶ್ಲೀಲದ ತಾರತಮ್ಯವಿಲ್ಲ. ತಮ್ಮ ಬದುಕಿಗೆ ಯಾವುದು ಸಹಜವೋ ಅವೆಲ್ಲ ಮುಕ್ತ, ಬುದ್ಧಿ ಹೇಳಲು ತಾಯಿ ಮಗಳನ್ನು ಬಯ್ಯುವುದು, ತಂದೆ ಮಗನನ್ನು ಬಯ್ಯಲು ಬಳಸುವ ಮಾತುಗಳನ್ನು ಶೀಲ ಅಶ್ಲೀಲವಾಗಿ ಕಾಣುವುದಿಲ್ಲ. ಇದು ಬದುಕಿನ ಒಂದು ಅಂಗವಾಗಿರುವುದರಿಂದ ಶೀಲ ಅಶ್ಲೀಲ ಪ್ರಶ್ನೆ ಬರುವುದಿಲ್ಲ. ಹಾಗಾಗಿ ಇಲ್ಲಿನ ಪರಿಸರದಲ್ಲಿ ಎಲ್ಲಾ ರೀತಿಯ ಒಗಟುಗಳು ಚಲಾವಣೆಗೊಳ್ಳುತ್ತಲಿವೆ. ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವದಿಂದ ಈ ಪರಂಪರೆ ಇಂದು ಕಾಣೆಯಾಗುತ್ತಿದೆ.

**ಅಡಿಟಿಪ್ಪಣಿ**

೧. ಜೀ.ಶಂ.ಪರಮಶಿವಯ್ಯ, ಜನಪದ ಕಾವ್ಯ ಕಥೆಗಳು, ಪು.ಸಂ ೩೯

೨. ಜೀ.ಶಂ.ಪರಮಶಿವಯ್ಯ. ಪ್ರಸ್ತಾವನೆ, ಕನ್ನಡ ಜನಪದ ಕಥೆಗಳು, ಪು.ಸಂ ೪೫

೩. ಪ್ರೋ. ಕಾಳೆಗೌಡ ನಾಗವಾರ, ಬೀದಿ ಮಕ್ಕಳು ಬೆಳೆದೊ, ಗಾದೆಗಳ ಸಂಕಲನ, ಪುಟ.೪

೪. ಹಾ.ಮಾ.ನಾಯಕ, ಜಾನಪದ ಸ್ವರೂಪ, ಟಿ.ವಿ. ಮೆಮೋರಿಯಲ್ ಸಿರಿಸ್, ಮೈಸೂರು, ೧೯೭೧, ಪುಟ.೪೨

೫. ಡಾ. ವೀರಣ್ಣ ದಂಡೆ, ಡಾ. ಶ್ರೀಪಾದಶೆಟ್ಟಿ, ಸುವರ್ಣ ಜಾನಪದ ಲೇಖನಗಳು, ಪುಟ.೫೯

೬. ಪ್ರೋ. ಕಾಳೇಗೌಡ ನಾಗವಾರ, ಡಾ. ಅಂಬಳಿಕೆ ಹಿರಿಯಣ್ಣ, ಜೀ.ಶಂ.ಪ. ಅವರ ಜಾನಪದ ಬರಹಗಳು, ಪುಟ.೧೫

೭. ಇಮ್ರಾಪುರ ಜಿ.ಎಸ್., ಜಾನಪದ ಒಗಟುಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೮೯, ಪು. ೩೧೫

## ಅಧ್ಯಾಯ : ಎಂಟು

# ಬಂಕಾಪುರ ಗ್ರಾಮದ ಸಮಕಾಲೀನ ಸ್ಥಿತ್ಯಂತರಗಳು

೮.೧. ಭೌತಿಕ ಹಿನ್ನೆಲೆ
೮.೨. ಸಾಮಾಜಿಕ ಸ್ಥಿತ್ಯಂತರಗಳು
೮.೩. ಸಾಂಸ್ಕೃತಿಕ ಸ್ಥಿತ್ಯಂತರಗಳು
೮.೪. ಶೈಕ್ಷಣಿಕ ಸ್ಥಿತ್ಯಂತರಗಳು
೮.೫. ಆರ್ಥಿಕ ಸ್ಥಿತ್ಯಂತರಗಳು

## ಅಧ್ಯಾಯ : ಎಂಟು

# ಬಂಕಾಪುರ ಗ್ರಾಮದ ಸಮಕಾಲೀನ ಸ್ಥಿತ್ಯಂತರಗಳು

**ಪೀಠಿಕೆ**

ನಾವು ಬದಲಾದಂತೆ ನಮ್ಮಲ್ಲಿರುವ ಯಾವುದೇ ಪದ್ಧತಿ ಜನರ ಜೀವನದಲ್ಲಿ ಬದಲಾವಣೆಯನ್ನು ತರುತ್ತದೆ. ಈ ಬದಲಾವಣೆ ಜನರ ಜೀವನ ಆಧಾರ. ಚಿಂತನೆಯಿಂದ ಆಚರಣೆಗಳು, ಸಂಪ್ರದಾಯ, ಆಚಾರ–ವಿಚಾರ, ಸಾಮಾಜಿಕ ಸಂದರ್ಭಗಳಲ್ಲೂ ಪರಿವರ್ತನೆ ಕಂಡುಬರುತ್ತದೆ. ಪ್ರಸ್ತುತ ಬಂಕಾಪುರ ಪರಿಸರದಲ್ಲಿ ಈ ಎಲ್ಲಾ ವಿಧವಾದ ಬದಲಾವಣೆಗಳನ್ನು ಕಾಣಬಹುದು. ಜೊತೆಗೆ ಹೊಂದಾಣಿಕೆ ಭಾವನೆಯನ್ನು ಕಾಣಬಹುದು. ಜನಸಂಖ್ಯೆ ಹೆಚ್ಚಾದಂತೆಲ್ಲಾ ಕೈಗಾರಿಕೆ ಉತ್ಪಾದನೆ ಪ್ರಮುಖವಾಗಿ, ಮಾನವ ಸಂಪನ್ಮೂಲ ಬಳಕೆಯ ಶ್ರಮಸಲಕರಣೆಗಳು ಹೆಚ್ಚಾಗಿವೆ. ನಮ್ಮಲ್ಲಿ ನೆಲ, ಜಲ ಗೌರವಿಸಿ ವಿಸ್ತರಿಸಿ, ಉಳಿಸುವ, ಬೆಳೆಸುವ ಅರಿವು ನಿಸರ್ಗಧರ್ಮಕ್ಕೆ ಕಡೆಯಾಗದಂತೆ ಇದೆ. ಈ ಬದುಕನ್ನು ಅರಿಯುವ, ಬದುಕನ್ನು ಬಾಳುವ, ಜೀವನ ಮಾರ್ಗವನ್ನು ತೋರುವ ಬದುಕು ಜೀವ ಜಗತ್ತನ್ನು ಬದುಕಿಸುವಂತೆ, ತನ್ನ ನಡೆಯನ್ನು ನಿರ್ಮಿಸಿಕೊಳ್ಳಲು ಜೀವನ ಸಾಂಪ್ರದಾಯಿಕ ಕೃಷಿ ಪ್ರಕೃತಿಯನ್ನು ವಿವರಿಸುವುದು ಉತ್ತಮ ಮಾರ್ಗವಾಗಿದೆ. ಹಿಂದೆ ಹೊಲದಲಿ ಉಳುಮೆಗೆ ಎತ್ತುಗಳನ್ನು ಬಳಸುತ್ತಿದ್ದರು ಆದರೆ ಬದಲಾದ ಇಂದಿನ ಕಾಲದಲ್ಲಿ ಟ್ರ್ಯಾಕ್ಟರ್ ಬಂದ ಮೇಲೆ ಎತ್ತಿನ ಗಾಡಿಗಳು ಮೂಲೆಗೆ ಸೇರಿಕೊಂಡಿವೆ. ಹೀಗೆ ಪ್ರತಿಯೊಂದು ಕ್ಷೇತ್ರದಲ್ಲಿ ಬದಲಾವಣೆ ಆಗಿರುವುದನ್ನು ಕಾಣಬಹುದು.

ಬದಲಾದ ಇಂದಿನ ಕಾಲಮಾನದಲ್ಲಿ ಕೃಷಿ ಕಾರ್ಯಗಳಿಗೆ ರೈತರು ಅನಾದಿಕಾಲದಿಂದಲೂ ಬಳಸಿಕೊಂಡು ಬಂದ ಎತ್ತಿನ ಗಾಡಿಗಳ ಬಳಕೆ ಇಂದು ಕಡಿಮೆಯಾಗಿದೆ. ಕೃಷಿ ಕ್ಷೇತ್ರದ ಪ್ರತಿಯೊಂದರಲ್ಲೂ ಈ ರೀತಿಯ ಬದಲಾವಣೆ ಸಹಜವಾಗಿ ಆಗಿದೆ. ಅದರ ಬದಲಾಗಿ ಮುಂದುವರೆದ ಆಧುನಿಕ ಸಲಕರಣೆಗಳನ್ನು ಬಳಸುತ್ತಿದ್ದಾರೆ. ಟ್ರ್ಯಾಕ್ಟರಗಳು ಬಳಕೆ ಅಧಿಕ ಹೊಲ ಇದ್ದವರಿಗೆ ಅನುಕೂಲಕಾರಿಯಾಗಿದೆ. ತುಂಡು ಭೂಮಿ ಹೊಂದಿರುವವರಿಗೆ ಅಲ್ಲ. ಸಾವಯವ ಗೊಬ್ಬರದ ಬದಲಾಗಿ ರಾಸಾಯನಿಕ ಗೊಬ್ಬರವನ್ನು ಇಂದು ಹೆಚ್ಚಾಗಿ ಬಳಸುತ್ತಿರುವುದು ವಿಷಾದದ ಸಂಗತಿಯಾಗಿದೆ. ಏಕೆಂದರೆ ಜಾನುವಾರುಗಳ ಸಂಖ್ಯೆ ಕಡಿಮೆಯಾಗಿದೆ ಏಕೆಂದರೆ ದನ, ಎತ್ತು, ಎಮ್ಮೆಗಳ ಸಾಕಣೆ ಕಡಿಮೆಯಾಗುತ್ತಿದೆ. ಕೃಷಿ ಕ್ಷೇತ್ರದತ್ತ ಇಂದಿನ ಯುವಕರ

ಆಸಕ್ತಿ ಕಡಿಮೆಯಾಗಿದೆ. ಶಾಲಾ-ಕಾಲೇಜು ಕಲಿತ ಇಂದಿನ ವಿದ್ಯಾವಂತ ಯುವಕರೆಲ್ಲಾ ನಗರ ಪ್ರದೇಶಗಳತ್ತ ಮುಖ ಮಾಡಿದ್ದಾರೆ. ಅವರಿಗೆ ಕೃಷಿಯ ಆಸಕ್ತಿ ಇಲ್ಲ, ಸರ್ಕಾರಿ ಕೆಲಸವನ್ನು ಅರಸಿಕೊಂಡು ಊರನ್ನು ಬಿಟ್ಟು ನಗರಗಳತ್ತ ವಲಸೆ ಹೊಗುತ್ತಿರುವುದನ್ನು ಕಾಣಬಹುದು. ವಿದ್ಯಾವಂತರು ಹಳ್ಳಿಗಳತ್ತ ಆಸಕ್ತಿವಹಿಸದೆ ಅವರು ನಗರ ಪ್ರದೇಶಗಳಲ್ಲಿ ಹೋಗಿ ವ್ಯಾಪಾರ, ವ್ಯವಹಾರ, ಸರಕಾರಿ ನೌಕರಿ ಹೊಂದಿ ತಮ್ಮ ಮಕ್ಕಳ ಉತ್ತಮ ಭವಿಷ್ಯಕ್ಕಾಗಿ ಅಲ್ಲೇ ಉಳಿದುಕೊಂಡು ಜೀವನ ಸಾಗಿಸುತ್ತಿರುವುದನ್ನು ಕಾಣಬಹುದು. ಅವರು ತಮ್ಮ ಮೂಲ ಊರುಗಳತ್ತ ಮುಖ ಮಾಡದೆ ಇರುವುದನ್ನು ಕಾಣಬಹುದು. ಬಂಕಾಪುರ ಗ್ರಾಮದ ಪ್ರದೇಶ ಹೆಚ್ಚಾಗಿ ಮಳೆ ಆಶ್ರಿತ ಪ್ರದೇಶವಾಗಿರುವುದರಿಂದ ಸರಿಯಾದ ಸಮಯಕ್ಕೆ ಮಳೆ ಬೀಳದಿದ್ದರೆ ಬೆಳೆಯಾಗುವುದಿಲ್ಲ. ಬೆಳೆಯಾಗದಿದ್ದರೆ ಜಾನುವಾರುಗಳಿಗೆ ಮೇವು ದೊರಕುವುದಿಲ್ಲ. ಜಾನುವಾರುಗಳಿಗೆ ಮೇವು ಇಲ್ಲದಿದ್ದರೆ ಅವುಗಳ ಜೀವನ ಬದುಕು ಕಷ್ಟಕರವಾಗಿದೆ. ಹೀಗಾಗಿ ಹೆಚ್ಚು ಜನ ಇಂದು ತಮ್ಮ ಜಾನುವಾರುಗಳನ್ನು ಮಾರಾಟ ಮಾಡುತ್ತಿರುವುದನ್ನು ಕಾಣಬಹುದು.

ಕೃಷಿ ದೇಶದ ಬೆನ್ನೆಲುಬು, ಹಳ್ಳಿಯಿಂದ ದಿಲ್ಲಿಗೆ, ಹಳ್ಳಿಗಳು ಉದ್ಧಾರವಾದರೆ ದೇಶವು ಉದ್ಧಾರವಾದಂತೆ. ಹೀಗೆಲ್ಲಾ ಸಾಮಾನ್ಯವಾಗಿ ಎಲ್ಲರು ಮಾತನಾಡುವುದನ್ನು ನಾವು ಕಾಣುತ್ತೇವೆ. ಆದರೆ ಇಂದು ಕೃಷಿಗೆ ನಾನಾ ತೊಂದರೆಗಳು ಕಾಡುತ್ತಿವೆ. ಇಂದು ಆಹಾರ ಬೆಳೆಗಳ ಬದಲಾಗಿ ವಾಣಿಜ್ಯ ಬೆಳೆಗಳನ್ನು ಹೆಚ್ಚಾಗಿ ಬೆಳೆಯುತ್ತಿದ್ದಾರೆ. ಆಹಾರ ಬೆಳೆಗಳಿಗಿಂತ ವಾಣಿಜ್ಯ ಬೆಳೆಗಳಿಗೆ ಬೇಡಿಕೆ ಹೆಚ್ಚಾಗಿರುವುದು ಇದಕ್ಕೆ ಕಾರಣ. ಇದು ಹೆಚ್ಚು ಆದಾಯವನ್ನು ತರುವ ಬೆಳೆಯಾಗಿದೆ. ನೀರಾವರಿ ಇದ್ದರೆ ಈ ಬೆಳೆಗೆ ಯಾವುದೆ ತೊಂದರೆ ಕಾಡುವುದಿಲ್ಲ. ಇದರಲ್ಲಿ ಎತ್ತು ಕರುಗಳ ಬಳಕೆ ಕಡಿಮೆ. ಇದಕ್ಕೆ ಮುಖ್ಯವಾಗಿ ರೈತನು ಹೆಚ್ಚಾಗಿಯೇ ರಾಸಾಯನಿಕ ಗೊಬ್ಬರವನ್ನು ಬಳಸುತ್ತಾನೆ. ಕೆಲಸಗಾರರ ಅವಶ್ಯಕತೆ ಕಡಿಮೆಯಾಗಿ ಬೆಳೆಯನ್ನು ಬೆಳೆಯುತ್ತಾರೆ. ಮಾರುಕಟ್ಟೆಯಲ್ಲಿ ಬೆಳೆದ ಬೆಳೆಗೆ ಬೆಲೆಯು ಸಿಗುತ್ತದೆ. ಇಂದು ಹೆಚ್ಚುತ್ತಿರುವ ಜನಸಂಖ್ಯೆಯ ಕಾರಣದಿಂದ ರೈತರು ಹೊಲವನ್ನು ಪ್ಲಾಟುಗಳನ್ನಾಗಿ ಮಾರಾಟ ಮಾಡುತ್ತಿರುವುದನ್ನು ನೋಡುತ್ತೇವೆ ಈ ಗ್ರಾಮದಲ್ಲಿ ರಾಜಕೀಯ ಪ್ರಬಲವಾಗಿದ್ದು, ದೇವಸ್ಥಾನಗಳಲ್ಲೂ ರಾಜಕೀಯ ಪ್ರವೇಶವಾಗಿರುವುದು ವಿಷಾದನೀಯವಾಗಿದೆ. ಬೇರೆ ಬೇರೆ ಸಮುದಾಯಗಳ ನಡುವೆ ಇದ್ದಂತಹ ಸಾಮಾಜಿಕ ಬದಲಾವಣೆಯಾಗಿವೆ. ಸಾಂಪ್ರದಾಯಿಕ ಕೃಷಿ ವಿಧಾನ, ಕೃಷಿ ಪದ್ಧತಿಗಳು ಒಬ್ಬರೊಬ್ಬರು ಸಹಾಯ ಮಾಡುವುದಾಗಿತ್ತು. ಈ ಗ್ರಾಮದ ಜನ ಜೀವನವನ್ನು, ಸಂಸ್ಕೃತಿಯನ್ನು ರೂಪಿಸುವುದರ ಜೊತೆ-ಜೊತೆಗೆ ಸಂಸ್ಕೃತಿಗೆ ಆಧಾರ ಸ್ತಂಭವಾಗಿತ್ತು. ಧರ್ಮ, ಜನಾಂಗ, ಸಂಘ ಸಂಸ್ಥೆಗಳು ಕಾಲಘಟ್ಟದಲ್ಲಿ ವಿವಿಧ ರೀತಿಯಾಗಿ ಈ ದೇಶಗಳ ಜನಜೀವನ ಅವರು ಮಾಡುವಂತಹ ಕೆಲವು ಕೆಲಸಗಳು, ಅವರ ಆಚರಣೆ ಮಾಡುವಂತಹ ಸಾಂಪ್ರದಾಯಿಕವಾದ ಕೃಷಿಯ ಬಗ್ಗೆ, ಅದರಿಂದ ಈ ದೇಶದಲ್ಲಿ ಅವರು ಜೀವನ ನಡೆಸಲು ಅನೇಕ ರೀತಿಯ ಸಹಾಯ ಆಧಾರವೂ

ಬೇಕೇ ಬೇಕು. ರಾಜಕೀಯ ರಂಗದಲ್ಲಿ ಈ ಪ್ರದೇಶವು ಹೊಸ ಹೊಸ ರೀತಿಯಾದಂತಹ ಹೊಸ ಹೊಸ ಸಾಮಾಜಿಕ ಸಂಸ್ಥೆಗಳಲ್ಲಿ ಜೀವನ ಪದ್ಧತಿಯನ್ನು ತನ್ನದಾಗಿಸಲು ಹಲವು ವಿರೋಧಿಗಳನ್ನು ಪರಸ್ಪರ ಹೊಂದಾಣಿಕೆಯನ್ನೂ ಏಕಕಾಲದಲ್ಲಿ ಪರಿವರ್ತನೆ ಹೊಂದಿರುವುದನ್ನು ಕಾಣುತ್ತೇವೆ.

ಭೌಗೋಳಿಕ, ಸಾಮಾಜಿಕ ಹಿನ್ನೆಲೆಯಲ್ಲಿ ಗ್ರಾಮದ ಪರಿಕಲ್ಪನೆಯನ್ನು ನೋಡಿದಾಗ ಹಲವಾರು ಬದಲಾವಣೆಯನ್ನು ಹೊಂದಿದೆ ಎಂದು ತಿಳಿಯುತ್ತದೆ. ಪ್ರತಿಯೊಂದು ಗ್ರಾಮ ಸಮಾಜವು ಹಲವಾರು ಸ್ಥಿತ್ಯಂತರಗಳನ್ನು ಒಳಗೊಂಡಿರುತ್ತದೆ. ಪ್ರತಿಯೊಂದು ಗ್ರಾಮವು ಆಧುನಿಕತೆಯ ಪ್ರಭಾವದಿಂದ ಹೆಚ್ಚು ಬದಲಾವಣೆಯನ್ನು ಹೊಂದಿರುತ್ತವೆ. ಅಂದರೆ ಇಂದಿನ ಹಳ್ಳಿಗಳು ಇಲ್ಲಿನ ಸಾಮಾಜಿಕ ಸ್ಥಿತಿಯು ಆಧುನಿಕತೆಯ ಜೀವನ ವಿಧಾನವನ್ನು ಸ್ವೀಕರಿಸುವ ಮೂಲಕ ನವ್ಯತೆಯನ್ನು ಪಡೆಯುತ್ತದೆ. ನಗರೀಕರಣದಿಂದಲೂ ಸಹ ಗ್ರಾಮಗಳು ಬೆಳೆಯುತ್ತಿರುತ್ತವೆ.

ಗ್ರಾಮದ ಅಧ್ಯಯನವು ಪ್ರತಿಯೊಂದು ಗ್ರಾಮದ ಎಲ್ಲಾ ವಿಷಯ ವಸ್ತುವನ್ನು ಒಳಗೊಂಡಿರುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಬಂಕಾಪುರ ಗ್ರಾಮದಲ್ಲಿ ಕೆಲವೊಂದು ಅಂಶಗಳನ್ನು ಗಮನಿಸಿದಾಗ ಮತ್ತು ಕ್ಷೇತ್ರಕಾರ್ಯದ ಮೂಲಕ ಕೆಲವೊಂದು ಅಂಶಗಳನ್ನು ತಿಳಿಯಬಹುದಾಗಿದೆ. ಅಂದರೆ ಗಾಂಧೀಜಿಯವರು ಹೇಳಿದಂತೆ ಗ್ರಾಮಗಳ ಉದ್ಧಾರವೇ ದೇಶಗಳ ಉದ್ಧಾರವೆಂಬ ಆಶಯದಂತೆ ಅಂದರೆ ಕೃಷಿ/ಕೃಷಿಪೂರಕ ಉದ್ಯೋಗಗಳಿಂದ ಗ್ರಾಮಗಳು ಅಭಿವೃದ್ಧಿಯನ್ನು ಕಾಣಬಹುದಾಗಿದೆ.

ಸಂವಹನ ಮಾಧ್ಯಮಗಳ ಪ್ರಭಾವದಿಂದ ಹಿಂದಿನ ಕಾಲದ ಜನಪದ ಕಥೆ, ಗಾದೆ ಮತ್ತು ಒಗಟುಗಳ ಸ್ಥಾನಗಳಲ್ಲಿ ಟಿ.ವಿ, ರೇಡಿಯೋ, ಮೊಬೈಲ್‌ಗಳ ಪ್ರಭಾವ ಹೆಚ್ಚಾಗಿದೆ. ಜನಪದ ಸಾಹಿತ್ಯದ ಪ್ರಭಾವ ತುಂಬಾ ಕಡಿಮೆಯಾಗಿದೆ. ಅಂದರೆ ಇದಕ್ಕೆ ಜನರ ಆಸಕ್ತಿ ಕಡಿಮೆಯಾಗುತ್ತಿದೆ.

ಇಂದಿನ ಹಳ್ಳಿಗಳ ಮೇಲೆ ನಗರೀಕರಣದ ಪ್ರಭಾವದಿಂದ ಯಾಂತ್ರಿಕ ಅವಲಂಬನೆ ಔದ್ಯೋಗಿಕರಣ ಅಧಿಕವಾಗಿರುವ ಕಾರಣ ಅಂದಿನ ಕೃಷಿ ಪರಿಕರಗಳಾದ ನೇಗಿಲು, ಕುಂಟೆ, ಕೊರಗಿ ಮುಂತಾದ ವ್ಯವಸಾಯ ಸಾಮಗ್ರಿಗಳ ಸ್ಥಾನದಲ್ಲಿ ಆಧುನಿಕ ಉಪಕರಣಗಳ ಹಾವಳಿ ಹೆಚ್ಚಾಗಿದೆ.

### ೮.೧. ಭೌತಿಕ ಹಿನ್ನೆಲೆ

ಬದಲಾಣೆ ನಿಸರ್ಗ ನಿಯಮ. ಪ್ರತಿಯೊಂದು ವ್ಯಕ್ತಿಗಳಲ್ಲಿ ಇದು ಸಹಜವಾಗಿರುತ್ತದೆ. ಹಾಗೆಯೇ ಗ್ರಾಮವು ಒಂದೇ ಸ್ವರೂಪದಲ್ಲಿ ಇರಲಾರದು. ಅದು ತನ್ನ ಭೌತಿಕ ಸ್ವರೂಪದಲ್ಲಿ ಕಾಲಕ್ಕನುಗುಣವಾಗಿ ಬದಲಾವಣೆಯಾಗುತ್ತದೆ. ಆದರೆ ಇಂದು ಗ್ರಾಮದಲ್ಲಿ ಭೌತಿಕ ಬೆಳವಣಿಗೆ

ಬಹು ವಿಸ್ತಾರವಾಗಿ ಬೆಳೆದಿರುವುದನ್ನು ಕಾಣುತ್ತೇವೆ. ಪ್ರಸ್ತುತ ಅಂಕಿ ಅಂಶಗಳ ಪ್ರಕಾರ ಬಂಕಾಪುರವೂ ೧೯೫೧ ರವರೆಗೂ ತಾಲೂಕು ಕೇಂದ್ರವಾಗಿತ್ತು. ನಂತರ ಕೇಂದ್ರವನ್ನು ಶಿಗ್ಗಾಂವಿಗೆ ವರ್ಗಾಯಿಸಲಾಯಿತು. ಬೆಂಗಳೂರು-ಮಿರಜ ರೈಲು ಮಾರ್ಗದಲ್ಲಿರುವ ಯಲುವಿಗಿ ನಿಲ್ದಾಣದಿಂದ ೧೬ ಕಿ.ಮೀ ಯಿಂದಲೂ ಬಂಕಾಪುರವನ್ನು ತಲುಪಬಹುದಾಗಿದೆ. ಬಂಕಾಪುರ ಎತ್ತರವಾದ ಪ್ರದೇಶದಲ್ಲಿ ಊರು ಚಾಚಿಕೊಂಡಿದೆ. ರಾಷ್ಟ್ರೀಯ ಹೆದ್ದಾರಿ ೪ ಪಕ್ಕದಲ್ಲಿ ಹಾದು ಹೋಗಿರುವುದರಿಂದ ಬೇರೆ ಬೇರೆ ಊರುಗಳೊಂದಿಗೆ ಸಂಪರ್ಕ ಸುಲಭ ಸಾಧ್ಯವಾಗಿದೆ. ೩.೧೦ ಚ.ಕಿ.ಮೀ ವಿಸ್ತೀರ್ಣ ಹೊಂದಿರುವ ೩೨ ಹಳ್ಳಿಗಳನ್ನು ಹೊಂದಿರುವ ಹೋಬಳಿ ಘಟಕವಾಗಿದೆ. ೪೧೩೦ ವಸತಿ, ೫೫೬ ವಾಣಿಜ್ಯ, ೭೮೯ ಖಾಲಿ ನಿವೇಶನ, ೨೧೦ ಶಾಲಾ, ಕಾಲೇಜು, ದೇವಸ್ಥಾನ ಮಸೀದಿ, ಸರಕಾರಿ ಕಟ್ಟಡ ಒಟ್ಟು ೫೫೬೫ ಕಟ್ಟಡಗಳನ್ನು ಹೊಂದಿರುವ ಪಟ್ಟಣ ಪ್ರದೇಶವಾಗಿದೆ. ಬಂಕಾಪುರದಲ್ಲಿರುವ ಜನಸಂಖ್ಯೆ ೨೦೧೧ ರ ಪ್ರಕಾರ ೨೨.೫೮೯ ಜನಸಂಖ್ಯೆ ಹೊಂದಿದ್ದು, ಗ್ರಾಮದ ಭೌತಿಕ ಬೆಳವಣಿಗೆಯನ್ನು ತಿಳಿಸುತ್ತದೆ. ಗ್ರಾಮದಲ್ಲಿ ಮೊದಲು ಸಾಕಷ್ಟು ಗಿಡಮರಗಳಿದ್ದವು. ಆದರೆ ಇಂದು ಹೆಚ್ಚುತ್ತಿರುವ ಜನಸಂಖ್ಯೆಯ ಕಾರಣದಿಂದ ಮತ್ತು ಆಧುನಿಕತೆಯ ಪ್ರಭಾವದಿಂದ ಅರಣ್ಯ ಪ್ರದೇಶವನ್ನು ಕಡಿಯುತ್ತಿದ್ದಾರೆ. ಬಂಕಾಪುರ ಗ್ರಾಮದಲ್ಲಿ ದಕ್ಷಿಣ ಭಾರತದಲ್ಲೆ ಎರಡನೆಯ ನವಿಲು ಧಾಮ. ಆದರೆ ಮನುಷ್ಯನ ಅತಿಯಾದ ದುರಾಸೆಯಿಂದ ಇಂದು ಅಳಿವಿನಂಚಿನಲ್ಲಿವೆ. ಏಕೆಂದರೆ ಹೊಲದಲ್ಲಿ ಬೆಳೆಗಳಿಗೆ ಹೊಡೆದಿರುವ ರಾಸಾಯನಿಕವನ್ನು ತಿಂದು ಸಾಕಷ್ಟು ಸಂಖ್ಯೆಯಲ್ಲಿ ನವಿಲುಗಳು ಸಾವಿಗೀಡಾಗಿವೆ. ಸಣ್ಣ ಪುಟ್ಟ ಪ್ರಾಣಿಗಳು ಬಲಿಯಾಗಿವೆ.

ಗ್ರಾಮದಲ್ಲಿ ಹಳೆಯ ಮನೆಗಳು ಸಾಕಷ್ಟು ಸಂಖ್ಯೆಯಲ್ಲಿದ್ದು ಇಂದಿಗೂ ನಾವು ಹಳೆಯ ಮನೆಗಳನ್ನು ಕಾಣಬಹುದು. ಕಟ್ಟಿಗೆ ಹಾಗೂ ಮಣ್ಣಿನ ಹೆಂಡಿಗಳಿಂದ ಅವುಗಳನ್ನು ನಿರ್ಮಿಸಲಾಗಿದೆ, ಕೆಲವು ಸಂಪೂರ್ಣ ಕಲ್ಲಿನಿಂದ ನಿರ್ಮಾಣವಾದ ಮನೆಗಳು ಇವೆ. ಅವುಗಳ ಬಾಳಿಕೆ ಸುದೀರ್ಘ ವಾಗಿದೆ. ಆದರೆ ಇಂದು ಆಧುನಿಕತೆಯ ಪ್ರಭಾವದಿಂದ ಗ್ರಾಮಗಳಲ್ಲಿ ಆರ್.ಸಿ.ಸಿ ಮನೆಗಳು ನಿರ್ಮಾಣವಾಗುತ್ತಿರುವದನ್ನು ನಾವು ನೋಡಬಹುದು. ಬಡವರು ಸರಕಾರದಿಂದ ಸಿಗುವ ಧನ ಸಹಾಯದಿಂದ ಹಂಚು ಹಾಗೂ ತಗಡಿನ ಮೇಲ್ಛಾವಣಿ ಇರುವ ಮನೆಗಳನ್ನು ನಿರ್ಮಿಸಿಕೊಳ್ಳು ತ್ತಿರುವುದು ಕೂಡಾ ಕಾಣಬಹುದು. ಗ್ರಾಮದ ಹೊರಗಿನ ಎಲ್ಲಾ ರಸ್ತೆಗಳು ಡಾಂಬರಿಕರಣವಾಗಿವೆ ಹಾಗೂ ಊರಿನ ಒಳಗಡೆ ರಸ್ತೆಗಳು ಸಿಮೆಂಟಿನಿಂದ ಕೂಡಿರುವುದನ್ನು, ಹಾಗೂ ಚಿಕ್ಕ ಪುಟ್ಟ ಕಿರಿದಾದ ರಸ್ತೆಗಳು ಸಿ.ಸಿ ಯಿಂದ ಕೂಡಿವೆ. ಕೆಲವು ರಸ್ತೆಗಳನ್ನು ಹೊರತುಪಡಿಸಿದರೆ ಎಲ್ಲಾ ರಸ್ತೆ ಹಾಗೂ ಕಾಲುವೆಗಳು ಸಿಮೆಂಟಿನಿಂದ ಕೂಡಿವೆ. ಹೀಗೆ ಗ್ರಾಮವೂ ಭೌತಿಕವಾಗಿ ಹಲವಾರು ಬದಲಾವಣೆಗಳನ್ನು ಕಂಡಿದ್ದು, ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿರುವುದನ್ನು ಕಾಣಬಹುದು.

### ೮.೨. ಸಾಮಾಜಿಕ ಸ್ಥಿತ್ಯಂತರಗಳು

ಬಂಕಾಪುರ ಐತಿಹಾಸಿಕ ನಗರವಾಗಿರುವುದರಿಂದ ಅನಾದಿಕಾಲದಿಂದಲು ನಡೆದುಕೊಂಡು ಬಂದ ವರ್ಣ ವ್ಯವಸ್ಥೆ ಪ್ರಾಚೀನ ಕಾಲದಿಂದಲೂ ನಡೆದು ಬಂದ ಪರಂಪರೆ. ಬಂಕಾಪುರ ಗ್ರಾಮದಲ್ಲಿ ಇದು ಕಟ್ಟುನಿಟ್ಟಾಗಿ ಆಚರಣೆಯಲ್ಲಿರುವುದು ಇಲ್ಲಿನ ಹಿರಿಯ ಜೀವಗಳಿಂದ ತಿಳಿದು ಬರುತ್ತದೆ. ಆದರೆ ವರ್ಣವ್ಯವಸ್ಥೆಯ ಆಚರಣೆ ಇಂದು ಗ್ರಾಮದಲ್ಲಿ ಕಟ್ಟುನಿಟ್ಟಾಗಿ ಕಂಡುಬರುವುದಿಲ್ಲ. ಮೊದಲು ಬ್ರಾಹ್ಮಣ ಸಮುದಾಯ ಸಾಕಷ್ಟು ಸಂಖ್ಯೆಯಲ್ಲಿ ಇತ್ತು. ಆದರೆ ಇಂದು ಸಂಪೂರ್ಣವಾಗಿ ನಗರಗಳಿಗೆ ವಲಸೆ ಹೋಗಿದ್ದಾರೆ. ಸಾಕಷ್ಟು ಮಡಿವಂತಿಕೆಯಿಂದ ಜೀವನ ಸಾಗಿಸುತ್ತಿದ್ದ ಈ ಸಮುದಾಯ ಇಂದು ಎಲ್ಲಾ ಸಮುದಾಯಗಳ ಜೊತೆ ಬೆರೆತು ನಡೆಯುತ್ತಿರುವುದನ್ನು ಕಾಣಬಹುದು. ಕಟ್ಟುನಿಟ್ಟಿನ ಆಚರಣೆ ಎಂದಾಕ್ಷಣ ಸಂಪೂರ್ಣ ಆಚರಣೆಯಲ್ಲಿ ಇಲ್ಲ ಎಂದು ಹೇಳಲು ಸಾಧ್ಯವಿಲ್ಲ. ಗ್ರಾಮದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಮುಸ್ಲಿಂ ಸಮುದಾಯದವರು ಇರುವುದನ್ನು ಕಾಣಬಹುದು. ಜೈನ, ಕ್ರೈಸ್ತ ಧರ್ಮಗಳಿದ್ದರು ಇಲ್ಲದಂತೆ ಇವೆ. ಸಾಮಾಜಿಕ ವ್ಯವಸ್ಥೆಯು ಹಲವಾರು ಉಪ ಸಮುದಾಯಗಳನ್ನು ಹೊಂದಿದ್ದು ತಮ್ಮ ಪರಂಪರಾಗತವಾದ ಕೆಲವು ಆಚರಣೆಗಳ ಮೂಲಕ ಅವುಗಳನ್ನು ಜೀವಂತವಾಗಿ ಉಳಿಸಿಕೊಂಡು ಬಂದಿದ್ದಾರೆ. ಆದರೆ ಆಧುನಿಕತೆಯ ಪರ್ವದಿಂದ ಇಂದು ಸಮುದಾಯ ವ್ಯವಸ್ಥೆ ಗಟ್ಟಿಯಾಗಿ ಉಳಿದಿಲ್ಲ. ಸಾಮಾಜಿಕ ಕಾರ್ಯಚಟುವಟಿಕೆಗಳು ಸಮುದಾಯದ ಸಾಮೂಹಿಕ ಸಂಸ್ಥೆಗಳು ಇಂದು ಮುಕ್ತವಾಗಿವೆ. ಆ ಮೂಲಕ ಗ್ರಾಮದಲ್ಲಿರುವ ಕೆಲವು ಅಂಧಾಭಿಮಾನಿಗಳು ಆಧುನಿಕತೆಯ ಪ್ರಭಾವಕ್ಕೆ ಸಿಲುಕಿ ಹೋಗಿವೆ ಹಾಗೂ ನಳನಳಿಸುತ್ತಿವೆ. ಹಿಂದೆ ಮುಸ್ಲಿಂ ಸಮುದಾಯದ ಹಬ್ಬಗಳಾದ ಮೊಹರಂ, ಈದ್‌ಮಿಲಾದ. ರಂಜಾನ್, ಹಬ್ಬಗಳಲ್ಲಿ ಹಿಂದುಗಳೂ ಹೆಚ್ಚಿನ ಸಂಖ್ಯೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಬದಲಾದ ಇಂದಿನ ಕಾಲಮಾನದಲ್ಲಿ, ಇಂತಹ ಸಾಮಾಜಿಕ ಸಾಮರಸ್ಯ ಹದಗೆಡುತ್ತಿರುವುದು ಇದಕ್ಕೆಲ್ಲಾ ಇಂದಿನ ಬದಲಾದ ರಾಜಕೀಯ ಪರಿಸ್ಥಿಯೆನ್ನಬಹುದು. ಆದರು ಇಲ್ಲಿನ ಜನ ಅವುಗಳಿಗೆ ಕಿವಿಗೊಡದೆ ತಾವೆಲ್ಲಾ ಒಂದೇ ಎಂಬ ಭಾವನೆಯಿಂದ ಸಾಮರಸ್ಯದಿಂದ ಬದುಕು ಸಾಗಿಸುತ್ತಿರುವುದನ್ನು ಕಾಣಬಹುದು, ಗ್ರಾಮದೇವತೆಗಳಾದ ದುರ್ಗಾದೇವಿ, ಯಲ್ಲಮ್ಮ, ದ್ಯಾಮವ್ವ ಮಾಯವ್ವ, ಮೈಲವ್ವಾ, ಆಂಜನೇಯ, ಬಂಗಾರ ಬಸವೇಶ್ವರ, ಮಠಗಳಾದ ಅರಳೆಲೆ ಮಠ, ಹುಚ್ಚೇಶ್ವರ ಮಠ, ಕೆಂಡದ ಮಠ, ಫಕ್ಕೀರಸ್ವಾಮಿ ಮಠ, ಮುಂತಾದ ದೈವಗಳು, ಆಚರಣೆಗಳು, ಉತ್ಸವಗಳು, ಉರುಸುಗಳಲ್ಲಿ ಗ್ರಾಮದ ಜನತೆ ಸಾಮಾಜಿಕ ಸಾಮರಸ್ಯ ಕಾಯ್ದುಕೊಂಡು ಬರುತ್ತಿದ್ದಾರೆ. ಹಬ್ಬ ಹರಿದಿನಗಳ ಆಚರಣೆಯಲ್ಲಿಯೂ ಜನರಲ್ಲಿ ಸಾಮಾಜಿಕ ಸಾಮರಸ್ಯ ಗಟ್ಟಿಗೊಳ್ಳುತ್ತಿದೆ. ಬಂಕಾಪುರದಲ್ಲಿ ಇತ್ತೀಚೆಗೆ ಪ್ರತಿಯೊಂದು ಆಯಾ ಸಮುದಾಯದ ಮಹಾಪುರುಷರ ಜಯಂತಿಗಳ ಆಚರಣೆಗಳು ಯಥೇಚ್ಚವಾಗಿ ನಡೆಯುತ್ತಿದೆ, ಉದಾಹರಣೆಗೆ ಕನಕದಾಸರ ಜಯಂತಿ, ಅಂಬೇಡ್ಕರ್ ಜಯಂತಿ, ಮಹಾವೀರ ಜಯಂತಿ, ವಾಲ್ಮೀಕಿ ಜಯಂತಿ, ಮಹಮ್ಮದ ಪೈಗಂಬರ

ಜಯಂತಿ, ಶಿವಾಜಿ ಜಯಂತಿ, ಶಂಕರಾಚಾರ್ಯ ಜಯಂತಿ ಮುಂತಾದ ಜಯಂತಿಗಳು ವ್ಯಾಪಕವಾಗಿ ನಡೆಯುತ್ತಿರುವುದನ್ನು ಬೇರೆ ದೃಷ್ಟಿಯಿಂದ ನೋಡಿದರೆ ಸಮಾಜ ವಿಘಟನೆಯಾಗುತ್ತಿದೆ ಎಂಬ ಭಾವನೆ ಬರಬಹುದು. ಆದರೆ ಗ್ರಾಮದಲ್ಲಿ ಎಲ್ಲಾ ಜಯಂತಿ ಆಚರಣೆ, ಜಾತ್ರೆ ಉತ್ಸವಗಳಲ್ಲಿ ಎಲ್ಲ ಸಮುದಾಯದವರು ಪಾಲ್ಗೊಂಡು ಆಚರಣೆ ಮಾಡುತ್ತಿರುವುದು ಗ್ರಾಮದ ಸಾಮರಸ್ಯ ಜೀವನಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಒಟ್ಟಾರೆ ಬಂಕಾಪುರ ಧರ್ಮ ಸಾಮಾಜಿಕ ಸಾಮರಸ್ಯಕ್ಕೆ ಮಾದರಿ ಗ್ರಾಮ ಎಂದು ಹೇಳಬಹುದು.

**ಕುಲಕಸಬುಗಳು:** ಅನಾದಿಕಾಲದಿಂದಲೂ ನಡೆದುಕೊಂಡು ಬಂದ ವೃತ್ತಿ ಆಧಾರಿತ ಸಮುದಾಯದ ಕುಲಕಸಬುಗಳು ಆಧುನಿಕತೆಯ ಪ್ರಭಾವಕ್ಕೆ ಮಣಿದಿರುವುದು ಗ್ರಾಮದಲ್ಲಿ ಕಂಡುಬರುತ್ತದೆ. ನೇಕಾರ, ಗಾಣಿಗ, ಬಡಗಿತನ, ಕಮ್ಮಾರಿಕೆ, ಕುಂಬಾರಿಕೆ ಇಂದು ಯಂತ್ರೋಪಕರಣಗಳಿಂದ ಪ್ರಾವೀಣ್ಯತೆ ಪಡೆಯುತ್ತಿವೆ. ಕಟ್ಟಿಗೆ ಕೊರೆಯುವ ಮತ್ತು ಪಾಲಿಶ್ ಮಶಿನಗಳು ಬಂದ ಮೇಲೆ ರೈತ ಮತ್ತು ಬಡಗಿ, ಕಮ್ಮಾರರ ಪರಸ್ಪರ ಅವಲಂಬನೆಯ ಸಂಬಂಧಕ್ಕೆ ಸಂಚಕಾರ ಬಂದಿದೆ. ಇಂತಹ ಕುಲಕಸುಬು ಪದ್ಧತಿ ಇಲ್ಲವಾಗುತ್ತಿದೆ. ಆರೋಗ್ಯಕ್ಕೆ ಉತ್ತಮವಾಗಿದ್ದ ಚರ್ಮದ ಚಪ್ಪಲಿ ತಯಾರಿಸುವ ಚಮ್ಮಾರಿಕೆ ಕೆಲಸ ಇಂದು ಕಾಣದಾಗಿದೆ. ಕಂಬಳಿ ನೇಯುವ ಕುರುಬನ ಮಗ್ಗಗಳ ಪಳೆಯುಳಿಕೆಗಳು ಇಲ್ಲವಾಗಿವೆ. ಹೀಗೆ ತಲೆತಲಾಂತರದಿಂದ ನಡೆದುಕೊಂಡು ಬಂದ ಕುಲಕಸಬುಗಳು ಯಂತ್ರವೆಂಬ ಆಧುನಿಕತೆಯ ಮಾಯಾ ಬಲೆಗೆ ಸಿಕ್ಕು ನುಚ್ಚು–ನೂರಾಗಿವೆ. ಇಂತಹ ಕುಲಕಸುಬನ್ನೆ ನಂಬಿಕೊಂಡು ಬದುಕುತ್ತಿದ್ದ ಸಮುದಾಯಗಳು ಇಂದು ದಿಕ್ಕು ತೋಚದಂತಾಗಿವೆ. ಈ ಕುಲಕಸುಬುಗಳ ಮೂಲ ವ್ಯವಸ್ಥೆಯನ್ನು ಕೃಷಿಯಲ್ಲಿ ಇಂದು ನಿರೀಕ್ಷಿಸಲು ಸಾಧ್ಯವಿಲ್ಲದಷ್ಟು ಸ್ಥಿತ್ಯಂತರಗಳಾಗಿವೆ. ಗ್ರಾಮದ ಸಾರ್ವತ್ರಿಕ ಉದ್ಯೋಗವೇ ಕೃಷಿ ಮತ್ತು ಪೂರಕ ಕೆಲಸಗಳಾಗಿದ್ದವು. ಆದರೆ ಅನ್ನದಾತನಾದ ರೈತ ಇಂದು ಸಕಾಲಿಕ ಮಳೆ, ಬೆಳೆ ಬಾರದೆ ಬೆಳೆದ ಬೆಳೆಗೆ ನ್ಯಾಯಯುತ ಬೆಲೆ ಸಿಗದ ಹಿನ್ನೆಲೆಯಲ್ಲಿ ಅನಿವಾರ್ಯವಾಗಿ ಆಧುನಿಕತೆಯ ಸೋಗಿಗೆ ಮರುಳಾಗಿ ನಗರಗಳತ್ತ ಅಥವಾ ಬೆಂಗಳೂರು, ಮುಂಬಯಿ, ಗೋವಾದಂತಹ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೊಗುತ್ತಿರುವುದು ನಿತ್ಯ ಕಾಣುವ ಸತ್ಯವಾಗಿದೆ. ಅದರ ಪರಿಣಾಮವಾಗಿ ಪ್ರಸ್ತುತ ಸಂದರ್ಭದಲ್ಲಿ ಹಳ್ಳಿಗಳಲ್ಲಿ ಒಕ್ಕಲುತನ ಮಾಡುವವರೇ ಇಲ್ಲವಾಗುತ್ತಿದ್ದಾರೆ. ಬಂಕಾಪುರ ಗ್ರಾಮದಲ್ಲಿ ಇತ್ತೀಚೆಗೆ ಗಾರ್ಮೆಂಟ್ಸಗಳು ಪ್ರಾರಂಭವಾಗಿ ಬಿಸಿಲಿನಲ್ಲಿ ದುಡಿಯುವವರ ಸಂಖ್ಯೆ ಕಡಿಮೆಯಾಗಿದೆ. ಕೃಷಿ ಕೆಲಸಕ್ಕೆ ಬರಲು ಜನ ಮುಂದೆ ಬರದೆ ಇರುವುದನ್ನು ಕಾಣಬಹುದು. ಬೇರೆ ಬೇರೆ ಪ್ರದೇಶಗಳಿಂದ ರೈತರು ಕೃಷಿ ಕಾರ್ಯಕ್ಕೆ ಜನರನ್ನು ಕರೆತರುವುದನ್ನು ನೋಡಬಹುದು. ಸುಗ್ಗಿಯ ಕಾಲದಲ್ಲಿ ಗಂಡುಮಕ್ಕಳಿಗೆ ೩೦೦, ಹೆಣ್ಣು ಮಕ್ಕಳಿಗೆ ೨೫೦ ರೂಪಾಯಿಗಳನ್ನು ಕೂಲಿಯಾಗಿ ನೀಡುತ್ತಾರೆ. ಈ ರೀತಿಯ ಕೆಲವೇ ದಿನಗಳ ಕಾಲ ಕೆಲಸ ಸಿಗುವುದು ಆ ನಂತರ ರೈತರು ಬೇರೆ ಬೇರೆ ಕೆಲಸಗಳಲ್ಲಿ ತಮ್ಮನ್ನು

ತೊಡಗಿಸಿಕೊಳ್ಳಬೇಕು ಇಲ್ಲವಾದರೆ ಕೆಲಸವಿಲ್ಲದೆ ಮನೆಯಲ್ಲಿಯೇ ಇರುವ ಪರಿಸ್ಥಿತಿ ಇದೆ. ಹೀಗಾಗಿ ಕೃಷಿ ಕೂಲಿ ಕಾರ್ಮಿಕರು ಆರ್ಥಿಕವಾಗಿ ಮುಂದುವರೆಯಲು ಸಾಧ್ಯವಾಗಿಲ್ಲ. ಹೀಗೆ ಪ್ರಸ್ತುತ ಸಂದರ್ಭದಲ್ಲಿ ರೈತರು ಮತ್ತು ರೈತ ಕಾರ್ಮಿಕರು ಅತಂತ್ರ ಸ್ಥಿತಿಯನ್ನು ಅನುಭವಿಸುತ್ತಿದ್ದಾರೆ.

ಆಹಾರ ಪದ್ಧತಿಯಲ್ಲಿಯ ಬದಲಾವಣೆ: ಬಂಕಾಪುರದ ಗ್ರಾಮದ ರೈತರು ಹೆಚ್ಚಾಗಿ ಜೋಳ, ತೊಗರಿ, ಭತ್ತ, ಗೋಧಿ, ಅಲಸಂದಿ, ಹೆಸರು, ಅವರಿ, ಕಡ್ಲೆ, ಎಳ್ಳು, ಸಾವಿ, ನವಣೆ ಸಜ್ಜೆ ಮುಂತಾದ ಆಹಾರ ಪದಾರ್ಥಗಳನ್ನು ಬೆಳೆಯುತ್ತಿದ್ದರು. ವಾಣಿಜ್ಯ ಬೆಳೆಯಾಗಿ ಶೇಂಗಾ, ಮೆಣಸಿನಕಾಯಿ, ಕಬ್ಬು ಬೆಳೆಯುತ್ತಿದ್ದರು. ಇದು ರೈತನ ಮಿತ್ರನಾದ ದನ ಕರುಗಳಿಗೆ ಆಹಾರವಾಗುತ್ತಿತ್ತು. ಆದರೆ ಇವುಗಳಿಗೆ ಮಾರುಕಟ್ಟೆಯಲ್ಲಿ ಸೂಕ್ತ ಬೆಲೆ ಸಿಗದೆ ಇರುವುದರಿಂದ ಹಾಗೂ ಸರ್ಕಾರ ಪಡಿತರ ವ್ಯವಸ್ಥೆಯ ಮೂಲಕ ಅಕ್ಕಿ, ಗೋದಿಗಳನ್ನು ಕೊಡಲು ಪ್ರಾರಂಭಿಸಿದ ಮೇಲೆ ಆಹಾರ ಪದಾರ್ಥಗಳಾದ ಜೋಳದಂತಹ ಬೆಳೆಗಳನ್ನು ರೈತರು ಬೆಳೆಯದೆ ಇರುವುದನ್ನು ಕಾಣಬಹುದು. ಇದರಿಂದ ಪೌಷ್ಠಿಕ ಆಹಾರ ಪದಾರ್ಥಗಳನ್ನು ಜನರು ಬಳಸದೆ ಪಡಿತರ ಸಂಘಗಳಲ್ಲಿ ಕೊಡುವ ಅಕ್ಕಿಯನ್ನು ಬಳಸುವುದರಿಂದ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುತ್ತಿರುವುದನ್ನು ಕಾಣಬಹುದು. ಇಂದಿನ ಯುವ ಪೀಳಿಗೆ ಹಲವಾರು ದುಶ್ಚಟಗಳಿಗೆ ಬಲಿಯಾಗುತ್ತಿರುವುದು ಅತಿಯಾದ ಮೊಬೈಲ ಬಳಕೆ, ಅಲ್ಕೋಹಾಲು ಸೇವನೆಯತ್ತ ಜನರು ಹೆಚ್ಚು ಒಲವು ತೋರುತ್ತಿರುವುದು ಇಂದಿನ ಸಮಾಜದ ದುರಂತವಾಗಿದೆ. ಹೊಟ್ಟೆಗೆ ಹಿಟ್ಟಿಲ್ಲದಿದ್ದರು ಜುಟ್ಟಿಗೆ ಮಲ್ಲಿಗೆ ಹೂ ಎಂಬಂತೆ ವಾಸ್ತವ ಮೋಹಕತೆಗೆ ಜನ ಮರುಳಾಗುತ್ತಿದ್ದಾರೆ. ಕೆಲವರು ಪಾರಂಪರಿಕ ಪದ್ದತಿಯನ್ನೆ ಅನುಸರಿಸಿಕೊಂಡು ಹೊಗುತ್ತಿದ್ದರೆ. ಕೆಲವರು ಕೆಲವು ಬದಲಾವಣೆ ಗಳೊಂದಿಗೆ ಮುಂದೆ ಸಾಗುತ್ತಿರುವುದನ್ನು ಕಾಣಬಹುದು. ಏನೇ ಆಗಲಿ ಬಂಕಾಪುರ ಗ್ರಾಮ ಸಂಪೂರ್ಣವಾಗಿ ಬದಲಾವಣೆ ಹೊಂದದೆ ಅದೇ ಸಂಪ್ರದಾಯ ಆಚಾರ ವಿಚಾರ ಆಹಾರ ಪದ್ದತಿಯನ್ನು ಇಂದಿಗೂ ಅನುಸರಿಸಿಕೊಂಡು ಬರುತ್ತಿರುವುದನ್ನು ಕಾಣಬಹುದು.

**೮.೩. ಸಾಂಸ್ಕೃತಿಕ ಸ್ಥಿತ್ಯಂತರಗಳು**

ಸಂಸ್ಕೃತಿ ಮಾನವ ಜೀವನವನ್ನು ಆವರಿಸಿರುವ ಒಂದು ಪರಂಪರೆ. ಇಂತಹ ಸಾಂಸ್ಕೃತಿಕ ಆಯಾಮಗಳಲ್ಲಿಯೂ ಬಂಕಾಪುರ ಗ್ರಾಮ ಅನೇಕ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಕಂಡುಕೊಂಡಿದೆ.

ಮನುಷ್ಯನ ಹುಟ್ಟಿನಿಂದ ಸಾವಿನವರೆಗೆ ಆಚರಣೆಯಲ್ಲಿದ್ದ ಹಲವಾರು ಆಚರಣೆಗಳು ಕಾಣದಾಗುತ್ತಿವೆ. ಹಿಂದೆ ಹೆರಿಗೆಯನ್ನು ಗ್ರಾಮದ ಸೂಲಗಿತ್ತಿಯು ಮನೆಯಲ್ಲಿ ಮುಗಿಸುತ್ತಿದ್ದಳು. ಮಗುವಿಗೆ ಆಯಾಧರ್ಮಕ್ಕನುಗುಣವಾಗಿ ವಿವಿಧ ಆಚರಣೆ ಮಾಡಲಾಗುತ್ತಿತ್ತು. ಮಗುವಿನ ಜನನ ಸಮಯದಲ್ಲಿ ಬರುವ ಮಾಂಸವನ್ನು ಮನೆಯಲ್ಲಿ ಅಥವಾ ಮನೆಯ ಹಿತ್ತಲಿನಲ್ಲಿ ಹುಗಿಯುತ್ತಿದ್ದರು. ಈಗ ಬಹುತೇಕ ಹೆರಿಗೆಗಳು ಆಸ್ಪತ್ರೆಯಲ್ಲಿ ನಡೆಯುವುದರಿಂದ ಅಂತಹ

ಆಚರಣೆ ಇಂದು ನಶಿಸಿ ಹೋಗುತ್ತಿದೆ. ಅಷ್ಟೇ ಅಲ್ಲ ಋತುಮತಿಯಾದ ಸಮಯದಲ್ಲಿ ೨೧ ಅಥವಾ ೧೬ ದಿನಗಳವರೆಗೆ ಆರತಿ ಮಾಡುವ ಮೂಲಕ ಪ್ರತಿದಿನ ಸೋಬಾನ ಪದ ಹಾಡುವ ಆಚರಣೆಯೂ ರೂಢಿಯಲ್ಲಿತ್ತು. ಆದರೆ ಆಧುನಿಕತೆಯ ಪ್ರಭಾವದಿಂದಾಗಿ ಇಂದು ೫ ದಿನ ಕೂರಿಸಿ ಆರತಿ ಮಾಡುವ ಪರಿಪಾಠವಿದೆ. ಅಷ್ಟೇ ಅಲ್ಲ ಮುಂದುವರೆದ ಸಮುದಾಯಗಳಲ್ಲಿ ಇದು ಸಂಪೂರ್ಣವಾಗಿ ನಶಿಸಿ ಹೋಗುತ್ತಿದೆ. ಹಾಗೆಯೇ ಮದುವೆ ಮಾಡಿಕೊಳ್ಳುವ ಸಂದರ್ಭದಲ್ಲಿ ಹುಡುಗಿಯನ್ನು ಹುಡುಕಿ ಮದುವೆ ಮಾಡುವ ಜವಾಬ್ದಾರಿ ಹಿರಿಯರ ಮೇಲಿತ್ತು. ಹಾಗೂ ಅದಕ್ಕೆ ಮದುವೆ ಮಾಡಿಕೊಳ್ಳುವ ಹುಡುಗ, ಹುಡುಗಿ ಒಪ್ಪಿಕೊಳ್ಳಲೆಬೇಕಾಗಿತ್ತು. ಹಿರಿಯರ ಮಾತೇ ಅಂತಿಮ ತೀರ್ಪಾಗಿತ್ತು. ಆದರೆ ಬದಲಾದ ಇಂದಿನ ದಿನಮಾನದಲ್ಲಿ ಹಿರಿಯರ ಸಲಹೆ ಸೂಚನೆಗೆ ಯಾವ ಬೆಲೆ ಮತ್ತು ಗೌರವಗಳಿಲ್ಲ. ಹುಡುಗ-ಹುಡುಗಿ ಒಬ್ಬರನ್ನೊಬ್ಬರು ಒಪ್ಪಿಕೊಂಡರೆ ಅದಕ್ಕೆ ಹಿರಿಯರು ಅನಿವಾರ್ಯವಾಗಿ ಒಪ್ಪಿಗೆ ಸೂಚಿಸಲೇಬೇಕು. ಇಲ್ಲವಾದರೆ ಅದು ಪ್ರೀತಿಯ ಮದುವೆ ಆಗಿ ಪರಿವರ್ತನೆಯಾಗುವ ಸಂಭವವೇ ಹೆಚ್ಚಾಗಿದೆ. ಇದು ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ಉತ್ತಮ ಉದಾಹರಣೆಯಾಗಿದೆ. ಹಿಂದೆ ಒಂದು ವಾರದವರೆಗೆ ನಡೆಯುವ ಮದುವೆಯ ಕಾರ್ಯಗಳು ಇಂದು ಒಂದೇ ದಿನಕ್ಕೆ ಮುಗಿಯುವ ಹಂತಕ್ಕೆ ಬಂದಿವೆ.

ಬಂಕಾಪುರ ಗ್ರಾಮದಲ್ಲಿ ಈಗ ಅಲ್ಲಲ್ಲಿ ಅಂತರ್ ಸಮುದಾಯದ ಮದುವೆಗಳು ನಡೆಯುತ್ತಿವೆ. ಇದು ಆಧುನಿಕ ಜಗತ್ತಿಗೆ ಒಪ್ಪಿಗೆಯಾದರೂ ಅವರ ಭವಿಷ್ಯದ ಜೀವನ ಸಂಕಷ್ಟಕ್ಕೆ ಸಿಲುಕುವುದು ಹೆಚ್ಚು. ಇಂತಹ ವಿಚಾರಗಳಿಗೆ ಜನ ಸಂಪೂರ್ಣವಾಗಿ ಒಪ್ಪಿಗೆ ಇಲ್ಲದೆ ಇನ್ನು ಸಂದಿಗ್ದತೆ ಕಂಡುಬರುತ್ತಿದೆ. ಮದುವೆಯ ನಂತರ ಸೀಮಂತ ಮಾಡುವಲ್ಲಿ ನಾಜೂಕುತನ ಬಂದಿದೆ. ವಿಜೃಂಭಣೆಯನ್ನು ಮಾಡದೆ ಸ್ನೇಹಕೂಟದ ರೀತಿಯಲ್ಲಿ ಮಾಡಿ ಮುಗಿಸುವುದನ್ನು ಕಾಣಬಹುದು. ಈ ಹಿಂದೆ ಮಗುವಿಗೆ ನಾಮಕರಣ ಮಾಡುವಾಗ ಮನೆಯ ಹಿರಿಯರ ಅಥವಾ ದೇವರ ಹೆಸರನ್ನು ಇಡುವುದು ನಡೆದುಕೊಂಡು ಬಂದ ಪದ್ಧತಿಯಾಗಿತ್ತು. ಉದಾಹರಣೆಗೆ ಶಿವಪ್ಪ, ಮಲ್ಲಪ್ಪ, ಬೀರಪ್ಪ, ದುರ್ಗವ್ವ, ದ್ಯಾಮವ್ವ, ಮಾಯವ್ವ, ಮೈಲವ್ವ, ಮುಂತಾದವುಗಳು. ಆದರೆ ಇಂದು ಹೊಸ ಹೊಸ ಹೆಸರುಗಳು ಕಂಡುಬರುತ್ತವೆ. ಅಚಿಂತ್ಯಾ, ಅಮೂಲ್ಯ, ನೇಹಾ, ಸೌಮ್ಯ, ಸ್ವಪ್ನ, ಶಿವಕುಮಾರ, ನಿಧಿ, ಈ ರೀತಿಯ ನವ ನವೀನ ಹೆಸರುಗಳನ್ನು ನಾಮಕರಣ ಮಾಡುತ್ತಿದ್ದಾರೆ.

ಶವಸಂಸ್ಕಾರ ಸಂದರ್ಭದಲ್ಲಿ ನಡೆಯುವ ಪೂಜೆ, ಹಲಗೆ, ವಾದ್ಯ, ಭಜನೆ ಸರ್ವೇಸಾಮಾನ್ಯ ವಾಗಿದ್ದವು. ಭಜನೆಯನ್ನು ಸ್ವತಃ ೨೦-೩೦ ಜನರ ತಂಡ ಮಾಡುತ್ತಿತ್ತು. ಆದರೆ ಇಂದು ಕೆಲವು ಸಂದರ್ಭದಲ್ಲಿ ಧ್ವನಿವರ್ಧಕಗಳನ್ನು ಮತ್ತು ಧ್ವನಿಸುರುಳಿಯನ್ನು ಬಳಸಲಾಗುತ್ತಿದೆ. ಇದು

ಒಂದು ಬಗೆಯ ಶ್ರಮದ ಉಳಿತಾಯದಂತೆ ಕಂಡರೂ ಸಹ ಆಚರಣೆ ಮತ್ತು ಕಲೆಗಳು ನಶಿಸುತ್ತಿವೆ. ಹಬ್ಬ-ಹರಿದಿನಗಳ ಆಚರಣೆಗಳು ಗ್ರಾಮದಲ್ಲಿ ಮುಂದುವರೆದುಕೊಂಡು ಬಂದಿವೆ. ಆದರೆ ಅವುಗಳಲ್ಲಿ ಹಲವಾರು ಮಾರ್ಪಾಡು ಹಾಗೂ ನಾಜೂಕುತನಗಳನ್ನು ಗುರುತಿಸಬಹುದಾಗಿದೆ. ಉದಾಹರಣೆಗೆ ಗ್ರಾಮಸ್ಥರು ಕಣಬ್ಬ ಎಂಬ ಹಬ್ಬವನ್ನು ಬಹಳ ವಿಜೃಂಭಣೆಯಿಂದ ಮಾಡುತ್ತಿದ್ದರು. ಆದರೆ ಈ ಹಬ್ಬ ಇಂದು ನೋಡಲು ಸಿಗುವುದಿಲ್ಲ. ಹೊಲದ ಯಾವುದಾದರು ಒಂದು ಭಾಗದಲ್ಲಿ ಸ್ವಚ್ಚಗೊಳಿಸಿ ಕಣ ಮಾಡುವರು. ಆ ಕಣದಲ್ಲಿ ತಾವು ಬೆಳೆದ ಬೆಳೆಯನ್ನು ರೈತರು ತುಳಿಸಿ, ತೂರಿ ಕಾಳನ್ನು ರಾಶಿ ಹಾಕುವರು. ಹೀಗೆ ಜೋಳ ಮತ್ತು ಭತ್ತ ಬೆಳೆದಾಗ ಕಣದಲ್ಲಿ ರಾಶಿ ಹಾಕಿ ಅದನ್ನ ಪೂಜೆ ಮಾಡಲು ಮನೆ ಮಂದಿಯೆಲ್ಲ ಅಕ್ಕ ಪಕ್ಕದ ಮನೆಯವರನ್ನು ಕರೆದುಕೊಂಡು ಕಣಕ್ಕೆ ಕಣಬ್ಬ ಮಾಡಲು ಹೋಗುವರು. ಆ ದಿನ ರಾಶಿಗೆ ಪೂಜೆ ಮಾಡಿ ಅದಕ್ಕೆ ಸೀರೆ ಕುಪ್ಪಸ, ಕಣ ಏರಿಸುವರು. ಜೊತೆಗೆ ರಾಶಿ ಮಾಡಲು ಉಪಯೋಗಿಸುವ ಉಪಕರಣಗಳನ್ನು ಇದಲ್ಲದೆ ಕಣಬ್ಬಕ್ಕೆ ೫ ಮಂದಿ ಮುತ್ತೈದೆಯರಿಗೆ ಒಂದತ್ತು ಇಟ್ಟು ಅವರನ್ನು ಹೊಲಕ್ಕೆ ಕರೆದೊಯ್ದು ಉಡಿ ತುಂಬುವರು. ಜೊತೆಗೆ ಒಬ್ಬ ಜಂಗಮರನ್ನು ಕರೆದು ಅವರ ಪಾದ ಪೂಜೆ ಮಾಡಿ ಸೀರೆ ಏರಿಸಿ ಉಡಿ ತುಂಬಿ ಆರತಿ ಮಾಡುವರು. ಇದಾದ ಬಳಿಕ ಜಂಗಮರು ಊಟ ನಂತರ ಮುತ್ತೈದೆಯರು ಊಟ ಮಾಡಿಸಿದ ಮೇಲೆ ಉಳಿದವರೆಲ್ಲ ಊಟ ಮಾಡುವರು ಇಂತಹ ಅಪರೂಪದ ಕೃಷಿಗೆ ಸಂಬಂಧಿಸಿದ ಆಚರಣೆ ಇಂದು ಕಣ್ಮರೆಯಾಗಲು ಕಾರಣ ಎಲ್ಲಾ ಆಧುನಿಕ ಉಪಕರಣಗಳ ಬಳಕೆ ಹಾಗೂ ಬಂದ ಬೆಳೆಯನ್ನು ರೈತ ಆ ದಿನವೇ ಮಾರುಕಟ್ಟೆಗೆ ಕಳುಹಿಸುವುದರಿಂದ ಈ ತರಹದ ಆಚರಣೆಯು ನೋಡಲು ಸಿಗುತ್ತಿಲ್ಲ. ಆದರೆ ಆಧುನಿಕ ಜಗತ್ತಿನ ಸಮಯದ ಅಭಾವ ಮತ್ತು ತಾಳ್ಮೆ ಇಲ್ಲದ್ದರಿಂದ ಎಲ್ಲಾ ಆಚರಣೆಗಳು ಕೇವಲ ಹೆಸರಿಗೆ ಮಾತ್ರ ಉಳಿದಿವೆ. ಪ್ರತಿ ಹಬ್ಬಗಳಲ್ಲೂ ಅದರದೇ ಆದ ಆಚರಣೆಗಳು ವಿಶೇಷ ಪೂಜೆ ಪುನಸ್ಕಾರಗಳು, ಅದಕ್ಕೆ ಸಂಬಂಧಿಸಿದ ಅಡುಗೆಗಳು ನಡೆದುಕೊಂಡು ಬಂದಿವೆಯಾದರೂ ಅವುಗಳು ಬಹಳಷ್ಟು ಸರಳೀಕರಣಗೊಂಡಿರುವುದನ್ನು ಕಾಣುತ್ತೇವೆ.

ಬಂಕಾಪುರ ಗ್ರಾಮದಲ್ಲಿ ನಡೆಯುವ ದುರ್ಗಾದೇವಿ ಜಾತ್ರೆ, ಬಂಗಾರ ಬಸವೇಶ್ವರ ತೇರು, ಪೇಟೆ ಯಲ್ಲಮ್ಮನ ತೇರು, ಅರಳಲೆ ಮಠದ, ಹುಚ್ಚೇಶ್ವರ ಮಠದ, ಕೆಂಡದ ಮಠದ ಉತ್ಸವ, ಮೊಹರಂ, ಈದಮಿಲಾದ, ಗಣೇಶ ಚತುರ್ಥಿ ಹಬ್ಬ ಈ ಎಲ್ಲಾ ಆಚರಣೆಗಳಲ್ಲಿ ಗ್ರಾಮದ ಭಕ್ತರು ತನುಮನ ಧನದಿಂದ ಪಾಲ್ಗೊಂಡು ಎಲ್ಲ ಕೆಲಸಕಾರ್ಯಗಳನ್ನು ಜವಾಬ್ದಾರಿಯಿಂದ ನಿರ್ವಹಿಸುತ್ತಿದ್ದರು. ಆದರೆ ಬದಲಾದ ಕಾಲಮಾನದಲ್ಲಿ ಈ ಎಲ್ಲಾ ಧಾರ್ಮಿಕ ಕಾರ್ಯಗಳಲ್ಲಿ ಜನ ಸಕ್ರಿಯವಾಗಿ ಪಾಲ್ಗೊಳ್ಳದೆ, ತನುಮನ ಧನಗಳಿಂದ ಸಹಕರಿಸದೇ ಕೇವಲ ಪರೋಕ್ಷ ಸಹಕಾರ ಕೊಡುತ್ತಿದ್ದು, ಅವುಗಳ ನಿರ್ವಹಣೆ ಕೇವಲ ಅದರ ಮುಂದಾಳತ್ವ ವಹಿಸಿದವರ ಮೇಲೆ ಬೀಳುತ್ತಿರುವುದನ್ನು ಕಾಣಬಹುದು. ಕಲಿಯುಗಾರಂಭದಲ್ಲಿ ರಾಷ್ಟ್ರಕೂಟರು, ಹೊಯ್ಸಳರು,

ವಿಜಯನಗರ ಅರಸರು, ಬಹಮನಿ ಸುಲ್ತಾನರು, ಕೆಳದಿ ಅರಸರು, ಹಂಡೆ ಮನೆತನದವರು ಹಾಗೂ ಬಂಕರಸರು ಆಳಿ ಹೋದರು ಎಂಬುದಾಗಿ ಪುರಾವೆಗಳು ಹೇಳುತ್ತಿವೆ. ಇಂತಹ ಮಹೋನ್ನತ ರಾಜ ಮನೆತನಗಳಿಗೆ ರಾಜ ಗುರುಗಳಾಗಿ, ಅವರಿಗೆ ಸೂಕ್ತ ಮಾರ್ಗದರ್ಶನಾಶೀರ್ವಾದ ಕರುಣಿಸುತ್ತ, ಧಾರ್ಮಿಕ ಕಾರ್ಯಗಳನ್ನು ಮಾಡುತ್ತಾ ಅರಳೆಲೆ ಹಿರೇಮಠ ಬರುತ್ತಿರುವುದನ್ನು ಕಾಣಬಹುದು. ಬಂಕಾಪುರದ ಒಡೆಯರಾಗಿದ್ದ ಬಂಕರಸರು ಶ್ರೀ ಮಠದ ಮೇಲೆ ಅಪಾರವಾದ ಭಕ್ತಿ- ಶ್ರದ್ಧೆಗಳನ್ನಿಟ್ಟುಕೊಂಡವರಾಗಿದ್ದರು. ಅವರ ಭಕ್ತಿಯ ದ್ಯೋತಕವಾಗಿ ಶ್ರೀಮಠಕ್ಕೆ ಗೌರವ ಕಾಣಿಕೆಯ ರೂಪದಲ್ಲಿ ಸುವರ್ಣ, ರಜತ ಪೂಜಾ ಸಾಮಗ್ರಿಗಳನ್ನು, ನಾಣ್ಯಗಳನ್ನು ಮತ್ತು ಭೂಮಿಯನ್ನು ದಾನವಾಗಿ ನೀಡಿದರೆಂಬ ಬಗ್ಗೆ ಉಲ್ಲೇಖಗಳಿವೆ.

ಇವುಗಳಲ್ಲದೆ ಈ ಮಠಕ್ಕೆ ದಾನವಾಗಿ ಬಂಕಾಪುರ, "ಅಜರಿನಗರ ಮತ್ತು ತೋರ್‌ಗಲ್ಲ್ ಹೆಸರಿನ ಪ್ರದೇಶಗಳನ್ನು ಹಾಗೂ ಇಪ್ಪತ್ತೆರಡು ಮಹಲುಗಳುಳ್ಳ ಪ್ರದೇಶವನ್ನು ಅಂದು ಪಾಳೆಗಾರರಾಗಿದ್ದ ರಾವುಪಖಾನನು ದಾನವಾಗಿ ನೀಡಿರುವ ಬಗ್ಗೆ ತಾಮ್ರಪಟಗಳಿದ್ದು, ಆದ್ದರಿಂದಲೇ ಅನಂತರದಲ್ಲಿ ಶ್ರೀಮಠಕ್ಕೆ "ಬಾವಿಸಮಹಲ್ ಕಟ್ಟಿಮನಿ ಅರಳೆಲೆಹರೇಮಠ" ಎಂಬ ಹೆಸರು ಬಂದಿರಬಹುದಾಗಿದೆ. ಸಾವಿರಾರು ಸದ್ಭಕ್ತರನ್ನು ಹೊಂದಿರುವ ಮಠ ನಾಡಿನ ಭಕ್ತಿಯ ನೆಲೆಯಾಗಿ, ಅದೆಷ್ಟೋ ಜನರ ಕಷ್ಟ-ನಷ್ಟಗಳಿಗೆ ಸ್ಪಂದಿಸಿದೆ".[೧]

ಅಂದಿನ ರುದ್ರಮುನಿ ಶ್ರೀಗಳಿಂದ ಹಿಡಿದು ಪ್ರಸ್ತುತ ಶ್ರೀ ಷ.ಬ್ರ. ರೇವಣಸಿದ್ದೇಶ್ವರ ಶಿವಾಚಾರ್ಯ ಸ್ವಾಮಿಗಳವರ ತಪೋಬಲದಿಂದಾಗಿ ಪ್ರಗತಿಪರ ಕಾರ್ಯಗಳು ನಡೆಯುತ್ತಿವೆ. ಧರ್ಮದಾಸೋಹ ಮಾಡುತ್ತ ಧರ್ಮದ ತವರು ಮನೆಯ ಹಿರಿಮೆಗಳಂತೆ ನಾಡಿನ ಮಧ್ಯಭಾಗದಲ್ಲಿ ಅರಳೆಲೆಹಿರೇಮಠ ಸುಂದರ ಮತ್ತು ವಿಶಾಲವಾಗಿ ಕಂಗೊಳಿಸುತ್ತಿದೆ. ಇಲ್ಲಿ ಪುರಾಣ ಮಂಗಲ ಕಾರ್ಯಗಳು, ಆಧ್ಯಾತ್ಮಿಕ ಚಿಂತನಾಗೋಷ್ಠಿಗಳು ಹೀಗೆ ಹಲವಾರು ಸಾಂಸ್ಕೃತಿಕ ಕಾರ್ಯಚಟುವಟಿಕೆಗಳು ಸದಾ ನಡೆಯುತ್ತಿರುತ್ತವೆ. ಹೀಗೆ ಬಂಕಾಪುರ ಗ್ರಾಮವು ತನ್ನ ಪರಂಪರೆಯ ವಿವಿಧ ಹಬ್ಬ ಹರಿದಿನಗಳ ಆಚರಣೆ ಸಂಪ್ರದಾಯಗಳಲ್ಲಿ ಹಲವಾರು ಬದಲಾವಣೆಗಳನ್ನು ಕಂಡಿದ್ದರೂ ಸಹ ಸಂಸ್ಕೃತಿಯ ಮೂಲಬೇರುಗಳನ್ನು ಇನ್ನೂ ಗಟ್ಟಿಯಾಗಿ ಉಳಿಸಿಕೊಂಡಿವೆ. ಆದರೆ ಅವುಗಳು ವಿವಿಧ ರೂಪಗಳನ್ನು ಪಡೆದುಕೊಂಡು ಕವಲುಗಳಾಗಿ ಬೆಳೆಯುತ್ತಿವೆ. ಇದು ನಮ್ಮ ಜನಪದರ ಪುನರ್ ಸೃಷ್ಟಿಯ ನಿಯಮಕ್ಕೆ ಅನುಗುಣವಾಗಿಯೇ ನಡೆದಿದೆ ಎಂದು ಹೇಳಬಹುದು.

### ೮.೪. ಶೈಕ್ಷಣಿಕ ಸ್ಥಿತ್ಯಂತರಗಳು

ಐತಿಹಾಸಿಕ ನಗರ ಬಂಕಾಪುರ ಇತಿಹಾಸ ಪ್ರಸಿದ್ಧಿಯನ್ನು ಮಾತ್ರ ಪಡೆದಿರದೆ. ಒಂದು ಕಾಲದ ಪ್ರಸಿದ್ಧ ವಿದ್ಯಾ ಕೇಂದ್ರವು ಆಗಿತ್ತು ಎಂಬುದಕ್ಕೆ ನಮಗೆ ಹಲವು ದಾಖಲೆಗಳು

ಸಿಗುತ್ತವೆ. ಆದರೂ ಶಿಕ್ಷಣ ಕೇವಲ ಮೇಲ್ವರ್ಗದವರ ಸ್ವತ್ತು ಎಂಬ ಭಾವನೆ ನಮ್ಮ ಪ್ರಾಚೀನ ಸಮಾಜದಿಂದಲೂ ಬೆಳೆದು ಬಂದಿರುವ ನಂಬಿಕೆ. ಅದನ್ನು ತಲೆತಲಾಂತರದಿಂದ ಹಾಗೆಯೇ ಉಳಿಸಿಕೊಂಡು ಬಂದಿರುವುದನ್ನು ಗಮನಿಸಿದರೆ ನಮ್ಮ ಸಮಾಜದ ಪಾರಂಪರಿಕ ಬದ್ಧತೆಯ ಅರಿವು ನಮಗಾಗುತ್ತದೆ. ಆ ಹಿನ್ನೆಲೆಯಲ್ಲಿ ಬಂಕಾಪುರ ಗ್ರಾಮವು ಅದನ್ನು ಪರಿಪಾಲಿಸಿಕೊಂಡು ಬಂದಿರುವುದನ್ನು ಕಾಣಬಹುದು. ಹಿಂದಿನ ಕಾಲದಲ್ಲಿ ಮಠ ಹಾಗೂ ದೇವಸ್ಥಾನಗಳಿಗೆ ಸೀಮಿತವಾಗಿದ್ದ ಶಿಕ್ಷಣ ವ್ಯವಸ್ಥೆ ಆಧುನಿಕತೆಯ ಪ್ರಭಾವದಿಂದ ವಿಸ್ತಾರಗೊಂಡಿರುವುದನ್ನು ಕಾಣಬಹುದು.

ಕನ್ನಡದ ಕವಿ ರನ್ನ ಬಂಕಾಪುರದ ಅಜಿತಸೇನಾಚಾರ್ಯರಲ್ಲಿ ವಿದ್ಯಾಭ್ಯಾಸ ಮಾಡಿದುದು ಇತಿಹಾಸ ಪ್ರಸಿದ್ಧ ವಿಷಯ. ಆದರೆ ಇಲ್ಲಿ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಯಾವುದೇ ಅನುಕೂಲತೆಗಳಿದ್ದುದು ತಿಳಿದು ಬರುವುದಿಲ್ಲ. ಇದರಿಂದ ಶಿಕ್ಷಣದಲ್ಲಿ ಲಿಂಗತಾರತಮ್ಯ ಇದ್ದುದು ಸ್ಪಷ್ಟವಾಗುತ್ತದೆ. ೧೯ನೆಯ ಶತಮಾನದಲ್ಲಿ ಹಲವು ಮಹನೀಯರು ಇಲ್ಲಿನ ಶಿಕ್ಷಣಕ್ಕಾಗಿ ಶ್ರಮಿಸಿದ್ದಾರೆ. ಆದರೆ ಅದು ಕೇವಲ ಪ್ರಾಥಮಿಕ ಶಿಕ್ಷಣಕ್ಕೆ ಮಾತ್ರ ಸೀಮಿತವಾಗಿದ್ದಿತು. ಹೈಸ್ಕೂಲ್ ಶಿಕ್ಷಣ ಪಡೆಯಬೇಕಾದರೆ ಬೇರೆ ಬೇರೆ ಪ್ರದೇಶಗಳಿಗೆ ಹೋಗಬೇಕಾಗಿತ್ತು. ಅದು ಅಂದಿನ ಸಂಪ್ರದಾಯಸ್ಥ ಕುಟುಂಬದ ಹೆಣ್ಣುಮಕ್ಕಳಿಗೆ ಸಾಧ್ಯವಾಗುತ್ತಿರಲಿಲ್ಲ. ಇದನ್ನರಿತ ಊರಿನ ಹಿರಿಯರಾದ ಹನುಮಯ್ಯ, ಲಿಂಗಯ್ಯ, ಹುಲಗೂರ(ಈಳಗೇರ) ಎಂಬುವವರು ೧೬/೦೬/೧೯೫೮ ರಲ್ಲಿ ದಿ.ಮಾಡರ್ನ. ಇಂಗ್ಲೀಷ ಹೈಸ್ಕೂಲ್ ಎಂಬ ಪ್ರೌಢ ಶಾಲೆಯನ್ನು ತೆರೆದರು. ಇದರ ಪ್ರಥಮ ಅಧ್ಯಕ್ಷರಾಗಿ ಹನುಮಯ್ಯ. ಲಿಂಗಯ್ಯ. ಹುಲಗೂರ ಇವರು ವಹಿಸಿಕೊಂಡರು. ಪ್ರಥಮ ಮುಖ್ಯೋಪಾಧ್ಯಾಯರಾಗಿ ಎಂ.ಎನ್.ದುಗಲದ ಹಾಗೂ ಪ್ರಥಮ ಶಿಕ್ಷಕರಾಗಿ ಸಿ.ಎಮ್.ಸಿದ್ದನಗೌಡ್ರ ನೇಮಕಗೊಂಡು ಈ ಊರಿನ ಶಿಕ್ಷಣಕ್ಕಾಗಿ ಶ್ರಮಿಸಿರುವುದನ್ನು ಕಾಣಬಹುದು. ಅಂದಿನಿಂದ ಇಂದಿನವರೆಗೆ ಇಲ್ಲಿಯ ಹೆಣ್ಣುಮಕ್ಕಳು ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಹಾಗೂ ಉನ್ನತ ಶಿಕ್ಷಣ ಪಡೆದು ಉನ್ನತ ಹುದ್ದೆಗಳನ್ನು ಹೊಂದಿರುವುದನ್ನು ನೋಡಬಹುದು.

ಬಂಕಾಪುರ ಪ್ರದೇಶದಲ್ಲಿ ಒಟ್ಟು ಅಕ್ಷರಸ್ಥರ ಶೇಕಡಾವಾರು ೭೯.೩೬ ಅದರಲ್ಲಿ ಪುರುಷರು ಶೇಕಡಾ ೮೩.೨೬, ಆದರೆ ಮಹಿಳೆಯರು ೭೫.೨೧ ಶಿಕ್ಷಣವನ್ನು ಪಡೆದವರಾಗಿದ್ದಾರೆ. ಒಟ್ಟಾರೆಯಾಗಿ ಇಲ್ಲಿ ೨೨ ಅಂಗನವಾಡಿ ಕೇಂದ್ರಗಳು, ೧೦ಕ್ಕೂ ಹೆಚ್ಚು ಪ್ರಾಥಮಿಕ ಶಾಲೆಗಳು, ೫ ಪ್ರೌಢಶಾಲೆಗಳು, ೨ಪದವಿ ಪೂರ್ವ ಕಾಲೇಜುಗಳು, ೧ ಪದವಿ ಕಾಲೇಜು, ೧ ವೃತ್ತಿಪರ ಕಾಲೇಜನ್ನು ಹೊಂದಿರುವ ಪ್ರದೇಶವಾಗಿದೆ. ಈ ಎಲ್ಲಾ ವಿಚಾರಗಳನ್ನು ಅವಲೋಕಿಸಿ ನೋಡಿದಾಗ ಗ್ರಾಮದ ಶೈಕ್ಷಣಿಕ ಪ್ರಗತಿ ಬಹು ವೇಗದಲ್ಲಿರುವುದನ್ನು ಸೂಚಿಸುತ್ತದೆ. ಅದರಲ್ಲೂ ಹಿಂದುಳಿದ ವರ್ಗಗಳ ಮಕ್ಕಳು ಉನ್ನತ ಶಿಕ್ಷಣ ಪಡೆದಿರುವುದು ವಿಶೇಷವಾಗಿದೆ. ಕೃಷಿ ಮಾಡುತ್ತಿದ್ದರು ಈಗ ಕೆಲವು ಕೃಷಿಯೇತರ ಕಾರ್ಯಗಳಲ್ಲಿ ತೊಡಗಿದ್ದು, ಸ್ವಲ್ಪಮಟ್ಟಿಗೆ ಸ್ವಾವಲಂಬನೆ ಸಾಧಿಸುತ್ತಿದ್ದಾರೆ. ಗ್ರಾಮದಲ್ಲಿ ಇತ್ತೀಚೆಗೆ

ಕಾಲಘಟ್ಟದಲ್ಲಿ ಸರ್ಕಾರಿ ನೌಕರಿಗೆ ಸೇರುವವರ ಸಂಖ್ಯೆ ಏರಿಕೆ ಕ್ರಮದಲ್ಲಿದೆ. ನೂರಾರು ಜನ ಇಂದು ಸರಕಾರಿ ನೌಕರಿಯಲ್ಲಿದ್ದಾರೆ. ಹಲವಾರು ಜನ ವಿದ್ಯಾರ್ಥಿಗಳು ಇಂಜಿನಿಯರಿಂಗ ಪದವಿ ಮುಗಿಸಿದ್ದಾರೆ. ಹಾಗೂ ಬೆರಳೆಣಿಕೆಯಷ್ಟು ಜನ ಎಂ.ಬಿ.ಬಿ.ಎಸ್, ಹಾಗೂ ಬಿ.ಎ.ಎಮ್.ಎಸ್ ಪದವಿ ಪಡೆದವರಾಗಿದ್ದಾರೆ. ಆದರೂ ಬಂಕಾಪುರ ಗ್ರಾಮದಲ್ಲಿ ಕೃಷಿಯನ್ನೇ ನಂಬಿ ಬದುಕುತ್ತಿದ್ದವರ ಸಂಖ್ಯೆ ಹೆಚ್ಚಿನ ಮಟ್ಟದಲ್ಲಿರುವುದರಿಂದ ಆರ್ಥಿಕ ಪರಿಸ್ಥಿತಿಯು ಸುಧಾರಿಸದೆ ಇರುವುದರಿಂದ ಶಿಕ್ಷಣ ಕೆಲವರ ಸ್ವತ್ತಾಗಿರುವುದು ಕಂಡುಬರುತ್ತದೆ. ಗ್ರಾಮದ ಜನರ ಜೀವನಮಟ್ಟ ಸುಧಾರಣೆಗೆ ಪೂರಕ ಆಕರಗಳ ಕೊರತೆ ಇದೆ. ಅದು ವಲಸೆ ಪ್ರಮಾಣವನ್ನು ಹೆಚ್ಚಿಸಿದೆ. ಸರ್ಕಾರ ಆರ್ಥಿಕ ಭದ್ರತೆಗಾಗಿ ವಿವಿಧ ಯೋಜನೆಗಳ ಮೂಲಕ ನೇರವು ನೀಡುತ್ತಿದ್ದರು. ಅದರೂ ಈ ಯೋಜನೆ ಯನ್ನು ಬಹುತೇಕ ಫಲಾನುಭವಿಗಳು ಜೀವನದ ಸಾರ್ವಕಾಲಿಕ ಅಭಿವೃದ್ದಿಗೆ ಬಳಸಿಕೊಳ್ಳದೆ ಸರ್ಕಾರಿ ಯೋಜನೆಗಳ ಲಾಭವು ಒಂದು ರೀತಿಯ ಪರಿಹಾರದಂತೆ ಬಳಕೆಯಾಗುತ್ತಿದೆ. ಒಟ್ಟಾರೆ ಯಾಗಿ ನೋಡುವುದಾದರೆ ಶಿಕ್ಷಣದಲ್ಲಾದ ಕೆಲವು ಬದಲಾವಣೆಗಳು ಖುಷಿ ತರುವಂತಹ ವಿಚಾರಗಳು ಎಂದು ಹೇಳಬಹುದಾಗಿದೆ.

**೮.೫. ಆರ್ಥಿಕ ಸ್ಥಿತ್ಯಂತರಗಳು**

ಬಂಕಾಪುರದ ಜನರ ಪ್ರಮುಖ ಉದ್ಯೋಗ ವ್ಯವಸಾಯವಾಗಿದ್ದು, ಫಲವತ್ತಾದ ಕಪ್ಪು ಹಾಗೂ ಮಸಾರಿ ಭೂಮಿಯನ್ನು ಹೊಂದಿದ್ದರು, ಮಳೆ ಸರಿಯಾಗಿ ಆಗದೆ ಇರುವುದರಿಂದ ರೈತರು ಸಾಕಷ್ಟು ಸಂಕಷ್ಟಗಳನ್ನು ಅನುಭವಿಸುತ್ತಿರುವುದನ್ನು ಕಾಣಬಹುದು. ಇಂದು ಕೃಷಿಯಲ್ಲಿ ಹಲವಾರು ಪ್ರಯೋಗಗಳನ್ನು ಮಾಡುತ್ತಿರುವುದನ್ನು ಕಾಣಬಹುದು. ಉದಾಹರಣೆಗೆ ವಾಣಿಜ್ಯ ಬೆಳೆಗೆ ಹೆಚ್ಚಿನ ಗಮನಕೊಡುತ್ತಿರುವುದು. ಮಿಶ್ರ ಬೇಸಾಯ ಪದ್ಧತಿಯ ಅನುಸರಣೆ ಮಾಡುವುದು ಕಾಣಬಹುದು. ಆದರೂ ಅದು ಮಳೆರಾಯನೊಂದಿಗೆ ಆಡುವ ಚೆಲ್ಲಾಟವಾಗಿದೆ. ಇದರಿಂದ ಸಾಕಷ್ಟು ಸಂಕಷ್ಟ ಕ್ಕೀಡಾಗುತ್ತಿದ್ದಾನೆ. ಹಲವಾರು ಬ್ಯಾಂಕುಗಳು ಕೃಷಿ ಸಾಲವನ್ನು ನೀಡುತ್ತಿವೆ ಉದಾಹರಣೆಗೆ ಈ ಗ್ರಾಮದಲ್ಲಿರುವ ಗ್ರಾಮೀಣ ವಿಕಾಸ ಬ್ಯಾಂಕ, ಸ್ಥಳೀಯ ಹಾಗೂ ಸುತ್ತಮುತ್ತಲಿನ ಹಳ್ಳಿಯ ಜನರಿಗೆ ಆರ್ಥಿಕ ಸೇವೆಯನ್ನು ಒದಗಿಸುತ್ತಿದೆ. ಗ್ರಾಮದ ಹಾಲು ಉತ್ಪಾದಕರ ಸಹಕಾರಿ ಸಂಘವು ಹೈನುಗಾರಿಕೆಯನ್ನು ಉತ್ತೇಜಿಸುತ್ತಿದೆ. ಇತ್ತೀಚೆಗೆ ಪ್ರಾರಂಭವಾಗಿರುವ ಸುಮಾರು ೮ ಹತ್ತಿ ಮಿಲ್ಲುಗಳು, ೨ ಗಾರ್ಮೆಂಟ್ಸಗಳು ಸ್ಥಾಪನೆಯಾಗಿ ಸ್ವಲ್ಪಮಟ್ಟಿನ ನಿರುದ್ಯೋಗ ಸಮಸ್ಯೆಯನ್ನು ಬಗೆಹರಿಸಿದೆ ಎಂದು ಹೇಳಬಹುದು.

**ಸಾಹಿತ್ಯ ಮತ್ತು ಕಲೆ:** ಬಂಕಾಪುರ ಒಂದು ಕಾಲದಲ್ಲಿ ಹಲವು ರಾಜ ಮನೆನಗಳ ಆಳ್ವಿಕೆಗೆ ಒಳಪಟ್ಟ ಪ್ರದೇಶ ಇದರಿಂದ ಇಲ್ಲಿ ಜನಪದ ಸಾಹಿತ್ಯ ಸಾಕಷ್ಟು ಸಂಪದ್ಭರಿತವಾಗಿದೆ ಅದರ ಜೊತೆಗೆ ರಾಜರ ಉದಾರ ಪೋಷಣೆಯಿಂದ ಶಿಷ್ಟ ಸಾಹಿತ್ಯ ಲೋಕದಲ್ಲೂ ಸಾಕಷ್ಟು ಸಾಧನೆಗಳು ಕಂಡುಬರುತ್ತವೆ. ಗ್ರಾಮದಲ್ಲಿ ದೊಡ್ಡಾಟ, ಸಣ್ಣಾಟ, ಭಜನೆ, ಡೊಳ್ಳು, ವೀರಗಾಸೆ,

ಮೊಹರಂ ಹಾಡು, ಸೋಬಾನೆ ಹಾಡು ಮುಂತಾದ ಕಲಾವಿದರು ಪುರಾಣ ಪ್ರವಚನಕಾರರು ಅವುಗಳನ್ನು ಪಾರಂಪರಿಕವಾಗಿ ಮುಂದುವರೆಸಿಕೊಂಡು ಬಂದಿದ್ದಾರೆ. ಬಂಗಾರ ಬಸವೇಶ್ವರ ಭಜನಾ ಮಂಡಳಿ, ಬೀರೇಶ್ವರ ಡೊಳ್ಳು ಕಲಾ ತಂಡ, ರಾಮಣ್ಣ ಜಾಧವ ಎಂಬ ಸುಪ್ರಸಿದ್ಧ ದೊಡ್ಡಾಟ ಕಲಾವಿದರು ಅಧುನಿಕ ಸಮೂಹ ಮಾಧ್ಯಮಗಳ ಹಾವಳಿಯಿಂದ ಎಲೆ ಮರೆ ಕಾಯಿಯಂತೆ ನೇಪಥ್ಯಕ್ಕೆ ಸರಿದಿರುವುದು ಕಂಡುಬರುತ್ತದೆ. ಅದರೂ ನಮ್ಮ ಮೂಲ ಕಲೆಗಳತ್ತ ಕೆಲವು ಊರಿನ ಯುವಕರು ಆಸಕ್ತಿ ವಹಿಸುತ್ತಿರುವುದು ಒಂದು ಕಡೆ ಆಶ್ಚರ್ಯಕರ ವಿಷಯವಾಗಿದೆ, ಪುರವಂತಿಕೆ ಕಲೆಯಲ್ಲಿ ಇದೆ ಊರಿನ ಓಂಪ್ರಕಾಶ ಅಂಗಡಿ ರಾಜ್ಯ ಮಟ್ಟದ ಪ್ರಶಸ್ತಿಯನ್ನು ಪಡೆದುಕೊಂಡಿರುವುದು. ಆದರೆ ಜಾಗತೀಕರಣ ಮತ್ತು ಆಧುನೀಕರಣದ ಪ್ರಭಾವದ ನಡುವೆಯು ಬಂಕಾಪುರ ಗ್ರಾಮದಲ್ಲಿ ಜನಪದ ಸಾಹಿತ್ಯ ಮತ್ತು ಕಲೆಗಳು ಉಳಿದುಕೊಂಡು ಬಂದಿರುವುದು ಗ್ರಾಮದ ಹಿರಿಮೆಯನ್ನು ಗೌರವವನ್ನು ಹೆಚ್ಚಿಸಿದೆ. ಇಂತಹ ನಮ್ಮ ಮೂಲ ಕಲೆಗಳನ್ನು ಉಳಿಸಿ ಬೆಳೆಸಲು ಜಾನಪದ ಕಲಿತ ಪದವಿದರರಿಗೆ ಅವಕಾಶ ಮಾಡಿಕೊಡಬೇಕಾದ ಕರ್ತವ್ಯ ಸರಕಾರ ಹಾಗೂ ಸಂಘ-ಸಂಸ್ಥೆಗಳ ಮೇಲಿದೆ.

ಒಟ್ಟಾರೆ ಗ್ರಾಮೀಣ ಪರಿಸರದ ಸಂಸ್ಕೃತಿಯು ಕೆಟ್ಟು ಪಟ್ಟಣ ಸೇರು ಎಂಬ ನಾಣ್ನುಡಿಯಂತೆ ಪಾಶ್ಚಾತ್ಯ ಸಂಸ್ಕೃತಿ ಪ್ರಭಾವ ಹಾಗೂ ಸಮೂಹ ಮಾಧ್ಯಮಗಳು, ಇಂದಿನ ಜನರ ಯುವಕರ ಅತಿಯಾದ ಮೊಬೈಲ್ ಬಳಕೆ ಈ ಎಲ್ಲಾ ಕಾರಣಗಳಿಂದ ಹಳ್ಳಿಗಳು ಇಂದು ಮೊದಲಿನ ಭವ್ಯ ಪರಂಪರೆಯಿಂದ ದೂರಸರಿಯುತ್ತಿವೆ. ಆದರೆ ಜಾಗತೀಕರಣ, ಆಧುನೀಕರಣವನ್ನು ಸಂಪೂರ್ಣವಾಗಿ ವಿರೋಧಿಸಲು ಬರುವುದಿಲ್ಲ.

ಎಣ್ಣೆ ಬೇರೆ ಬತ್ತಿ ಬೇರೆ
ಎರಡೂ ಕೂಡಿ ಸುಟ್ಟರಾಯಿತು
ಪುಣ್ಯ ಬೇರೆ ಪಾಪ ಬೇರೆ
ಎರಡೂ ಕೂಡಿ ಒಡಲಾಯಿತು

ಎಂಬ ಅಲ್ಲಮಪ್ರಭುಗಳ ವಾಣಿಯಂತೆ ಜಾಗತೀಕರಣದಿಂದ ಒಳ್ಳೆಯ ಪರಿಣಾಮವು ಆಗುತ್ತದೆ ಮತ್ತು ಕೆಟ್ಟ ಪರಿಣಾಮವು ಉಂಟಾಗುತ್ತದೆ. ಆದ್ದರಿಂದ ಇವೆರಡನ್ನು ಅಗತ್ಯಕ್ಕನಗುಣವಾಗಿ ಸದುಪಯೋಗ ವಾಗುವಂತೆ ಬಳಕೆ ಮಾಡಿಕೊಂಡಲ್ಲಿ ಸಮತೋಲನ ಕಾಪಾಡಿಕೊಂಡಲ್ಲಿ ಗ್ರಾಮಗಳು ಆರೋಗ್ಯಯುತ ಅಭಿವೃದ್ಧಿ ಹೊಂದಲು ಸಾಧ್ಯವಿದೆ.

**ಅಡಿಟಿಪ್ಪಣಿ**

೧. ಗುರುಪಾದಯ್ಯ ಬ. ಸಾಲಿಮಠ, ಬೆಳಕಿನ ಕಿರಣಗಳು, ೨೦೧೩, ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್, ಗದಗ, ಪು. ೫೧

## ಅಧ್ಯಾಯ : ಒಂಬತ್ತು

# ಉಪಸಂಹಾರ

ಸಂಸ್ಕೃತಿಯೆಂದರೆ ಜನರ ಜೀವನ ವಿಧಾನ. ಅಂದರೆ ಜನಸಮುದಾಯದ ಬದುಕಿನ ಆಚರಣೆಗಳು, ರೀತಿ–ನೀತಿಗಳು ಇವುಗಳನ್ನೆಲ್ಲಾ ಒಳಗೊಂಡು ಅರ್ಥೈಸುವ ಪದವೇ ಸಂಸ್ಕೃತಿ. ಬದುಕನ್ನು ಬೆಳಗಲು ವಿಕಾಸಗೊಳಿಸಲು ಬದುಕಿಗೆ ಅನೇಕ ರೀತಿಗಳು ಮಹತ್ವವಾಗುತ್ತವೆ. ಜನಪದರ ಬದುಕಿನ ಭಾಗವಾಗಿರುವ ಆಚಾರ, ವಿಚಾರ, ಆಚರಣೆ, ಸಂಪ್ರದಾಯಗಳು, ನಂಬಿಕೆ, ದೇವರು, ದಿಂಡರು, ನಡೆ, ನುಡಿ, ಕಥೆ, ಗೀತೆ, ರೀತಿ–ನೀತಿ ಇನ್ನು ಮುಂತಾದ ವೆಲ್ಲವುಗಳನ್ನು ಸೇರಿಸಿಕೊಂಡು ಸಂಕೀರ್ಣವಾಗಿ ಬೆಳೆಯುವಂತದ್ದು ಸಂಸ್ಕೃತಿ.

ಸಂಸ್ಕೃತಿ ಸಂಘರ್ಷದಿಂದಲೇ ಕೂಡಿದೆ. ಭಾರತದ ಸಾಂಸ್ಕೃತಿಕ ವೈರುಧ್ಯತೆಗಳು ಇಂದು ನಿನ್ನೆಯದಲ್ಲ. ಅದು ಅನಾದಿಕಾಲದಿಂದಲೂ ಇರುವಂತಹದಾಗಿದೆ. ದ್ರಾವಿಡರ ಜೀವನ ವಿಧಾನಗಳಿಂದ ಪ್ರಾರಂಭವಾದ ಈ ದೇಶದ ಸಂಸ್ಕೃತಿ ಸಮನ್ವಯತೆಯಿಂದ ಕೂಡಿದ್ದು ಆರ್ಯರ ಆಗಮನದ ನಂತರ ಸಮಾಜದಲ್ಲಿ ವರ್ಣ, ಜಾತಿ ವ್ಯವಸ್ಥೆಯ ಏಣಿ ಶ್ರೇಣೀಕರಣ ಉಂಟಾಗಿ ಶೋಷಣೆ ಮತ್ತು ಘರ್ಷಣೆ ಅಧಿಕೃತವಾಗಿ ಪ್ರಾರಂಭವಾಗುತ್ತವೆ. ಅಂದಿನಿಂದ ಪ್ರಾರಂಭವಾದ ವೈರುಧ್ಯತೆ ಇಂದಿನವರೆಗೂ ಬೇರೆ ಬೇರೆ ಹಂತಗಳಲ್ಲಿ ಭೂತಾಕಾರವಾಗಿ ಬೆಳೆದು ಪ್ರತಿ ಹಳ್ಳಿ ಗ್ರಾಮಗಳಲ್ಲೂ ಬೇರು ಬಿಟ್ಟಿದೆ. ಅದು ಬಂಕಾಪುರ ಗ್ರಾಮವನ್ನು ಒಳಗೊಂಡಿದೆ.

ಇಲ್ಲಿ ಮುಖ್ಯವಾಗಿ ಒಂದು ಜನಸಮುದಾಯದ ಜೀವನ ವಿಧಾನ ರೂಪಗೊಳ್ಳುವುದು ಅಲ್ಲಿಯ ಆರ್ಥಿಕ, ಸಾಮಾಜಿಕ ಸ್ಥಿತಿಯನ್ನು ಅವಲಂಬಿಸಿರುತ್ತದೆ. ಆರ್ಥಿಕ, ಸಾಮಾಜಿಕ, ಅಸಮಾನತೆ ಇರುವ ವ್ಯವಸ್ಥೆಯಲ್ಲಿ ಸಾಂಸ್ಕೃತಿಕ ವೈರುಧ್ಯತೆ ಇದ್ದೇ ಇರುತ್ತದೆ. ಸಮಾಜ ವ್ಯವಸ್ಥೆ ಯಲ್ಲಿ ಅಸಮಾನತೆ ಇದ್ದಾಗ ಜನತೆಯ ಜೀವನ ವಿಧಾನದಲ್ಲಿಯೂ ಅಸಮಾನತೆ ಎದ್ದು ಕಾಣುತ್ತದೆ. ಆಗ ಅನೇಕ ವೈರುದ್ಯದ ಗೋಡೆಗಳು ಕಟ್ಟಲ್ಪಡುತ್ತವೆ. ಆಗ ಪಟ್ಟಭದ್ರ ಜಾತಿವಾದಿಗಳ ಸಂಸ್ಕೃತಿಯೇ ಇಡೀ ದೇಶದ ಸಂಸ್ಕೃತಿಯಾಗಿ ಹೇರಲ್ಪಟ್ಟು ಅದು ಪೊಳ್ಳುಸಂಸ್ಕೃತಿಯಾಗುತ್ತದೆ. ಈ ಎಲ್ಲಾ ವೈರುಧ್ಯಗಳನ್ನೊಳಗೊಂಡಿರುವ ಬಂಕಾಪುರ ಗ್ರಾಮದ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಮತ್ತು ಧಾರ್ಮಿಕ ಸ್ಥಿತಿಗತಿಗಳು ವ್ಯತ್ಯಾಸಗಳಿಂದ, ಸಂಘರ್ಷದಿಂದ ಕೂಡಿದೆ.

ಯಾವುದೇ ಒಂದು ಪ್ರದೇಶದ ಹಾಗೂ ಆ ಪ್ರದೇಶದ ಜನಸಮುದಾಯಗಳ ಸಾಂಸ್ಕೃತಿಕ ಹಿನ್ನೆಲೆಯನ್ನು ನೋಡಬೇಕಾದರೆ ಭೂಮಿಯ ಮೇಲೆ ಮನುಷ್ಯನ ಆದಿಮ ನೆಲೆಗಳು ಹಾಗೂ ಆತನ ಜೀವನ ವಿಧಾನ ಮತ್ತು ನಿಸರ್ಗದೊಡನೆ ಆತನ ಸಂಬಂಧ, ಅಲ್ಲಿನ ಪರಿಸರ, ವಾಯುಗುಣ, ಸಸ್ಯಸಂಪತ್ತು, ಪ್ರಾಣಿಸಂಪತ್ತು ಇವೆಲ್ಲವನ್ನು ಗಮನಿಸಬೇಕು. ಹಾಗಾಗಿ ಬಂಕಾಪುರ ಪ್ರದೇಶದ ಪರಿಸರ ನೋಡಿದಾಗ ಭೌಗೋಳಿಕವಾಗಿ ಇದಕ್ಕೆ ತನ್ನದೇ ಆದ ಐತಿಹಾಸಿಕ ಹಿನ್ನೆಲೆ ಇದೆ. ಕೆರೆ, ತೋಟ, ಹಳ್ಳ, ಹೊಲ, ಗದ್ದೆಗಳನ್ನು ತನ್ನ ಸುತ್ತಮುತ್ತಲಿರಿಸಿ ಕೊಂಡಿದೆ. ಚಾರಿತ್ರಿಕವಾಗಿ ಕರ್ನಾಟಕವನ್ನಾಳಿದ ಹಲವಾರು ರಾಜಮನೆತನಗಳ ಪ್ರಭಾವ ಇದರ ಮೇಲಾಗಿದೆ.

ಬಂಕಾಪುರ ಗ್ರಾಮ ವಿವಿಧ ಜಾತಿ ಜನ ಸಮುದಾಯಗಳನ್ನು ಹೊಂದಿದ್ದು, ಗ್ರಾಮದ ಸಾಂಸ್ಕೃತಿಕ ಸಮೃದ್ಧಿಗೆ ಎಲ್ಲರ ಕೊಡುಗೆ ಇದೆ. ಪ್ರತಿ ಸಮುದಾಯಗಳಿಗೂ ಬೇರೆ ಬೇರೆ ಬೀದಿಗಳಿದ್ದು, ಮನೆಗಳನ್ನು ಅವರ ಅಂತಸ್ಥಿಗೆ ತಕ್ಕಂತೆ ಕಟ್ಟಿಕೊಂಡಿದ್ದಾರೆ. ತುಂಬ ಹಳೆಯ ಕಾಲದ ಮನೆಗಳು ಅಂದರೆ ಕರೆ ಹಂಚಿನ ಮನೆಗಳೂ ಇವೆ. ಹಾಗೂ ಆಧುನಿಕದ ಪ್ರತೀಕದಂತಿರುವ ಭವ್ಯವಾದ ನಗರದ ಮನೆಗಳಾಗಿರುವ ಬಿಲ್ಡಿಂಗಗಳು ಹೆಚ್ಚುತ್ತಿವೆ. ಇವು ಸುಸಜ್ಜಿತ ಸುವ್ಯವಸ್ಥೆಯನ್ನು ಹೊಂದಿವೆ. ಇವು ನಗರದ ಶ್ರೀಮಂತರನ್ನು ನಾಚಿಸುತ್ತವೆ. ಕುಟುಂಬವೇ ಸಮಾಜದ ಮೂಲ ಕೇಂದ್ರ, ಸಮಾಜದಲ್ಲಿರುವ ಎಲ್ಲಾ ಸಂಸ್ಥೆಗಳು ತಮ್ಮ ಸಂಬಂಧದ ಹುಟ್ಟು ಪಡೆದಿರುವುದೇ ಕುಟುಂಬದಿಂದ. ನನ್ನವರು ಬೇರೆಯವರು ನೆರೆ ಹೊರೆ, ಬಂಧು–ಬಳಗ, ಸ್ನೇಹಿತರು, ಶತ್ರುಗಳು, ರಕ್ತಸಂಬಂಧಿಗಳು, ಗಂಡು–ಹೆಣ್ಣು, ಮುಂತಾದ ಸಾಮಾಜಿಕ ಭೇದಗಳು ಹುಟ್ಟು ಪಡೆದಿರುವುದು ಕುಟುಂಬ ಜೀವನದಿಂದ. ತಂದೆ–ತಾಯಿ, ಮಗ–ಸೊಸೆ, ಮಗಳು–ಅಳಿಯ, ಅತ್ತೆ–ಮಾವ, ಅಣ್ಣ–ತಮ್ಮ, ಅಕ್ಕ–ತಂಗಿ, ಮುಂತಾದ ಬಂಧುವಾಚಕ ಶಬ್ದಗಳು ಇಲ್ಲಿನ ಕುಟುಂಬ ವ್ಯವಸ್ಥೆಯಲ್ಲಿದೆ. ತಂದೆಯೇ ಮನೆಯ ಯಜಮಾನನಾಗಿದ್ದಾನೆ. ಕುಟುಂಬದಲ್ಲಿ ಅಂತಿಮ ತೀರ್ಮಾನ ತೆಗೆದುಕೊಳ್ಳುವಲ್ಲಿ ತಂದೆಯ ಪಾತ್ರ ಮುಖ್ಯವಾಗುತ್ತದೆ.

ವಿವಾಹ ಮತ್ತು ಕುಟುಂಬ ಇಲ್ಲಿನ ಸಮಾಜದ ಮೂಲಭೂತ ಅವಶ್ಯ ಮತ್ತು ಅನಿವಾರ್ಯ ಸಂಸ್ಥೆಗಳು. ಪ್ರಸ್ತುತ ಪರಿಸರದಲ್ಲಿನ ವಿವಾಹ ಪದ್ಧತಿಗಳು ಹಲವು ವೈಶಿಷ್ಟ್ಯ ಮತ್ತು ವೈವಿಧ್ಯ ಪೂರ್ಣವೂ ಆಗಿವೆ. ಸಾಂಸ್ಕೃತಿಕ ದೃಷ್ಟಿಯಿಂದ ತುಂಬ ಉಪಯುಕ್ತವಾಗಿವೆ. ಬಂಕಾಪುರ ಗ್ರಾಮವು ಹಲವು ಜಾತಿಗಳಿಂದ ಕೂಡಿದ್ದರು ದ್ರಾವಿಡರಾಗಿರುವುದರಿಂದ ಎಲ್ಲಾ ಸಂಪ್ರದಾಯಗಳು ಸಾಮ್ಯತೆಯಿಂದ ಕೂಡಿವೆ. ಮದುವೆಗಳು ಅವರವರ ಯೋಗ್ಯತೆಗನುಸಾರವಾಗಿ ಮಾಡುವುದು ಅವರ ಅಂತಸ್ಥನ್ನು ಒಳಗೊಂಡಿರುತ್ತದೆ. ಇಲ್ಲಿಯೂ ಪಿತೃಪ್ರಧಾನ ಸಂಸ್ಕೃತಿ ಇದ್ದು ಅದರ ಪ್ರಾಬಲ್ಯ ಹೆಚ್ಚಾಗಿದೆ. ಹಿಂದಿನಿಂದ ನಡೆದು ಬಂದಿರುವ ಸಂಪ್ರದಾಯಗಳು ಇಂದಿಗೂ ಉಳಿದಿದೆ.

ಆದರೆ ಕೆಲವು ಮಾತ್ರ ಆಚರಣೆಯಲ್ಲಿ ಬದಲಾವಣೆಗಳಾಗಿವೆ. ಹಿಂದೆ ಮೂರು ದಿನಗಳಾಗುತ್ತಿದ್ದ. ವಿವಾಹಗಳು ಒಂದು ದಿನಕ್ಕೆ ಬಂದಿವೆ.

ಪ್ರಾದೇಶಿಕವಾಗಿ, ಭೌಗೋಳಿಕವಾಗಿ, ವಾಯುಗುಣಗಳಿಗೆ ತಕ್ಕಂತೆ ಮನುಷ್ಯನ ಜೀವನಾವಶ್ಯಕತೆಯುಳ್ಳ ಉಟೋಪಚಾರ, ವಸ್ತ್ರವಿನ್ಯಾಸಗಳಲ್ಲಿ ಬದಲಾವಣೆಗಳು ಕಂಡುಬರುತ್ತವೆ. ಈ ಪ್ರದೇಶದ ಮುಖ್ಯ ಆಹಾರ ಜೋಳದ ರೊಟ್ಟಿ, ಕಾಳಿನ ಪಲ್ಯ, ಕಾರುಬೇಳೆ ಸಾರು, 'ಹೊಟ್ಟೆಗೆ ಹಿಟ್ಟು ಇಲ್ಲಾಂದರು ಜುಟ್ಟಿಗೆ ಮಲ್ಲಿಗೆ' ಎಂಬ ನಾಣ್ನುಡಿ ಜೋಳದ ರೊಟ್ಟಿಯ ಮಹತ್ವವನ್ನು ತಿಳಿಸುತ್ತದೆ. ಈ ಪ್ರದೇಶದಲ್ಲಿ ಬೆಳೆಯುವ ಪ್ರಮುಖ ಬೆಳೆಗಳೂ ಸಹ ಜೋಳ, ತೊಗರಿ, ಎಂಬುದು ಮುಖ್ಯವಾದ ಸಂಗತಿ. ಇಲ್ಲಿನ ಆಹಾರ ಆಯಾಯ ಸಂದರ್ಭ ಸನ್ನಿವೇಶಗಳಿಗೆ ಅನುಗುಣವಾಗಿ, ಮದುವೆ, ಹಬ್ಬ, ಜಾತ್ರೆ ಮುಂತಾದ ಸಂದರ್ಭಗಳಲ್ಲಿ ವಿವಿಧತೆಯಿಂದ ಕೂಡಿರುತ್ತದೆ.

ಕೃಷಿ ಹೈನುಗಾರಿಕೆ, ವ್ಯಾಪಾರ ಬಂಕಾಪುರ ಗ್ರಾಮದ ಬಹುಮುಖ್ಯ ಆರ್ಥಿಕ ಮೂಲಗಳಾಗಿವೆ. ಕೃಷಿ ಬಹುಜನರ ಜೀವನಾಧಾರ. ಕೃಷಿಯಲ್ಲಿ ಸಾಂಪ್ರದಾಯಿಕ ಕೃಷಿ ಮತ್ತು ಆಧುನಿಕ ಕೃಷಿ ಎರಡರ ಸಮ್ಮಿಶ್ರಣಗೊಂಡಿದೆ. ಬಂಕಾಪುರ ಕೃಷಿಗೆ ಯೋಗ್ಯವಾದ ಭೂಮಿಯಾಗಿದೆ. ದೇಶಿ ಜ್ಞಾನಕ್ಕೆ ಪೂರಕವಾದ ನಿಸರ್ಗದ ಸಮತೋಲನಕ್ಕೆ ಕಾರಣವಾಗುವ ಮಾನವರ ವಿಕಾಸಕ್ಕೆ ಮತ್ತು ಅವನ ಸುತ್ತಲ ಪರಿಸರಕ್ಕೆ ಮತ್ತು ಅದರ ವಿಕಾಸಕ್ಕೆ ಕಾರಣವಾಗುವ ಸಾಂಪ್ರದಾಯಿಕ ಕೃಷಿ ಪದ್ಧತಿ ಇಂದಿಗೂ ಇದೆ. ಆದರೆ ಇದರಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಹಸು, ಎತ್ತು, ನೇಗಿಲುಗಳಿಂದ ಉಳುಮೆ ಮಾಡುವುದು ಕಡಿಮೆಯಾಗಿದೆ. ಟ್ರ್ಯಾಕ್ಟರಗಳ ಬಳಕೆ ಹೆಚ್ಚಾಗಿದೆ. ಹೊಲಗಳಿಗೆ ಬಳಸುವ ಗೊಬ್ಬರ ರಾಸಾಯನಿಕವಾಗಿದೆ. ಕೊಟ್ಟಿಗೆ ಗೊಬ್ಬರದ ಬಳಕೆ ಕಡಿಮೆಯಾಗಿದೆ.

ಸಾಂಪ್ರದಾಯಿಕ ಕೃಷಿ ಪದ್ಧತಿಯಿಂದ ಬೆಳೆಯುವ ಬೆಳೆಗಳಾದ ರಾಗಿ, ಭತ್ತ, ಜೋಳ, ಅವರೆ, ಹುರುಳಿ ಮುಂತಾದವು ಮುಖ್ಯವಾಗಿದೆ. ಇವು ಈ ಪ್ರದೇಶದ ಮುಖ್ಯ ಆಹಾರ ಬೆಳೆಯಾಗಿದೆ. ಇದರ ಜೊತೆಗೆ ವಾಣಿಜ್ಯ ಕೃಷಿಯು ಈ ಪ್ರದೇಶದ ಆರ್ಥಿಕತೆಯ ಮೂಲವಾಗಿದೆ. ರೇಷ್ಮೆ, ಎಳ್ಳು, ತರಕಾರಿ, ಹಣ್ಣು, ಹೂಗಳು ಇಲ್ಲಿನ ಪ್ರಮುಖ ವಾಣಿಜ್ಯ ಬೆಳೆಯಾಗಿವೆ. ಮಾವು ಬೆಳೆ ಈ ಭೂಮಿಯಲ್ಲಿ ಬೆಳೆಯುವ ಮತ್ತೊಂದು ವಾಣಿಜ್ಯ ಬೆಳೆಯಾಗಿದೆ. ಬಿತ್ತನೆ ಮಾಡುವುದರಿಂದ ಹಿಡಿದು ಒಕ್ಕುವುದರ ತನಕ ಸಾಂಪ್ರದಾಯಿಕ ಆಚರಣೆಗಳು ಕೆಲವು ಬದಲಾವಣೆಗಳೊಂದಿಗೆ ಇಂದಿಗೂ ಜೀವಂತವಾಗಿದೆ. ಹೈನುಗಾರಿಕೆ ಮತ್ತೊಂದು ಆರ್ಥಿಕ ಮೂಲವಾಗಿದ್ದು ಇಲ್ಲಿನ ಜನರ ಜೀವನದ ನಿರ್ವಹಣೆಗೆ ಮೂಲವಾಗಿದೆ. ಇಲ್ಲಿ ಹಾಲು ಉತ್ಪಾದಕರ ಸಹಕಾರ ಸಂಘ ಇರುವುದು ಇಲ್ಲಿನ ಹಾಲಿನ ಉತ್ಪಾದನೆಯ ಪ್ರತೀಕವಾಗಿದೆ.

ವ್ಯಾಪಾರ ಬಂಕಾಪುರದ ಆದಾಯದ ಮೂಲ. ಯಲ್ಲಮ್ಮನ ದೇವಸ್ಥಾನಕ್ಕೆ ಪ್ರತಿನಿತ್ಯ ಬೇಟಿನೀಡುವ ಭಕ್ತಾದಿಗಳು ದಿನೇ ದಿನೇ ಹೆಚ್ಚುತ್ತಿದ್ದಾರೆ. ವಾರಗಳಲ್ಲಿಯಂತು ಭಕ್ತರ ಸಂಖ್ಯೆ

ಸಾವಿರ–ಸಾವಿರ ಸಂಖ್ಯೆ ದಾಟುತ್ತದೆ. ಹೂ, ಹಣ್ಣು, ಪೂಜಾ ವಸ್ತುಗಳು ಅತ್ಯವಶ್ಯಕವಾಗಿ ಮಾರಾಟವಾಗುತ್ತದೆ.

ಬಂಕಾಪುರ ಪ್ರದೇಶದ ಶೈಕ್ಷಣಿಕ ಸ್ಥಿತಿಗತಿ ಸಾದಾರಣವಾಗಿದೆ. ಹಲವಾರು ಖಾಸಗಿ ಶಾಲೆಗಳು ಇತ್ತೀಚೆಗೆ ಪ್ರಾರಂಭವಾಗಿವೆ. ಸರ್ಕಾರಿ ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಿದ್ದು ಒಂದು ಸರ್ಕಾರಿ ಮೂರು ಅನುದಾನಿತ ಪ್ರೌಢಶಾಲೆ ಇದೆ. ಊರಿನ ಎಲ್ಲ ಮಕ್ಕಳಿಗೂ ಶಿಕ್ಷಣ ದೊರೆಯುತ್ತಿದೆ. ರಾಜಕೀಯವಾಗಿ ಈ ಊರಿನ ಯಾವುದೇ ಶಾಸಕ, ಸಚಿವರಿಲ್ಲ, ಆದರೂ ಶಾಸಕರು, ಸಂಸದರು, ಸಚಿವರು ಇಲ್ಲಿಗೆ ಬೇಟಿ ನೀಡುತ್ತಾರೆ. ಇಲ್ಲಿನ ಜನರು ತಮ್ಮ ಇಹಪರ ಬದುಕಿನಲ್ಲಿ ಧಾರ್ಮಿಕ ಸಂಪ್ರದಾಯಗಳನ್ನು ಮರೆತಿಲ್ಲ.

ಬಂಕಾಪುರದ ಸಂಪತ್ತುಗಳಲ್ಲಿ ಜನಪದ ಸಾಹಿತ್ಯವು ಒಂದು. ಜನಪದ ಸಾಹಿತ್ಯವೇ ಜಾನಪದ ಅಧ್ಯಯನಕ್ಕೆ ನಾಂದಿ ಎನ್ನಬಹುದು. ಇಲ್ಲಿರುವ ಜನಪದ ಸಾಹಿತ್ಯ ಎಲ್ಲರ ಮನಸ್ಸನ್ನು ತನ್ನತ್ತ ಸೆಳೆಯುತ್ತದೆ. ಇದು ಒಂದು ಸಂಸ್ಕೃತಿಯ ಸಮೃದ್ಧಿಯ ಸಂಕೇತ. ಕಥೆ, ಗಾದೆ, ಒಗಟು, ಗೀತೆಗಳು ಯಥೇಚ್ಚವಾಗಿ ತುಂಬಿದೆ. ಇವು ಇಲ್ಲಿನ ಪ್ರತಿಯೊಂದು ಮಜಲುಗಳನ್ನು ಒಳಗೊಂಡಿದೆ. ಊರಿನ ಭೌತಿಕ ಪರಿಸರದಿಂದ ಹಿಡಿದು ಗ್ರಾಮದೇವತೆ, ಕೃಷಿಸಂಪ್ರದಾಯಗಳು, ಆಚಾರ ವಿಚಾರಗಳು, ಅಡುಗೆ, ಹಬ್ಬಗಳು, ಎಲ್ಲವನ್ನು ಬಿಂಬಿಸುವ ಒಂದು ಮಾಧ್ಯಮವಾಗಿದೆ. ಆದ್ದರಿಂದ ಜನಪದ ಸಾಹಿತ್ಯ ನಿತ್ಯ, ನಿರಂತರ ಜೀವಂತಿಕೆಯನ್ನು ಹೊಂದಿದೆ.

ಮನುಷ್ಯನ ಹುಟ್ಟಿನಿಂದ ಅವನ ಹುಟ್ಟಿನ ಜೊತೆಗೆ ತಾನು ಹುಟ್ಟಿ ಅವಿಭಾಜ್ಯ ಅಂಗವಾಗಿ ಬೆಳೆದು ಬಂದಿರುವಂತಹದು ಜನಪದ ಸಾಹಿತ್ಯ. ಇಲ್ಲಿನ ಕೃಷಿ, ಮಳೆ, ಭೂಮಿ, ಸೂರ್ಯ, ಚಂದ್ರಾದಿಯಾಗಿ ಭೂಮಿಯ ಮೇಲಿನ ಎಲ್ಲಾ ಭೌತಿಕ ವಸ್ತುಗಳನ್ನು ಕುರಿತು ಜನಪದ ಸಾಹಿತ್ಯ ರಚನೆಯಾಗಿದೆ. ಜಾನಪದ ಗೀತೆ, ಕಥೆ, ಗಾದೆ, ಒಗಟು, ಒಟ್ಪಾರೆ ಜನಪದ ಸಾಹಿತ್ಯದಲ್ಲಿ ಹೆಣ್ಣುಮಕ್ಕಳೆ ಪ್ರಧಾನ ಪಾತ್ರವಹಿಸುತ್ತಾರೆ. ಗೀತೆಗಳಲ್ಲಿ ದೇವರ ಸ್ತುತಿಪದಗಳು, ಬಸವಣ್ಣನ ಕುರಿತು ಗೀತೆಗಳನ್ನು ಹಾಡುತ್ತಾರೆ.

ಕೃಷಿ ಮಾಡುವಾಗ ಭೂಮಿತಾಯಿ ನೆನೆಯುವುದು, ಹೊಲ ಬಿತ್ತುವ ಸಂದರ್ಭದಲ್ಲಿ ಅಣ್ಣ ತಂಗಿಯರ ಹಾಡು, ಮಳೆರಾಯನನ್ನು ಕುರಿತು ಹಾಡು, ರಾಗಿ ಬೀಸುವ, ಕುಟ್ಟುವ ಹಾಡು ಮುಂತಾದವುಗಳು ಬಹುಸಂಖ್ಯೆಯಲ್ಲಿವೆ. ಮದುವೆ ಸಂದರ್ಭದಲ್ಲಿ ಹಾಡುವ ಸೋಬಾನೆ ಪದಗಳು, ಧಾರೆ ಎರೆಯೋ ಪದ, ಜರಿಯುವ ಪದ, ಗುರುಗಳನ್ನು ಕುರಿತ ಹಾಡು ಮುಂತಾದವುಗಳಿವೆ. ಇವು ಇಲ್ಲಿನ ಜನರ ಸಂಸ್ಕೃತಿಯನ್ನು ಪರಿಚಯ ಮಾಡಿಕೊಡುವ ಮೂಲಕ ಇಲ್ಲಿನ ಜನರ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಪರಿಚಯಿಸುತ್ತದೆ.

ಗಾದೆಗಳು ವೇದಕ್ಕಿಂತ ಸತ್ವಯುತವಾದವುಗಳಾಗಿದ್ದು ಅರ್ಥ ಮತ್ತು ಅನುಭವದ ಮಾತುಗಳಾಗಿವೆ. ಗಾದೆಯು ಸಾಹಿತ್ಯದ ಒಂದು ಪ್ರಕಾರವಾಗಿ ಒಡೆದು ಕಾಣುವ ಗುಣ ಸರಸ. ಅದು ಆಕಾರದಲ್ಲಿ ಚಿಕ್ಕದು ಕೇಳಿಕೆಯಲ್ಲಿ ದೊಡ್ಡ ಅರ್ಥ ನೀಡುತ್ತದೆ. ಇಲ್ಲಿನ ಜನರ ಸ್ಥಿತಿ, ಜೀವನ ಅಲ್ಲಿನ ಗಾದೆಗಳಲ್ಲಿ ಬಯಲಾಗುತ್ತದೆ. ಗಾದೆಗಳು ಮಾನವನ ವೈಚಾರಿಕ ಭಾವನಾತ್ಮಕ ನೆಲೆಯಲ್ಲಿ ರೂಪುಗೊಂಡ ಜೀವನಾನುಭವದ ಗಟ್ಟಿಗಳಾಗಿವೆ. ಹಾಗೆಯೇ ಒಗಟು ಇಲ್ಲಿನ ಸಾಹಿತ್ಯ ಪ್ರಕಾರಗಳಲ್ಲಿ ಒಂದು. ಇವುಗಳ ಪ್ರಧಾನಗುರಿ ಬುದ್ಧಿಯ ಕಸರತ್ತಾಗಿದೆ. ಹಾಸ್ಯ ವಿಡಂಬನೆ ಒಗಟಿನ ಪ್ರಮುಖ ಲಕ್ಷಣಗಳಾಗಿದ್ದು, ಇವು ಪರಂಪರಾಗತವಾಗಿ ಬೆಳೆದು ಬಂದಂತವಾಗಿವೆ. "ಚಿಪ್ಪುಂಟು ಆಮೆಯಲ್ಲ, ಜುಟ್ಟುಂಟು ಪೂಜಾರಿಯಲ್ಲ ಮೂರು ಕಣ್ಣುಗಳುಂಟು ಮುಕ್ಕಣ್ಣನಲ್ಲ" ತೆಂಗಿನಕಾಯಿ ಕುರಿತು ಒಗಟು. ಇಂತಹ ಒಗಟುಗಳನ್ನು ಎಲ್ಲಾ ರಂಗದಲ್ಲೂ ರಚಿಸಿದ್ದಾರೆ. ಇದು ಆ ಪ್ರದೇಶದ ವಿಶೇಷತೆಯನ್ನು ತೋರುತ್ತದೆ.

ಜಾನಪದ ಸಾಹಿತ್ಯದ ಮುಖ್ಯ ಪ್ರಕಾರ ಜನಪದ ಕಥೆ. ಈ ಪ್ರದೇಶದಲ್ಲಿ ಕಥೆಗಳು ಹೆಚ್ಚಾಗಿ ಮಹಿಳೆಯರಿಂದಲೇ ಹೇಳಲ್ಪಡುತ್ತವೆ. ಈ ಕಥೆಗಳಲ್ಲಿ ಮಹಿಳೆಯರ ಸಾಮಾಜಿಕ ಸ್ಥಾನಮಾನಗಳನ್ನು ಗುರುತಿಸಬಹುದು. ಬದುಕಿನ ವಿನೋದ, ಹಾಸ್ಯ, ಆಧ್ಯಾತ್ಮ, ಕುಟುಂಬ, ಮದುವೆ, ದುರಂತ, ಸಾಹಸ, ಕಷ್ಟಪರಂಪರೆಯ ಸಂಗತಿಗಳನ್ನು ಇಲ್ಲಿನ ಕತೆಗಳಲ್ಲಿ ಕಾಣಬಹುದು. ಇಲ್ಲಿ ದೊರೆಯುವ ಕತೆಗಳನ್ನು ಜಾನಪದ ಕಥಾ ಪ್ರಕಾರಗಳಲ್ಲಿ ಹಲವು ಭಾಗಗಳಾಗಿ ವಿಂಗಡಿಸಬಹುದು. ಒಟ್ಟಾರೆ ಇಲ್ಲಿ ದೊರೆಯುವ ಜನಪದ ಸಾಹಿತ್ಯ ಪ್ರಕಾರಗಳು ಒಂದುಭಾವ ಪ್ರಧಾನ, ಇನ್ನೊಂದು ಕಲ್ಪನಾ ಪ್ರಧಾನ, ಮತ್ತೊಂದು ತತ್ವಪ್ರಧಾನ, ಮಗದೊಂದು ಚಿಂತನಾ ಪ್ರಧಾನವಾಗಿದೆ. ಒಂದಕ್ಕೊಂದು ಹತ್ತಿರದ ನಂಟಿದೆ. ಒಟ್ಟಾರೆ ಜನಪದರ ಸಂಸ್ಕೃತಿ ಮತ್ತು ಸಂವೇದನೆಯನ್ನು ಜನಪದ ಸಾಹಿತ್ಯ ಕಟ್ಟಿಕೊಡುತ್ತದೆ. ಕಥೆ, ಗಾದೆ, ಒಗಟು, ಗೀತೆ ಎಲ್ಲವೂ ಸಮಾಜಮುಖಿಯಾದರೂ ಅವುಗಳು ಬಯಸುವ ಲಯಗಾರಿಕೆಯನ್ನು ಉಳಿಸಿಕೊಳ್ಳಬೇಕಾದ ಅನಿವಾರ್ಯತೆ ಇದೆ.

ಯುವ ಪೀಳಿಗೆಯ ಬರಹಗಾರರು, ಹನಿಗವನ, ಕತೆ, ಕಾವ್ಯ, ಕಾದಂಬರಿ ರಚನೆಗೆ ಮುನ್ನ ಜನಪದರ ಆಡುನುಡಿಯ ಸೊಗಸಿನಲ್ಲಿ ಬೆರೆತು ಜನಪದರ ಸಾಹಿತ್ಯವನ್ನು ಅರಗಿಸಿಕೊಳ್ಳಬೇಕಾದ ಅನಿವಾರ್ಯತೆ ಇದೆ.

ಪ್ರಸ್ತುತ ಪ್ರದೇಶದ ಆಚರಣೆಯಲ್ಲಿ ವೈಯಕ್ತಿಕ ಆಚರಣೆಗಳು ಕೌಟುಂಬಿಕೆ ಆಚರಣೆಗಳು, ಸಾಮೂಹಿಕ ಆಚರಣೆಗಳು, ಸಾಮಾಜಿಕ ಆಚರಣೆಗಳು, ವ್ಯವಸಾಯಾತ್ಮಕ ಆಚರಣೆಗಳು ಹೀಗೆ ಆಚರಣಾ ಪದ್ಧತಿಗಳು ಇಲ್ಲಿನ ಸಂಸ್ಕೃತಿಯೊಳಗೆ ಸೇರಿಕೊಂಡಿವೆ. ವೈಯಕ್ತಿಕ ಕಾರಣದಿಂದ ಅಂದರೆ ವ್ಯಕ್ತಿಗತ ನಂಬಿಕೆಯಿಂದ ನಡೆಯುವ ಆಚರಣೆಗಳಾಗಿದ್ದು ಮುಡಿಕೊಡುವುದು, ಕೊಂಡ ಹಾಯುವುದು, ದಿಡನಮಸ್ಕಾರ ಹಾಕುವುದು ಇತ್ಯಾದಿಗಳು ಕುಟುಂಬದ ಸಮುದಾಯದ ಯೋಗ

ಕ್ಷೇಮಕ್ಕಾಗಿ ಮಾಡುವುದು ಸಾಮೂಹಿಕ ಆಚರಣೆಗಳು. ಪರಮಾಡುವುದು, ಜಾತ್ರೆ ಹಬ್ಬಗಳು ಇತ್ಯಾದಿಗಳು. ಜನರು ನಂಬಿಕೆಯ ಮೇಲೆ ಹರಕೆಯನ್ನು ಕಟ್ಟುತ್ತಾರೆ ನಿತ್ಯ ಜೀವನದಲ್ಲಿ ವ್ಯಕ್ತಿಗತ ಬದುಕು ಅನೇಕ ಸಂಕ್ರಮಣಗಳಿಗೆ ಒಳಗಾಗುತ್ತವೆ. ಜನಪದರ ಬದುಕು ಹುಟ್ಟಿನಿಂದ ಸಾವಿನವರೆಗೂ ಅನೇಕ ನಂಬಿಕೆಗಳಿಂದ ಕೂಡಿದ್ದು ಆಚರಣೆಗಳ ಮೂಲಕ ಅವನ್ನು ಈಡೇರಿಸುತ್ತಾ ಸಾಗುತ್ತಾರೆ.

ಈ ಪರಿಸರದಲ್ಲಿ ಮುಖ್ಯವಾಗಿ ಕೃಷಿಸಂಬಂಧಿ ಆಚರಣೆಗಳಾದ ಮಳೆ, ಬೆಳೆ, ಭೂಮಿಗೆ ಸಂಬಂಧಿಸಿದ ಹಬ್ಬ, ಜಾತ್ರೆ, ಉತ್ಸವಗಳು ಆಚರಣೆಯಲ್ಲಿವೆ. ಆದರೆ ಜನಪದರನ್ನು ಜನಪದರ ಬದುಕನ್ನು ಆಕ್ರಮಿಸುತ್ತಿರುವ ಕೈಗಾರೀಕರಣ, ಜಾಗತೀಕರಣದ ಆರ್ಥಿಕ ಅಕ್ರಮಗಳು ಗ್ರಾಮಜೀವನದ ಅನನ್ಯತೆಯನ್ನು ಅದರ ಗುಣಲಕ್ಷಣ ಚಹರೆಗಳನ್ನು ಅಳಿಸಿ ಹಾಕುತ್ತಲಿವೆ. ಭೂಮಿ ಮತ್ತು ರೈತನ ಸಂಬಂಧಗಳಿಂದ ಹಿಡಿದು ಅವನ ನಿತ್ಯ ಜೀವನದ ಎಲ್ಲಾ ಸೂಕ್ಷ್ಮಗಳನ್ನು ಪಲ್ಲಟಗೊಳಿಸುತ್ತಿವೆ. ಇಂಥ ಪಲ್ಲಟ ನಿರಂತರವಾಗಿ ನಡೆಯುತ್ತಿರುವುದರಿಂದ ಗ್ರಾಮ ಸಂಸ್ಕೃತಿಯ ಅಧ್ಯಯನ ಅನೇಕ ಸವಾಲುಗಳಿಂದ ಕೂಡಿದೆ.

**ಅಧ್ಯಯನದ ಫಲಿತಗಳು**

- ಬಂಕಾಪುರ ಈ ನೆಲದ ಪ್ರಾಚೀನ ನಗರಗಳಲ್ಲಿ ಒಂದಾಗಿದೆ, ಈ ಗ್ರಾಮದ ಬಗೆಗೆ ಈವರೆಗೆ ಲಿಖಿತ ಆಕರಗಳ ಆಧಾರಿತ ಐತಿಹಾಸಿಕ ಅಧ್ಯಯನವನ್ನು ಹೊರತುಪಡಿಸಿದರೆ ಭಿನ್ನನೆಲೆಗಳಲ್ಲಿ ಅಧ್ಯಯನಗಳಾಗಿಲ್ಲ ಹಾಗಾಗಿ ಜಾನಪದೀಯ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.
- ಈ ಗ್ರಾಮದಲ್ಲಿ ಮಾತೃಪ್ರಧಾನ ಸಂಸ್ಕೃತಿಯನ್ನು ಅನಾವರಣಗೊಳಿಸುವ ದೇವಸ್ಥಾನಗಳು ಹೆಚ್ಚಾಗಿವೆ ಇವುಗಳ ಬಗ್ಗೆ ಅಧ್ಯಯನ ಮಾಡಿರುವುದು ಅತಿ ಕಡಿಮೆ. ಇವುಗಳು ಅಧಿಮ ಸಂಸ್ಕೃತಿಯನ್ನು ಪ್ರತಿಪಾದನೆ ಮಾಡುತ್ತಿವೆ. ಇವುಗಳನ್ನು ಅಧ್ಯಯನ ಮಾಡಿದರೆ ಭಿನ್ನ ಸಾಂಸ್ಕೃತಿಕ ಚರಿತ್ರೆ ತಿಳಿಯುತ್ತದೆ. ಆದುದರಿಂದ ಮಾತೃಪ್ರಧಾನ ದೈವಗಳನ್ನು ಸ್ಥಳೀಯ ಸಾಂಸ್ಕೃತಿಕ ಕಥನಗಳ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಹಾಗಾಗಿ ಇಲ್ಲಿನ ದೈವಗಳು ಮತ್ತು ಪಾರಂಪರಿಕ ಜ್ಞಾನಗಳ ಅಸ್ತಿತ್ವಕ್ಕೆ ಕಾರಣವಾಗಿವೆ. ಇವು ಸ್ಥಳೀಯ ಸಮುದಾಯಗಳ ಸಾಂಸ್ಕೃತಿಕ ನಿರ್ವಹಣೆಗಾಗಿ ಮತ್ತು ಸುಸ್ಥಿರ ಅಭಿವೃದ್ಧಿಗಾಗಿ ಅಸ್ತಿತ್ವಕ್ಕೆ ಬಂದಿವೆ. ಈ ಜ್ಞಾನಗಳು ಇವತ್ತು ಸಹ ಈ ನೆಲೆದ ಸುಸ್ಥಿರ ಅಭಿವೃದ್ಧಿಗೆ ಕಾನೂನುಗಳಾಗಿ ಕಾರ್ಯ ನಿರ್ವಹಿಸುತ್ತಿವೆ.
- ಪಶುಪಾಲನಾ ಸಂಸ್ಕೃತಿಯ ಬಂಕಾಮರ ನಾಡಿನ ಸ್ಥಿತ್ಯಂತರಗಳ ಬಗ್ಗೆ ಅಧ್ಯಯನ ಮಾಡುವ ಉದ್ದೇಶದೊಂದಿಗೆ ಬಂಕಾಪುರ ಜಾನಪದೀಯ ಅಧ್ಯಯನ ಕೈಗೊಳ್ಳಲಾಗಿದೆ.

- ಅನಾದಿಕಾಲದಿಂದಲೂ ಹಲವಾರು ಧರ್ಮಗಳ ಅನುಯಾಯಿಗಳು ಮತ್ತು ಈ ಪಂಥಗಳ ಪ್ರತಿಪಾದಕರು ಇಲ್ಲಿದ್ದಾರೆ. ಈ ಧಾರ್ಮಿಕ ಪಾರಂಪರಿಕ ಕಥನಗಳಲ್ಲಿ ಹಲವು ಬಗೆಯ ಸುಸ್ಥಿರ ಜ್ಞಾನ ಬಿಂದುಗಳಿವೆ. ಅಂದರೆ ಸಮನ್ವಯ ಸಂಸ್ಕೃತಿಯನ್ನು ಅನಾವರಣಗೊಳಿಸುವ ಸಂಗತಿಗಳಿವೆ. ಇವು ಗ್ರಾಮದ ಕಾನೂನುಗಳು ಹೌದು. ಅಂದರೆ ನ್ಯಾಯ, ನೀತಿ, ಧರ್ಮ ಎನ್ನುವ ಸಂಬಂಧಗಳ ಹಿನ್ನಲೆಯಲ್ಲಿ ಬದುಕಿನ ಮಿಮಾಂಶೆಗಳನ್ನು ನಿರ್ವಹಣೆ ಮಾಡುತ್ತಿವೆ.
- ಬಂಕಾಪುರ ಪ್ರದೇಶದಲ್ಲಿ ವಿಶಿಷ್ಠ ಹಬ್ಬ ಜಾತ್ರೆಗಳು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿವೆ. ಇವುಗಳನ್ನು ಇಲ್ಲಿಯದೇಯಾದ ಪಾರಂಪರಿಕ ಆಕರಗಳ ಮೂಲಕ ಬಹುಮುಖಿ ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಏಕೆಂದರೆ ಇಲ್ಲಿನ ಜಾತ್ರೆಗಳು, ಹಬ್ಬಗಳು, ಆಚರಣೆ ಮತ್ತು ಸಂಪ್ರದಾಯಗಳು ಇಲ್ಲಿನ ಪಾರಂಪರಿಕ ಪಶುಪಾಲನಾ ಸಂಸ್ಕೃತಿಯನ್ನು ಅನಾವರಣ ಮಾಡುವ ಪ್ರಮುಖ ಆಕರಗಳು ಹಾಗಾಗಿ ಇವುಗಳನ್ನು ಸೈದ್ಧಾಂತಿಕವಾಗಿ ಅಧ್ಯಯನ ಮಾಡಲಾಗಿದೆ.
- ಈ ಗ್ರಾಮವು ಸುತ್ತಮುತ್ತಲಿನ ಗ್ರಾಮಗಳಿಗೆ ಇದೇ ನಗರವಾಗಿತ್ತು. ನಗರವೆಂದರೇ ಇವತ್ತಿನ ನಗರವಲ್ಲ ಅದು ಸಾಂಸ್ಕೃತಿಕ ನಗರ ಈ ನಗರದಲ್ಲಿ ಜನಪದ ಬದುಕಿನ ನಿರ್ವಹಣೆಯ ಅಗತ್ಯಪರಿಕರಗಳ ಕೊಡುಕೊಳ್ಳುವಿಕೆಯ ಸಾಂಸ್ಕೃತಿಕ ನಗರ. ಆ ಪರಂಪರೆ ಇಲ್ಲಿ ಹಲವು ಸಮುದಾಯಗಳ ನೆಲೆಗೆ ಅವಕಾಶ ಕಲ್ಪಿಸಿತು. ಹಾಗಾಗಿ ಇಲ್ಲಿ ಅನೇಕ ವೃತ್ತಿ ಕುಲ, ವರ್ಗಗಳು ನೆಲೆಸಿವೆ. ಮತ್ತು ಕುಲವೃತ್ತಿಗಳನ್ನು ಮಾಡುತ್ತಿವೆ. ಅಂದರೆ ಈ ಗ್ರಾಮದ ರಚನೆಗೆ ಅವತ್ತಿನ ಸಾಂಸ್ಕೃತಿಕ ಕೊಡುಕೊಳ್ಳುವಿಕೆಯು ಕಾರಣವಾಗಿದೆ. ಅಲ್ಲದೇ ಅನೇಕ ಬಗೆಯ ಸಾಂಸ್ಕೃತಿಕ ವೈಶಿಷ್ಠತೆಗಳು ಇಲ್ಲಿವೆ. ಇದು ಸುತ್ತಮುತ್ತಲಿನ ಗ್ರಾಮಗಳ ರಚನೆಯ ಅಸ್ತಿತ್ವದ ಮತ್ತು ಬದುಕಿನ ಮೇಲೂ ಪರಿಣಾಮ ಬೀರಿದೆ. ಅಂದರೆ ಸಾಂಸ್ಕೃತಿಕ ಕೊಡುಕೊಳ್ಳುವಿಕೆಯ ವೈಶಿಷ್ಟ್ಯತೆಗಳ ತಾತ್ವಿಕತೆಗೆ ಅವಕಾಶ ಕಲ್ಪಿಸಿದೆ. ಹಾಗಾಗಿ ಸುತ್ತಮುತ್ತಲಿನ ಗ್ರಾಮಗಳ ಸಾಂಸ್ಕೃತಿಕ ಚರಿತ್ರೆಗೂ ಈ ಚರಿತ್ರೆ ಅವಕಾಶ ಕಲ್ಪಿಸಿದೆ.
- ಈ ಗ್ರಾಮದಲ್ಲಿ ಅನೇಕ ಶಾಸನಗಳಿವೆ. ಇವುಗಳು ಗ್ರಾಮದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುತ್ತಿವೆ. ಈ ಶಾಸನಗಳ ಚರಿತ್ರೆಗೂ ಮತ್ತು ಮೌಖಿಕ ಆಕರಗಳ ಇತಿಹಾಸವನ್ನು ಹೋಲಿಕೆ ಮಾಡಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇದರಿಂದ ಪ್ರಭುತ್ವ ಕೇಂದ್ರಿತ ಮತ್ತು ಜನಕೇಂದ್ರಿತವಾದ ಚರಿತ್ರೆಗೂ ಇರುವ ವ್ಯತ್ಯಾಸಗಳನ್ನು ಮತ್ತು ಆ ವ್ಯತ್ಯಾಸಗಳಿಗೆ ಇರುವ ಕಾರಣಗಳನ್ನು ಮೌಖಿಕ ಆಕರಗಳ ಮೂಲಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇದರಿಂದ ಸ್ಥಳೀಯ ಮೌಖಿಕ ಚರಿತ್ರೆಯ ನಲೆಗಳು ಮತ್ತು ವಿಶಿಷ್ಠ ಆಯಾಮಗಳು ಬಿಂಬಿತವಾಗಿವೆ.

- ಗ್ರಾಮದ ಸಾಂಸ್ಕೃತಿಕ ವ್ಯವಸ್ಥೆ ವಿಭಿನ್ನ. ಇದರ ಸಂರಚನೆಯಲ್ಲಿ ಇದರ ಸಾಂಸ್ಕೃತಿಕ ಅಸ್ಮಿತೆಗಳು ಮತ್ತು ತಾರತಮ್ಯಗಳಿವೆ. ಇವುಗಳನ್ನು ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ ಅಸ್ಮಿತೆಗಳು ಮತ್ತು ತಾರತಮ್ಯಗಳೆಂದು ಕರೆಯಬಹುದು. ಇಂತಹ ಅನೇಕ ತಾರತಮ್ಯಗಳನ್ನು ಪ್ರತಿಪಾದನೆ ಮಾಡುವ ಸಾಂಸ್ಕೃತಿಕ ಆಕರಗಳು ಇಲ್ಲಿವೆ. ಇವುಗಳು ಧಾರ್ಮಿಕ ತಾರತಮ್ಯತೆ, ಸಾಂಸ್ಕೃತಿಕ ತಾರತ್ಯಮತೆ, ಶೈಕ್ಷಣಿಕ ತಾರತ್ಯಮತೆ, ಆರ್ಥಿಕ ತಾರತ್ಯಮತೆ, ಲಿಂಗ ತಾರತ್ಯಮತೆ, ಕೌಶಲ್ಯಗಳ ತಾರತಮ್ಯತೆ ಮುಂತಾದ ತಾರತಮ್ಯತೆಗಳಿವೆ. ಇಂತಹ ತಾರತ್ಯಮಗಳನ್ನು ಹೊಡೆದು ಹಾಕುವ ಪ್ರಯತ್ನಗಳು ನಡೆಯುತ್ತಿವೆ. ಇದರಲ್ಲಿ ಜಾಗೃತಿ ಬಳಗಗಳ ಪಾತ್ರ ಹೆಚ್ಚಾಗಿವೆ. ಹಾಗಾಗಿ ಮೌಖಿಕ ಆಕರಗಳಲ್ಲಿ ಬದಲಾಗಿದೆ.
- ಬಂಕಾಪುರಕ್ಕೆ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಇದಕ್ಕೆ ವಿಶಿಷ್ಟವಾದ ಮಾನ್ಯತೆ ಇದೆ. ಇದನ್ನು ಚಾರಿತ್ರಿಕವಾದ ಮತ್ತು ಪ್ರಸ್ತುತ ಸಂದರ್ಭದ ಘಟನೆಗಳಲ್ಲೂ ಕಾಣಬಹುದು. ಇಂತಹ ಗ್ರಾಮದ ಒಳಗಡೆ ಚಲನಶೀಲವಾಗುತ್ತಿರುವ ಸಾಂಸ್ಕೃತಿಕ ನೆಲೆಗಳನ್ನು, ಇದರ ಪಯಣದ ವಿಧಾನಗಳನ್ನು ಹಾಗೂ ಈ ಪಯಣದಲ್ಲಿ ಸಾಧಕ ಬಾಧಕಗಳನ್ನು ಗುರುತಿಸಿ ಸೈದ್ಧಾಂತಿಕವಾಗಿ ಅಧ್ಯಯನ ಮಾಡಲಾಗಿದೆ. ಇದು ಗ್ರಾಮ ನಿರ್ಮಾಣದ ಆಶಯದಿಂದ ರೂಪಗೊಂಡಿದೆ. ಏಕೆಂದರೆ ಸಾಧಕ ಅಂಶಗಳಿಗಿಂತ ಬಾದಕ ಅಂಶಗಳು ಅಪಾಯಕಾರಿ ಅನ್ನುವುದು ನಮಗೆಲ್ಲ ಗೊತ್ತಿರುವ ಸಂಗತಿ. ಈ ಬಾದಕಗಳು ಸ್ಥಳೀಯ ಅಭಿವೃದ್ದಿಗೆ ಹಿನ್ನಡೆಯನ್ನು ತರುತ್ತಿವೆ. ಹೀಗೆ ಹಿನ್ನಡೆ ತರುವ ಸಂಗತಿಗಳ ಅಭಿವೃದ್ದಿಗೆ ವಿಸ್ತೃತಿಗೆ ಕೈಗೊಳ್ಳಬಹುದಾದ ಸಲಹೆಗಳನ್ನು ಸಹ ಜನಪದ ಪಠ್ಯಗಳ ನೆಲೆಗಳಲ್ಲಿವೆ. ಅವುಗಳನ್ನು ಗುರುತಿಸಲಾಗಿದೆ.
- ಈ ಗ್ರಾಮವು ಬಹುಪಾಲು ಮಳೆಯಾಶ್ರಿತ ಕೃಷಿ ವ್ಯವಸ್ಥೆಯನ್ನು ಅವಲಂಬಿಸಿದೆ. ಹಾಗಾಗಿ ಮಳೆಯಾಧರಿತ ಕೃಷಿ ಮತ್ತು ಬಿತ್ತನೆ ಕಾರ್ಯಗಳು ನಡೆಯುತ್ತಿವೆ. ಈ ಕಾರ್ಯವು ಋತುಮಾನ ಆಧಾರಿತ ಆಚರಣೆ, ಸಂಪ್ರದಾಯ ಮತ್ತು ಕೃಷಿ ಜ್ಞಾನಗಳನ್ನು ಜೀವಂತಗೊಳಿಸಿದೆ. ಆದುದರಿಂದ ಮಳೆ–ಬೆಳೆ ಕೃಷಿ, ಒಕ್ಕಲು, ಸಂಬಂಧಿತ ಸಾಹಿತ್ಯ, ಆಚರಣೆಗಳು ಹೆಚ್ಚು ಜೀವಂತವಾಗಿವೆ. ಇನ್ನು ಕೆಲವರು ಅಂತರ್ಜಲ ಕೊಳವೆ ಬಾವಿಗಳಿಂದ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ. ಈ ಕೃಷಿಕರಲ್ಲಿ ಪಾರಂಪರಿಕ ಕೃಷಿ ಜ್ಞಾನಗಳು, ಋತುಮಾನ ಆಧಾರಿತ ಕೃಷಿ ಜ್ಞಾನಗಳು ಆಚರಣೆ, ಸಂಪ್ರದಾಯಗಳು ಇಲ್ಲಿ. ಬದಲಾಗಿ ಏಕ ಬೆಳೆ ಪದ್ದತಿ ಪ್ರಧಾನವಾಗಿದೆ. ಇದು ಏಕ ಸಂಸ್ಕೃತಿಯನ್ನ ಏಕ ಆಹಾರ ಪದ್ದತಿಯನ್ನು ಜಾರಿಗೆ ತರುವ ಆಶಯದಂತಿದೆ.
- ವಿಭಕ್ತ ಕುಟುಂಬಗಳು ಹೆಚ್ಚಾಗಿವೆ. ಕುಟುಂಬದಲ್ಲಿ ಪಿತೃಪ್ರಧಾನ ಹೆಚ್ಚಾಗಿದೆ. ಹಾಗಾಗಿ ಈ ಕುಟುಂಬಗಳಲ್ಲಿ ಪಾರಂಪರಿಕ ನ್ಯಾಯ ಪದ್ದತಿ, ಪಾರಂಪರಿಕ ಕೌಟುಂಬಿಕ ಆಚರಣೆ–ಸಂಪ್ರದಾಯಗಳು ಹೆಚ್ಚಾಗಿ ಜರುಗುತ್ತವೆ. ಇದು ಆರ್ಥಿಕ ಸಬಲೀಕರಣಕ್ಕೂ ಕಾರಣವಾಗಿದೆ.

ಭೂಮಿ ವಿಂಘಡಣೆಯಂತಹ ಪದ್ಧತಿಗಳನ್ನು ಕೌಟುಂಬಿಕ ಅಸ್ಥಿರಗಳನ್ನು ತಡೆದಿದೆ. ಅಲ್ಲದೆ ಈ ಕುಟುಂಬಗಳಲ್ಲಿ ಸಾಂಸ್ಕೃತಿಕ ಆಚರಣೆಗಳು ಮಹತ್ವ ಪಡೆದಿವೆ. ಇಂತಹ ಮಹತ್ವ ವಿಭಕ್ತ ಕುಟುಂಬಗಳಲ್ಲಿ ಅತಿ ಕಡಿಮೆ. ಕುಟುಂಬಗಳು ವಿಭಕ್ತಗೊಂಡಂತೆ ಜಾನಪದ ಪಾರಂಪರಿಕ ಜ್ಞಾನಗಳು ವಿಸ್ಮೃತಿಯಾಗುತ್ತಿವೆ ಎನ್ನುವುದನ್ನು ಇದು ಸಾರುತ್ತದೆ.

- ಇಲ್ಲಿನ ಜನರ ಮುಖ್ಯ ಆಹಾರ ಜೋಳದ ರೊಟ್ಟಿ. ಈ ಪ್ರದೇಶದಲ್ಲಿ ಹೆಚ್ಚಾಗಿ ಬೆಳೆಯುವ ಬೆಳೆಯೂ ಜೋಳವಾಗಿದೆ. ಜೋಳದಲ್ಲಿ ಅನೇಕ ವಿದಗಳಿವೆ ಇದರಲ್ಲಿ ದೇಸಿ ತಳಿಯನ್ನು ಬೆಳೆಯುವುದು ಹೆಚ್ಚು.
- ಇಲ್ಲಿ ಮಿಶ್ರಬೇಸಾಯ ಪದ್ಧತಿಯಿದೆ. ಇದು ಅನೇಕ ಕೃಷಿ ಪಾರಂಪರಿಕ ಜ್ಞಾನಗಳ ಜೀವಂತಿಕೆಗೆ ಕಾರಣವಾಗಿದೆ. ಅಲ್ಲದೆ ಸ್ಥಳೀಯ ಕೃಷಿಜ್ಞಾನಗಳನ್ನು ಸಹ ಜೀವಂತಗೊಳಿಸಿದೆ. ಇದು ಆರ್ಥಿಕತೆಯನ್ನು ಸಹ ಹೆಚ್ಚಿಸಿದೆ. ಅಲ್ಲದೆ ಉದ್ಯೋಗವನ್ನು ಸಹ ಹೆಚ್ಚಿಸಿದೆ. ಇಂತಹ ದೋರಣೆಯು ನಿರಾವರಿ ಆಧಾರಿತ ಏಕಬೆಳೆ ಬೆಳೆಯುವ ಕೃಷಿಕರಲ್ಲಿ ಕಾಣುವುದಿಲ್ಲ.
- ಯಥೇಚ್ಚವಾದ ಜನಪದ ಸಾಹಿತ್ಯ ತುಂಬಿದೆ.
- ಜನರ ಜೀವನ ಶೈಲಿ ಬದಲಾಗಿದ್ದರೂ ಜೀವನದ ಮೌಲ್ಯ ಇಂದಿಗೂ ಉಳಿದಿದೆ. ಈ ಮೌಲ್ಯಗಳನ್ನು ಬೆಳೆಸುವ ಕಾರ್ಯದಲ್ಲಿ ಜನಪದ ಸಾಹಿತ್ಯದ ಪಾತ್ರವೂ ಇದೆ.
- ಸಾಟಿ ಪದ್ಧತಿ ಅಥವಾ ವಸ್ತುವಿನಿಮಯ ಪದ್ಧತಿ ಇಲ್ಲವಾಗಿ ಹಣದ ಮೌಲ್ಯವು ಎಲ್ಲವನ್ನು ನಿರ್ಧರಿಸುತ್ತದೆ.
- ಆಧುನಿಕತೆಯ ಪ್ರಭಾವದಿಂದ ಇಲ್ಲಿನ ಕೆಲವೇ ಕೆಲವು ಜನರು ನಗರಗಳತ್ತ ಮುಖ ಮಾಡುತ್ತಿದ್ದಾರೆ. ಆದರೂ ಇಂತಹ ವರ್ಗ ಅತಿಕಡಿಮೆ.
- ಈ ಗ್ರಾಮಕ್ಕೆ ಅನೇಕ ಅಲೆಮಾರಿಗಳು ವಲಸೆಬಂದು ತಿಂಗಳುಗಟ್ಟಲೆ ನೆಲೆಸುತ್ತಾರೆ. ಆಯಾಕಾಲಕ್ಕೆ ಅನುಗುಣವಾಗಿ ಅಲೆಮಾರಿಗಳು ವಲಸೆ ಬರುವುದು ಇಲ್ಲಿನ ಪಾರಂಪರಿಕ ಸಂಪ್ರದಾಯ ಇವರ ಕಥನಗಳು ನೀತಿಯನ್ನು ಹೇಳುತ್ತವೆ ಅಲ್ಲದೆ ಕೆಲವು ಅಲೆಮಾರಿಗಳ ಕೃಷಿ ಸಾಮಗ್ರಿಗಳನ್ನು ಒದಗಿಸುತ್ತವೆ. ಇಂತಹ ಹಲವು ಸಂಬಂಧಗಳು ಜರಗುತ್ತವೆ. ಸಾಂಸ್ಕೃತಿಕ ಸಂಬಂಧವು ಸಹ ಗ್ರಾಮದಲ್ಲಿ ಕೊಡುಗೆಯಾಗಿ ಕಾರ್ಯ ನಿರ್ವಹಿಸಿದೆ.
- ಗ್ರಾಮದಲ್ಲಿ ಅನೇಕ ಬಗೆಯ ಪಾರಂಪರಿಕ ಆಹಾರ ಪದ್ಧತಿಗಳು ಇವೆ. ಇವು ಋತುಮಾನಕ್ಕೆ ಅನುಗುಣವಾಗಿ ಬಳಕೆಗೆ ಬರುತ್ತವೆ. ಇದು ಸ್ಥಳೀಯ ಆಹಾರ ಋತುಚಕ್ರ ಪದ್ಧತಿಯನ್ನು ತಿಳಿಸುತ್ತದೆ. ಈ ಆಹಾರ ಪದ್ಧತಿಗಳು ಆಚರಣೆಗಳಾಗಿಯೂ ಬಳಕೆಯಲ್ಲಿವೆ. ಇದು ಗ್ರಾಮದ ಬಹು ಆಹಾರ ಪದ್ಧತಿಗೆ ಮತ್ತು ಬಹುಬೆಳೆ ಪದ್ಧತಿಗೂ ಕಾರಣವಾಗಿದೆ. ಅಲ್ಲದೆ ಈ ಪದ್ಧತಿ ಭೂ ಫಲವತ್ತತೆಯನ್ನು ಸಹ ಹೆಚ್ಚಿಸುತ್ತಿದೆ. ಜನರ ಆರೋಗ್ಯಕ್ಕೆ ಸಹ ಕಾರಣವಾಗಿದೆ.

ಅಂದರೆ ಎಷ್ಟೋ ಜನರ ಆರೋಗ್ಯವನ್ನು ಸುಸ್ಥಿರವಾಗಿಸಿದೆ ಎನ್ನುವುದು ಹಿರಿಯರ ಅಭಿಪ್ರಾಯ. ಈ ಆಹಾರ ಪದ್ದತಿಗಳ ಬಗ್ಗೆ ಆಚರಣೆಗಳು ಇದ್ದಂತೆ ನಂಬಿಕೆಗಳು, ನಿಷೇಧಗಳು ಹಾಗೂ ಕಥನಗಳು ಸಹ ಬಳಕೆಯಲ್ಲಿವೆ. ಇವುಗಳು ಪುರುಷರಿಗಿಂತ ಮಹಿಳೆಯರಲ್ಲಿ ಬಳಕೆಯಲ್ಲಿರುವುದು ಹೆಚ್ಚು. ಹಾಗಾಗಿ ಇವರು ಹಾಡುವ ಸಾಹಿತ್ಯದಲ್ಲೂ ವಿಶೇಷವಾಗಿ ಜನಪದ ಗೀತೆಗಳಲ್ಲಿ ಆಹಾರಕ್ಕೆ ಸಂಬಂಧಿಸಿದ, ಬೆಳೆ ಅಥವಾ ಕೃಷಿಗೆ ಸಂಬಂಧಿಸಿದ ಜ್ಞಾನಗಳು ಬಳಕೆಯಲ್ಲಿವೆ.

- ಬಂಕಾಪುರ ವಿವಿಧತೆಯಲ್ಲಿ ಏಕತೆಯನ್ನು ಕಾಣುವ ನಗರ ಬಂಕಾಪುರ ಎಕೆಂದರೆ ಇಲ್ಲಿ ಹಿಂದೂ ಮತ್ತು ಮುಸ್ಲಿಂ ಸಮುದಾಯಗಳು ಸಮಪ್ರಮಾಣದಲ್ಲಿದ್ದು ಯಾವುದೇ ಜಾತಿಯ ತಾರತ್ಯಮವಿಲ್ಲದೆ ಎರಡು ಧರ್ಮದವರು ಒಂದುಗೂಡುವುದನ್ನು ಕಾಣುತ್ತೆವೆ. ಜಾತಿಯ ಸಾಮರಸ್ಯ ಎತ್ತಿತೋರುತ್ತದೆ. ಹಿಂದೂ ಮತ್ತು ಮುಸ್ಲಿಂ ದೇವಸ್ಥಾನ ಮತ್ತು ಮಸೀದಿಗಳಲ್ಲಿ ನಡೆಯುವ ಆಚರಣೆ ಸಂದರ್ಭದಲ್ಲಿ ಎಲ್ಲಾ ಸರ್ವಧರ್ಮಿಯರು ಒಂದುಗೂಡುವುದನ್ನು ಕಾಣಬಹುದು.

**ಸಾಧ್ಯತೆಗಳು**

೧. ಬಂಕಾಪುರ ಐತಿಹಾಸಿಕ ನಗರ. ಈ ನಗರಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದೆ. ಹಾಗಾಗಿ ಸುತ್ತಮುತ್ತಲಿನ ಗ್ರಾಮಗಳ ಜೊತೆಗೆ ಸಾವಯವ ಸಂಬಧಗಳನ್ನು ಇಟ್ಟುಕೊಂಡ ಇತಿಹಾಸವಿದೆ. ಈ ಸಂಬಂಧ ಅಥವಾ ಕೊಡುಕೊಳ್ಳುವಿಕೆಯ ವಿವರಗಳನ್ನು ಮೌಖಿಕ ಆಕರಗಳ ಮೂಲಕ ಅಧ್ಯಯನಕ್ಕೆ ಒಳಪಡಿಸಬಹುದು.

೨. ಇಲ್ಲಿ ಸಾಕಷ್ಟು ಪ್ರಮಾಣದಲ್ಲಿ ಪ್ರವಾಸಿ ತಾಣಗಳಿವೆ. ಇವುಗಳ ಬಹುಮುಖಿ ಅಧ್ಯಯನ ಮಾಡುವ ಸಾಧ್ಯತೆಯಿದೆ.

೩. ಸಾಕಷ್ಟು ಶಿಷ್ಠ ಸಾಹಿತ್ಯದ ಆಗರವಾಗಿದ್ದು. ಈ ಆಕರಗಳಲ್ಲಿರುವ ಮೌಖಿಕ ಸಾಹಿತ್ಯವನ್ನು ಅಧ್ಯಯನಕ್ಕೆ ಒಳಪಡಿಸಬಹುದು ಹಾಗೂ ಶಿಷ್ಟ ಮತ್ತು ಮೌಖಿಕ ಸಾವಯವ ಸಂಬಂಧಗಳನ್ನು ಗುರುತಿಸಿದಂತಾಗುತ್ತದೆ. ಏಕೆಂದರೆ ಇಲ್ಲಿ ಪ್ರಾಚೀನ ಮತ್ತು ಹಲವು ಗ್ರಾಮಗಳ ಚರಿತ್ರೆ ಇಲ್ಲಿದೆ.

೪. ಗ್ರಾಮದಲ್ಲಿ ಹಲವಾರು ಜನಪದ ವೈಧ್ಯರು ಇದ್ದಾರೆ. ಇವರು ತಮ್ಮದೆಯಾದ ವೈಧ್ಯಪದ್ದತಿಗಳನ್ನು ಅಳವಡಿಸಿಕೊಂಡಿದ್ದಾರೆ. ಹಾಗಾಗಿ ಇಲ್ಲಿ ಹಲವು ವೈಧ್ಯಪದ್ದತಿಗಳಿವೆ. ಇವುಗಳಿಗೆ ಸಂಬಂಧಿಸಿದ ಭಿನ್ನ ಬಗೆಯ ಪಾರಂಪರಿಕ ಆಚರಣೆ ಸಂಪ್ರದಾಯ ಮೂಢನಂಬಿಕೆಗಳಿವೆ. ಇವುಗಳ ಪ್ರಯೋಗಿಕ ಮತ್ತು ಕಥನಗಳ ಅಧ್ಯಯನ ಮಾಡಬಹುದು.

೫. ಈ ನಗರವು ಜನಪದ ಕಲೆಗಳ ಆಗರವಾಗಿದೆ. ಹಾಗಾಗಿ ಇವುಗಳ ಸಂಪೂರ್ಣ ಅಧ್ಯಯನವಾಗಬೇಕಿದೆ.

೬. ಬಹುಸಂಸ್ಕೃತಿ ಅಸ್ತಿತ್ವದಲ್ಲಿದೆ. ಈ ಸಂಸ್ಕೃತಿಯಲ್ಲಿ ಸೌಹಾರ್ದತೆಗಳು ತಾರತಮ್ಯಗಳು ಮತ್ತು ಕೊಡುಕೊಳ್ಳುವಿಕೆಗಳಿವೆ. ಈ ಮಾದರಿಗಳನ್ನು ಮತ್ತು ಬಹುತ್ವವನ್ನು ಕುರಿತು ಅಧ್ಯಯನಕ್ಕೆ ಅವಕಾಶಗಳಿವೆ.

೭. ಇಲ್ಲಿ ಪಾರಂಪರಿಕ ಹೈನುಗಾರಿಕೆ ಯತೇಚ್ಚವಾಗಿದೆ. ಇದಕ್ಕೆ ಇಲ್ಲಿನ ಪಶುಸಾಕಾಣಿಕೆ ಕೇಂದ್ರದ ಪರಿಣಾಮವು ಕಾರಣವಾಗಿದೆ. ಹಾಗಾಗಿ ಈ ಹೈನುಗಾರಿಕೆ ಪಾರಂಪರಿಕ ಜ್ಞಾನಗಳು ಹಾಗೂ ಈ ಜ್ಞಾನಗಳ ಜೀವಂತಿಕೆಗೆ ಸಾಕಾಣಿಕೆ ಕೇಂದ್ರ ಸಾವಯವ ಸಂಬಂಧಗಳನ್ನು ವಿಶ್ಲೇಷಣೆಗೆ ಒಳಪಡಿಸಬಹುದು.

೮. ಬಂಕಾಪುರವು ೩೨ ಗ್ರಾಮಗಳ ಹೋಬಳಿಯ ವ್ಯಾಪ್ತಿಗೆ ಒಳಪಟ್ಟಿದೆ. ಈ ಗ್ರಾಮಗಳ ಕೆಲವು ಗ್ರಾಮಗಳಲ್ಲಿ ಅರಣ್ಯ ಪ್ರದೇಶವಿದೆ, ಗುಡ್ಡಗಾಡುಗಳಿವೆ. ಇಲ್ಲಿ ಹಲವು ದೈವಗಳಿವೆ ಹಾಗಾಗಿ ಈ ದೈವಗಳ ನೆಲಮೂಲ ಕಥನಗಳು, ಸೃಷ್ಟಿ ಮೂಲ ಕಥನಗಳು ಆಚರಣೆ ಸಂಪ್ರದಾಯಗಳು ಇವೆ. ಇವುಗಳ ಅಧ್ಯಯನ ಮಾಡಬಹುದು. ಏಕೆಂದರೆ ಈ ದೈವಗಳ ಕಥನಗಳು ಈ ಗ್ರಾಮದ ಅಸ್ತಿತ್ವ ಹಿಂದೆ ಕಾರ್ಯನಿರ್ವಹಿಸಿದ ಸಂಬಂಧಗಳಿವೆ. ಹಾಗಾಗಿ ಇವುಗಳನ್ನು ಬಹುಮುಖಿ ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಬಹುದು.

ಬಂಕಾಪುರವು ಸಾಂಸ್ಕೃತಿಕವಾಗಿ ವಿಶೇಷತೆಯನ್ನು ಹೊಂದಿದ್ದು, ಅಂತಹ ವಿಶೇಷತೆಯನ್ನು ಪೂರ್ಣಪ್ರಮಾಣದಲ್ಲಿ ಪರಿಚಯಿಸಲು ಅಧ್ಯಯನ ಕೈಗೊಳ್ಳಬಹುದು.

# ಅನುಬಂಧಗಳು

೧. ಆಧಾರ ಗ್ರಂಥಗಳು
೨. ವಕ್ತೃ ವಿವರಗಳು
೩. ಸಾಂಸ್ಕೃತಿಕ ಪದಕೋಶ
೪. ಜನಪದ ಗೀತೆಗಳು
೫. ನಕ್ಷೆ
೬. ಛಾಯಾಚಿತ್ರ

# ಅನುಬಂಧ : ಒಂದು

## ಆಧಾರ ಗ್ರಂಥಗಳು

೧. ಅಂಬಳಿಕೆ ಹಿರಿಯಣ್ಣ, 'ಸೈದ್ಧಾಂತಿಕ ಜಾನಪದ', ಪ್ರಜ್ವಲ್ ಪ್ರಕಾಶನ ಮೈಸೂರು, ೧೯೯೨.

೨. ಅಂಬಳಿಕೆ ಹಿರಿಯಣ್ಣ, 'ಜಾನಪದ ಸಮಾಗಮ', ಶಿರಾ ಪಬ್ಲಿಕೇಸಿಂಗ್ ಹೌಸ, ೨೦೦೮.

೩. ಅರ್ಚಕ. ಬಿ. ರಂಗಸ್ವಾಮಿ., 'ಹುಟ್ಟಿದ ಹಳ್ಳಿ' ಪ್ರಧಾನ ಸಂಪಾದಕರು ಅರವಿಂದ ಮಾಲಗತ್ತಿ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರ ವಿಶ್ವವಿದ್ಯಾನಿಲಯ, ೨೦೦೧.

೪. ಇಮ್ರಾಪೂರ ಎಸ್.ಜಿ., ಜನಪದ ಒಗಟುಗಳು, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೯.

೫. ಈರಯ್ಯ ಕಿಲ್ಲೇದಾರ್., ಸಾಂಪ್ರದಾಯಿಕ ಒಕ್ಕುಲುತನ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು, ೨೦೦೮.

೬. ಕಟ್ಟಿ ಶೇಷಾಚಾರ್ಯರು, ಕವಿ ಕನಕದಾಸರು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಎರಡನೇ ಮುದ್ರಣ ೨೦೧೦.

೭. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ., 'ಕರ್ನಾಟಕ ಜಾನಪದ', ೧೯೮೯.

೮. ಕಾಳೇಗೌಡ ನಾಗವಾರ., ಬೀದಿ ಮಕ್ಕಳು ಬೆಳೆದೊ, ಸಪ್ನ ಬುಕ್ ಹೌಸ್(ಪಿ) ಲಿ. ಆರ್‌ಒ, ನಂ ೧೧, ೩ ನೇ ಮುಖ್ಯರಸ್ತೆ, ಗಾಂಧಿ ನಗರ, ಬೆಂಗಳೂರ, ೧೯೭೭.

೯. ಗದ್ದಗಿಮಠ ಬಿ.ಎಸ್., ಗದ್ದಗಿಮಠ ಬರಹಗಳು, ಕನ್ನಡ ಅಧ್ಯಯನ ಕೇಂದ್ರ, ಮಾನಸ ಗಂಗೋತ್ರಿ, ಮೈಸೂರು, ೧೯೮೮.

೧೦. ಗುರುಪಾದಯ್ಯ ಬ. ಸಾಲಿಮಠ, ಬೆಳಕಿನ ಕಿರಣ, ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್, ಗದಗ, ೨೦೧೩.

೧೧. ಗುರುಪ್ರಸಾದ್ ಸಿ.ಟಿ., ನೀಲಗಾರರು ಸಂಕಥನ, ಬಂಗಾರಿ ಪಬ್ಲಿಕೇಶನ್ಸ್ ಗೊಟಗೋಡಿ, ಶಿಗ್ಗಾಂವ ತಾಲ್ಲೂಕು, ಹಾವೇರಿ ಜಿಲ್ಲೆ, ೨೦೧೪.

೧೨. ಚನ್ನಕ್ಕ ಎಲಿಗಾರ., 'ಬಂಕಾಪುರ ಶೋಧನ' ಚನ್ನಗಂಗಾ ಪ್ರಕಾಶನ ಧಾರವಾಡ, ೧೯೯೦.

೧೩. ಚಾರುಲತಾ ಬಿ.ಟಿ., 'ಬ್ರಹ್ಮಗಿರಿ ಪರಿಸರ ಸಾಂಸ್ಕೃತಿಕ ಅಧ್ಯಯನ', ಎಸ್.ವಾಯ್. ಸೋಮಶೇಖರ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೧೪.

೧೪. ಚಿಕ್ಕಣ್ಣ ಎಣ್ಣೆಕಟ್ಟೆ., ತುಮಕೂರ ಜಿಲ್ಲೆ ಜಾನಪದೀಯ ಅಧ್ಯಯನ, ಗಡಿನಾಡ ಜಾನಪದ ಸಂಪರ್ಕ ಕೇಂದ್ರ, ಕಾಳಿದಾಸ ನಗರ, ಸಿರಾ, ೨೦೦೧.

೧೫. ಜಯಲಕ್ಷ್ಮೀ ಸೀತಾಪುರ., ಒಗಟು ಪ್ರಚಾರ ಪುಸ್ತಕ ಮಾಲೆ, ಪ್ರಸಾರಾಂಗ, ಮಾನಸ ಗಂಗೋತ್ರಿ, ಮೈಸೂರು, ೨೦೦೯.

೧೬. ನರಸಿಂಹಮೂರ್ತಿ ಎಚ್.ವಿ., ನಮ್ಮ ಹಬ್ಬಗಳು, ನವದುರ್ಗಾ ಲೇಸರ್‌ಟೆಕ್ ಹೊನ್ನಪದ್ಮ ಪ್ರಿಂಟರ್ಸ್, ಉಡುಪಿ, ೨೦೦೨.

೧೭. ನಾಗರಾಜಯ್ಯ ಹಂಪ, ಕರ್ನಾಟಕ ಜಾತ್ರೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೮. ನಾಗೇಗೌಡ ಎಚ್.ಎಲ್., ಪ್ರವಾಸಿ ಕಂಡ ಇಂಡಿಯಾ, ಐ.ಬಿ.ಎಚ್. ಪ್ರಕಾಶನ, ಮೈಸೂರು, ೨೦೧೩.

೧೯. ನಾಯಕ ಎನ್.ಆರ್., 'ನಾಡವರ ಒಂದು ಸಾಂಸ್ಕೃತಿಕ ಅಧ್ಯಯನ', ಗೋಧೂಳಿ ಪ್ರಕಾಶನ ಬೆಂಗಳೂರು, ೨೦೧೨.

೨೦. ನಾಯಕ ಹಾ.ಮಾ., ಜಾನಪದ ಸ್ವರೂಪ, ಟಿ.ವಿ.ಮೆಮೊರಿಯಲ್ ಸಿರಿಸ್ ಮೈಸೂರು, ೧೯೭೧.

೨೧. ನಾಯಕ ಹಾ.ಮಾ., ಜಾನಪದ ಸ್ವರೂಪ, ಟಿ.ವಿ.ಮೆಮೋರಿಯಲ್ ಸಿರಿಸ್ ಮೈಸೂರು, ೧೯೭೧. ಪರಮಶಿವಯ್ಯ ಜೀ.ಶಂ., ಕನ್ನಡ ಜನಪದ ಕಥೆಗಳು, ಚೇತನ ಬುಕ್ ಹೌಸ್, ಮೈಸೂರು, ೧೯೮೮.

೨೨. ನಾವಡ ಎ.ವಿ., 'ಸಾಹಿತ್ಯ ಶೋಧ', ಶೋಧನ ಪ್ರಕಾಶನ ಮಂಗಳೂರು, ೨೦೧೫.

೨೩. ನೇತ್ರಾವತಿ ಕೆ.ವಿ., ಕಮಲಾಪುರದ ಕೊರವರ ಸಮುದಾಯ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೨೪. ಪಂಚಮುಖಿ ಆರ್.ಎಸ್., ಕರ್ನಾಟಕ ಇತಿಹಾಸ, ಕರ್ನಾಟಕ ಹಿಸ್ಟಾರಿಕಲ್ ರಿಸರ್ಚ್, ಧಾರವಾಡ,

೨೫. ಪರಮಶಿವಯ್ಯ ಜೀ.ಶಂ., ಜೀ.ಶಂಪ ಜಾನಪದ ಬರಹಗಳು, ೨೦೧೨.

೨೬. ಪರಮಶಿವಯ್ಯ ಜೀ.ಶಂ., 'ಜಾನಪದ ಕೆಲವು ಮುಖಗಳು' ಜನಪದ ಬರಹ ಸಂ.೨, ಸಾಗರ ಪ್ರಕಾಶನ ಬೆಂಗಳೂರ, ೨೦೧೨.

೨೭. ಪಾಟೀಲ ಎಸ್.ಸಿ.(ಸಂ)., ಹಂಡೆ ಪಾಳೆಗಾರರ ಇತಿಹಾಸ ಮತ್ತು ಪರಂಪರೆ, ಚಾಲುಕ್ಯ ಸಂಸ್ಕೃತಿ ಅಧ್ಯಯನ ಪೀಠ, ಗುಲ್ಬರ್ಗಾ, ೨೦೧೪.

೨೮. ಪಾಟೀಲ ಬಿ.ಪಿ., ಗ್ರಾಮದೇವತೆಗಳು(ಉಪನ್ಯಾಸ ಗ್ರಂಥಮಾಲೆ), ಕರ್ನಾಟಕ ವಿಶ್ವವಿದ್ಯಾಲಯ, ಪ್ರಸಾರಾಂಗ, ಧಾರವಾಡ, ೧೯೯೬.

೨೯. ಪಾಲಾಕ್ಷ, ಮಧ್ಯಯುಗೀನ ಭಾರತದ ಇತಿಹಾಸ, ಎಸ್.ಎಸ್. ಭಾವಿಕಟ್ಟಿ ಪ್ರಕಾಶನ, ಕಲಬುರಗಿ, ೨೦೧೪.

೩೦. ಪುಟ್ಟಪ್ಪ ಕೆ.ವಿ., ಕನ್ನಡ ಒಗಟುಗಳ ಸಮೀಕ್ಷೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು, ೧೯೭೬.

೩೧. ಬಸವರಾಜ ಸಬರದ, ಸಮುದಾಯ ಮತ್ತು ಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜ ಪೇಟೆ, ಬೆಂಗಳೂರು, ೨೦೦೨.

೩೨. ಬಸವರಾಜ ಸಬರದ (ಪ್ರ.ಸಂ), ಎಚ್ ಟಿ ಪೋತೆ(ಸಂ)., 'ಜಾನಪದ ಆಯಾಮಗಳು' ಕನ್ನಡ ಅಧ್ಯಯನ ಸಂಸ್ಥೆ, ಗುಲ್ಬರ್ಗಾ ವಿಶ್ವವಿದ್ಯಾಲಯ, ೨೦೦೯.

೩೩. ಬಸವರಾಜು ತೋಟಹಳ್ಳಿ, ಗ್ರಾಮದೇವತೆಗಳ ಅಧ್ಯಯನ ಒಂದು ಸಾಂಸ್ಕೃತಿಕ ಶೋಧ, ದೇವಿ ಪ್ರಕಾಶನ, ವಿನಾಯಕ ನಗರ, ಬೆಂಗಳೂರು, ೨೦೦೭.

೩೪. ಬಾಬಾಸಾಹೇಬ ಡಾ. ಬಿ.ಆರ್.ಅಂಬೇಡ್ಕರ್, ಬಾಬಾಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರಹ ಮತ್ತು ಭಾಷಣಗಳು, ಸಂಪುಟ ೫, ೯,೪, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಕುವೆಂಪು ಭಾಷಾ ಪ್ರಾಧಿಕಾರ, ಕಲಾಗ್ರಾಮ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ ಆವರಣ ಹಿಂಬಾಗ ಮಲ್ಲತ್ತಹಳ್ಳಿ, ಬೆಂಗಳೂರು, ೨೦೧೦.

೩೫. ಬಾಲಗೋಪಾಲ್ ಕೆ.ಮೂಲ, ಅನುವಾದ. ಎಚ್.ಎಸ್.ಶ್ರೀಮತಿ, ಪ್ರಾಚೀನ ಭಾರತದ ಚರಿತ್ರೆ, ಡಿ.ಡಿ. ಕೋಸಂಬಿಯವರ ಚಿಂತನೆಗಳು, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೨.

೩೬. ಬೈರೇಗೌಡ ಎಂ, ತಾ.ಸಿ.ತಿಮ್ಮಯ್ಯ, ಅರ್ಕಾವತಿ, ಅಖಿಲ ಭಾರತ ೬೭ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ, ಕನಕಪುರ ಸಂಗ್ರಹ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯.

೩೭. ಭಂಡಾರಿ ಆರ್.ವಿ., ವರ್ಣದಿಂದ ವರ್ಗದ ಕಡೆಗೆ, ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜ ಪೇಟೆ, ಬೆಂಗಳೂರು, ೨೦೦೩.

೩೮. ಭಗವಾನ್ ಕೆ.ಎಸ್., ಶಂಕರಾಚಾರ್ಯ ಮತ್ತು ಪ್ರತಿಗಾಮಿತನ, ಮಹಿಮಾ ಪ್ರಕಾಶನ, ಕುವೆಂಪು ನಗರ, ಮೈಸೂರು, ಹದಿನಾರನೆಯ ಮುದ್ರಣ, ೨೦೧೩.

೩೯. ಮಂಜುನಾಥ ಬೇವಿನಕಟ್ಟಿ, ಮಲಿಯಮ್ಮ ನಿನ್ನಾಲ್ಕುದ್ದೋ... ಉದ್ದೋ.... ಅಂಬಿಕಾ ಪ್ರಕಾಶನ ಹೋಸಪೇಟೆ, ೧೯೯೪

೪೦. ಮಂಜುನಾಥ ಬೇವಿನಕಟ್ಟಿ, ಕನ್ನಡ ಜನಪದ ನಂಬಿಕೆಗಳು, ಜ್ಯೋತಿ ಪ್ರಕಾಶನ, ಮೈಸೂರು, ೨೦೦೭.

೪೧. ಮಲ್ಲಿಕಾರ್ಜುನ ಹೊಸಪಾಳ್ಯ, ದೇಸೀ ಕೃಷಿಜ್ಞಾನ ಸಂಪುಟ–೪, ಈ ನೆಲದ ಬದುಕು, ಕೃಷಿ ಆಚರಣೆಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು, ೨೦೦೮.

೪೨. ಮೂರ್ತಿರಾವ್ ಎ.ಎನ್., ದೇವರು, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಕೃಷ್ಣಮೂರ್ತಿಪುರಂ, ಮೈಸೂರು, ೨೦೧೧.

೪೩. ಮೈಲಹಳ್ಳಿ ರೇವಣ್ಣ, ಜಂಬುನೇರ್ಲೆ ಹಣ್ಣು ಜಗ್ಗಿ ಬಿದ್ದಾವೆ, ಒಗಟುಗಳ ಸಂಕಲನ, ಎನ್.ಆರ್.ಎ.ಎಮ್.ಎಚ್. ಪ್ರಕಾಶನ, ಕೋಟೇಶ್ವರ, ೧೯೯೨.

೪೪. ರಂಗಾರೆಡ್ಡಿ ಕೋಡಿರಾಂಪುರ, ಜಾನಪದ ೧೯೯೩, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೫.

೪೫. ರಘೋತ್ತಮ ಹೊ.ಬ., ಅಂಬೇಡ್ಕರ್ ಎಂಬ ಕರಗದ ಬಂಡೆ, ಸಾಂಚಿ ಪುಸ್ತಕ ೧೩/೧೪೪, ೨ನೇ ಕ್ರಾಸ್, ಅಂಬೇಡ್ಕರ್ ಬಡಾವಣೆ, ಚಾಮರಾಜ ನಗರ, ೨೦೧೨.

೪೬. ರಮೇಶ ಸ.ಚಿ., 'ಜಾನಪದ ಸೆಲೆ' ಅಖಿಲ ಭಾರತ ಜಾನಪದ ಸಮ್ಮೇಳನ, ೨೦೧೧.

೪೭. ರವೀಂದ್ರ ವಿ. ಚಿಕ್ಕಮಠ., 'ಬೆಳಗಾವಿ ಸಾಂಸ್ಕೃತಿಕ ಅಧ್ಯಯನ' ಮಾರ್ಗದರ್ಶಕರು ಶ್ರೀರಾಮ ಇಟ್ಟಣ್ಣವರ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೧೨

೪೮. ರಹಮತ್ ತರೀಕೆರೆ, ಕರ್ನಾಟಕ ನಾಥಪಂಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೪೯. ಲೂಯಿಸ್ ರೈಸ್ ಬಿ, ಎಪಿಗ್ರಾಫಿಕಾ ಕರ್ನಾಟಿಕಾ ಸಂಪುಟ. ೯, ಬೆಂಗಳೂರು ಜಿಲ್ಲೆಯಲ್ಲಿರುವ ಶಾಸನಗಳು, ಮೈಸೂರು ಸರ್ಕಾರ ಕೇಂದ್ರ ಮುದ್ರಣ, ಮೈಸೂರು ಆರ್ಕಿಯಾಜಿಕಲ್ ಸಿರೀಸ್, ೧೯೦೫.

೫೦. ವಾಸುದೇವ ಬಡಿಗೇರ. (ಸಂ)., ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ–೨ ಹಾನಗಲ್ಲು. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೮.

೫೧. ವಿದ್ವಾನ್ ವಿ.ಎನ್.ಭಟ್, ಭಾರತೀಯ ಹಬ್ಬಗಳ ವೈಶಿಷ್ಟ್ಯ, ವಿಶ್ವನಾಥ ಪ್ರಕಾಶನ ಜ್ಞಾನದೀಪ ಸಹ್ಯಾದ್ರಿ ನಗರ, ಮೂರನೇ ಹಂತ, ವಿನೋಬಾ ನಗರ ಎಕ್ಸಟೆನ್‌ಷನ್, ಶಿವಮೊಗ್ಗ. ೨೦೦೨

೫೨. ವಿನೋದಾ ಪಾಟೀಲ., 'ಕರ್ನಾಟಕ ಪ್ರಾಚೀನ ಬಾವಿಗಳು' ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಗಳ ನಿರ್ದೇಶನಾಲಯ, ಮೈಸೂರು, ೨೦೦೬.

೫೩. ವೀರಣ್ಣ ದಂಡೆ (ಸಂ), 'ಹಾಲುಮತ ಜನಪದ ಮಹಾಕಾವ್ಯ' ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರಕಾರ, ಬೆಂಗಳೂರ, ೨೦೦೦.

೫೪. ವೃಷಭಕುಮಾರ., 'ಮೈಸೂರ ಜಿಲ್ಲೆಯ ಐತಿಹ್ಯಗಳು' ಒಂದು ಅಧ್ಯಯನ ಸಂಶೋಧನಾ ಮಹಾಪ್ರಬಂಧ, ಕರ್ನಾಟಕ ಜಾನಪದ ಅಕಾಡೆಮಿ ಬೆಂಗಳೂರು, ೨೦೧೦.

೫೫. ಶಾಂತವ್ವ ನಾಗಪ್ಪ ಲಕ್ಷ್ಮೇಶ್ವರ., 'ಯಮನೂರ ಗ್ರಾಮ ಸಾಂಸ್ಕೃತಿಕ ಅಧ್ಯಯನ',ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೧೩.

೫೬. ಶಿವಲೀಲಾ ಲೊಕೇಶ ಕೆ., 'ಕಮಲಾಪುರ : ಒಂದು ಸಾಂಸ್ಕೃತಿಕ ಅಧ್ಯಯನ', ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೮.

೫೭. ಸಿ.ಕೆ.ಎನ್., 'ಗ್ರಾಮೀಣ ಗ್ರಹಿಕೆ'(ಜಾನಪದ ಪ್ರಭಂಧಗಳು), ಭಾರತ ಪ್ರಕಾಶನ ಗೋಕಾಕ, ೨೦೦೦.

೫೮. ಸಿದ್ದಲಿಂಗಯ್ಯ, ಗ್ರಾಮದೇವತೆಗಳು, ಮೂಲಭಾರತಿ ಪ್ರಕಾಶನ, ಮೂರನೆ ಮುಖ್ಯ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು, ೧೯೯೭.

೫೯. ಸುರೇಶ್ ಕೆ.ಸಿ., ರಾಮನಗರ ಜಿಲ್ಲೆಯ ಸ್ಥಳನಾಮಗಳ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ೨೦೧೧.

೬೦. ಸೂರ್ಯನಾಥ ಕಾಮತ್, ಕರ್ನಾಟಕ ರಾಜ್ಯ ಗ್ಯಾಜೆಟಿಯರ್, ಬೆಂಗಳೂರು, ಗ್ರಾಮಾಂತರ ಜಿಲ್ಲೆ, ಕರ್ನಾಟಕ ರಾಜ್ಯ ಸರಕಾರ ಪ್ರಕಟಣೆ, ೧೯೮೯.

೬೧. ಸೂರ್ಯನಾಥ ಕಾಮತ್, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಗೀತಾಬುಕ್ ಹೌಸ್, ಮೈಸೂರು,

೬೨. ಸೋಮಶೇಖರ್ ಇಮ್ರಾಪುರ ಆಯ್ದ ಜನಪದ ಒಗಟುಗಳು, ಚಿತ್ತಾರ, ಚೇತನಾ ಪ್ರಕಾಶನ, ೧೨ನೇ ಅಡ್ಡರಸ್ತೆ, ನಿರ್ಮಲಾನಗರ, ಧಾರವಾಡ, ೧೯೯೮.

೬೩. ಹಿರೇಮಠ ಎಸ್.ಎಸ್., ಕರ್ನಾಟಕ ಸಂಸ್ಕೃತಿ ಪರಂಪರೆ(ಭಾಗ–೧), ಹಬ್ಬಗಳು, ಸಮತಾ ಪ್ರಕಾಶನ, ಹರಪನಹಳ್ಳಿ, ೧೯೯೨.

೬೪. ಹಿರೇಮಠ ಎಸ್.ಎಸ್., ಜಾತ್ರೆಗಳು, ಸಮತಾ ಪ್ರಕಾಶನ, ಬಿ.ವೆಂಕೋಬ, ಮದಿಯಪ್ಪನಗುಡಿ ಹತ್ತಿರ, ಹೊಸಪೇಟೆ, ೧೯೯೩.

೬೫. ಹೂಗಾರ ಎ.ಎಸ್., ಜಾನಪದ ನರಗುಂದ, ದರ್ಪಣ ಪ್ರಕಾಶನ, ಧಾರವಾಡ, ೨ನೇ ಆವೃತ್ತಿ, ೨೦೧೨.

## ಅನುಬಂಧ : ಎರಡು

# ವಕ್ತೃ ವಿವರಗಳು

| ಕ್ರ.ಸಂ | ಹೆಸರು | ವಯಸ್ಸು | ವೃತ್ತಿ | ಊರು | ಜಾತಿ | ಶಿಕ್ಷಣ |
|---|---|---|---|---|---|---|
| ೧ | ಕಮಲಮ್ಮ ಚಿ ಪಾಟೀಲ | ೮೫ | ಗೃಹಿಣಿ | ಬಂಕಾಪುರ | ಲಿಂಗಾಯತ | – |
| ೨ | ಬಸನಗೌಡ ಪಾಟೀಲ | ೬೫ | ಕೃಷಿ | ಬಂಕಾಪುರ | ಲಿಂಗಾಯತ | ೮ |
| ೩ | ಚನ್ನವೀರಪ್ಪ ಹಡಪದ | ೭೦ | ಕೃಷಿ | ಬಂಕಾಪುರ | ಲಿಂಗಾಯತ | ೭ |
| ೪ | ಗಿರಿಜವ್ವ ಹಡಪದ | ೬೮ | ಗೃಹಿಣಿ | ಬಂಕಾಪುರ | ಲಿಂಗಾಯತ | ೯ |
| ೫ | ಶಿವಗಂಗವ್ವ ಮಾವೂರ | ೬೭ | ಗೃಹಿಣಿ | ಬಂಕಾಪುರ | ಲಿಂಗಾಯತ | ೮ |
| ೬ | ಸೈಯದ್ ಅಹ್ಮದ ಬಾಷಾ | ೬೬ | ಕೃಷಿ | ಹಾನಗಲ | ಮುಸ್ಲಿಂ | ೧೦ |
| ೭ | ಮಂಜುನಾಥ ತಳವಾರ | ೫೫ | ಕೃಷಿ | ಬಂಕಾಪುರ | ವಾಲ್ಮೀಕಿ | – |
| ೮ | ಶರೀಪ ಮಾಕಪ್ಪನವರ | ೩೦ | ಶಿಕ್ಷಕ | ಶ್ಯಾಡಂಬಿ | ಚಲವಾದಿ | ಎಮ್.ಎ |
| ೦೯ | ರಮೇಶಗೌಡ ಪಾಟೀಲ್ | ೩೦ | ಪತ್ರಕರ್ತ | ಬಂಕಾಪುರ | ಲಿಂಗಾಯತ | ಎಮ್.ಎ |
| ೧೦ | ಮಾಲತೇಶ ಪೂಜಾರ | ೨೯ | ಅರ್ಚಕ | ಬಂಕಾಪುರ | ಬ್ರಾಹ್ಮಣ | ೧೦ |
| ೧೧ | ರಾಘವೇಂದ್ರ ಬಿಜಾಪುರ | ೩೮ | ಅರ್ಚಕ | ಬಂಕಾಪುರ | ಬ್ರಾಹ್ಮಣ | ೫ |
| ೧೨ | ಜಗದೀಶ ಹುರುಳಿ | ೭೫ | ಕೃಷಿ | ಬಂಕಾಪುರ | ಕುರುಬ | – |
| ೧೩ | ನಾಗಪ್ಪ ಹಳವಳ್ಳಿ | ೮೨ | ಕೃಷಿ | ಬಂಕಾಪುರ | ಕುರುಬ | ೫ |
| ೧೪ | ನೀಲಪ್ಪ ಪುಟ್ಟಪ್ಪನವರ | ೮೫ | ಕೃಷಿ | ಬಂಕಾಪುರ | ಕುರುಬ | ೩ |
| ೧೫ | ಚನ್ನಪ್ಪ ಗುಡುಮಿ | ೪೫ | ಕೃಷಿ | ಬಂಕಾಪುರ | ಲಿಂಗಾಯತ | ೧೦ |
| ೧೬ | ನಿರ್ಮಲಾ ರಜಪೂತ | ೫೫ | ಗೃಹಿಣಿ | ಬಂಕಾಪುರ | ರಜಪೂತ | ೮ |
| ೧೭ | ರೇಣುಕಾ ಪಾಟೀಲ | ೪೭ | ಗೃಹಿಣಿ | ಬಂಕಾಪುರ | ಲಿಂಗಾಯತ | ೧೦ |
| ೧೮ | ಹನುಮಂತ ಜೋಗಿನ | ೨೫ | ಡ್ರೈವರ | ಬಂಕಾಪುರ | ಕುರುಬ | ೧೦ |
| ೧೯ | ಎ.ಕೆ.ಆದ್ವಾನಿಮಠ | ೬೫ | ಶಿಕ್ಷಕರು | ಬಂಕಾಪುರ | ಜಂಗಮ | ಬಿ.ಎ |
| ೨೦ | ರೇಣುಕಾ ಕೋರಿ | ೫೨ | ಗೃಹಿಣಿ | ಬಂಕಾಪುರ | ಲಿಂಗಾಯತ | ೮ |
| ೨೧ | ಪ್ರಭಾವತಿ ರಾಘವೇಂದ್ರ ಬಡಿಗೇರ | ೩೦ | ಗೃಹಿಣಿ | ಹೊಸರಿತ್ತಿ | ಪಾಂಚಾಳ | ಎಮ್.ಎ |

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಊರು | ಜಾತಿ | ಶಿಕ್ಷಣ |
|---|---|---|---|---|---|---|
| ೨೨ | ಕೃಷ್ಣಾಚಾರ್ಯ ಇ.ಪೂರ | ೮೨ | ವ್ಯಾಪಾರ | ಬಂಕಾಪುರ | ಬ್ರಾಹ್ಮಣ | ೧೦ |
| ೨೩ | ಗೌರಮ್ಮ ಕೋರಿ | ೫೫ | ಗೃಹಿಣಿ | ಬಂಕಾಪುರ | ಲಿಂಗಾಯತ | ಡಿಪ್ಲೋಮಾ |
| ೨೪ | ಶಿವನಗೌಡ ಪಾಟೀಲ | ೫೫ | ಕೃಷಿ | ಬಂಕಾಪುರ | ಲಿಂಗಾಯತ | ೮ |
| ೨೫ | ವಿ.ಸಿ.ಪಾಟೀಲ | ೬೩ | ಕೃಷಿ | ಬಂಕಾಪುರ | ಲಿಂಗಾಯತ | ೧೦ |
| ೨೬ | ವೈಜಯಂತಿ ಪೂಜಾರ | ೬೫ | ಗೃಹಿಣಿ | ಬಂಕಾಪುರ | ಬ್ರಾಹ್ಮಣ | |
| ೨೭ | ಕಮಲವ್ವ ರಿತ್ತಿಗೌಡ್ರ | ೭೨ | ಗೃಹಿಣಿ | ಬಂಕಾಪುರ | ಕುರುಬ | |
| ೨೮ | ಮಖಬೂಲ ಹೊಟ್ಟೂರ | ೪೦ | ಕೃಷಿ | ಬಂಕಾಪುರ | ಮುಸ್ಲಿಂ | ೧೦ |
| ೨೯ | ಇಬ್ರಾಹಿಂ ದುಖಾಂದರ | ೪೫ | ವ್ಯಾಪಾರ | ಬಂಕಾಪುರ | ಮುಸ್ಲಿಂ | ೧೦ |
| ೩೦ | ಪ್ರದೀಪ ಇಬ್ರಾಹಿಂಪುರ | ೫೫ | ವ್ಯಾಪಾರ | ಬಂಕಾಪುರ | ಬ್ರಾಹ್ಮಣ | ಬಿ,ಎ |
| ೩೧ | ಲಕ್ಷ್ಮಣ ಸುಲಾಖೆ | ೭೨ | ಪೋಸ್ಟಮನ್ | ಬಂಕಾಪುರ | ಭಾವಸಾರ ಕ್ಷತ್ರೀಯ | ಬಿ,ಎ |
| ೩೨ | ಮಿನಾಕ್ಷಿಬಾಯಿ ಕುಲಕರ್ಣಿ | ೭೫ | ಗೃಹಿಣಿ | ಬೆಂಗಳೂರ | ಬ್ರಾಹ್ಮಣ | ೧೦ |
| ೩೩ | ಪಾರ್ವತಿ ಸೊಪ್ಪಿನಮಠ | ೫೫ | ಗೃಹಿಣಿ | ಧಾರವಾಡ | ಜಂಗಮ | ೧೦ |
| ೩೩ | ಗಣೇಶ ಉಡುಪಿ | ೪೫ | ಅರ್ಚಕರು | ಬಂಕಾಪುರ | ಬ್ರಾಹ್ಮಣ | ೧೦ |
| ೩೪ | ಹನುಮವ್ವ ದುಗಲದ | ೭೦ | ಗೃಹಿಣಿ | ಬಂಕಾಪುರ | ಕುರುಬ | ೫ |
| ೩೫ | ಫಕ್ಕೀರವ್ವ ಹಳವಳ್ಳಿ | ೬೫ | ಗೃಹಿಣಿ | ಬಂಕಾಪುರ | ಕುರುಬ | ೧ |
| ೩೬ | ಕಮಲವ್ವ ಮಾವೂರ | ೫೫ | ಗೃಹಿಣಿ | ಬಂಕಾಪುರ | ಲಿಂಗವಂತ | ೫ |
| ೩೭ | ಕಮಲವ್ವ ಪಾಟೀಲ | ೭೯ | ಗೃಹಿಣಿ | ಬಂಕಾಪುರ | ಲಿಂಗವಂತ | ೧ |
| ೩೮ | ಶಂಕ್ರಗೌಡ್ರ ಪಾಟೀಲ | ೭೨ | ಪಶುವೈದ್ಯ | ಬಂಕಾಪುರ | ಲಿಂಗವಂತ | ಬಿ,ಎ |
| ೩೯ | ರಾಮಣ್ಣ ಕುರಗೋಡಿ | ೬೦ | ಕೃಷಿ | ಬಂಕಾಪುರ | ಲಿಂಗವಂತ | |
| ೪೦ | ಅಜಯರಾವ ಸಿಂಧೆ | ೩೫ | ಕೃಷಿ | ಬಂಕಾಪುರ | ಎಸ್.ಸಿ | ೫ |
| ೪೧ | ಮುಕುಂದ ದೊಡ್ಡಮನಿ | ೩೫ | ಉಪನ್ಯಾಸಕ | ಬಂಕಾಪುರ | ಎಸ್.ಸಿ | ಎಮ್.ಎ |
| ೪೨ | ರಾಮಣ್ಣ ಜಾದವ | ೬೫ | ಕೃಷಿ | ಬಂಕಾಪುರ | ಮರಾಠ | ೫ |
| ೪೩ | ನೀಲಪ್ಪ ಪುಟ್ಟಪ್ಪನವರ | ೫೫ | ಕೃಷಿ | ಬಂಕಾಪುರ | ಕುರುಬ | ೫ |
| ೪೪ | ಓಂಪ್ರಕಾಶ ಅಂಗಡಿ | ೩೦ | ವ್ಯಾಪಾರ | ಬಂಕಾಪುರ | ಲಿಂಗವಂತ | ೧೦ |
| ೪೫ | ಜಬೀನಾ ಕಾಟೇನಹಳ್ಳಿ | ೩೦ | ವಿದ್ಯಾರ್ಥಿ | ಶಿಗ್ಗಾಂವ | ಮುಸ್ಲಿಂ | ಎಮ್.ಎ |
| ೪೬ | ಮಾಬಳೇಶ ಮಾದಮ್ಮನವರ | ೩೫ | ಕೃಷಿ | ಬಂಕಾಪುರ | ಲಿಂಗವಂತ | ೧೨ |
| ೪೭ | ನಾಗರಾಜ ಮಂಟೂರ | ೩೨ | ವ್ಯಾಪಾರ | ತಡಸ | ಲಿಂಗವಂತ | ೧೨ |

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಊರು | ಜಾತಿ | ಶಿಕ್ಷಣ |
|---|---|---|---|---|---|---|
| ೪೮ | ಬಸವಂತಪ್ಪ ಮಾದಮ್ಮನವರ | ೬೮ | ನಿ.ನೌಕರ | ಬಂಕಾಪುರ | ಲಿಂಗವಂತ | ಬಿ.ಎ |
| ೪೯ | ಬಸಪ್ಪ ಸವೂರ | ೪೦ | ಶಿಕ್ಷಕರು | ಬಂಕಾಪುರ | ಕುರುಬ | ಬಿ.ಎ |
| ೫೦ | ಶಿವಾನಂದ ಸಣ್ಣಕ್ಕಿ | ೪೦ | ನೌಕರ | ಬಂಕಾಪುರ | ಕುರುಬ | ಎಮ್.ಎ |
| ೫೧ | ಶಂಕರ ಪವಾರ | ೪೦ | ನೌಕರ | ನಾರಯಣಪುರ | ಲಂಬಾಣಿ | ಎಮ್.ಎ |
| ೫೨ | ನಿಂಗವ್ವ ಸಿದ್ದನಗೌಡರ | ೭೦ | ಗೃಹಿಣಿ | ಬಂಕಾಪುರ | ಲಿಂಗಾಯತ | ೫ |
| ೫೩ | ಹೊನ್ನಪ್ಪ ಹೂಗಾರ | ೪೦ | ಸದಸ್ಯರು | ಬಂಕಾಪುರ | ಹೂಗಾರ | ಪಿ.ಯು.ಸಿ |
| ೫೪ | ಅನಿಲ ಚಂದುಕರ | ೩೦ | ಪೋ.ಗ್ರಾಫರ್ | ಶಿಗ್ಗಾಂವ | ಕಲಾಲ | ಪಿ.ಯು.ಸಿ |
| ೫೫ | ಗೂಡುಸಾಬ್ ಗಂಜಿಗಟ್ಟಿ | ೩೫ | ವ್ಯಾಪಾರ | ಹಳೆಬಂಕಾಪುರ | ಮುಸ್ಲಿಂ | ಬಿ.ಎ |
| ೫೬ | ಅಸ್ಪಾಕ ಪಠಾಣ | ೪೫ | ವ್ಯಾಪಾರ | ಬಂಕಾಪುರ | ಮುಸ್ಲಿಂ | ಪಿಯುಸಿ |
| ೫೭ | ಎ.ಕೆ.ಆದವಾನಿಮಠ | ೭೦ | ಶಿಕ್ಷಕರು | ಬಂಕಾಪುರ | ಜಂಗಮ | ಬಿಎಡ್ |
| ೫೮ | ಲಿಂಗರಾಜ ಶಿಗ್ಗಾಂವ | ೩೮ | ಪ್ರ.ಸಹಾಯಕ | ಬಂಕಾಪುರ | ಲಿಂಗಾಯತ | ಎಮ್.ಎ |
| ೫೯ | ನಾಗರಾಜ ಬಡ್ಡಿ | ೩೮ | ಶಿಕ್ಷಕರು | ಬಂಕಾಪುರ | ಲಿಂಗಾಯತ | ಬಿಪಿಎಡ್ |
| ೬೦ | ಆಂಜನೆಯ ಹೊಸಮನಿ | ೨೮ | ಪು.ಸದಸ್ಯರು | ಬಂಕಾಪುರ | ಎಸ್.ಸಿ | ಬಿಎ |

## ಅನುಬಂಧ : ಮೂರು

# ಸಾಂಸ್ಕೃತಿಕ ಪದಕೋಶ

| | |
|---|---|
| ಕಸೂತಿ | ಬಣ್ಣ ಬಣ್ಣದ ದಾರಗಳಿಂದ ಬಟ್ಟೆಗಳಿಗೆ ಮಾಡುವ ಹೆಣಿಕೆಯ ಅಲಂಕಾರ |
| ಆಹುತಿ | ಹವಿಸ್ಸು; ಬಲಿ |
| ಕಾಲಂಗೈಯ್ಯ | ಸಮ; ವೇಳೆ; ಮರಣ; ಯಮ; ಕಪ್ಪುಬಣ್ಣ |
| ಕಳೇಬರ | ಮೈ; ದೇಹ |
| ಕೈವಲ್ಯ | ಮೋಕ್ಷ |
| ಕಮಾನು | ಅರ್ಧಚಂದ್ರಾಕೃತಿಯ ರಚನೆ; ಪ್ರಯಾಣದ ಗಾಡಿಗೆ ಕಟ್ಟುವ ಅರ್ಧವೃತ್ತಾಕಾರದ ಚಪ್ಪರ |
| ಅಂಬಾರಿ | ಆನೆಯ ಮೇಲೆ ಕುಳಿತುಕೊಳ್ಳುಲು ಹಾಕುವ ಬಧ್ರಾಸನ |
| ಅಕಾಲ | ಕಾಲವಲ್ಲದ ಕಾಲ |
| ಅಜ್ಞಾತ | ತಿಳಿಯದ ಯಾರಿಗೂ ತಿಳಿಯದಂತೆ ಮಾಡುವ ವಾಸ |
| ಅರ್ವಾಚೀನ | ಇತ್ತೀಚಿನ |
| ಅವಿಭಕ್ತ | ಪಾಲುಮಾಡದಿರುವ |
| ಅಸದೃಶ್ಯ | ಅಸಮಾನವಾದ |
| ಆಶ್ಲೇಷ | ಅಪ್ಪುಗೆ; ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು |
| ಏಕಾಏಕಿ | ಒಮ್ಮೇಲೆ; ಇದ್ದಕ್ಕಿದ್ದಂತೆ |
| ಕಂಡರಿಸು | ಕೆತ್ತು; ಕೊರೆ; ಮೂಡಿಸು |
| ಕಳ್ಳು | ಹೆಂಡ |
| ಕ್ಯಾಕಿಹಾಕು | ಧ್ವನಿಯ ಬದಲಾವಣೆ; ವ್ಯಂಗ್ಯ; ನೀಚ; ಬೊಬ್ಬೆ |
| ಕೈವಾಡ | ಕೈಚಳಕ |
| ಕೊಂಡ | ಹೋಮ ಮಾಡುವುದಕ್ಕೆ ಮಾಡಿದ ಕುಳಿ |
| ಕೊಯ್ಲು | ಬೆಳೆಯನ್ನು ಕೊಯ್ಯುವಿಕೆ |

| | |
|---|---|
| ಕೊಳಗ | ಒಂದು ಅಳತೆ; ನಾಲ್ಕು ಬಳ್ಳಗಳ ಪರಿಮಾಣ; ದೊಡ್ಡ ಲೋಹದ ಪಾತ್ರೆ |
| ಖಲೀಪ | ಇಸ್ಲಾಂಧರ್ಮದ ಗುರು ದೊರೆ |
| ಗಲ್ಲು | ಕುತ್ತಿಗೆಗೆ ನೇಣುಹಾಕಿ ಕೊಲ್ಲುವ ಸಾಧನ; ಒಂದು ಬಗೆಯ ಮರಣದಂಡನೆ; ಫಾಸಿ |
| ಗಸ್ತು | ಪಹರೆ; ಮೋಸ |
| ಗಾವುಂಡ | ಗೌಡ |
| ಗಿಣ್ಣು | ಎಳಗಂದಿಯ ಹಾಲು; ಅದರಿಂದ ಮಾಡಿದ ಒಂದು ಬಗೆಯ ಸಿಹಿತಿಂಡಿ. |
| ಗುಮ್ಮಟ | ಅರ್ಧ ಗೋಳಾಕಾರದ ಗೋಪುರ; ಗುಂಬುಜ |
| ಘೇರಾವು | ಅಡ್ಡಗಟ್ಟುವುದು; ಸುತ್ತುವರಿಯುವುದು |
| ಚಕಮಕಿ | ಚಕ್ಕಮಕ್ಕಿ ಕಲ್ಲು; ಜಗಳ |
| ತಪರಾಕಿ | ಕೆನ್ನೆಗೆ ಹೊಡೆದ ಏಟು |
| ತೋಪು | ಮರಗಳ ಸಮೂಹ |
| ತೋರಣ | ಅಲಂಕಾರಕ್ಕಾಗಿ ಬಾಗಿಲು ಮೊದಲಾದವುಕ್ಕೆ ಕಟ್ಟುವ ಚಿಗುರು; ಮಣಿ ಮುಂತಾದವುಗಳ ಮಾಲೆ |
| ದತ್ತು | ಕೊಡಲ್ಪಟ್ಟದ್ದು, ಪುತ್ರ=ಮಗನಿಲ್ಲದ ದಂಪತಿಗಳಿಂದ ಸ್ವೀಕರಿಸಲ್ಪಟ್ಟ ಹುಡುಗ, ಸ್ವೀಕಾರ= ಉತ್ತರಾಧಿಕಾರಿಯಾಗಿ ಮಕ್ಕಳನ್ನು ಸ್ವೀಕರಿಸುವುದು. |
| ದಮನ | ಹತೋಟಿ; ಶಿಕ್ಷೆ; ತುಳಿಯುವುದು |
| ಪಂಚಾಯತಿ | ನ್ಯಾಯ ನಿರ್ಣಯಕ್ಕೆ ರಚಿತವಾದ ಐದು ಜನರ ಸಮಿತಿ; ವ್ಯಾಜ್ಯವನ್ನು ಮಧ್ಯಸ್ಥಿಕೆಯ ಮೂಲಕ ತೀರ್ಮಾನ ಮಾಡಿಕೊಳ್ಳುವುದು.; ಗ್ರಾಮಾಡಳಿತ ನಿರ್ವಹಿಸಲು ಆಯ್ಕೆಯಾದ ಸಮಿತಿ |
| ಪಠನ | ಓದುವುದು; ಕಂಠಪಾಠ ಮಾಡಿ ಹೇಳುವುದು; ವ್ಯಾಸಂಗ |
| ಪಡಸಾಲೆ | ಜಗಲಿ; ಹಜಾರ; ನಡುಮನೆ. ಮನೆಯ ಮುಂದಿನ ಜಗಲಿ |
| ಪೈಲವಾನ | ಕುಸ್ತಿಯಾಡುವವನು; ಜಟ್ಟಿ |
| ಪೌಜು | ದಂಡು; ಸೇನೆ |
| ಬದಿ | ಜೈನ ದೇವಾಲಯ ಅಥವಾ ಮಠ |

| | |
|---|---|
| ಬಂಟ | ದಾಸ; ಸೇವಕ; ಕ್ರಾಂತಿ |
| ಬಂಡಾಯ | ದಂಗೆ; ಕ್ರಾಂತಿ |
| ಬುರುಜು | ಕೋಟೆಯ ಮೇಲಿನ ಕೊತ್ತಳ |
| ಮದನಿಕೆ | ದೇವಾಲಯ ಮುಂತಾದವುಗಳ ಕಂಬಗಳ ಬೋದಿಗೆಯ ಮೇಲೆ ಕೆತ್ತಿರುವ ಸುಂದರ ವಿಗ್ರಹ |
| ಮನೆವಾಳ್ತನ | ಅಳಿಯನನ್ನು ಮನೆಯಲ್ಲಿಯೇ ಇಟ್ಟುಕೊಳ್ಳುವುದು. |
| ಮಾಪಕ | ಅಳೆಯುವ ಸಾಧನ |
| ಮಾರಣ | ನಾಶ; ಸಂಹಾರ; ಹಗೆಯನ್ನು ಕೊಲ್ಲಲು ಮಾಡುವ ಒಂದು ವಿಧಿ. ಹೋಮ=ಅನೇಕ ಜನರ ಭೀಕರ ಕೊಲೆ. |
| ಮಿಶ್ರ | ನಾನಾ ಬಗೆಯ ಬೇರೆ ಬೇರೆ ಜಾತಿಯ ಎರಡು ಸಸ್ಯ ಅಥವಾ ಪ್ರಾಣಿಗಳ ಸಂಯೋಗದಿಂದ ಉತ್ಪನ್ನವಾದುದು |
| ಮೊಹರಂ | ಮುಸ್ಲಿಮರ ಒಂದು ಹಬ್ಬ. |
| ಪರಮಾಡುವುದು | ಊರಿನವರೆಲ್ಲ ಒಟ್ಟಾಗಿ ಸೇರಿ ದೇವರ ಹರಕೆ ತೀರಿಸುವುದು. |
| ಬೀದಿ | ಕೇರಿ, ರಸ್ತೆ, ರೋಡು |
| ಮುಂಗಾರು | ವರ್ಷದ ಮೊದಲು ಬೀಳುವ ಮಳೆ (ಮೇ, ಜೂನ್ ತಿಂಗಳಲ್ಲಿ) |
| ಹಿಂಗಾರು | ಸೆಪ್ಟೆಂಬರ್, ಅಕ್ಟೋಬರ್ ತಿಂಗಳಲ್ಲಿ ಬೀಳುವ ಮಳೆ |
| ಬಿತ್ತು | ಹೊಲಕ್ಕೆ ಬಿತ್ತನೆ ಮಾಡುವುದು |
| ಹೆಣ್ಣಾಳು | ಮಹಿಳಾ ಕೂಲಿ ಕೆಲಸದವರು |
| ಗಂಡಾಳು | ಪುರುಷ ಕೂಲಿ ಕೆಲಸದವರು |
| ಮುಯ್ಯಾಳು | ಕೆಲಸಕ್ಕೆ ಪ್ರತಿಯಾಗಿ ಕೆಲಸ ಮಾಡುವವರು |
| ತಾಣ | ಸ್ಥಳ, ತಳ |
| ಒಕ್ಕುವುದು | ಜೋಳವನ್ನು ತೆನೆಗಳಿಂದ ಬೇರ್ಪಡಿಸುವುದು |
| ಮುಕುಲ | ಮೊಗ್ಗು |
| ಸಕಾಲ | ಒಳ್ಳೆಯ ಕಾಲ |
| ರಕ್ಕಸ | ರಾಕ್ಷಸ |
| ವನರಾಜಿ | ತೋಟ, ಕಾಡು |
| ಸಾರಂಗ | ಒಂದು ಜಾತಿಯ ಜಿಂಕೆ |
| ಸುರಂಗ | ಕನ್ನ; ನೆಲದಲ್ಲಿ ಅಥವಾ ಬೆಟ್ಟದಲ್ಲಿ ಕೊರೆದು ಮಾಡಿದ ದಾರಿ. |

# ಅನುಬಂಧ : ನಾಲ್ಕು

## ಜನಪದ ಗೀತೆಗಳು

### ದೇವರ ಸ್ತುತಿ ಪದಗಳು

ಮಾಡುವೆ ನಮಸ್ಕಾರ ಶಿವನ ಸದರಿಗೆ
ನೆನೆದ ಗಣಪತಿಗೆ
ಚಿತ್ತಗೊಟ್ಟ ಕೇಳರಿ ಚಿಗರಿ ಬಾಳೆವನ
ಚಂದಾಗಿ ಕೇಳರಿ ಚಿಗರಿ ಬಾಳೆವನ
ನೀರ್ಕುಡಿಯಕೋಗೈತ್ರಿ ಚಿಗರಿ ಒಂದಿನ
ಅಲ್ಲೊಬ್ಬ ಆಡತ್ತಿದ್ದ ಅರಸ ಬ್ಯಾಟಿಯನ
ಚಿಗರಿ ನೋಡಿ ಹೂಡ್ಯಾನ್ರಿ ಗುರಿಮಾಡಿಸಣ್ಣ
ನಿನ್ನೆ ಮನ್ನೆಳದೇನ್ರಿ ಸಣ್ಣ ಮಕ್ಕಳನ
ಗಂಡ ಚಿಗರಿ ಕೇಳತೈತ್ರಿ ಎಷ್ಟೋತ್ತೋದಿ ನೀನ
ಸುಟ್ಟವು ಕೆಟ್ಟವು ನಿನ್ನ ಮಾರಿ ಬಣ್ಣ ಚಿನ್ನ
ಏನ ಹೇಳಲಿ ರಾಯ ಮಾನಾಪಮಾನ
ನವಸಾಗರಾಗಾವ್ರಿ ನಮಗೆ ಜಮೀನ
ತಾಯಿಮಾತ ಕೇಳಿಕೊಂಡ ಮನಿಬಿಟ್ಟವರಿನ್ನ
ತಂದೆ ತಾಯಿ ಸತ್ತ ಮೇಲೆ ನಂಬಾಳಿವೇನ
ನಾಕು ಚಿಗರಿ ಕೂಡಿಕೊಂಡ ಮರಣಕ್ಕೋಗೋಣ
ತಂದೆ ತಾಯಿ ಬಿಟ್ಟಬಿಡರಿ ನಮನ ಕೊಲರಿ ನೀವ
ಮರಿ ಮಾತ ಕೇಳಿಕೊಂಡ ಮನಮರಗ್ಯವರಿನ್ನ
ನಾಕಚಿಗರಿ ಕೂಡಿಕೊಂಡ ಇರ ಹೋಗಿರಿ ನೀವ
ಬಾಳ ಹೋಗಿರಿ ನೀವ

## ಭೂಮಿ ತಾಯಿ ನೆನೆಯುವುದು

ಎದ್ದು ನೆನೆದೇನೋ ಯಾರ‍್ಯಾರ ನೆನೆದೇನು
ಅತ್ತೆ ಮಾವನ ಪಾದ, ಮತ್ತೆ ಗುರುವಿನ ಪಾದ
ಐವತ್ತೊಂದು ಕೋಟಿ ಶರಣಾರು । ಪಾದವ
ಎದ್ದು ಅರಗಳಿಗೆ ನೆನೆದೇನು

## ಗುರುಗಳ ಮೇಲಿನ ಪದ

ತಾಯಿ ತಂದೆ ಪಾದ ಮ್ಯಾಲೆ ಗುರುವಿನ ಪಾದ
ಅರವತ್ತೊಂದು ಕೋಟಿ ಶರಣಾರು । ಪಾದವ
ಎದ್ದೊಂದರಗಳಿಗೆ ನೆನೆದೇನು

## ಧಾರೆ ಎರೆಯೋ ಗೀತೆ

ಹಂದಾರ ಹಾಕ್ಯಾರ ಹನ್ನೊಂದು ಮಾಣ್ಯದಲೇ
ಬಿಂಗ ಬಿಗಸ್ಯಾರ ತರ ತರದಾ ಸೋ
ಬಿಂಗನು ಬಿಗಸ್ಯಾರ ತರ ತರದಾ/ ಈ ಮನಿಯಾ
ಚೆಂದುಳ್ಳರ ಮಗನ ಮದುವಿಯ ಸೋ

ಹಂದಾರ ಹಾಕ್ಯಾರ ಇಪ್ಪತ್ತು ಮಾಣ್ಯಾದೆಲೇ
ಮುತ್ತ ಬಿಗಸ್ಯಾರ ತರತರದ ಸೋ
ಮುತ್ತ ಬಿಗಸ್ಯಾರ ತರತರದ/ ಈ ಮನೆಯ

ಚೆಂದುಳ್ಳರ ಮಗನ ಮದುವೆಯ ಸೋ
ಇಳೆಯ ಒಡೆ ಮಟ್ಟ/ ಅವರಕ್ಕಗೇನನಬ್ಯಾಡರೇ
ಇಳೆಯ ಒಡೆದಿಂದ ಒಳಿಯಾಕ ಸೋ
ಇಳಿಯಾನು ಒಡಿದಿಂದೊಳಿಯಾಕ/ ಅವರಕ್ಕನ
ಅವರಕ್ಕನ ಗೊಡವಿ ನಮಗೇನ ಸೋ ·

ಸೂರಗೆರಿಯ ಮಟ್ಟವರ ತಂಗಿಗೇನನಬ್ಯಾಡರೇ
ಸೂರಗಿ ಎರೆದ ಒಳಿಯಾಕ ಸೋ
ಸೂರಗಿ ಎರೆದ ಒಳಿಯಾಕ/ ಅವರ ತಂಗೀಯ
ಅವರ ತಂಗೀಯ ಗೊಡವಿ ನಮಗೇನ ಸೋ

ಧಾರೆಯೆರಿಯಮಟ್ಟವರ ತಂಗಿಗೇನನಬ್ಯಾಡರೇ
ಧಾರೆಯ ಎರೆದ ಒಳಿಯಾಕ ಸೋ
ಧಾರಿಯ ಎರೆದ ಒಳಿಯಾಕ ಅವರ ಮಾವನ
ಅವರ ಮಾವನ ಗೊಡವಿ ನಮಗೇನ ಸೋ

ತಾಳಿ ಕಟ್ಟ ಮಟ್ಟ ಅವರ ತಮ್ಮಗೇನನಬ್ಯಾಡರೇ
ತಾಳಿಯ ಕಟ್ಟಿ ಒಳಿಯಾಕ ಸೋ
ತಾಳಿಯ ಕಟ್ಟಿ ಒಳಿಯಾಕ/ ಅವರ ತಮ್ಮನ
ಅವರ ತಮ್ಮನ ಗೊಡವಿ ನಮಗೇನ ಸೋ

ಅಕ್ಕಿಕಾಳ ಬೀಳ ಮಟ್ಟ ಅವರ ಅಪ್ಪಗೇನನಬ್ಯಾಡರೇ
ಅಕ್ಕಿಕಾಳ ಬಿದ್ದ ಒಳಿಯಾಕ / ಅವರಪ್ಪನ
ಅವರಪ್ಪನ ಗೊಡವಿ ನಮಗೇನ ಸೋ

ಆಸಾಡ್ಹಾಕಮಟ್ಟ ಅವರವ್ವಗೇನನಬ್ಯಾಡಿರೇ
ಅಸಾಡುಡಿ ಹಾಕಿ ಒಳಿಯಾಕ/ ಅವರವ್ವನ
ಅವರವ್ವನ ಗೊಡವಿ ನಮಗೇನ ಸೋ

ಹೆಣ್ಣಿನರಸೋತಾರ ಗಂಡಿನಾರಗೆದ್ದಾರ
ಸೋತಾವೆಂದಕ್ಕಿ ಒಗದಾರ ಸೋ
ಸೋತವೆಂದಕ್ಕಿ ಒಗದಾರ/ ಹೆಣ್ಣಿನವರ
ಗೆದ್ದವೆಂದಕ್ಕಿ ಒಗದಾರ ಸೋ
ಗೆದ್ದವೆಂದಕ್ಕಿ ಒಗದಾರ/ ಗಂಡಿನವರ
ರೇಶಿಮೆ ನಗೆಯಾ ನಗತಾರ ಸೋ

## ಮೈನೆರೆದಾಗ ಹೇಳುವ ಹಾಡು

ನೆರೆತು ಕುಂತಾಳ ಗೌರಿ ಹೆರಳು ಬಂಗಾರ ಚವರಿ
ಆಕಿ ಬಣ್ಣದ ಬೈತಾಲಿ ಬಿಡಿ ಮುತ್ತಾ ಸೋ
ನಾಕ ಕೊಪ್ಪರಿಗೆ ನೀರು
ಉಕ್ಕುತ ಮಳಲುತ//೨//
ಶೆಟ್ಟರ ಮಗಳು ಜಳಕಾವ ಸೋ
ಶೆಟ್ಟಿ ಶೆಟ್ಟರ ಮಗಳು

ಜಳಕಾವ ಮಾಡುದ ನೀರು //೨//
ಬಾಗಲ ತುಂಬಿ ಹೊರಚೆಲ್ಲಿ ಸೋ
ಬಾಗಾಲಾ ತುಂಬಿ ಹೊರಚೆಲ್ಲಿ ಅವನೀರ
ಬಾಳೀಗಿ ನೀರ ತಿರುವ್ಯಾರ ಸೋ
ಬಾಳೀಗಿ ಆನೀರು ತಿರುವ್ಯಾರ ಅವರಪ್ಪ
ಬಾಳೆಲ್ಲ ಚಿಗತ ವನವಾಗ ಸೋ
ನೆರೆತು ಕುಂತಾಳ ಗೌರಿ ಹೆರಳ ಬಂಗಾರ ಚವರಿ
ಆಕೆ ಬಣ್ಣದ ಬೈತಾಲಿ ಬಿಡಿ ಮುತ್ತು ಸೋ
ಎಂಟ ಕೊಪ್ಪರಿಗೆ ನೀರ ಉಕ್ಕುತ ಮಳಲುತ
ಉಕ್ಕುತ ಮಳಲುತ
ಶೆಟ್ಟರ ಮಗಳ ಜಳಕವ ಸೋ
ಶೆಟ್ಟಿ ಶೆಟ್ಟರ ಮಗಳಾ ಜಳಕಾ ಮಾಡಿದ ನೀರಾ
ಹೊಚ್ಚಲ ತುಂಬಿ ಹೊರಚೆಲ್ಲಿ ಅವರ ನೀರ
ಹೊರಚೆಲ್ಲಿ ಅವರ ನೀರಾ
ನಿಂಬಿಗೆ ನೀರ ತಿರುವ್ಯಾರ ಸೋ
ನಿಂಬಿಗೆ ಆ ನೀರ
ತಿರುವ್ಯಾರ ಅವ ನೀರ//೨//
ನಿಂಬೆಲ್ಲ ಚಿಗತ ವನವಾಗ ಸೋ

## ಅಣ್ಣ ತಂಗಿಯರ ಗೀತೆ

ಹಡದವ್ವ ಅದಾಳೆಂದು ದಡ ದಡ ನಾ ಬಂದೆ
ನಡದಾರ್‍ಯಾಗ ಅಣ್ಣ ಇದರಿಗೆ ಹೇಳ್ಯಾನ ನಡಿ ತಂಗಿ ಮನೆಗೆ ಮಡದಿ
ಅದಾಳ //ಪ//

ಆರಿದ ಬಾಣವ ನೀಡ ಕಾದ ಹಾಲುವನಹಾಕ
ಬೇಗನೆ ತಂಗೆವ್ವಗ ಉಣನೀಡ //೧//

ಆರಿದ ಬಾನ ಆಡುವ ಮಕ್ಕಳ ಉಂಡ
ಕಾದಿದ ಹಾಲಿಗೆ ಹೆಪ್ಪ ಹಾಕಿ //೨//

ಪಾಪಿ ಅಣ್ಣನ ಯಾತಕ್ಕ ನಾಬಂದೆ
ಭೂತ ಸೆರೆ ಐತೆ ಮನಿಯಾಗ //೩//

ನನ್ನೊಬ್ಬಣ್ಣಾ ಚೆಂದಾ ಕಬ್ಬಿನಗದ್ದೆ ಚೆಂದಾ
ನನ್ನೊಬ್ಬಣ್ಣಾ ತರುವ ಮುದ ಚೆಂದ
ಒಬ್ಬಣ್ಣ ತರುವ ಮುದ್ ಚೆಂದ ಮುಗ್ಗಿನರವಕೇ
ಒಗ್ಗುದರೆ ಮೊಗ್ಗು ಸುರಿದಾವೆ

## ಜೋಗುಳ ಹಾಡು

ಕುಂಚಿಗಿ ಕುಲಾಯ ಗೊಂಚಲ ಬಿಡಿಮುತ್ತ //೨//
ತೀಡಿ ತೀಡಿ ಕಟ್ಟಿದರ
ಕೊಡಿ ಕೊಡವಿ ಒಗಿತಾನ್ರಿ ಜೋ ಜೋ
ಸಕ್ಕರೆ ಪಾಯಸ ಬಳದು ಬಟ್ಟಲ ತುಂಬಿ //೨//
ತುತ್ತ ಮಾಡಿ ಉಣಿಸಿದರ/
ಹಠಮಾಡಿ ಅಳುತಾನ್ರಿ ಜೋ ಜೋ
ಸಾಥುಳ್ಳ ಶ್ರೀಗಂಧ ತೇಯ್ದು ಬಟ್ಟಲ ತುಂಬಿ //೨//
ಮೈಗೆಲ್ಲ ಧರಿಸಿದರ/
ಕೊಡಕೊಡವಿ ಒಗಿತಾನ್ರಿ ಜೋ ಜೋ
ಕರದು ಬಂದೆವಿ ನಾವು ನೆರೆದು ಬಂದಿತು ಮಂದಿ //೨//
ಬಾ ತಾಯಿ ತೂಗೋಣ/
ಬಂಗಾರದ ತೊಟ್ಟಿಲ ಜೋ ಜೋ
ಹಸರಂಗಿ ಹಾಲಗಡಗ ಕುಸಿಯ ಬೆಳ್ಳಿ ತೊಟ್ಲ //೨//
ಶೃಂಗಾರ ಶ್ರೀ ಕೃಷ್ಣನ
ಚೆಂದಾಗಿ ತೂಗಿರಿ ಜೋ ಜೋ
ನೀರಾಗ ಹೆರಳ್ಹಾಕಿ ಸೂರಿ ಚಂದ್ರರ ತೋರಿ //೨//
ಅದರಂತ ತಾ ಬೇಡಿ
ಬೋರ್‍ಯಾಡಿ ಅಳುತಾನ್ರಿ ಜೋ ಜೋ

## ಸೀಮಂತ ಗೀತೆ

ಪುಟ್ಟೆದ ಹಿಟ್ಟ ಕುಟ್ಟಿ ಕುಟ್ಟಿ
ತೊಯ್ದು ಗೋದಿ ಬೀಸಿ ಬೀಸಿ
ಸುರಂಗದ ಹೋಳಿಗಿ ಮಾಡುಂಡನೆಂದಾಳ

ಬಾಲನ ಬಯಕೀಲಿ ಬಗಸ್ಯೇನೆಂದಾಳ
ಕರದ ಮುರದ ಕರಚಿ ಕಾಯಿ
ಹಪ್ಪಳ ಸ್ಯಂಡಿಗಿ ಉಪ್ಪಿನಕಾಯಿ
ಎಣ್ಣೇ ಬದನೇಕಾಯಿ ಉಂಡಾನಂದಾಳ //ಬಾಲ//

ರಾಗೀಯ ಈ ರೊಟ್ಟಿ ರಾಜಗೇರಿ ಪಲ್ಲೆವ
ಹೊಳಿಯ ದಂಡಿಲೆ ಕುತಗೊಂಡು ಉಂಡೆನೆಂದಾಳ //ಬಾಲ//

ಕಟಗಾ ಈ ರೊಟ್ಟಿ ಖಾರದ ಈ ಚಟ್ನಿ
ಬೆಳದಿಂಗಳಾಗ ಕೂತಗೊಂಡು
ಉಂಡೆನೆಂದಾಳ //ಬಾಲ//

ತೌರ ಮನಿ ಟೋಪಿನ ಸೀರಿ
ಸೆರಗ ಮೇಲ ಮಾಡಿ ಉಟ್ಟು
ಕುರಚೇದ ಮ್ಯಾಲಾಕಿ ಕುಂತೆನೆಂದಾಳ //ಬಾಲ//

ಸಣ್ಣ ಹೆರಳೀಲೆ ತೆಲಿಯ ಬಾಚೀಕೊಂಡು
ಮಲ್ಲಿಗೂವಿನ ಮಾಲೆ
ಮುಡುದನಂದಾಳ //ಬಾಲ//

## ಶಿಶು ಗೀತೆ

ಆನಿ ಬಂತ್ ಆನಿ ಇದ್ಯಾವ ಊರ ಆನಿ
ಬಿಜಾಪುರ ಆನಿ ಇಲ್ಲಿಗ್ಯಾಕ ಬಂದಿತ್ತು
ಹಾದಿ ತಪ್ಪಿ ಬಂತು ಹಾದಿಗೊಂದುಡ್ಡು
ಬೀದಿಗೊಂದುಡ್ಡು ಸೇರಕೊಬ್ರಿ ತಂದು
ಲಟ ಲಟ ಮುರಿದು ಹುಡುಗರ ಕೈಯಿಗೆ ಕೊಟ್ಟು

## ಕೋಲಾಟದ ಹಾಡು

ಕೋಲು ಕೋಲಣ್ಣ
ಕೋಲು ಕೋಲಣ್ಣ ಕೋಲೆ
ಕೋಲು ಕೋಲಣ್ಣ ಕೋಲೆ

ಮಲ್ಲಯ್ಯನಿರುವಾಗ ಇಲ್ಲಿಗೆ ಗಾವುದ
ಮಲ್ಲಯ್ಯನ ಮಡದಿ ಮರುಗಮ್ಮ
ಕೋಲು ಕೋಲಣ್ಣ ಕೋಲೆ

ಒಂದ ಪಾಠಣಗಿ ಹತ್ತುತ್ತ
ಒಂದ ಮುತ್ತು ಚೆಲ್ಲುತ್ತ
ಕೋಲಗೌರಿ ಕೋಲ
ಕಂಚಿನ ಗೌರಿ ಮೇಲ

ಎರಡ ಪಾಠಣಗಿ ಹತ್ತುತ್ತ
ಎರಡ ಮುತ್ತು ಚೆಲ್ಲುತ್ತ
ಕೋಲಗೌರಿ ಕೋಲ
ಕಂಚಿನ ಗೌರಿ ಮೇಲ

## ನಾಗರ ಪಂಚಮಿ ಹಾಡು

ನಾಗಪ್ಪಗ ಹಾಲ ಹೂಯ್ಯೋಣ
ನಾಗರ ಹೆಡಿಯಂಗ ಆಡೋಣ
ನಾಗರ ಪಂಚಮಿ ನಾಡ ಹೆಣ್ಣಿನ ಹಬ್ಬ
ನಾಗಪ್ಪಗೆ ಹಾಲ ಎರಿಯೋಣ ನನಗೆಳತಿ
ನಾಗರ ಹೆಡಿಯಾಂಗ ಆಡೋಣ//

ಚಂದ್ರಕಾಳಿಯ ಸೀರೆ ಸಿರಿ ಚಂದ್ರ ಕುಪ್ಪಸ ತೊಟ್ಟು
ಬಂದ ಹಬ್ಬದಾಗ ನಲಿಯೋಣ/ ನಕ್ಕಾಡಿ
ಒಂದಾಗಿ ಇದ್ದ ಅಗಲೋಣ
ಗಂಡನ ಮನಿಯಾಗ ಕಂಡ ಬಾಳುವೆ ಹಾಡಿ
ಎಂದು ಬಿದ್ಯಾಡಿ ಆಡೋಣ ಮನೆಮಾತ
ಹಿಂಡಿನಗಾಡಿ ಮರೆಯೋಣ

## ಬೀಸುವ ಹಾಡು

ಸೆರಗಾ ಬೀಸಿದನವ್ವ / ಶಿವನಾ ಸದರಿನ ಮ್ಯಾಲೆ
ಕಲ್ಲಿಗೆ ಮುಕ್ಕಾಕಿ ಎಲ್ಲಾ ದೇವರ ನೆನೆದೆ
ಎಲ್ಲವ್ವ ನನ್ನ ಮನಿದೇವಿ
ಸೆರಗಾ ಬೀಸಿದನವ್ವ / ಶಿವನ ಸದರಿನ ಮ್ಯಾಲೆ
ನಾನು ನನ್ನಾ ಗೆಳತಿ / ಕೂಡಿ ನೀರಿಗೆ ಹೋದೆ
ಕುಲವಾ ಕೇಳಿದರು ಬಲು ಮಂದೆ

ಸೆರಗಾ ಬೀಸಿದನವ್ವ / ಶಿವನಾ ಸದರಿನ ಮ್ಯಾಲೆ
ಕುಲವನ್ನು ಕೇಳಿದರ ಬಲುಮಂದಿ ಸೇಕವ್ವ
ಬ್ಯಾರೇ ತುಂಬಂದೆ ನಿನ ಕೊಡವಾ
ಸೆರಗಾ ಬಿಸಿದನವ್ವ / ಶಿವನ ಸದರಿನ ಮ್ಯಾಲೆ
ಬ್ಯಾರೇನು ತುಂಬಂದ್ರ ಮಾರೀಯ ನೋಡ್ಯಾಳ
ಕುಲವ್ಯಾಡರಿ ನಮ್ಮ ಮನವೊಂದ
ಸೆರಗ ಬೀಸಿದನವ್ವ / ಶಿವನ ಸದರಿನ ಮ್ಯಾಲೆ
ಕೂಡಲ ಹೋಳಿಯಾಗ ಕೂಡೇವ ಗೆಳತೇರ
ಕೂಡಿ ಕುಬ್ಬಸ ಒಗದೇವೇ
ಸೆರಗಾ ಬೀಸಿದನವ್ವ / ಶಿವನ ಸದರಿನ ಮ್ಯಾಲೆ
ಕೂಡೀನು ಕುಬ್ಬಸ ಇಗೆದೇವೆ ಶೇಕವ್ವ
ಅತ್ತಿ ಮನಿಗೋಗಿ ಅಗಲೇವೆ
ಸೆರಗಾ ಬೀಸಿದನವ್ವ / ಶಿವನಾ ಸದರಿನ ಮ್ಯಾಲೆ
ಆರುತಿ ಹಿಡಕೊಂಡು ಆರ‍್ಯಾಣ ತಿರುಗೇನೆ
ದೇವರಿಲ್ಲೇನ ಗುಡಿಯಾಗ
ಸೆರಗಾ ಬೀಸಿದನವ್ವ / ಶಿವನ ಸದರಿನ ಮ್ಯಾಲೆ
ದೇವರು ಇಲ್ಲೇನ ಗುಡಿಯಾಗ ಗುಡದಯ್ಯ
ಮಣ್ಯಾದ ಮನ್ಯಾಗ ಅಡಗ್ಯಾನ

**ಆರತಿ ಬೆಳಗುವಾಗ**

ನೀರೊಳಗಾಡುವುದು ನೀಲ ಬನ್ನಿಯ ಪತ್ರೆ
ಎತ್ತುವೆನಾರತಿಯ । ರಾಧಾ ರಮಣರಿಗೆ
ಬೆಳಗುವೆನಾರುತಿಯ

ಕೆಸರೊಳಗಾಡುವದು ಎಸರ ಬನ್ನಿಯ ಪತ್ರೆ
ಎತ್ತುವೆನಾರತಿಯ । ರಾಧಾ ರಮಣರಿಗೆ
ಬೆಳಗುವೆನಾರುತಿಯ

ಮಲತಾಯಿ ಮಾತ ಕೇಳಿ ಅಡವಿ ಸಂಚಾರ ಸೇರಿ
ಎತ್ತುವೆನಾರತಿಯ । ರಾಧಾ ರಮಣರಿಗೆ
ಬೆಳಗುವೆನಾರತಿಯ
ಸೀತನ ಒಯುವಾಗ ರಾಮ ಬೇಟೆಗೆ ಹೋದ
ಎತ್ತುವೆನಾರತಿಯ । ರಾಧಾ ರಮಣರಿಗೆ
ಬೆಳಗುವೆನಾರತಿಯ

ದೊಡ್ಡ ತಾಳಿ । ಬಾನಮ್ಮ ಕೊರಳೀಗೆ
ಎತ್ತವೆನಾರತಿಯ । ರಾಧಾ ರಮಣರಿಗೆ
ಬೆಳಗುವೆನಾರತಿಯ

ಬಾದಾಮಿ ಬನಶಂಕ್ರಿ । ಬಾರಾ ನಮ್ಮಾ ಮನೀಗೆ
ಎತ್ತುವೆನಾರತಿಯ । ರಾಧಾ ರಮಣರಿಗೆ
ಬೆಳಗುವೆನಾರತಿಯ

## ಗೌರೀ–ಗಂಗೀ ಹಾಡು

ಮುತ್ತೀನ ಪದಕವ ಮುಕ್ಕಣ್ಣನ ನೆನೆದೇನಿ
ಮುತ್ತೀನೋಪುರಿಗೆ ನಡುಮಲ
ಮುತ್ತೀನೋ ಪುರಿಗೆ ನಡುಮಲನ್ಯಾಗಿರುವ
ಮಲ್ಲಯ್ಯ ನಿನಮಡದಿ ಮೆಲ್ಲಕ ನಾ ಬಂದೆ
ನಗಿನ್ಯಾರಾ ಯಾಕ ನಮಗಿನ್ನ
ನಗಿನ್ಯಾರಾ ಯಾಕ ನಮಗಿನ್ನ । ಕಿರಿಚಂದ್ರ
ತರಳೆ ಹೋಗಯ್ಯ ಮುಂದಕಾ
ಪರವರೆಣ್ಣಿನ ಕೂಟ ನಗಿಯಾಕ ಕಿರಿಚಂದ್ರ
ತರಳೆ ಹೋಗಯ್ಯ ಮುಂದಕಾ

## ಜೋಕುಮಾರನ ಹಾಡು

ಜೋಕುಮಾರ ಹುಟ್ಯಾನ ಯಾಕಲ್ಲಾ ನನದೇವಿ
ಕಾಕದ ಮಸರ ಕಡಿಯಾಲೇ। ಜೋಕುಮಾರ
ಕಾಕದ ಮಸರ ಕಡಿಯಾಲೇ। ತಾಯವ್ವ
ಬೆಣ್ಣೆ ಕೊಡು ನನ ಕುಮರಾಗ ಜೋಕುಮಾರ
ಬಾಲಾನ ತಾಯಿ ಬಂದು ಬಾಗಲದಾಗ ನಿಂತಾಳ
ಬಾಲಗಾ ಹಾಲ ಎರರ್‍ಯವ್ವ ಜೋಕುಮಾರ
ಬಾಲಾಗಾ ಹಾಲ ಎರೀರವ್ವಾ ತಾಯವ್ವ
ಎಣ್ಣಿ ಕೊಡು ನನ ಕುಮರಾಗ ಜೋಕುಮಾರ
ಉದ್ದಿ ಕಾಯಂಗ ತದ್ದಿಪಾವೊಡ ಸುತ್ತಿ
ಮಕಬಲ್ಲಂಗಿ ಬಗಲಾಗ । ಹಿಡಕೊಂಡು

# ಅನುಬಂಧ : ಐದು

## ಬಂಕಾಪುರ ನಕ್ಷೆ



## ಅನುಬಂಧ : ಆರು

## ಛಾಯಾಚಿತ್ರ




ತೋಪಿನ ದುರ್ಗಾ ದೇವಿ ಮುನವಳ್ಳಿ- ಬಂಕಾಪುರ



ನಗರೇಶ್ವರ ದೇವಸ್ಥಾನ ಬಂಕಾಪುರ



ಅಲ್ಲಾವುದ್ದೀನ ಪಾ ಖಾದ್ರಿ ದರ್ಗಾ ಬಂಕಾಪುರ



ಪಂಚಮಲಕ್ಕಪ್ಪನ ಬಾವಿ ಅಂಕದಖಣ



ನರಗುಂದ ಬಾಬಾ ಸಾಹೇಬನ ಸಮಾಧಿ ಜೇರುಗಟ್ಟಿ




ಬಾಸಿಂಗ ತಯಾರಿಕೆಯ ಕಲಾವಿದ ಕುಂಬಾರ ಓಣಿ



ಲಿಂಗಾಯತ ಸಮುದಾಯದ ಸುರಗಿಯ ಆಚರಣೆ



ಕೊಲ್ಹಾರಿ ಕಟ್ಟಿಕೊಂಡು ದೇವರಿಗೆ ಹೊರಟಿರುವುದು, ವಳಗೇರಿ ಓಣಿ



ಕಸೂತಿ ಕಲೆ ಬ್ರಾಹ್ಮಣ ಗಲ್ಲಿ



ಚಲವಾದಿ ಸಮುದಾಯದ ಮದುವೆ ಸಂದರ್ಭದಲ್ಲಿ ದೇವರ ಕಾರ್ಯ



ಗಾಣಿಗ ಸಮುದಾಯದ ಸೀಮಂತ ಕಾರ್ಯ



ಪಂಚಮಸಾಲಿ ಸಮುದಾಯದ ಋತುಮತಿ ಆಚರಣೆ

